# ಭಾಷಣಗಳು ಮತ್ತು ಹೇಳಿಕೆಗಳು

(೨)



ಮೋ. ಕ. ಗಾಂಧೀ



ಗಾಂಧೀ ಸ್ಮಾರಕ ನಿಧಿ

ಕರ್ನಾಟಕ ಶಾಖೆ

೧೯೬೨



ಬೊಂಬಾಯಿಯ ಅ. ಭಾ. ಕಾಂ. ಅಧಿವೇಶನದ ಮುಕ್ತಾಯ ಭಾಷಣ
ಮಾಡುತ್ತಿರುವುದು : ಸೆಪ್ಟೆಂಬರ್ ೧೬, ೧೯೪೦

ತೆಂಡುಲ್ಕರರ 'ಮಹಾತ್ಮಾ' ಗ್ರಂಥದಿಂದ

ಗಾಂಧೀ ಗ್ರಂಥಮಾಲೆ – ೧೮

# ಭಾಷಣಗಳು ಮತ್ತು ಹೇಳಿಕೆಗಳು

(೨)



ಮೋ. ಕ. ಗಾಂಧೀ



ಗಾಂಧೀ ಸ್ಮಾರಕ ನಿಧಿ
ಕರ್ನಾಟಕ ಶಾಖೆ
೧೯೬೨

ಪ್ರಕಾಶಕರು :
ಗಾಂಧೀ ಸ್ಮಾರಕ ನಿಧಿಯ ಕರ್ನಾಟಕ ಶಾಖೆಯ ಪರವಾಗಿ,
ಎಂ. ಯಾಮುನಾಚಾರ್ಯ, ಪ್ರಧಾನ ಸಂಪಾದಕರು,
ಗಾಂಧೀ ಗ್ರಂಥಮಾಲೆಯ ಸಂಪಾದಕ ಮಂಡಲಿ,
೧೬೨, ರಮಾವಿಲಾಸ ರಸ್ತೆ, ಮೈಸೂರು – ೧.

(ನವಜೀವನ ಟ್ರಸ್ಟ್, ಅಹಮದಾಬಾದ್-೧೪, ಇವರ ಅನುಮತಿಯ ಕೃಪೆಯಿಂದ.)

ಬೆಲೆ :
ಸಾದಾರಣ ಪ್ರತಿ: ರೂ. ೨–೨೫

ಮುದ್ರಕರು :
ಉಷಾ ಪ್ರೆಸ್,
ಮೈಸೂರು

**Works of Gandhiji in Kannada - 18**

# BHASHANAGALU MATTU HELIKEGALU

## [SPEECHES AND STATEMENTS]

## ( 2 )



**M. K. GANDHI**



GANDHI SMARAK NIDHI

KARNATAKA SHAKHA

1962

*Price :*

Ordinary Edn : Rs. 2 - 25

## PUBLISHER'S NOTE

This is the eighteenth Volume of our series and it forms the second part of 'Bhashanagalu Mattu Helikegalu' — the volumes, pertaining to the Selected Speeches & Statements of Gandhiji. The first part ended with the Round Table Conference that took place in London in 1931, marking an era in Indo-British annals. The present volume takes up the thread of continuity and covers an entire period of seventeen years ending with Gandhiji's martyrdom in 1948. The Speeches & Statements which are called out here, include almost all the important ones that were the utterances of a great soul in its relentess pursuit of truth and non-violence, practically in the context of the titanic struggle for India's emancipation. They also express the agony of the 'Spirit of Man' ever striving for perfection. The reader can also find here the throbs and pulsations of a master spirit expressing itself spontaneously on issues of momentous concern to the nation and its destiny. They envisage episodes like his exit from the congress, Individual Civil Dis-obedience Movement, the Quit India Movement, finally the agonies of his soul working for communal amity in an Orgy of violence that overwhlemed the Nation as a sequel to the partition of India. It is no wonder then that these Speeches & Statements have, about them, a halo of adventure and a perennial sense of ultimate haman values besides shedding a flood of light on the historical events themselves. It would be appropriate to say that Gandhiji is vibrantly alive through them and the saga of the struggle for Indian freedom acquires a new fascination.

The translations of the selected passages have been done by Sri G. V. Narayana Murti (Pages 1—29), Sri K. Sampathgiri Rao, (Pages 29—137), Sri Siddavanahalli Krishna Sarma (Pages 138—234) and Sri K. S. Narayana Swamy (Pages 235 to 308). We are grateful to these for expending their literary ability and devotion to the effective rendering of the original into Kannada.

The Printing work of the book has been executed by Messrs Usha Press, Mysore, while the printing of Jackets as well as Illustrations has been done by Messrs Wesley Press, Mysore. Our thanks are due to all these for their whole hearted co-operation. To Messrs Navajivan, Ltd., Ahmedabad, we are indebted as ever, for their kindness in permitting us to bring out this volumes.

M. Yamunacharya
*Chief Editor*
Works of Gandhiji in Kannada

162, Ramavilas Road
MYSORE - I

*Published by the Chief Editor, Works of Gandhiji in Kannada, 162, Ramavilas Road, Mysore, for Gandhi Smarak Nidhi, Karnataka Shakha.*

# ಕನ್ನಡದಲ್ಲಿ ಗಾಂಧೀ ಗ್ರಂಥಗಳು

ವಿಶ್ವದ ಎಲ್ಲ ಭಾಷೆಗಳಲ್ಲಿಯೂ ಗಾಂಧೀಜೀಯವರ ವಿಚಾರಗಳ ಪ್ರಚಾರ ಮಾಡುವುದು ಗಾಂಧೀ ಸ್ಮಾರಕ ನಿಧಿಯ ಮುಖ್ಯ ಉದ್ದೇಶಗಳಲ್ಲಿ ಒಂದು. ಕರ್ನಾಟಕಕ್ಕೆ ಹಾಗೂ ಕನ್ನಡಿಗರಿಗೆ ಅತೀವ ಮಹತ್ವದ ಗಾಂಧೀ ವಿಚಾರಗಳ ಪರಿಚಯ ಮಾಡಿಕೊಡುವುದು ಈಗ ಕೈಗೊಂಡ ಈ ಯೋಜನೆಯ ಗುರಿಯಾಗಿದೆ.

ಕರ್ನಾಟಕದ ಹಲವಾರು ಸಾಹಿತಿಗಳು, ಲೇಖಕರು, ಗಾಂಧೀಜೀಯವರ ಬರಹಗಳಲ್ಲಿ ಕೆಲವನ್ನು ಆಗಲೇ ಅನುವಾದಿಸಿ ಪ್ರಕಟಿಸಿದ್ದಾರೆ. ಸಾಧ್ಯವಾದಷ್ಟು ಈಗಲೇ ಪ್ರಕಟವಾಗಿರುವ ಅನುವಾದಗಳನ್ನು ಆವಶ್ಯಕವಿದ್ದಲ್ಲಿ ಪರಿಷ್ಕರಿಸಿ ಅವುಗಳನ್ನು ಈ ಗಾಂಧೀ ಗ್ರಂಥಮಾಲೆಯಲ್ಲಿ ಪೋಣಿಸುವ ಪ್ರಯತ್ನ ನಡೆದಿದೆ. ಗಾಂಧೀಜೀಯವರ ಮುಖ್ಯ ಹಾಗೂ ವಿವಿಧ ವಿಚಾರಗಳ ಪರಿಚಯವನ್ನು ಮಾಡಿಕೊಡಲು ಸುಮಾರು ಇಪ್ಪತ್ತು ಸಂಪುಟಗಳು ಸಿದ್ಧವಾಗುತ್ತಲಿವೆ.

ಗಾಂಧೀಜೀಯವರ ಎಲ್ಲ ಬರಹಗಳನ್ನು ಸಂಪೂರ್ಣವಾಗಿ ಸಂಗ್ರಹಿಸಿ ಅನುವಾದಿಸುವುದು ನಮ್ಮ ಉದ್ದೇಶವಲ್ಲ. ಭಾರತ ಸರಕಾರ ಆ ಕಾರ್ಯವನ್ನು ಕೈಗೊಂಡಿದೆ. ಆದರೆ ಈ ನಮ್ಮ ಯೋಜನೆಯ ಉದ್ದೇಶ ಗಾಂಧೀಜೀಯವರ ಪ್ರಧಾನವಾದ ಅಭಿಪ್ರಾಯಗಳನ್ನು ಸಮಂಜಸವಾದ ರೀತಿಯಲ್ಲಿ ಕೂಡಿಸಿ ಮುಖ್ಯವಾದ ಶೀರ್ಷಿಕೆಗಳ ಅಡಿಯಲ್ಲಿ ಅವನ್ನು ಅಳವಡಿಸಿ ಕನ್ನಡಿಸಿ ಪ್ರಕಟಮಾಡುವುದಾಗಿದೆ. ಗಾಂಧೀಜೀ ಪುಸ್ತಕ ರೂಪವಾಗಿಯೇ ಬರೆದ ಗ್ರಂಥಗಳನ್ನು ಅವು ಇರುವಂತೆ ಅಥವಾ ಆವಶ್ಯಕವಾದರೆ ಸಂಗ್ರಹಿಸಿ ಅನುವಾದ ಮಾಡಲಾಗುತ್ತದೆ. ಮತ್ತೆ ಕೆಲವು ಗ್ರಂಥಗಳು ಗಾಂಧೀಜೀ ಅವರ ಅಭಿಪ್ರಾಯಗಳನ್ನು 'ಯಂಗ್ ಇಂಡಿಯಾ' ಮತ್ತು 'ಹರಿಜನ' ಪತ್ರಿಕೆಗಳಿಂದ ಆಯ್ದ ಲೇಖನಗಳ ಸಂಕಲನಗಳಾಗಿವೆ. ಸಂಕಲನವು ಸ್ವಲ್ಪ ನಿಧಾನದ ಕೆಲಸ; ಕಷ್ಟವಾದ ಕೆಲಸವೂ ಹೌದು. ಎಷ್ಟು ಪ್ರಯತ್ನ ಮಾಡಿದರೂ ವಿಷಯ ಪ್ರತಿಪಾದನೆಯ ಪುನರಾವರ್ತನೆ

ಯನ್ನು ತಪ್ಪಿಸುವುದು ಕಷ್ಟ. ನಮ್ಮ ಅನುವಾದಕರು ಕರ್ನಾಟಕದ ನುರಿತ ಸಾಹಿತಿಗಳು ಮತ್ತು ಗಾಂಧೀ ಮಾರ್ಗದಲ್ಲಿ ಶ್ರದ್ಧೆಯುಳ್ಳವರು. ಆದಷ್ಟು ಸಮರ್ಪಕವಾಗಿ ಭಾಷಾಂತರ ಕೆಲಸವನ್ನು ಮಾಡುತ್ತಿದ್ದಾರೆ. ಗಾಂಧೀಜೀಯವರ ಸರಳ ಮತ್ತು ರಸವತ್ತಾದ ಬರಹಗಳನ್ನು ಭಾಷಾಂತರಿಸುವುದು ಎಷ್ಟು ಕಷ್ಟವೆಂಬುದನ್ನು ಹೇಳಬೇಕಾಗಿಲ್ಲ. ಆದರೂ ಈ ಅನುವಾದಕರು ಗಾಂಧೀಜೀಯವರ ಮನೋಗತವನ್ನು ಅರಿತವರು ಆಗಿರುವುದರಿಂದ ಈ ಅನುವಾದಗಳು ಜನಪ್ರಿಯವಾಗಬಲ್ಲವೆಂದು ಆಶಿಸಲಾಗಿದೆ.

ಈ ಸಂಪಾದಕ ಸಮಿತಿಯಿಂದ ಪ್ರಕಟಿಸಲ್ಪಡುವ ಗ್ರಂಥಗಳು ಸುಲಭ ಬೆಲೆಗೆ ಪಾಠಕರ ಕೈಸೇರಬೇಕೆಂಬ ಉದ್ದೇಶದಿಂದ ಸಾಮಾನ್ಯ ಪ್ರತಿಯ ಬೆಲೆ ಕಡಮೆ ಇಡಲಾಗಿದೆ. ಇದರೊಡನೆ ಉತ್ತಮ ಪ್ರತಿಯೂ ಸಹ ಮಾರಾಟಕ್ಕೆ ಇರುವುದಲ್ಲದೆ ಅದರ ಬೆಲೆಯನ್ನೂ ಕೂಡ ಬಹಳ ಹೆಚ್ಚು ಇಡಲಾಗಿಲ್ಲ.

ಈ ಗ್ರಂಥಮಾಲೆ ಕನ್ನಡ ನಾಡಿನ ಜನಕ್ಕೆ ಗಾಂಧೀ ಸಾಹಿತ್ಯವನ್ನು ಒದಗಿಸಿ ಕೊಡುವ ಕೆಲಸದಲ್ಲಿ ಕೃತಕೃತ್ಯತೆಯನ್ನು ಪಡೆಯಬಲ್ಲದೆಂದು ಭಾವಿಸಲಾಗಿದೆ. ಗಾಂಧೀಜೀಯವರ ಆಧ್ಯಾತ್ಮಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಅಭಿಪ್ರಾಯಗಳು ಈ ಗ್ರಂಥಗಳ ಮೂಲಕ ಜನಸಾಮಾನ್ಯರಲ್ಲಿ ಹರಡಲಿ, ಸಕಲ ಜನರಿಗೆ ಸ್ಫೂರ್ತಿ ಕೊಟ್ಟು ನವ ಚೈತನ್ಯವನ್ನು ತುಂಬಲಿ ಎಂದು ಹಾರೈಸಿ ಈ ಗ್ರಂಥಗಳನ್ನು ಜನತಾ ಜನಾರ್ದನನಿಗೆ ಅರ್ಪಿಸುತಿರುವೆ.

ಗಾಂಧೀ ಸ್ಮಾರಕ ನಿಧಿ
ರಾಜಘಾಟ, ದಿಲ್ಲಿ
೭–೫–೧೯೫೮

ರಂಗನಾಥ ದಿವಾಕರ
ಅಧ್ಯಕ್ಷರು

# ನಿವೇದನ

## ( ಗಾಂಧೀಜೀಯ ಮಾತುಗಳಲ್ಲಿ )

### ಅನುವಾದಕರು : ' ಕುವೆಂಪು '

ನಾನೊಬ್ಬ ಸತ್ಯಶೋಧಕ. ಅದಕ್ಕೊಂದು ಮಾರ್ಗವನ್ನು ಕಂಡುಕೊಂಡಿದ್ದೇನೆಂದು ನನ್ನ ವಿಶ್ವಾಸ. ಅದರ ಸಿದ್ಧಿಗಾಗಿ ನಾನು ನಿರಂತರ ಪ್ರಯತ್ನಶೀಲನಾಗಿದ್ದೇನೆಂದೂ ನನ್ನ ನಂಬಿಕೆ. ಅದು ಇನ್ನೂ ನನಗೆ ಸಿದ್ಧಿಸಿಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ಸತ್ಯದ ಸಮ್ಯಕ್ ದರ್ಶನವೇ ಆತ್ಮಸಾಕ್ಷಾತ್ಕಾರ; ಅದೇ ಜೀವನದ ಅಂತಿಮ ಗುರಿ. ಅಂದರೆ ಪರಿಪೂರ್ಣತೆಯ ಸಿದ್ಧಿ. ನನ್ನ ನ್ಯೂನತೆಗಳು ಎಷ್ಟೆಂಬುದನ್ನು ನಾನು ವ್ಯಸನದಿಂದ ಅರಿತಿದ್ದೇನೆ. ಆ ಅರಿವು ನನಗೆ ದುಃಖ ತರುವಷ್ಟೂ ಇದೆ. ಆ ಅರಿವೇ ನನ್ನ ಶಕ್ತಿಯ ಸರ್ವಮೂಲ; ಏಕೆಂದರೆ ತನ್ನ ದೌರ್ಬಲ್ಯಗಳ ಅರಿವಾಗುವುದೇ ಮಾನವನಿಗೆ ಒಂದು ಅಪೂರ್ವ ಬಲ.[೧]

ಮನಸ್ಸಿನಲ್ಲಿ, ಮಾತಿನಲ್ಲಿ, ಕೆಲಸದಲ್ಲಿ ಅತ್ಯಂತ ಋಜುವಾಗಿ, ಅತ್ಯಂತ ಸತ್ಯವಾಗಿ, ಅತ್ಯಂತ ಅಹಿಂಸಕವಾಗಿ ನಡೆಯಬೇಕೆಂದು ಹೋರಾಡುತ್ತಿದ್ದರೂ, ನನಗೆ ಸರಿಯೆಂದು ತಿಳಿದ ಗುರಿಯನ್ನು ಮುಟ್ಟಲು ಹಂಬಲಿಸಿ ಹೆಣಗುತ್ತ ಸತತವೂ ಸೋಲುತ್ತಿರುವ ನಾನು ಒಂದು ಸಾಮಾನ್ಯ ಚೇತನ. ಆ ಯಾತ್ರೆಯೇನೋ ಕ್ಲೇಶಕರವೇ; ಆದರೆ ಆ ಯಾತನೆಯಲ್ಲಿಯೂ ನನಗೆ ಒಂದು ಆನಂದವಿದೆ. ಏರುವ ಒಂದೊಂದು ಹೆಜ್ಜೆಯೂ ನನ್ನನ್ನು ಬಲಿಷ್ಠನನ್ನಾಗಿ ಮಾಡಿ ಮುಂದಣ ಹೆಜ್ಜೆಗೆ ಸಾಮರ್ಥ್ಯವೀಯುತ್ತದೆ.[೨]

ದಾರಿ ನನಗೆ ಗೊತ್ತು. ಅದು ನೇರ ಮತ್ತು ಇಕ್ಕಟ್ಟು—ಕತ್ತಿಯ ಅಲಗಿನಂತೆ. ಅದರ ಮೇಲೆ ನಡೆಯುವುದೆಂದರೆ ನನಗೆ ಉಲ್ಲಾಸ. ಜಾರಿದಾಗಲೆಲ್ಲಾ ಕಣ್ಣೀರಿಡುತ್ತೇನೆ. 'ನ ಮೇ ಭಕ್ತಃ ಪ್ರಣಶ್ಯತಿ' ಎಂದು ದೇವರ ವಚನವಿದೆ. ಆ ವಚನದಲ್ಲಿ ನನಗೆ ದೃಢವಾದ ನಂಬಿಕೆಯಿದೆ. ಆದ್ದರಿಂದ ನನ್ನ ದೌರ್ಬಲ್ಯದ ಪರಿಣಾಮವಾಗಿ ಸಾವಿರ ಬಾರಿ ಸೋತರೂ

ಸಾನೆಂದಿಗೂ ಶ್ರದ್ಧೆಗೆಡುವುದಿಲ್ಲ. ಪ್ರತಿಯಾಗಿ, ಇಂದಲ್ಲ ನಾಳೆ, ಸ್ವತಃ ಸಿದ್ಧವಾಗಿ ಕೈಗೂಡಲೇಬೇಕಾಗಿರುವ ಇಂದ್ರಿಯ ಜಯ ಲಭಿಸಿದಂದು, ಬೆಳಕನ್ನು ಕಂಡೇ ಕಾಣುತ್ತೇನೆಂಬುದು ನನ್ನ ವಿಶ್ವಾಸ.[೩]

ಏಕೆಂದರೆ ಸಾವಿನ ನಡುವೆ ಬಾಳು, ಸುಳ್ಳಿನ ನಡುವೆ ಸತ್ಯ, ತಮಸ್ಸಿನ ನಡುವೆ ಜ್ಯೋತಿ ಚಿರಸ್ಥಾಯಿಯಾಗಿರುವುದನ್ನು ನಾನು ಕಾಣುತ್ತಿದ್ದೇನೆ. ಭಗವಂತನೇ ಪ್ರಾಣಶಕ್ತಿ, ಅವನೇ ಸತ್ಯ ಮತ್ತು ಜ್ಯೋತಿ ಎಂಬುದು ನನ್ನ ವಿಶ್ವಾಸ. ಆತ ಪ್ರೇಮ ಸ್ವರೂಪಿ; ಆತನೇ ಪರಮ ಶ್ರೇಯಸ್ಸು.[೪]

ಬಾಲ್ಯದಿಂದಲೂ ನಾನೊಬ್ಬ ಸತ್ಯಾರಾಧಕ ಎಂಬುದು ನನ್ನ ವಿಶ್ವಾಸ. ಅದು ನನ್ನ ಅತ್ಯಂತ ಸಹಜ ಪ್ರವೃತ್ತಿ. ಉಪಾಸನಾಪೂರ್ವಕವಾದ ಶೋಧನೆಯಿಂದ ಭಗವಂತನೇ ಸತ್ಯ ಎಂಬ ರೂಢಿಯ ನಂಬಿಕೆಯ ಬದಲು ಸತ್ಯವೇ ಭಗವಂತ ಎಂಬ ಸೂತ್ರ ನನಗೆ ಸ್ಫುರಣವಾಯಿತು. ಭಗವಂತನನ್ನು ಪ್ರತ್ಯಕ್ಷವೋ ಎಂಬಂತೆ ಕಾಣಲು ಈ ಸೂತ್ರದಿಂದ ನನಗೆ ಸಾಧ್ಯವಾಗಿದೆ. ನನ್ನ ಚೇತನಸಮಸ್ತವನ್ನೂ ಆತ ವ್ಯಾಪಿಸಿದ್ದಾನೆ, ಎಂಬುದು ನನ್ನ ಅನುಭವ.[೫]

ಭಗವಂತನ ಪ್ರತ್ಯಕ್ಷ ದರ್ಶನದ ಹಂಬಲ ನನ್ನದು. ಭಗವಂತನೇ ಸತ್ಯ ಎಂಬುದನ್ನು ನಾನು ಬಲ್ಲೆ. ನನ್ನ ಪಾಲಿಗೆ ಭಗವಂತನನ್ನು ಕಾಣಲು ಇರುವ ಒಂದೇ ಒಂದು ನಿಶ್ಚಿತ ಮಾರ್ಗವೆಂದರೆ ಅಹಿಂಸೆ, ಪ್ರೇಮ.[೬]

ಅಹಿಂಸೆ ನನ್ನ ದೇವರು. ಸತ್ಯ ನನ್ನ ದೇವರು. ಅಹಿಂಸೆಯ ಸಾಧನೆಗಾಗಿ ನಾನು ಶ್ರಮಿಸುವಾಗ ಸತ್ಯ ಹೇಳುತ್ತದೆ: 'ನನ್ನ ಮೂಲಕವೇ ಅದರ ಸಿದ್ಧಿ' ಎಂದು. ಸತ್ಯದ ಸಾಧನೆಗಾಗಿ ನಾನು ಶ್ರಮಿಸುವಾಗ ಅಹಿಂಸೆ ಹೇಳುತ್ತಿದೆ: 'ನನ್ನ ಮೂಲಕವೇ ಅದರ ಸಿದ್ಧಿ' ಎಂದು.[೭]

ಭಾರತದ ಸ್ವಾತಂತ್ರ್ಯಸಾಧನೆಯೇ ನನ್ನ ಜೀವಿತೋದ್ದೇಶ. ನಾನು ಅದಕ್ಕಾಗಿ ಸಾಯಲು ಕೂಡ ಸಿದ್ಧ. ಏಕೆಂದರೆ ಭಾರತದ ಸ್ವಾತಂತ್ರ್ಯ ಸತ್ಯದ ಒಂದು ಅಂಶ. ಬಂಧಮುಕ್ತವಾದಾಗಲೆ ಭರತಖಂಡ ಸತ್ಯಸ್ವರೂಪ ನಾದ ಭಗವಂತನನ್ನು ಪೂಜಿಸಬಲ್ಲದು, ಭಾರತದ ಬಿಡುಗಡೆಗಾಗಿ ನಾನು ದುಡಿಯುತ್ತಿದ್ದೇನೆ; ಏಕೆಂದರೆ ಭಾರತದಲ್ಲಿ ಬದುಕಿ ಅದರ ಸಂಸ್ಕೃತಿ

ಯನ್ನು ಪಡೆದಿರುವುದರಿಂದ ಆದರ ಸೇವೆಗೆ ನಾನು ಅತ್ಯಂತ ಅರ್ಹ ಎಂಬುದನ್ನು, ನನ್ನ ಸೇವೆಯ ಮೊದಲ ಹಕ್ಕು ಭಾರತದ್ದು ಎಂಬುದನ್ನು ನನ್ನ ಸ್ವದೇಶೀ ನನಗೆ ಕಲಿಸಿದೆ. ನನ್ನ ದೇಶಭಕ್ತಿ ಭಾರತಕ್ಕೆ ಮಾತ್ರ ಮೀಸಲಾದುದಲ್ಲ. ಬೇರೆ ಯಾವ ರಾಷ್ಟ್ರದ ಹಿತಕ್ಕೂ ಧಕ್ಕೆಯೊದಗ ಬಾರದು ಎಂಬುದಷ್ಟೇ ಅಲ್ಲ; ಸಕಲ ರಾಷ್ಟ್ರಗಳಿಗೂ, ಆ ಪದದ ಸಂಪೂರ್ಣಾರ್ಥದಲ್ಲಿ, ಸರ್ವಲಾಭ ಒದಗಬೇಕು ಎಂಬುದೇ ನನ್ನ ಮಾತಿನ ಆಶಯ. ನಾನು ಸಂಕಲ್ಪಿಸಿರುವ ಭಾರತದ ಸ್ವಾತಂತ್ರ್ಯ ಎಂದೆಂದೂ ಲೋಕಹಿತಕಂಟಕವಾಗಲಾರದು.[4]

ವಿಶ್ವಾತ್ಮಕವೂ ವಿಶ್ವವ್ಯಾಪಿಯೂ ಆದ ಸತ್ಯವನ್ನು ಸಾಕ್ಷಾತ್ತಾಗಿ ಸಂದರ್ಶಿಸಬೇಕಾದರೆ ಸೃಷ್ಟಿಯಲ್ಲಿ ಕ್ಷುದ್ರತಮವಾದುದನ್ನೂ ತನ್ನಂತೆ ಪ್ರೀತಿಸುವುದು ಸಾಧ್ಯವಾಗಲೇಬೇಕು. ಆ ಹಂಬಲವನ್ನು ತುಂಬಿಕೊಂಡ ವನು ಜೀವನದ ಯಾವ ಕ್ಷೇತ್ರದಿಂದಲೂ ವಿಮುಖನಾಗಲು ಸಾಧ್ಯವಿಲ್ಲ. ನನ್ನ ಸತ್ಯಶ್ರದ್ಧೆ ನನ್ನನ್ನು ರಾಜಕೀಯ ಕ್ಷೇತ್ರಕ್ಕೆ ಎಳೆದು ತಂದಿರುವುದು ಈ ಕಾರಣದಿಂದಲೇ. ಅಧ್ಯಾತ್ಮಕ್ಕೂ ರಾಜಕೀಯಕ್ಕೂ ಏನೂ ಸಂಬಂಧ ಇಲ್ಲ ಎನ್ನುವವರಿಗೆ ಅಧ್ಯಾತ್ಮ ಎಂದರೇನು ಎಂಬುದೇ ತಿಳಿಯದೆಂದು ಸ್ವಲ್ಪವೂ ಅಳುಕದೆ, ಆದರೆ ವಿನೀತನಾಗಿ ನಾನು ಹೇಳಬಲ್ಲೆ.[5]

ಆತ್ಮಶ್ರೀವಿದೂರವಾದ ರಾಜಕೀಯವು ನನ್ನ ಪಾಲಿಗೆ ಸರ್ವಥಾ ತ್ಯಾಜ್ಯವಾದ ಕಲಂಕ. ರಾಜಕೀಯ ರಾಷ್ಟ್ರಗಳನ್ನು ಕುರಿತದ್ದು. ಯಾವುದು ರಾಷ್ಟ್ರಗಳ ಹಿತವನ್ನು ಕುರಿತದ್ದೋ ಆದು ಅಧ್ಯಾತ್ಮ ಪ್ರವೃತ್ತಿಯುಳ್ಳ ವ್ಯಕ್ತಿಯ, ಎಂದರೆ ಸತ್ಯದ ಮತ್ತು ಭಗವಂತನ ಅನ್ವೇಷಕ ಸಾಧನೆಯ ಅಂಗಗಳಲ್ಲಿ ಒಂದಾಗಿರುವುದು ಅನಿವಾರ್ಯ. ನನಗಾದರೋ ಭಗವಂತ ನೆಂದರೂ ಒಂದೇ, ಸತ್ಯವೆಂದರೂ ಒಂದೇ. ಭಗವಂತನು ಅಸತ್ಯದ ಮೂರ್ತಿಯೆಂದೂ ಹಿಂಸೆಯ ಮೂರ್ತಿಯೆಂದೂ ಯಾರಾದರೂ ಸ್ಥಿರಪಡಿಸಿ ದರೆ ಅಂತಹ ಭಗವಂತನನ್ನು ಪುಜಿಸಲು ನಾನು ನಿರಾಕರಿಸುತ್ತೇನೆ. ರಾಜಕೀಯದಲ್ಲಿಯೂ ಭಗವಂತನ ರಾಜ್ಯ ಸ್ಥಾಪಿತವಾಗಬೇಕಾಗಿದೆ. ನನ್ನ ಬದುಕಿನ ಅತ್ಯಂತ ಆತ್ಮೀಯ ವಸ್ತುಗಳಿಂದ ರಾಜಕೀಯವನ್ನು ಬೇರ್ಪಡಿಸ ಲಾರೆ. ಕಾರಣ ಇಷ್ಟೆ: ನನ್ನ ರಾಜಕೀಯ ಕಲುಷಿತವಲ್ಲ. ಈ ಎಲ್ಲವೂ

ಸತ್ಯ—ಅಹಿಂಸೆಗಳೊಂದಿಗೆ ಜಟಿಲವಾಗಿ ಹೆಣೆದುಕೊಂಡಿವೆ. ಸತ್ಯವನ್ನು ಬಲಿಗೊಟ್ಟು ಸ್ವಾತಂತ್ರ್ಯವನ್ನು ಪಡೆಯುವುದಕ್ಕಿಂತ ಭಾರತ ವಿನಾಶ ಹೊಂದುವುದೇ ಹೆಚ್ಚು ಲೇಸೆಂಬುದು ನನ್ನ ಮತ. ರಾಜಕೀಯ ಸಂಪರ್ಕ ವಿಲ್ಲದೆ ಸಮಾಜಸೇವೆಯಂಥ ಕೆಲಸವನ್ನು ಕೂಡ ನಡೆಸುವುದು ಅಸಾಧ್ಯ ಎಂಬುದು ನನ್ನ ಅನುಭವಕ್ಕೆ ಬಂದುದರಿಂದ ರಾಜಕೀಯ ಕ್ಷೇತ್ರವನ್ನು ನಾನು ಪ್ರವೇಶಿಸುವುದು ಅನಿವಾರ್ಯವಾಯಿತು. ಸಾಮಾಜಿಕ ಮತ್ತು ನೈತಿಕ ದೃಷ್ಟಿಯಿಂದ ರಾಜಕೀಯ ಕಾರ್ಯವು ಪರಿಗಣಿತವಾಗಲೇಬೇಕು.

ಮಾನವನ ಮನಸ್ಸಾಗಲಿ ಸಮಾಜವಾಗಲಿ ರಾಜಕೀಯ, ಸಾಮಾಜಿಕ. ಧಾರ್ಮಿಕ ಎಂಬ ಪ್ರತ್ಯೇಕ ವಿಭಾಗಗಳಾಗಿ ವಿಂಗಡಣೆಯಾಗಿಲ್ಲ ಎಂಬುದು ನನ್ನ ವಿಶ್ವಾಸ. ಅವುಗಳ ನಡುವೆ ಪ್ರತಿಕ್ರಿಯೆ ಇದ್ದೇ ಇದುತ್ತದೆ.೧೦

ಆತ್ಮಶ್ರೀನಿಯಮಕ್ಕೆ ತನ್ನದೇ ಆದ ಒಂದು ಕ್ಷೇತ್ರವಿದೆ ಎಂಬುದನ್ನು ನಾನು ನಂಬುವುದಿಲ್ಲ. ಬದಲು, ಅದು ಜೀವನದ ಸಾಮಾನ್ಯ ವ್ಯಾಪಾರಗಳ ಮೂಲಕವಾಗಿ ಮಾತ್ರವೇ ವ್ಯಕ್ತಗೊಳ್ಳುತ್ತದೆ. ಹೀಗೆ ಅದು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವಲಯಗಳ ಮೇಲೂ ಪರಿಣಾಮವನ್ನು ಉಂಟುಮಾಡುತ್ತದೆ.೧೧

ಮಾನವ ಜೀವಿತದ ಪರಮೋದ್ದೇಶ ಭಗವತ್ ಸಾಕ್ಷಾತ್ಕಾರ. ಅವನ ಕರ್ಮಕ್ರಿಯೆಗಳೇನೇ ಇರಲಿ, ಸಾಮಾಜಿಕ. ರಾಜಕೀಯ, ಧಾರ್ಮಿಕ ಎಲ್ಲವೂ ಈ ಈಶ್ವರಸಾಕ್ಷಾತ್ಕಾರದ ಪರಮೋದ್ದೇಶದಿಂದಲೇ ನಿಯಂತ್ರಿತ ವಾಗಿರಬೇಕು. ಮಾನವಸೇವೆಯೇ ಈ ಸಾಧನೆಯ ಪ್ರಪ್ರಥಮವಾದ ಅನಿವಾರ್ಯಾಂಗವಾಗುತ್ತದೆ. ಏಕೆಂದರೆ ಇಷ್ಟೆ : ಈಶ್ವರ ದರ್ಶನಕ್ಕಿರುವ ಏಕೈಕ ಮಾರ್ಗವೆಂದರೆ ಆತನ ಸೃಷ್ಟಿಯಲ್ಲಿಯೇ ಆತನನ್ನು ಕಂಡು ಅದರಲ್ಲಿಯೇ ಒಂದಾಗಿರುವುದು. ಸರ್ವರ ಸೇವೆಯೊಂದೇ ಇದಕ್ಕೆ ಸಾಧನ, ನಾನು ಈ ಸರ್ವದ ಒಂದು ಅಂಶ. ಇತರರನ್ನು ಉಳಿದು ನಾನೊಬ್ಬನೇ ಅದನ್ನು ಪಡೆಯಲಾರೆ.೧೨

ಈಶಸೇವೆ ಅರ್ಥಾತ್ ಮಾನವಸೇವೆಯೇ ನನ್ನ ಧರ್ಮ. ನಿಷ್ಕಾಮ ಸೇವೆಯಿಂದ ಸೇವೆಸಲ್ಲಿಸುವುದೆಂದರೆ ಇತರರಿಗೆ ನಾವು ಉಪಕಾರಮಾಡಿದ್ದ

ಕ್ಕಿಂತ ನಮ್ಮ ಸಾಲವನ್ನು ನಾವು ತೀರಿಸಿಕೊಂಡು ಕೃತಕೃತ್ಯರಾದಂತೆ. ನಮ್ಮ ಹೊಣೆಯನ್ನು ನಾವೇ ಇಳಿಸಿಕೊಂಡು ನಮ್ಮ ಕರ್ತವ್ಯವನ್ನು ಪರಿಪಾಲಿಸುವುದರ ಮೂಲಕ ನಮಗೆ ನಾವೇ ಉಪಕಾರ ಮಾಡಿಕೊಳ್ಳುತ್ತೇವೆ. ನಮ್ಮಲ್ಲಿ ಒಳ್ಳೆಯವರೆನಿಸಿಕೊಂಡವರು ಮಾತ್ರವಲ್ಲ, ನಾವೆಲ್ಲರೂ ನಮ್ಮ ಸರ್ವ ಸಂಪತ್ತನ್ನೂ ಸರ್ವರಿಗಾಗಿ ವಿನಿಯೋಗಿಸಲು ಬದ್ಧರು. ಮೃಗಗಳಿಗಿಂತ ಮಾನವ ಭಿನ್ನ ಎಂದು ತೋರುವುದು ಈ ತ್ಯಾಗ ಧರ್ಮ ಒಂದರಿಂದಲೇ.[೧೩]

ಮನುಷ್ಯ ಎಷ್ಟರಮಟ್ಟಿಗೆ ಪರಾರ್ಥಕ್ಕಾಗಿ ಶ್ರಮಿಸುತ್ತಾನೆಯೋ ಅಷ್ಟರಮಟ್ಟಿಗೆ ಅವನು ದೊಡ್ಡವನಾಗುತ್ತಾನೆ.[೧೪]

ನಾನು ಸೋದರ ಭಾವ ಅಥವಾ ತಾದಾತ್ಮ್ಯವನ್ನು ಸಾಧಿಸಲೆಳಸುವುದು ಕೇವಲ ಮಾನವಜೀವಿಗಳೊಂದಿಗೆ ಮಾತ್ರವಲ್ಲ, ಸಮಸ್ತ ಜೀವರಾಶಿಯೊಂದಿಗೆ, ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೊಂದಿಗೆ ಕೂಡ. ನಿಮ್ಮನ್ನು ಚಕಿತಗೊಳಿಸಬಹುದಾದ ಈ ಬಯಕೆಗೆ—ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೊಂದಿಗೂ ತಾದಾತ್ಮ್ಯವನ್ನು ಸಾಧಿಸಬೇಕೆನ್ನುವ ಬಯಕೆಗೆ–ಕಾರಣವಿಷ್ಟೆ ; ನಾವೆಲ್ಲರೂ ಒಬ್ಬನೇ ಭಗವಂತನಿಂದ ಬಂದವರು ಎಂದು ಹೇಳುತ್ತೇವಲ್ಲ ; ಹಾಗಿರುವುದರಿಂದ ಯಾವುದೇ ರೂಪದಲ್ಲಿ ಗೋಚರಿಸಿದರೂ ಮೂಲತಃ ಎಲ್ಲ ಜೀವರಾಶಿಯೂ ಒಂದೇ.[೧೫]

ಭಗವಂತನ ಕೇವಲ ಅಖಂಡತೆಯನ್ನು ನಾನು ನಂಬುತ್ತೇನೆ ; ಆದುದರಿಂದಲೇ ಜನತೆಯ ಅಖಂಡತೆಯಲ್ಲೂ ನನಗೆ ಶ್ರದ್ಧೆಯಿರುವುದು. ಒಬ್ಬನು ಮಾತ್ರ ಆಧ್ಯಾತ್ಮಲಾಭ ಪಡೆದು ಅವನ ಸುತ್ತಣ ಜನರು ತೊಳಲುತ್ತಾರೆ ಎಂಬುದನ್ನು ನಾನು ನಂಬುವುದಿಲ್ಲ. ಅದ್ವೈತದಲ್ಲಿ ನನಗೆ ಶ್ರದ್ಧೆಯಿದೆ. ತತ್ತ್ವಶಃ ಮಾನವನ ಅಖಂಡತೆಯಲ್ಲಿ, ಹಾಗೆ ನೋಡಿದರೆ ಜೀವಸಮಸ್ತದ ಅಖಂಡತೆಯಲ್ಲಿ ನನಗೆ ವಿಶ್ವಾಸವುಂಟು. ಆದುದರಿಂದಲೇ ಒಂದು ವ್ಯಕ್ತಿಗೆ ಆಧ್ಯಾತ್ಮಲಾಭವಾದರೆ ಇಡಿಯ ವಿಶ್ವಕ್ಕೆ ಆ ಲಾಭ ಒದಗುತ್ತದೆ. ಒಂದು ವ್ಯಕ್ತಿ ಪತನಹೊಂದಿದರೆ ಅಷ್ಟರ ಮಟ್ಟಿಗೆ ಇಡಿಯ ವಿಶ್ವದ ಪತನವೇ ಆಗುತ್ತದೆ ಎಂದು ನಾನು ಭಾವಿಸಿರುವುದು.[೧೬]

ಈ ಪೃಥ್ವಿಯ ನಶ್ವರ ಸಾಮ್ರಾಜ್ಯದ ಬಯಕೆ ನನಗಿಲ್ಲ. ಮೋಕ್ಷ ರೂಪವಾದ ಅಮರ ಸಾಮ್ರಾಜ್ಯಕ್ಕಾಗಿ ನಾನು ಶ್ರಮಿಸಿದ್ದೇನೆ. ನನ್ನ ಧ್ಯೇಯ ಸಾಧನೆಗಾಗಿ ನಾನು ಗುಹಾನಿವಾಸಿಯಾಗಬೇಕಾಗಿಲ್ಲ.[೧೭]

ದೇಶದ, ತನ್ಮೂಲಕ ಮಾನವತೆಯ ಸೇವೆಗಾಗಿ ಎಡೆಬಿಡದೆ ದುಡಿಯುವುದೇ ನನ್ನ ಮೋಕ್ಷಪಥ. ಜೀವಸಮಸ್ತದೊಂದಿಗೆ ಅನನ್ಯತೆಯನ್ನು ಸಾಧಿಸುವುದೇ ನನ್ನ ಬಯಕೆ.[೧೮]

ಯಾವ ನೂತನ ಸಿದ್ಧಾಂತಗಳನ್ನೂ ನಾನು ಮಂಡಿಸಿಲ್ಲ. ಅದರ ಬದಲು ಪುರಾತನ ಸಿದ್ಧಾಂತಗಳ ಪುನರ್ನಿರೂಪಣೆಯ ಪ್ರಯತ್ನವೇ ನನ್ನದು. ಅದು ಎಷ್ಟರ ಮಟ್ಟಿಗೆ ಸರಿಯಾಗಿ ಸಾಗಿದೆಯೋ ಹೇಳಲಾರೆ. ಆದರೆ ಅದು ನನ್ನ ಪ್ರಾಮಾಣಿಕ ನಂಬಿಕೆಯನ್ನು ಪ್ರತಿನಿಧಿಸುತ್ತಿದೆ.[೧೯]

ಗಾಂಧೀಪಂಥ ಎಂಬುದೊಂದಿಲ್ಲ. ನನ್ನ ತರುವಾಯ ಯಾವ ಪಂಥವನ್ನೂ ಕಟ್ಟ ಹೋಗುವ ಇಚ್ಛೆ ನನಗಿಲ್ಲ. ನಾನು ಯಾವುದಾದರೂ ನೂತನ ತತ್ತ್ವದ ಅಥವಾ ಸಿದ್ಧಾಂತದ ಮೂಲಪುರುಷ ಎಂಬ ಭಾವನೆ ನನಗಿಲ್ಲ. ನಿತ್ಯ ಸತ್ಯಗಳನ್ನು ನಮ್ಮ ದೈನಂದಿನ ಜೀವನ ಹಾಗೂ ಸಮಸ್ಯೆಗಳಿಗೆ ಅಳವಡಿಸಲು ನನ್ನ ರೀತಿಯಲ್ಲಿ ನಾನು ಸಾಧಾರಣನಂತೆ ಪ್ರಯತ್ನಿಸಿದ್ದೇನೆ; ಅಷ್ಟೆ. ಸತ್ಯ–ಅಹಿಂಸೆ ಈ ಭಾವಗಳು ಪರ್ವತಗಳಷ್ಟೇ ಪುರಾತನವಾದವು. ನನ್ನ ಶಕ್ತಿಗೆ ಸಾಧ್ಯವಾದಷ್ಟು ವಿಪುಲ ಪ್ರಮಾಣದಲ್ಲಿ ಅವೆರಡರಲ್ಲೂ ಪ್ರಯೋಗಗಳನ್ನು ನಡೆಸಿರುವುದಷ್ಟೆ ನನ್ನ ಕೆಲಸ. ಹಾಗೆ ಮಾಡುವಾಗ ಕೆಲವು ಸಲ ತಪ್ಪು ಮಾಡಿದ್ದೇನೆ; ಆ ತಪ್ಪುಗಳಿಂದ ಪಾಠ ಕಲಿತಿದ್ದೇನೆ. ಹೀಗೆ ಜೀವನ ಮತ್ತು ಅದರ ಸಮಸ್ಯೆಗಳು ಸತ್ಯ–ಅಹಿಂಸೆಗಳ ಅನುಷ್ಠಾನಗಳಲ್ಲಿ ನಡೆಸಿರುವ ಅನೇಕ ಪ್ರಯೋಗಗಳಾಗಿವೆ.[೨೦]

ನಿಮ್ಮ ಮುಂದೆ ಉದ್ಭವಿಸಿರುವ ಸಮಸ್ಯೆಗಳನ್ನು ನನ್ನ ಹೇಳಿಕೆಗೆ ಅನುಸಾರವಾಗಿ ಎದುರಿಸಬೇಕೆಂಬುದೇ ನನ್ನ ಇಚ್ಛೆ. ಹೀಗೆ ಸತ್ಯ–ಅಹಿಂಸೆಗಳಲ್ಲಿ ನನ್ನ ಶ್ರದ್ಧೆ ವರ್ಧಿಸುತ್ತಲೇ ಇದೆ. ನನ್ನ ಜೀವನದಲ್ಲಿ ಅವುಗಳನ್ನು ಅನುಸರಿಸುತ್ತ ಹೋದಂತೆ ನಾನು ಕೂಡ ಪ್ರತಿಕ್ಷಣವೂ ಬೆಳೆಯುತ್ತಲೇ ಇದ್ದೇನೆ. ಅವುಗಳಲ್ಲಿ ನನಗೆ ಹೊಸ ಅರ್ಥ ಸ್ಫುರಿಸುತ್ತಿದೆ. ದಿನದಿನವೂ

ಅವುಗಳನ್ನು ಹೊಸ ಹೊಸ ಬೆಳಕಿನಲ್ಲಿ ಕಂಡು ಹೊಸ ಹೊಸ ಅರ್ಥಗಳನ್ನೂ ಅರಿಯುತ್ತಿದ್ದೇನೆ. ನನ್ನ ಜತೆಜತೆಗೆ ನೀವೂ ಕೂಡ ಬೆಳೆಯಬೇಕು. ನನ್ನ ಅನಂತರ ಏನಾಗುತ್ತದೆ ಎಂಬುದನ್ನು ತಿಳಿಯುವ ಚಿಂತೆ ನನಗಿರಕೂಡದು. ಆದುದರಿಂದ ನನ್ನನ್ನು ಮರೆತುಬಿಡಿ. ನೀವು ಭದ್ರವಾಗಿ ಅಂಟಿಕೊಳ್ಳಬೇಕಾದುದು ನನ್ನ ಹೆಸರಿಗಲ್ಲ, ತತ್ತ್ವಗಳಿಗೆ. ಆದರ ಅಳತೆ ಕೋಲಿನಿಂದ ನಿಮ್ಮ ಒಂದೊಂದು ಚಟುವಟಿಕೆಯನ್ನೂ ಅಳೆದು ಉದ್ಭವಿಸಬಹುದಾದ ಎಲ್ಲ ಸಮಸ್ಯೆಗಳನ್ನೂ ನಿರ್ಭೀತರಾಗಿ ಎದುರಿಸಿ.[೨೧]

ನಿಲ್ಲುವುದು ನನ್ನ ಕೃತಿಯೇ ಹೊರತು, ನನ್ನ ಮಾತೂ ಅಲ್ಲ. ಬರಹವೂ ಅಲ್ಲ. ಇತ್ತೀಚೆಗೆ ನಾನು ಈ ಮಾತನ್ನು ಅನೇಕ ಸಲ ಹೇಳಿದ್ದೇನೆ. ಸಕಲ ಶಾಸ್ತ್ರಗಳೂ ಒಂದುವೇಳೆ ವಿನಾಶಹೊಂದುವುದಾದರೂ ಹಿಂದೂ ಧರ್ಮದ ಸಾರವನ್ನು ಸಾರಲು ಈಶೋಪನಿಷತ್ತಿನ ಒಂದು ಮಂತ್ರ ಸಾಕು; ಆದರೆ ಅದನ್ನೂ ಅನುಷ್ಠಾನಕ್ಕೆ ತರಲು ಯಾರೊಬ್ಬರೂ ಇರದಿದ್ದರೆ ಆ ಒಂದು ಮಂತ್ರವೂ ನಿರರ್ಥಕ. ಆದರಂತೆಯೆ ನನ್ನ ಮಾತು, ಬರಹಗಳು ಸತ್ಯ–ಅಹಿಂಸೆಯ ಮಹಾತತ್ತ್ವಗಳನ್ನು ರಕ್ತಗತಮಾಡಿಕೊಳ್ಳಲು ನಿಮಗೆ ನೆರವು ನೀಡಿರುವಷ್ಟರಮಟ್ಟಿಗೆ ಮಾತ್ರ ಉಪಯುಕ್ತ. ಅವುಗಳನ್ನು ನೀವು ಹಾಗೆ ರಕ್ತಗತ ಮಾಡಿಕೊಳ್ಳದಿದ್ದರೆ ನನ್ನ ಬರಹಗಳಿಂದ ನಿಮಗೆ ಯಾವ ಪ್ರಯೋಜನವೂ ಇಲ್ಲ. ಒಬ್ಬ ಸತ್ಯಾಗ್ರಹಿಯಾಗಿ ನಾನು ಈ ಒಂದೊಂದು ಮಾತನ್ನೂ ಉದ್ದೇಶಪೂರ್ವಕವಾಗಿ ಹೇಳುತ್ತಿದ್ದೇನೆ.[೨೨]

ಗಾಂಧೀಪಂಥ ಎಂಬುದು ದೋಷದ ಪ್ರತೀಕವಾಗಿರುವುದಾದರೆ ಅದು ನಾಶಹೊಂದಲಿ. ಸತ್ಯ–ಅಹಿಂಸೆಗಳು ಅಜರಾಮರ. ಆದರೆ ಗಾಂಧೀ ಪಂಥ ಎಂಬುದು ಪಂಥಾಭಿಮಾನಕ್ಕೆ ಮತ್ತೊಂದು ಹೆಸರಾದರೆ ಅದು ವಿನಾಶಯೋಗ್ಯವೇ ನಿಜ. ತಾನು ಗಾಂಧೀ ಅನುಯಾಯಿ — ಎಂದು ಯಾರೊಬ್ಬನೂ ಹೇಳದಿರಲಿ. ನಾನು ನನ್ನನ್ನು ಅನುಸರಿಸಿದರೆ ಸಾಕು. ಅದರಲ್ಲೂ ನಾನು ಎಂತಹ ಅಸಮರ್ಪಕ ಅನುಯಾಯಿ ಎಂಬುದನ್ನು ನಾನು ಬಲ್ಲೆ; ಯಾವ ತತ್ತ್ವಗಳಿಗಾಗಿ ನಾನು ನಿಂತಿದ್ದೇನೆಯೊ ಅವುಗಳಿಗೆ ತಕ್ಕಂತೆ ನಾನು ಬಾಳುತ್ತಿಲ್ಲ. ನೀವು ಅನುಯಾಯಿಗಳಲ್ಲ; ಸಹವಿದ್ಯಾರ್ಥಿಗಳು, ಸಹಯಾತ್ರಿಕರು, ಸಹ-ಅನ್ವೇಷಕರು, ಸಹ-ಉದ್ಯೋಗಿಗಳು.[೨೩]

ಸತ್ಯ—ಅಹಿಂಸೆಗಳನ್ನು ಕೇವಲ ವೈಯಕ್ತಿಕ ಅನುಷ್ಠಾನದ ತತ್ತ್ವಗಳನ್ನಾಗಿ ಮಾಡಿಕೊಂಡರೆ ಸಾಲದು; ಸಮಾಜ ಸಮುದಾಯಗಳು, ರಾಷ್ಟ್ರಗಳೂ ಕೂಡ ಅವುಗಳನ್ನು ಅನುಷ್ಠಾನಕ್ಕೆ ತರುವಂತಾಗಬೇಕು. ಹೇಗೇ ಆಗಲಿ, ಅದಂತೂ ನನ್ನ ಕನಸು. ನನ್ನ ಬದುಕೆಲ್ಲ ಅದರ ಸಾಕ್ಷಾತ್ಕಾರದ ಪ್ರಯತ್ನಕಾಗಿಯೇ, ನನ್ನ ಸಾವೂ ಅದರಲ್ಲಿಯೆ. ನನ್ನ ಶ್ರದ್ಧೆ ನನಗೆ ಅನುದಿನವೂ ನೂತನ ಸತ್ಯಗಳನ್ನು ಕಾಣಿಸುತ್ತಿದೆ. ಆತ್ಮದ ಸ್ವರೂಪವೇ ಅಹಿಂಸೆ; ಅದುದರಿಂದಲೇ ಸಕಲರೂ ಬದುಕಿನ ಸಕಲ ವ್ಯವಹಾರಗಳಲ್ಲೂ ಅಹಿಂಸೆಯನ್ನು ಅನುಷ್ಠಾನಕ್ಕೆ ತರಬೇಕು. ಎಲ್ಲ ಕ್ಷೇತ್ರಗಳಲ್ಲೂ ಅದನ್ನು ಅನುಷ್ಠಾನ ಮಾಡಲಾಗದಿದ್ದರೆ ಅದಕ್ಕೆ ಔಪಯೋಗಿಕ ಮೌಲ್ಯವೇ ಇಲ್ಲ.—೨೪

ನಮ್ಮ ದೇಶಕ್ಕಾಗಿ ನಾನು ತ್ಯಾಗ ಮಾಡಲಾರದುದು ಈ ಜಗತ್ತಿನಲ್ಲಿ ಏನೂ ಇಲ್ಲ—ಎರಡರ ಹೊರತು. ಅವು ಸತ್ಯ ಮತ್ತು ಅಹಿಂಸೆ. ಇಡೀ ಜಗತ್ತನ್ನೇ ನನ್ನ ಮುಂದಿಟ್ಟರೂ ಈ ಎರಡನ್ನು ನಾನು ಬಿಡಲಾರೆ. ಏಕೆಂದರೆ ನನ್ನ ಪಾಲಿಗೆ ಸತ್ಯವೇ ದೇವರು. ಸತ್ಯಸಾಧನೆಗೆ ಅಹಿಂಸೆಯಿಲ್ಲದೆ ಅನ್ಯ ಪಥ ಇಲ್ಲ. ಸತ್ಯ ಅಥವಾ ಭಗವಂತನನ್ನು ಬಲಿಗೊಟ್ಟು ಭಾರತಕ್ಕೆ ಸೇವೆ ಸಲ್ಲಿಸುವ ಆಲೋಚನೆಯನ್ನು ನಾನು ಮಾಡಲಾರೆ. ನಾನು ಬಲ್ಲೆ, ಸತ್ಯವನ್ನು ಕೈಬಿಡಬಲ್ಲವನು ತನ್ನ ದೇಶವನ್ನೂ ಕೈಬಿಡಬಲ್ಲ, ಆಪ್ತೇಷ್ಟರನ್ನೂ ಕೈಬಿಡಬಲ್ಲ. ನನ್ನಾತ್ಮ ಮತ್ತು ನನ್ನ ಕರ್ತ ಇಬ್ಬರೂ ಮೆಚ್ಚುವಂತೆ ನಾನು ಹೋದೆಡೆಯೆಲ್ಲ ನನ್ನ ಕರ್ಮಕ್ಷೇತ್ರದ ಗಾಯತ್ರಿಗಳಾದ ಈ ನನ್ನ ಧರ್ಮಸೂತ್ರಗಳನ್ನು ಸಾರುತ್ತ ಹೋಗುತ್ತೇನೆ.

ನನ್ನದು ಧರ್ಮಮಾರ್ಗ, ನಾವು ಧರ್ಮಿಗಳು, ಆದುದರಿಂದ ಉಳಿದವರಿಗೆ ನಾವು ಶ್ರೇಷ್ಠರು ಎಂಬ ಅಹಂಭಾವ ನಮ್ಮನ್ನು ಆಕ್ರಮಿಸುವ ಭಯ ಯಾವಾಗಲೂ ಇದ್ದೇ ಇದೆ. ಇತರರಿಂದ ನಾನು ನಿರೀಕ್ಷಿಸುವಂತೆ ಸ್ವವಿಮರ್ಶೆಯಲ್ಲಿ ಸತ್ಯದಂತೆಯೇ ನಿಷ್ಠುರವಾಗಿರಲು ನಾನು ಪ್ರಯತ್ನಿಸುತ್ತೇನೆ.—೨೫

'ಗಾಂಧೀತತ್ತ್ವ' ಎಂದು ಯಾವುದನ್ನು ಜನ ಕರೆಯುತ್ತಾರೋ ಅದನ್ನೂ, ಅದರ ಪ್ರಸಾರವಿಧಾನಗಳನ್ನೂ ವಿಚಾರಿಸೋಣ. ಸತ್ಯ–ಅಹಿಂಸೆಗಳನ್ನು ಕುರಿತು ಪುಸ್ತಕಗಳನ್ನು ಬರೆಯುವುದಕ್ಕಿಂದ ಹೆಚ್ಚಿನ ಪ್ರಮಾಣ

ದಲ್ಲಿ ಸತ್ಯ-ಅಹಿಂಸೆಗಳ ಪ್ರಸಾರ ಸಾಧ್ಯ. ಅವುಗಳನ್ನು ಅನುಷ್ಠಾನಕ್ಕೆ ತಂದರೆ ಅನುಷ್ಠಾನದ ಜೀವನ ಪುಸ್ತಕಕ್ಕಿಂತ ಶ್ರೇಷ್ಠ. ಪುಸ್ತಕ ಮತ್ತು ಪತ್ರಿಕೆಗಳ ಪ್ರಕಟನೆ ಅನಗತ್ಯ ಎಂದು ನಾನು ಹೇಳುತ್ತಿಲ್ಲ. ಅವು ಅನಿವಾರ್ಯವೇನಲ್ಲ ಎಂದಷ್ಟೆ ನನ್ನ ಅಭಿಪ್ರಾಯ. ನಾವು ಸತ್ಯ-ಅಹಿಂಸೆಗಳ ನಿಜವಾದ ಆರಾಧಕರಾಗುವ ಪಕ್ಷದಲ್ಲಿ ಸಮಸ್ಯೆಗಳನ್ನು ಪರಿಹರಿಸಲು ಅಗತ್ಯವಾಗಿ ಬೇಕಾದ ಬುದ್ಧಿಶಕ್ತಿಯನ್ನು ಭಗವಂತನೇ ನಮಗೆ ದಯಪಾಲಿಸುತ್ತಾನೆ. ಪ್ರತಿಪಕ್ಷದ ದೃಷ್ಟಿಕೋನವನ್ನು ಅರ್ಥಮಾಡಿಕೊಳ್ಳುವ ಇಚ್ಛೆ ಅಂತಹ ಶ್ರದ್ಧೆಯ ಪೂರ್ವಾಂಗವಾಗಿಯೇ ಉಳಿದಿದೆ. ಪ್ರತಿಕಕ್ಷಿಯ ಮನಸ್ಸನ್ನು ಹೊಕ್ಕು ಆತನ ದೃಷ್ಟಿ ಏನೆಂದು ಅರಿಯಲು ಪ್ರಾಮಾಣಿಕವಾಗಿ ಪ್ರಯತ್ನಿಸಬೇಕು. ಹಿಂಸೆಯ ಬಾಯನ್ನೇ ಅಹಿಂಸೆ ನೇರವಾಗಿ ಹೊಗುತ್ತದೆ ಎಂಬುದರ ಅರ್ಥ ಇದೇ. ಅಂತಹ ಮನೋಧರ್ಮದ ಕವಚ ನಮಗಿದ್ದರೆ ಅಹಿಂಸೆಯ ತತ್ತ್ವಗಳನ್ನು ಪ್ರಸಾರಮಾಡುವ ವಿಶ್ವಾಸ ನಮಗೆ ಭರುತ್ತದೆ. ಆದಿಲ್ಲದೆ ಪುಸ್ತಕದ, ಪತ್ರಿಕೆಗಳ ಪ್ರಚಾರ ವ್ಯರ್ಥ.೨೬

ನನ್ನ ಸಲಹೆಗಳಲ್ಲೆಲ್ಲ ಒಂದು ರಕ್ಷಾಸೂತ್ರ ಇದ್ದೇ ಇರುತ್ತದೆ. ತಮ್ಮ ಬುದ್ಧಿಗೂ ಹೃದಯಕ್ಕೂ ಒಪ್ಪಿಗೆಯಾಗದಿದ್ದರೆ ಯಾರೂ ಅವುಗಳನ್ನು ಅನುಸರಿಸಬೇಕಾಗಿಲ್ಲ.೨೭

ನನ್ನನ್ನು ಮೆಚ್ಚುವವರಿಗೂ ನನ್ನ ಮಿತ್ರರಿಗೂ ಒಂದು ಧೈರ್ಯ ಹೇಳಬಲ್ಲೆ. ಮಹಾತ್ಮಾ ಎಂಬುದನ್ನು ಮರೆತು ನನ್ನನ್ನು ಬರಿಯ 'ಗಾಂಧೀ' ಎಂದು ಭಾವಿಸುವುದಾದರೆ ಅವರು ನನ್ನ ಮೆಚ್ಚುಗೆಗೆ ಹೆಚ್ಚಾಗಿ ಪಾತ್ರರಾಗುತ್ತಾರೆ. ನಾನು ಯಾವ ತತ್ತ್ವಗಳನ್ನು ಜೀವನದಲ್ಲಿ ಅನುಷ್ಠಾನ ಮಾಡಬೇಕೆಂದು ಕಾರ್ಯಕ್ರಮ ಹಾಕಿಕೊಂಡಿದ್ದೇನೆಯೋ ಅದನ್ನು ತಾವು ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತರಬೇಕು; ಇಲ್ಲವೆ ಅದರಲ್ಲಿ ಅವರ ನಂಬುಗೆ ಇರದಿದ್ದ ಪಕ್ಷದಲ್ಲಿ ಅದನ್ನು ಸರ್ವ ರೀತಿಯಿಂದಲೂ ವಿರೋಧಿಸಬೇಕು—ಇದೇ ನನ್ನ ಮಿತ್ರರು ನನಗೆ ತೋರಿಸಬಹುದಾದ ಗೌರವ.೨೮

ಯಾವ ಮಹಾ ಉದ್ಯಮದಲ್ಲಿಯೇ ಆಗಲಿ ನಿರ್ಣಯಕಾರಿಯಾಗುವುದು ಹೋರಾಡುವವರ ಸಂಖ್ಯೆಯಲ್ಲ, ಅವರ ಸತ್ತ್ವ. ಜಗತ್ತಿನ ಮಹಾ

ವ್ಯಕ್ತಿಗಳೆಲ್ಲ ಏಕಾಂಗಿಯಾಗಿ ನಿಂತರು. ಝರತುಷ್ಟ್ರ, ಬುದ್ಧ, ಏಸು, ಮಹಮ್ಮದ್ ಈ ಎಲ್ಲ ಮಹಾಪ್ರವಾದಿಗಳನ್ನೂ ಗಮನಿಸಿ. ನಾನಿನ್ನೂ ಹೆಸರಿಸಬಹುದಾದ ಇತರ ಹಲವರಂತೆಯೆ ಅವರೆಲ್ಲರೂ ಏಕಾಂಗಿಯಾಗಿಯೆ ಕೆಲಸ ಮಾಡಿದರು. ಆದರೆ ಅವರಿಗೆ ತಮ್ಮಲ್ಲಿಯೂ ಭಗವಂತನಲ್ಲಿಯೂ ಜೀವಂತ ಶ್ರದ್ಧೆಯಿತ್ತು; ಭಗವಂತ ತಮ್ಮ ಪಕ್ಕದಲ್ಲಿದ್ದಾನೆಂಬ ವಿಶ್ವಾಸ ಇದ್ದುದರಿಂದ ತಾವು ಏಕಾಕಿಗಳು ಎಂಬ ಭಾವನೆಯೇ ಅವರಿಗೆ ಬರಲಿಲ್ಲ.[೧೯]

ನನ್ನಲ್ಲಿರುವ ಏನೋ ಒಂದು ವಾಣಿ ನನ್ನ ಸಂಕಟವನ್ನು ಕೂಗಿ ಸಾರುವಂತೆ ನನ್ನನ್ನು ಪ್ರಚೋದಿಸುತ್ತಿದೆ. ಅದು ಯಾವುದೆಂಬುದನ್ನು ನಾನು ಖಚಿತವಾಗಿ ಬಲ್ಲೆ. ನನ್ನನ್ನೆಂದೂ ವಂಚಿಸದ ನನ್ನೊಳಗಿನ ಆ ವಾಣಿ ಹೇಳುತ್ತದೆ: "ನೀನು ಒಬ್ಬಂಟಿಗನಾಗಿ ನಿಲ್ಲಬೇಕಾಗಿ ಬಂದರೂ ಸರಿ, ಇಡಿಯ ಜಗತ್ತನ್ನೇ ಎದುರಿಸಿ ನಿಲ್ಲಬೇಕಾಗುತ್ತದೆ.

"ಜಗತ್ತು ನಿನ್ನನ್ನು ತನ್ನ ಕೆಂಗಣ್ಣಿನಿಂದ ದುರದುರನೆ ನೋಡಿದರೂ ಸರಿ, ನೀನು ಅದರ ದೃಷ್ಟಿಗೆ ದೃಷ್ಟಿ ಕೊಟ್ಟು ನಿಲ್ಲಬೇಕಾಗುತ್ತದೆ. ಭೀತಿ ಬೇಡ. ನಿನ್ನ ಹೃದಯದಲ್ಲಿ ನೆಲಸಿ ಹೀಗೆಂದು ಹೇಳುತ್ತಿರುವ ಆ ಅಣು ರೂಪಿಯಲ್ಲಿ ನಿನಗೆ ಶ್ರದ್ಧೆಯಿರಲಿ. ಯಾವುದಕ್ಕಾಗಿ ನೀನು ಬದುಕಿದ್ದೀಯೋ, ಯಾವುದಕ್ಕಾಗಿ ನೀನು ಮಡಿಯಬೇಕೋ ಅದಕ್ಕಾಗಿ ಮನೆ ಮಠ ಮಡದಿ ಮಕ್ಕಳು ಸರ್ವಸ್ವವನ್ನೂ ಪರಿತ್ಯಜಿಸು; ಆದರೆ ಅದರ ಸತ್ಯಕ್ಕೆ ಸಾಕ್ಷಿಯಾಗಿ ಬಾಳು."[೨೦]

# ಯಥಾದರ್ಶನ

ಗಾಂಧೀಯವರು ದಕ್ಷಿಣ ಆಫ್ರಿಕದಿಂದ ೧೯೧೫ರಲ್ಲಿ ಸ್ವದೇಶಕ್ಕೆ ಹಿಂತಿರುಗಿ ೧೯೧೯ರ ಸುಮಾರಿಗೆ ನಮ್ಮ ದೇಶದ ರಾಜಕೀಯದಲ್ಲಿ ಪ್ರಭಾವ ಪೂರ್ಣವಾದ ಸ್ಥಾನವನ್ನು ಪಡೆಯಲಾರಂಭಿಸಿದರು. ಆ ವೇಳೆಗೆ ರಾಷ್ಟ್ರ ಮಹಾಸಭೆಗೆ ಮೂವತ್ತುನಾಲ್ಕು ವರ್ಷಗಳಾಗಿತ್ತು. ದೇಶದ ಮುಖಂಡರು, ಅವರಲ್ಲಿ ಅನೇಕರು ವಕೀಲರು, ಹೆಸರಾಂತ ವಾಗ್ಮಿಗಳು ಈ ಸಂಸ್ಥೆಯನ್ನು ಬೆಳೆಸಿ ಪೋಷಿಸುತ್ತಿದ್ದರು; ದೇಶದಲ್ಲೆಲ್ಲ—ವಿಶೇಷವಾಗಿ ವಿದ್ಯಾವಂತರಲ್ಲಿ—ಜಾಗೃತಿಯನ್ನುಂಟು ಮಾಡಿದ್ದರು. ಈ ಜಾಗೃತಿಗೆ ಒಂದು ಮುಖ್ಯ ಕಾರಣ ಈ ದೇಶಭಕ್ತರು ಮಾಡಿದ ಉಜ್ವಲವಾದ ಭಾಷಣಗಳು. ಉತ್ತಮ ಭಾಷಣಕಾರರು ಉತ್ತಮ ನಾಯಕರೆಂದು ಸಾಮಾನ್ಯವಾಗಿ ಪರಿಗಣಿಸಲ್ಪಡುತ್ತಿದ್ದರು. ಸುರೇಂದ್ರನಾಥ ಬ್ಯಾನರ್ಜಿ, ಬಿಪಿನ್ ಚಂದ್ರಪಾಲ್ ಮುಂತಾದವರ ಭಾಷಣಗಳನ್ನೋದಿ ದೇಶದ ವಿದ್ಯಾವಂತರೂ, ವಿದ್ಯಾರ್ಥಿಗಳೂ ಸ್ಫೂರ್ತಿ ಪಡೆಯುತ್ತಿದ್ದರು. ತಮಗೆ ರಾಜಕೀಯ ತರಬೇತು ಆಗುತ್ತಿದ್ದುದಾಗಿ ಭಾವಿಸುತ್ತಿದ್ದರು. ನಮ್ಮ ಸ್ವಾತಂತ್ರ್ಯೋದ್ಯಮದಲ್ಲಿ ಗಾಂಧೀ ಪೂರ್ವಯುಗವನ್ನು ಒಟ್ಟಿನಲ್ಲಿ ಭಾಷಣಗಳ ಯುಗವೆಂದರೆ ತಪ್ಪಾಗಲಾರದು. ಹೀಗಾಗಿ ಆ ಕಾಲದಲ್ಲಿ ಪ್ರಚುರವಾಗುತ್ತಿದ್ದ ರಾಜಕೀಯ ಸಾಹಿತ್ಯವೆಂದರೆ ನಮ್ಮ ದೇಶಭಕ್ತರ ಭಾಷಣ ಸಂಕಲನಗಳು.

ಗಾಂಧೀಯವರು ಭಾರತದ ರಾಜಕೀಯ ರಂಗಕ್ಕೆ ಪ್ರವೇಶಿಸಿದ ಮೇಲೆ ಈ ಪರಿಸ್ಥಿತಿಯಲ್ಲಿ ತೀರ ಬದಲಾವಣೆ ಉಂಟಾಯಿತು. ಭಾಷಣಕ್ಕಿಂತಲೂ ಕಾರ್ಯಕ್ಕೆ ಹೆಚ್ಚು ಗಮನ ಕೊಡಲಾಯಿತು. ಕೇವಲ ಭಾಷಣಗಳನ್ನು ಬೀರಿ ಜನಗಳ ಗೌರವ ಪ್ರಶಂಸೆಗಳನ್ನು ಗಳಿಸುವ ಅವಕಾಶ ಕಡಿಮೆಯಾಯಿತು. ಜನರ ಸೇವೆ, ರಚನಾತ್ಮಕ ಕಾರ್ಯಗಳು, ಪ್ರಾಮಾಣಿಕತೆ, ನಿಸ್ವಾರ್ಥತೆ—ಈ ಗುಣಗಳನ್ನು ಜನರು ದೇಶದ ನಾಯಕರಲ್ಲಿ ಗುರುತಿಸಲು ತೊಡಗಿದರು. ರಾಷ್ಟ್ರ ಮಹಾಸಭೆಯ ಭಾಷಣಯುಗ ಮುಗಿಯುತ್ತಾ ಬಂತು.

ಗಾಂಧೀಯವರು ಸ್ವಭಾವತಃ ಭಾಷಣ ಮಾಡುವ ಚಪಲವನ್ನಾಗಲಿ ವಾಕ್ಪಟುತ್ವದ ಪ್ರತಿಭೆಯನ್ನಾಗಲಿ ಉಳ್ಳವರಾಗಿರಲಿಲ್ಲ. ದೊಡ್ಡ ಸಭೆಯ ಮುಂದೆ ನಿಂತು ಧಾರಾವಾಹಿಯಾಗಿ ಉಚ್ಚಸ್ವರದಲ್ಲಿ ವಾಕ್ಯಗುಚ್ಛಗಳನ್ನು ಪ್ರಯೋಗಿಸುವ ಕಲೆಯಾಗಲಿ, ಚಪಲವಾಗಲಿ, ಅವರಲ್ಲಿ ಸ್ವಲ್ಪವೂ ಇರಲಿಲ್ಲ. ತಮ್ಮ 'ಆತ್ಮಕಥೆ'ಯಲ್ಲಿ ಭಾಷಣ ಮಾಡುವ ಆರಂಭ ಪ್ರಯತ್ನ ಗಳಲ್ಲಿ ಅವರು ಹೇಗೆ ಗಾಬರಿಗೊಳ್ಳುತ್ತಿದ್ದರು, ಎಂಬ ತಮ್ಮ 'ಸಭಾಕಂಪ' ವನ್ನು ಕುರಿತು ಅವರೇ ಸ್ವಾರಸ್ಯವಾಗಿ ಬರೆದಿದ್ದಾರೆ. ಸ್ವಭಾವತಃ ಅವರದು ಸಂಕೋಚದ ಪ್ರಕೃತಿ. ಅವರು ಮಿತಭಾಷಿಯೇ ಆಗಿದ್ದರು, ವಾಚಾಳಿ ಯಾಗಿರಲಿಲ್ಲ. ಆದರೆ ಸನ್ನಿವೇಶಗಳು ಒದಗಿ ಅವರು ಮುಖಂಡತ್ವವನ್ನು ವಹಿಸಬೇಕಾಗಿ ಬಂತು; ಪ್ರತಿನಿಧಿಯಾಗಿ ವಾದವನ್ನು ಮಂಡಿಸಬೇಕಾಗಿ ಬಂತು, ಪ್ರಚಾರ ಕಾರ್ಯವನ್ನು ಕೈಗೊಳ್ಳಬೇಕಾಗಿ ಬಂತು. ಗತ್ಯಂತರ ವಿಲ್ಲದೆ ಭಾಷಣಗಳನ್ನು ಕೊಡಬೇಕಾದ ಸಂದರ್ಭಗಳು ಒದಗಿದುವು. ಆ ಸಂದರ್ಭಗಳು ಒದಗಿದಾಗ ಗಾಂಧೀಯವರು ಹಿಂಜರಿಯಲಿಲ್ಲ. ತಮ್ಮದೇ ಆದ ಸರಳವಾದ, ಪ್ರಾಮಾಣಿಕವಾದ ವಾಗಾಡಂಬರವಿಲ್ಲದ ರೀತಿಯಲ್ಲಿ ಭಾಷಣಗಳನ್ನು ಕೊಟ್ಟರು, ತಮ್ಮ ನಿಲುವನ್ನು ಸ್ಪಷ್ಟಪಡಿಸಿದರು. ಇತರರಿಗೆ ತಿಳುವಳಿಕೆಯನ್ನು ಕೊಟ್ಟರು. ಅವರ ವಿಚಾರ ಶಕ್ತಿಯನ್ನು ಪ್ರಚೋದಿಸಿದರು, ಅವರನ್ನು ಒಲಿಸಿಕೊಂಡರು.

ಈ ಸಂದರ್ಭದಲ್ಲಿ ಅವರ ರಾಜಕೀಯ ಗುರುಗಳಾದ ಗೋಖಲೆ ಯವರು, ಗಾಂಧೀಯವರು ಭಾರತಕ್ಕೆ ಹಿಂತಿರುಗಿದ ಮೇಲೆ ಒಂದು ವರ್ಷ ಪರ್ಯಂತ ದೇಶದ ಮುಖ್ಯ ನಗರಗಳನ್ನು ಪರಿಚಯ ಮಾಡಿಕೊಳ್ಳ ಬೇಕೆಂದೂ, ಯಾವ ಸಾರ್ವಜನಿಕ ಸಭೆಯಲ್ಲೂ ಭಾಷಣ ಮಾಡಬಾರದೆಂದೂ ಆದೇಶವಿತ್ತದ್ದನ್ನು ನೆನಪಿಗೆ ತಂದುಕೊಳ್ಳಬಹುದು. ಗಾಂಧೀಯವರು ತಮ್ಮ ಗುರುಗಳ ಈ ಆದೇಶವನ್ನು ಅಕ್ಷರಶಃ ಪಾಲಿಸಿದರೆಂದು ಬೇರೆ ಹೇಳ ಬೇಕಾಗಿಲ್ಲ. ವಾರಕ್ಕೊಮ್ಮೆ ಒಂದು ದಿನ ಪೂರ್ತಿ ಮೌನವನ್ನಾಚರಿಸಿದ ವರಿಗೆ ತಮ್ಮ ಗುರುಗಳು ವಿಧಿಸಿದ ವ್ರತ ಅಷ್ಟೇನೂ ಕಠಿನವಾಗಿರಲಿಲ್ಲ. ಆದರೆ ಗೋಖಲೆಯವರು ಈ ರೀತಿಯ ವಾಗ್ಬಂಧನವನ್ನು ವಿಧಿಸಿದ್ದಕ್ಕೆ ಕಾರಣವೇನಿದ್ದಿರಬಹುದು? ಗಾಂಧೀಯವರಿಗೆ ಭಾಷಣಕೊಡುವ ಹವ್ಯಾಸ

ವಿದ್ದಿತೆಂದಲ್ಲ. ಭಾವೋದ್ರೇಕದಿಂದ ಭಾಷಣಗಳನ್ನು ಮಾಡಿ ಜನರನ್ನು ತಪ್ಪು ದಾರಿಗೆ ಎಳೆದುಕೊಂಡು ಹೋಗಬಹುದೆಂಬ ಭಯವೂ ಕಾರಣ ವಾಗಿದ್ದಿರಲಾರದು. ಏಕೆಂದರೆ ಗೋಖಲೆಯವರಿಗೆ ಸ್ವತಃ ಗಾಂಧೀಯವರ ಸೌಮ್ಯ ಸ್ವಭಾವವೂ ಮಿತಭಾಷಣದ ಪ್ರವೃತ್ತಿಯೂ ಚೆನ್ನಾಗಿ ತಿಳಿದಿತ್ತು. ಅದರೆ ದಕ್ಷಿಣ ಆಫ್ರಿಕದಲ್ಲಿ ಗಾಂಧೀಯವರ ಮಾತಿಗಿದ್ದ ಪ್ರಭಾವವನ್ನು ಅವರು ಪ್ರತ್ಯಕ್ಷವಾಗಿ ಕಂಡಿದ್ದರು. ಸಾವಿರಾರು ಜನರನ್ನು ಸರ್ವವಿಧವಾದ ತ್ಯಾಗಕ್ಕೂ ಸಿದ್ಧವಾಗುವಂತೆ ಗಾಂಧೀ ಪ್ರೇರೇಪಿಸಬಲ್ಲರು ಎಂಬುದನ್ನು ಗೋಖಲೆಯವರು ಅರಿತಿದ್ದರು. ಅವರೇ ಹೇಳಿದಂತೆ 'ಮೃತ್ಪಿಂಡ ಗಳನ್ನು ಶೂರರನ್ನಾಗಿ ರೂಪಿಸುವ ಶಕ್ತಿ' ಗಾಂಧೀಯವರಲ್ಲಿದ್ದುದನ್ನು ಅವರು ಬಲ್ಲವರಾಗಿದ್ದರು. ಇಂತಹ ಪ್ರಭಾವ ಬೀರಬಲ್ಲ ಮನುಷ್ಯರು ಭಾರತದ ಸ್ಥಿತಿಗತಿಗಳನ್ನು ಕೂಲಂಕಷವಾಗಿ ಅಧ್ಯಯನಮಾಡಿ ಮನದಟ್ಟು ಮಾಡಿಕೊಳ್ಳದೆ ಯಾವ ಸಾರ್ವಜನಿಕ ಕಾರ್ಯಕ್ಕೂ ಚಳವಳಿಗೂ ತೊಡಗ ಬಾರದೆಂದು ಗೋಖಲೆಯವರ ಆಶಯ. ಈ ಕಾರಣದಿಂದ ಒಂದು ವರ್ಷ ಕಾಲ ದೇಶದ ಪರ್ಯಟನ, ಆಗ ದೇಶದಲ್ಲಿದ್ದ ನಾಯಕರ ಪರಿಚಯ, ಸಾರ್ವಜನಿಕ ಸಮಸ್ಯೆಗಳ ಪರಿಶೀಲನೆ ಇವುಗಳಲ್ಲಿ ಗಾಂಧೀಯವರು ನಿರತರಾದರು.

ಈ ಮೌನವ್ರತ ಮುಗಿದಮೇಲೆ ಗಾಂಧೀಯವರಿಗೆ ಅನೇಕ ಕಡೆ ಗಳಿಂದ ಆಹ್ವಾನಗಳು ಬಂದುವು. ದಕ್ಷಿಣ ಆಫ್ರಿಕದಲ್ಲಿ ಅವರು ಮಾಡಿದ ಮಹತ್ಕಾರ್ಯಗಳ ದೆಸೆಯಿಂದ ಅವರು ಆಗಲೇ ಪ್ರಖ್ಯಾತರಾಗಿದ್ದರು. ಅವರನ್ನು ಕರೆಯಿಸಿ ಮಾತನಾಡಿಸುವುದೇ ಒಂದು ಹೆಮ್ಮೆಯ ವಿಷಯ. ಆದರೆ ಇವರನ್ನು ಕರೆಸಿದ ಮೇಲೆ ಗಾಂಧೀಯವರು ಇಂತಹುದನ್ನೇ ಹೇಳ ಬೇಕೆಂದು ಆಶಿಸುವುದು ಸಾಧ್ಯವಾಗಿರಲಿಲ್ಲ. ಏಕೆಂದರೆ ಎಲ್ಲಿಗೆ ಹೋದರೂ, ಯಾವ ಸನ್ನಿವೇಶದಲ್ಲಿದ್ದರೂ ತಮಗೆ ಸತ್ಯವೆಂದೂ, ಹೇಳಲೇಬೇಕೆಂದೂ, ತೋರುವ ವಿಷಯವಷ್ಟನ್ನೇ ಗಾಂಧೀಯವರು ಹೇಳುವವರಾಗಿದ್ದರೇ ಹೊರತು ತಮ್ಮ ಶ್ರೋತೃಗಳಿಗೆ ಹಿತವಾಗಿರುವಂತೆ ಮಾತನಾಡಬೇಕೆಂಬ ಹವ್ಯಾಸ ಅವರಿಗಿರಲಿಲ್ಲ. ಇದಕ್ಕೆ ಮೂರು ಭಾಷಣಗಳ ನಿದರ್ಶನವನ್ನು ಕೊಡಬಹುದು (ಅವು ಪ್ರಸ್ತುತ ಈ ಗ್ರಂಥ ಸಂಕಲನದಲ್ಲಿ ಸೇರಿವೆ). ಕ್ರೈಸ್ತ

ಮಿಷನರಿಗಳ ಸಮ್ಮೇಳನದಲ್ಲಿ ಸ್ವದೇಶೀ ವಿಷಯವಾಗಿ; ಕಾಶೀ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ರಾಜರು, ಮಹಾರಾಜರು, ಜಮೀನುದಾರರು ಇವರ ಸಮ್ಮುಖದಲ್ಲಿ; ಲಂಡನ್ನಿನ ದುಂಡು ಮೇಜಿನ ಪರಿಷತ್ತಿನಲ್ಲಿ— ಈ ಸಂದರ್ಭಗಳಲ್ಲಿ ಗಾಂಧೀಯವರು ಮಾಡಿದ ಭಾಷಣಗಳು ಶ್ರೋತೃ ವೃಂದಕ್ಕೆ ಸಂತೋಷಪ್ರದವಾಗದೆ ಇದ್ದಿರಬಹುದು. ಆದರೆ ತಮ್ಮ ಅಭಿಪ್ರಾಯಗಳನ್ನು ಮರೆಮಾಜಿ ಇತರರ ಮೆಚ್ಚಿಕೆಯನ್ನು ಪಡೆಯುವುದ ಕ್ಕಾಗಿ ಸತ್ಯಕ್ಕೆ ವಿರುದ್ಧವಾಗಿ ಗಾಂಧೀಯವರು ಮಾತನಾಡುವವರಲ್ಲ. ಹೇಳುವುದನ್ನು ನಮ್ರತೆಯಿಂದಲೂ, ಸೌಮ್ಯವಾಗಿಯೂ ಹೇಳಿ ತಮ್ಮ ನಿಲುವನ್ನು ಸ್ಪಷ್ಟಪಡಿಸಿಕೊಂಡರು. "ಸತ್ಯವನ್ನು ನುಡಿಯಬೇಕು, ಪ್ರಿಯವಾಗಿ ನುಡಿಯಬೇಕು" ಎಂಬ ಪುರಾತನ ನಾಣ್ನುಡಿಯನ್ನು ಅವರು ಪಾಲಿಸಲು ಯತ್ನಿಸುತ್ತಿದ್ದರು. "ಅಪ್ರಿಯವಾದ ಸತ್ಯವನ್ನು ನುಡಿಯ ಬೇಡ" ಎಂದು ಈ ಪುರಾತನ ನಾಣ್ನುಡಿಯ ಉತ್ತರಾರ್ಧದ ಅರ್ಥವಲ್ಲ; 'ನಬ್ರೂಯಾತ್ ಸತ್ಯಮಪ್ರಿಯಂ'—ಸತ್ಯವನ್ನು ನುಡಿಯುವಾಗ ಅದನ್ನು ಅಪ್ರಿಯವಾದ ರೀತಿಯಲ್ಲಿ ನುಡಿಯಬೇಕಾಗಿಲ್ಲ. ಹೃದಯದಲ್ಲಿ 'ಸರ್ವ ಭೂತಹಿತಕಾರಿ'ಯಾಗಿರುವ ಅಹಿಂಸಾ ತತ್ತ್ವವನ್ನು ಪಾಲಿಸುವವನು ಸತ್ಯವನ್ನು ಇತರರಿಗೆ ನೋವಾಗುವಂತೆ ನುಡಿಯುವುದು ತನ್ನ ಅಹಿಂಸಾ ಧರ್ಮದ ಪಾಲನೆಗೆ ಧಕ್ಕೆ ತಂದಂತೆ ಆಗುವುದು: ಪ್ರಿಯವಾಗಿ ನುಡಿಯ ಲಾಗದವನಾದರೆ ಅವನ ಅಹಿಂಸೆಯಲ್ಲಿ ಏನೊ ಲೋಪವಿದ್ದಂತೆ ಆಗು ವುದು—ಎಂದು ಒಮ್ಮೆ ಗಾಂಧೀಯವರು ಈ ನಾಣ್ನುಡಿ ಬಗೆಗೆ ವ್ಯಾಖ್ಯಾನ ಮಾಡಿದರು.

ಇಪ್ಪತ್ತು ಜನರ ಮುಂದೆಯಾಗಲಿ, ಇಪ್ಪತ್ತು ಸಾವಿರ ಜನರ ಮುಂದೆ ಯಾಗಲಿ ಗಾಂಧೀಯವರ ಭಾಷಣದ ವೈಖರಿ ಒಂದೇ ಬಗೆಯದಾಗಿತ್ತು. ಕೆಲವೇ ಜನರೊಂದಿಗೆ ಸಂಭಾಷಣಮಾಡಬೇಕಾದರೆ ಯಾವ ರೀತಿಯಲ್ಲಿ ಮಾತಾಡಬಹುದೋ ಅದೇ ರೀತಿಯಲ್ಲಿಯೇ ನಿಬಿಡವಾದ ಜನಸ್ತೋಮದ ಮುಂದೆಯೂ ತಮ್ಮ ಅಭಿಪ್ರಾಯಗಳನ್ನೂ, ವಿಷಯಗಳ ಪ್ರತಿಪಾದನೆ ಯನ್ನೂ ಸರಳವಾಗಿ ಯಾವ ಶಬ್ದಾಡಂಬರವೂ ಇಲ್ಲದೆ ತಮ್ಮ ಮಾತು ಗಳಲ್ಲಿ ಅಳವಡಿಸುತ್ತಿದ್ದರು. ವಿಚಾರ ಪ್ರಚೋದನೆಯೇ ಅವರ ಮುಖ್ಯ

ಗುರಿ. ಶ್ರೋತೃಗಳಲ್ಲಿ ಪ್ರತಿಯೊಬ್ಬರೂ ವಿಷಯವನ್ನು ಕೇಳಿ ಗ್ರಹಿಸಿ ತಮ್ಮ ಸ್ವಂತ ವಿಚಾರಶಕ್ತಿಯಿಂದ ವಿಮರ್ಶಿಸಿ ತಮ್ಮ ತಮ್ಮ ನಿರ್ಧಾರಕ್ಕೆ ಬರಬೇಕೆಂಬುದು ಅವರ ಆಶಯವಾಗಿತ್ತು. ಉದ್ವೇಗದಿಂದಲೂ, ಜನರಲ್ಲಿ ಭಾವೋದ್ರೇಕವನ್ನುಂಟುಮಾಡುವ ಉದ್ದೇಶದಿಂದಲೂ ಅವರು ಭಾಷಣ ಗಳನ್ನು ಮಾಡುತ್ತಿರಲಿಲ್ಲ. ನಿಜ: ಕೆಲವು ವಿಷಮ ಪರಿಸ್ಥಿತಿಗಳಲ್ಲಿ, ಜನರು ಮಹತ್ತರವಾದ ತ್ಯಾಗಕ್ಕೂ ಕಷ್ಟಗಳಿಗೂ ಸಿದ್ಧರಾಗಬೇಕೆಂದು ಅವರಿಗೆ ತೋರಿದಾಗ ಅವರ ಮಾತಿನಲ್ಲಿ ಭಾವದ ಕಾವಿರುತ್ತಿತ್ತು. ಒಂದೊಂದು ಮಾತೂ ಅಪಾರಶಕ್ತಿಯಿಂದ ಕೂಡಿದುದಾಗಿರುತ್ತಿತ್ತು. ಅಂತಹ ಸಂದರ್ಭಗಳಲ್ಲಿಯೂ ತಮ್ಮನ್ನು ಹಿಂಬಾಲಿಸುವವರು ಎಲ್ಲವನ್ನೂ ಚೆನ್ನಾಗಿ ವಿಚಾರ ಮಾಡಿ ಪೂರ್ಣವಾದ ತಿಳಿವಳಿಕೆಯಿಂದ ತಮ್ಮ ಉದ್ಯಮ ಗಳಲ್ಲಿ ಧುಮುಕಬೇಕೆಂತಲೇ ಎಚ್ಚರಿಸುತ್ತಿದ್ದರು. ೧೯೨೧, ೧೯೩೧ ಮತ್ತು ೧೯೪೨ರಲ್ಲಿ ಅವರು ಕೈಗೊಂಡ ಪ್ರಚಂಡವಾದ ಆಂದೋಲನಗಳಲ್ಲಿ ಅವರ ಮಾತು ಮಿತವಾದರೂ ಅದರಲ್ಲಿ ಅಸಾಧಾರಣ ಶಕ್ತಿ ಕಾಣುತ್ತಿತ್ತು. ಅದರಿಂದ ಉಂಟಾದ ಪರಿಣಾಮವಂತೂ ಜನರನ್ನು ಭಾವಾವಿಷ್ಟರನ್ನಾಗಿ ಮಾಡುತ್ತಿತ್ತು. ಗಾಂಧೀಯವರು ಸತತವಾಗಿ ಕೊಡುತ್ತಿದ್ದ ಎಚ್ಚರಿಕೆ ಯನ್ನು ಜನರು ಮರೆಯುವ ಸಂಭವಗಳಿದ್ದುವು. ಹಿಂಸಾಕೃತ್ಯಗಳನ್ನು ಎಸಗಿ ಗಾಂಧೀಯವರಿಗೆ ಕ್ಲೇಶ ಉಂಟಾಗುತ್ತಿತ್ತು. ಇಂತಹ ಸಂದರ್ಭ ಗಳಲ್ಲಿ ಗಾಂಧೀಯವರು ಪಶ್ಚಾತ್ತಾಪವನ್ನು ಸೂಚಿಸಿ ಯಾವ ಪ್ರತಿಷ್ಠೆಗೂ ಬಲಿಯಾಗದೆ ಬಿಚ್ಚುಮನಸ್ಸಿನಿಂದಲೂ, ನಮ್ರತೆಯಿಂದಲೂ ತಮ್ಮ ಚಳುವಳಿಯನ್ನು ನಿಲ್ಲಿಸುತ್ತಿದ್ದರು. ಇದರಿಂದ ಅವರ ಘನತೆ, ಮಹಿಮೆ ಗಳು ಮತ್ತಷ್ಟು ಪ್ರಕಾಶಗೊಂಡವು.

ಗಾಂಧೀಯವರಂತೆ ಕೋಟ್ಯಂತರ ಜನರ ಮೇಲೆ ತಮ್ಮ ಪ್ರಭಾವ ವನ್ನು ಬೀರಿ ಅವರನ್ನು ಸಾತ್ತ್ವಿಕ ಮಾರ್ಗದಲ್ಲಿ ದೊಡ್ಡ ಉದ್ಯಮಗಳಿಗೆ ಅನುಗೊಳಿಸಿದ ನಾಯಕರು ಪ್ರಪಂಚದ ಇತಿಹಾಸದಲ್ಲೇ ಬೇರೆ ಯಾರೂ ಇರಲಿಲ್ಲವೆನ್ನಬಹುದು. ಇದೊಂದು ಅನುಪಮವಾದ ಪವಾಡವೇ ಆಗಿದೆ. ಈ ಪ್ರಭಾವಕ್ಕೆ ಅವರ ವಾಕ್ಚಾತುರ್ಯ ಕಾರಣವಾಗಿರಲಿಲ್ಲ. ಅವರ ವ್ಯಕ್ತಿತ್ವ, ಅವರ ತಪೋಜೀವನ, ಅವರ ಸತ್ಯಸಂಧತೆ, ಸರಳತೆ,

ನಿಸ್ವಾರ್ಥತೆ—ಇವು ಕಾರಣಗಳಾಗಿದ್ದುವು. ಈ ಕಾರಣಗಳಿಂದ ಅವರ ಮಾತುಗಳಲ್ಲಿ ಒಂದು ಮಂತ್ರಶಕ್ತಿಯಿದ್ದಂತೆ ತೋರುತ್ತಿತ್ತು. ನೂರಾರು ಮಹಿಳೆಯರ ಸಭೆಗಳಲ್ಲಿ ಇವರ ಪ್ರಾರ್ಥನೆಯನ್ನು ಕೇಳಿ ಸ್ತ್ರೀಯರು ತಮ್ಮ ಬೆಲೆ ಬಾಳುವ ಆಭರಣಗಳನ್ನು ಕಳಚಿ ಸಂತೋಷದಿಂದ ಅರ್ಪಣ ಮಾಡುತ್ತಿದ್ದರು. ಈ ಬಗೆಯಲ್ಲಿ ಜನಸಾಮಾನ್ಯರನ್ನು, ಹಳ್ಳಿಯವರನ್ನು, ಸ್ತ್ರೀಯರನ್ನು ತಮ್ಮ ಕೆಲವೇ ಮಾತುಗಳಿಂದ ಗಾಂಧೀಯವರು ಮಂತ್ರ ಮುಗ್ಧರನ್ನಾಗಿ ಮಾಡುತ್ತಿದ್ದರು. ಅವರಲ್ಲಿ ತ್ಯಾಗಬುದ್ಧಿಯನ್ನೂ ಸೇವಾ ಬುದ್ಧಿಯನ್ನೂ ಹುಟ್ಟಿಸುತ್ತಿದ್ದರು.

ನಲವತ್ತು ವರ್ಷಗಳಿಗೆ ಮಿಗಿಲಾಗಿ ಗಾಂಧೀಯವರು ಭಾರತದ ಎಲ್ಲ ಭಾಗಗಳಲ್ಲಿಯೂ ಬಾರಿಬಾರಿಗೂ ಸಂಚಾರಮಾಡಿ, ಕೋಟ್ಯಂತರ ಜನರನ್ನು ಸಂದರ್ಶಿಸಿ ಭಾರತದ ಅಭ್ಯುದಯಕ್ಕಾಗಿ ಅವಿಶ್ರಾಂತ ಶ್ರಮಿಸಿದ ಈ ದೀರ್ಘಾವಧಿಯಲ್ಲಿ ಅವರು ಮಾಡಿದ ಭಾಷಣಗಳು ಅಸಂಖ್ಯಾತ. ಈ ಗ್ರಂಥದಲ್ಲಿ ಆರಿಸಲ್ಪಟ್ಟಿರುವ ಭಾಷಣಗಳು ಕೇವಲ ಕೆಲವು ಮಾದರಿ ಗಳು ಮಾತ್ರವೇ. ವಿಶೇಷವಾಗಿ ಇಂಗ್ಲಿಷು ಭಾಷೆಯಲ್ಲಿ ಅವರು ಮಾಡಿದ ಕೆಲವು ಮುಖ್ಯವಾದುವನ್ನು ಮಾತ್ರ ಇಲ್ಲಿ ಸಂಗ್ರಹಿಸಲಾಗಿದೆ. ಅವರ ನೇರವಾದ, ಸರಳವಾದ ಶೈಲಿ, ಅವರ ಉದಾತ್ತವಾದ ಆಕಾಂಕ್ಷೆಗಳು, ಅವರ ನಮ್ರತೆ ಹಾಗೂ ನಿರ್ಭಯತೆ ಇವುಗಳಲ್ಲಿ ಎದ್ದು ಕಾಣುತ್ತವೆ. ಈ ಗುಣಗಳು ಸಾರ್ವಜನಿಕ ಸೇವೆಯನ್ನು ಕೈಕೊಂಡು ದೇಶಸೇವೆಯನ್ನು ದಕ್ಷತೆಯಿಂದ ಮಾಡಬೇಕೆಂದು ಬಯಸುವವರಿಗೆ ನಿರಂತರ ಮಾರ್ಗ ದರ್ಶನವನ್ನು ಒದಗಿಸುತ್ತವೆ.

ಕೆ. ಸಂಪದ್ಗಿರಿರಾವ್,
ಸದಸ್ಯ, ಸಂಪಾದಕ ಮಂಡಲಿ,
ಗಾಂಧೀ ಗ್ರಂಥಮಾಲೆ.

೨೧–೫–೧೯೬೨

# ಸಂಪಾದಕೀಯ

ಇದು ನಮ್ಮ ಗ್ರಂಥಮಾಲೆಯ ಹದಿನೆಂಟನೆಯ ಸಂಪುಟ; ಗಾಂಧೀಜೀಯವರ ಭಾಷಣಗಳು ಮತ್ತು ಹೇಳಿಕೆಗಳ ಸಂಕಲನದ ಎರಡನೆಯ ಭಾಗ. ಮೊದಲನೆಯ ಭಾಗ, ಭಾರತ ಮತ್ತು ಬ್ರಿಟನ್ನುಗಳ ಸಂಬಂಧದಲ್ಲಿ ಒಂದು ಪ್ರಧಾನ ಚರಿತ್ರ ಕಾಲವನ್ನು ಸೂಚಿಸುವ, ಲಂಡನ್ನಿನಲ್ಲಿ ೧೯೩೧ರಲ್ಲಿ ನಡೆದ, ದುಂಡುಮೇಜಿನ ಪರಿಷತ್ತಿನ ಕಾರ್ಯಕಲಾಪಗಳೊಡನೆ ಮುಕ್ತಾಯಗೊಂಡಿತು. ಈ ಭಾಗ ಅಲ್ಲಿಂದ ಮುಂದುವರಿದು, ೧೯೪೮ರಲ್ಲಿ ಗಾಂಧೀಜೀಯ ಪೂರ್ಣಾಹುತಿಯಾಗುವವರೆಗೂ, ಹದಿನೇಳು ವರ್ಷಗಳ ಕಾಲ, ಅವಿಚ್ಛಿನ್ನವಾಗಿ ಸತ್ಯ–ಅಹಿಂಸೆಗಳ ಅನುಷ್ಠಾನಕ್ಕೂ, ಭಾರತದ ಬಂಧವಿಮೋಚನೆಯ ಸಮರಕ್ಕೂ ಮಹಾಸಾಹಸದಿಂದ, ಧೀರತನದಿಂದ, ಸೆಣಸಿದ ಮಹಾಜೀವದ ದಿವ್ಯವಾಣಿಯನ್ನು ಕ್ರೋಢೀಕರಿಸಿಕೊಟ್ಟಿದೆ. ಈ ವಾಣಿ, ಅಪೂರ್ಣತೆಯಿಂದ ಪೂರ್ಣತೆಯ ಎಡೆಗೆ ಧಾವಿಸುವ ಮಾನವ ಚೈತನ್ಯದ ವ್ಯಥೆಯನ್ನು, ಸಂಕಟ–ಕ್ಲೇಶವನ್ನು ಅಭಿವ್ಯಕ್ತಗೊಳಿಸುತ್ತದೆ; ರಾಷ್ಟ್ರಕ್ಕೆ ಸಂಬಂಧಿಸಿದ ಪ್ರಚಂಡ ಸಮಸ್ಯೆಗಳ ಬಗೆಗೂ ಅದರ ಭವಿಷ್ಯಭಾಗ್ಯದ ಬಗೆಗೂ ಚಿಂತೆಯನ್ನು ತಳೆದ ಪ್ರತಿಭಾನ್ವಿತ ವ್ಯಕ್ತಿಯೊಬ್ಬ ಸಹಜತೆಯಿಂದ ವ್ಯಕ್ತಪಡಿಸುವ ಮನೋಭಾವಗಳ ಮಿಡಿತವನ್ನೂ ಹೃದಯಸ್ಪಂದನವನ್ನೂ ವಾಚಕ ಅನುಭವಿಸದಿರಲಾರ. ಗಾಂಧೀಜೀ, ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯಿಂದ ನಿರ್ಗಮಿಸಿದುದು, ವೈಯಕ್ತಿಕ ಸವಿನಯ ಶಾಸನಭಂಗ ಚಳುವಳಿ, 'ಭಾರತದಿಂದ ಹೊರಡಿ' ಚಳುವಳಿ, ಎಲ್ಲಕ್ಕಿಂತ ಅಂತಿಮವಾಗಿ ಭಾರತ ವಿಭಜಿತವಾದ ತರುವಾಯ ಉದ್ಭವಿಸಿದ ಹಿಂಸೆಯ ವಿಪ್ಲವದಿಂದ ರಾಷ್ಟ್ರವನ್ನು ಪಾರುಮಾಡಿ ಹಿಂದೂ–ಮುಸ್ಲಿಂ ಸೌಹಾರ್ದ ಭಾವವನ್ನು ಕೂಡಿಸಲು ನಡೆಸಿದ ಭಗೀರಥ ಪ್ರಯತ್ನ ಇವೇ ಮೊದಲಾದ ಪ್ರಸಂಗಗಳ ಬಗೆಗೆ ಅವರ ನಿಲುವನ್ನು, ದೃಢ ನಿರ್ಧಾರವನ್ನು ನಾವು ಕಾಣಬಹುದು. ಈ ಸಂಕಲನದಲ್ಲಿ ಸೇರಿರುವ ಭಾಷಣಗಳು ಮತ್ತು ಹೇಳಿಕೆಗಳಲ್ಲಿ ಗಾಂಧೀಜೀಯ ಸಾಹಸಮಯ

ಬಾಳಿನ ಮೇಲೆ ಬೀರುವ ಬೆಳಕನ್ನೂ, ಶಾಶ್ವತ ಮಾನವೀಯ ಮೌಲ್ಯಗಳ ಅನುಸರಣೆಯ ಪಥವನ್ನೂ ಕಾಣುವುದಲ್ಲದೆ, ಅವು ರಾಷ್ಟ್ರದ ಐತಿಹಾಸಿಕ ಘಟನೆಗಳ ಮೇಲೆ ಬೆಳಕು ಬೀರುವುದನ್ನೂ ಕಾಣಬಹುದು. ಇಲ್ಲಿ ಗಾಂಧೀಜೀ ಜೀವಂತ ಪ್ರತಿಮೆಯಂತೆ, ಎದುರಿಗೆ ನಿಂತು ಮಾತನಾಡುತ್ತಿರುವರೋ ಎಂಬ ರೀತಿ ಕಂಡುಬರುತ್ತದೆ; ಇದರಿಂದ ಭಾರತೀಯ ಸ್ವಾತಂತ್ರ್ಯ ಸಮರ ಗಾಥೆಗೆ ಒಂದು ಅಪೂರ್ವ ರಮಣೀಯತೆ, ಕಾಂತಿ, ಮೂಡಿ ಬರುತ್ತದೆ.

ಈ ಸಂಕಲನಕ್ಕೆ ಆಯ್ದ ಭಾಗಗಳ ಭಾಷಾಂತರವನ್ನು ಸರ್ವಶ್ರೀಗಳಾದ ಜಿ. ವಿ. ನಾರಾಯಣಮೂರ್ತಿ (೧ರಿಂದ ೨೯ ಪುಟಗಳು), ಕೆ. ಸಂಪದ್ಗಿರಿರಾವ್ (೨೯ರಿಂದ ೧೩೭ ಪುಟಗಳು), ಸಿದ್ದವನಹಳ್ಳಿ ಕೃಷ್ಣಶರ್ಮ (೧೩೮ರಿಂದ ೨೩೪ ಪುಟಗಳು), ಕೆ. ಎಸ್. ನಾರಾಯಣಸ್ವಾಮಿ (೨೩೫ರಿಂದ ೩೦೮ ಪುಟಗಳು) ಮಾಡಿಕೊಟ್ಟಿದ್ದಾರೆ. ಸಮರ್ಥ ರೀತಿಯಲ್ಲಿ ಕಾರ್ಯ ಮಾಡಿಕೊಟ್ಟಿರುವ ಇವರಿಗೆಲ್ಲ ನಮ್ಮ ಕೃತಜ್ಞತಾಭಾವ ಸಲ್ಲುತ್ತದೆ.

ಪುಸ್ತಕದ ಮುದ್ರಣ ಕಾರ್ಯವನ್ನು ಉಷಾ ಪ್ರೆಸ್ಸಿನವರೂ ರಕ್ಷಾಪತ್ರ ಮತ್ತು ಚಿತ್ರಗಳ ಮುದ್ರಣವನ್ನು ವೆಸ್ಲಿ ಪ್ರೆಸ್ಸಿನವರೂ ಮಾಡಿಕೊಟ್ಟಿದ್ದಾರೆ. ಕಾಲಕ್ಕೆ ಸರಿಯಾಗಿ ತಮ್ಮ ಕರ್ತವ್ಯವನ್ನು ಎಸಗಿಕೊಟ್ಟ ಇವರುಗಳ ಸಹಕಾರಕ್ಕೆ ನಮ್ಮ ವಂದನೆಗಳು. ಈ ಸಂಪುಟದ ಭಾಗಗಳ ಸಂಕಲನಕ್ಕೂ ಮತ್ತು ಅವುಗಳನ್ನು ಭಾಷಾಂತರಿಸಿ ಪ್ರಕಾಶನಗೊಳಿಸುವುದಕ್ಕೂ ಎಂದಿನಂತೆ ಅನುಮತಿ ಕೊಟ್ಟ ಅಹಮದಾಬಾದಿನ ನವಜೀವನ ಟ್ರಸ್ಟಿನವರಿಗೂ ನಮ್ಮ ಧನ್ಯವಾದಗಳು.

ಎಂ. ಯಾಮುನಾಚಾರ್ಯ
ಪ್ರಧಾನ ಸಂಪಾದಕ
ಗಾಂಧೀ ಗ್ರಂಥಮಾಲೆ
ಮೈಸೂರು – ೧

೧೬೨, ರಮಾವಿಲಾಸ ರಸ್ತೆ
ಮೈಸೂರು – ೧

# ಪರಿವಿಡಿ

| ಸಂಖ್ಯೆ | | | ಪುಟ |
|---|---|---|---|
| ೫೯. | ಉಪವಾಸ ಮುಕ್ತಾಯಮಾಡಿದ ದಿನ ಕೊಟ್ಟ ಸಂದೇಶ | ...... | ೧೮೮ |
| ೬೦. | ಹೇಳಿಕೆ—ಸಂದೇಶ | .... | ೧೯೨ |
| ೬೧. | ಮತ್ತೊಂದು ಸಂದೇಶ | .... | ೧೯೯ |
| ೬೨. | ಭಾಷಣ | .... | ೨೦೨ |
| ೬೩. | ಉಪವಾಸ ಮುಕ್ತಾಯ | .... | ೨೦೫ |
| ೬೪. | ಅಭಿನಂದನೆಗಳು ಮತ್ತು ಆತಂಕಗಳು | .... | ೨೦೭ |

---

# ಚಿತ್ರಗಳ ಪಟ್ಟಿ



---

# ಭಾಷಣಗಳು ಮತ್ತು ಹೇಳಿಕೆಗಳು - ೨

## ೧. ಗಾಂಧೀಜೀ ಅಮೆರಿಕಾವನ್ನು ಉದ್ದೇಶಿಸಿ ಮಾಡಿದ ಪ್ರಸಾರ ಭಾಷಣ

[ಗಾಂಧೀಜೀ ಇಂಗ್ಲೆಂಡನ್ನು ತಲುಪಿದ ಎರಡು ದಿವಸಗಳ ತರುವಾಯ, ಎಂದರೆ, ೧೯೩೧ ರ ಸೆಪ್ಟೆಂಬರ್ ೧೩ರಂದು, ಅಮೆರಿಕದ ಜನತೆಯನ್ನು ಉದ್ದೇಶಿಸಿ ಬಾನುಲಿ ಪ್ರಸಾರ ಭಾಷಣ ಮಾಡಲು ಕೊಲಂಬಿಯಾ ವಾರ್ತಾ ಪ್ರಸಾರ ಸಂಸ್ಥೆಯವರು ಏರ್ಪಡಿಸಿದರು. ಗಾಂಧೀಜೀ ತಮ್ಮ ಭಾಷಣವನ್ನು ಪೂರ್ವಭಾವಿಯಾಗಿ ಬರೆದು ಸಿದ್ಧಪಡಿಸಿಕೊಳ್ಳಲಿಲ್ಲ; ಅದು ಪೂರ್ಣವಾಗಿ ಸಮಯ—ಸ್ಫೂರ್ತಿಯಿಂದ ಕೂಡಿತ್ತು. ಅವರು ಕೌತುಕದಿಂದಲೂ ಕಂಪನದಿಂದಲೂ ಧ್ವನಿವರ್ಧಕದ ಬಳಿಸಾರಿ, "ನಾನು ಇದರೊಳಕ್ಕೆ ಮಾತನಾಡಬೇಕೇನು?" ಎಂದು ಪ್ರಶ್ನಿಸಿದರು. ಹೀಗೆ ಅನ್ನುತ್ತಿದ್ದಂತೆಯೇ ಅವರ ಮಾತು ಬಾನಿನಲ್ಲಿ ಒಯ್ಯಲ್ಪಟ್ಟು, ಅಟ್ಲಾಂಟಿಕ್ ಸಾಗರದ ಆಚೆಕಡೆ ಇದ್ದ ಶ್ರೋತೃಗಳಿಗೆ ಪ್ರಥಮತಃ ಕೇಳಿಸಿತು. ಅವರಿಗೆ ನಿಯುಕ್ತಿಯಾಗಿದ್ದ ಕಾಲ ಮುಗಿಯಲು ಇನ್ನೂ ಮೂರು ನಿಮಿಷಗಳಿದ್ದಂತೆಯೇ, ನ್ಯೂಯಾರ್ಕಿನಲ್ಲಿ ಸಂಪರ್ಕ ಮುಕ್ತಾಯವಾಗುವುದೆಂಬ ಸೂಚನೆಯನ್ನು ಕೊಡಲಾಯಿತು. ಅವರು ಸ್ವಲ್ಪವೂ ತಲ್ಲಣಗೊಳ್ಳದೆ, ತಮ್ಮ ಆಶುಭಾಷಣವನ್ನು ಮುಕ್ತಾಯಗೊಳಿಸಿದರು. ವ್ಯವಸ್ಥಾಪಕ, ನಿಲ್ಲಿಸಬೇಕೆಂದು ಅವರಿಗೆ ಸಂಜ್ಞೆ ಮಾಡಿದಾಗ, "ಇಲ್ಲಿಗೆ ಕೊನೆಯಾಯಿತು" ಎಂದರು. ಈ ಮಾತುಗಳೂ ಹೇಗೋ ಅಟ್ಲಾಂಟಿಕ್ ಆಚೆಗೆ ಒಯ್ಯಲ್ಪಟ್ಟವು. ಮಾರನೆಯ ದಿನ ಅಮೆರಿಕದ ಪತ್ರಿಕೆಗಳು ಈ ಭಾಷಣದ ಬಹು ಭಾಗವನ್ನು ಯಥಾವತ್ತಾಗಿ ಪ್ರಕಟಿಸಿದವು; ಬ್ರಿಟಿಷ್ ಪತ್ರಿಕೆಗಳು ಬಹು ಮಟ್ಟಿಗೆ ಗಮನಕ್ಕೆ ತಂದುಕೊಳ್ಳಲೇ ಇಲ್ಲ.]

ಭಾರತೀಯ ಸ್ವಾತಂತ್ರ್ಯ ಹೋರಾಟದ ಪರಿಣಾಮಗಳು ಭಾರತ ಮತ್ತು ಇಂಗ್ಲೆಂಡುಗಳ ಮೇಲೆ ಮಾತ್ರವಲ್ಲದೆ ಇಡಿಯ ಜಗತ್ತಿನ ಮೇಲೆ ಆಗುವುವೆಂದು ನನ್ನ ಅಭಿಪ್ರಾಯ. ಭಾರತದಲ್ಲಿ ಮಾನವ ಜನಾಂಗದ ಐದನೆಯ ಒಂದು ಭಾಗ ಇದೆ. ಅದು ಅತ್ಯಂತ ಪ್ರಾಚೀನ ನಾಗರಿಕತೆಗಳಲ್ಲಿ ಒಂದನ್ನು ಪ್ರತಿನಿಧಿಸುತ್ತದೆ; ಹತ್ತಾರು ಸಹಸ್ರ ವರ್ಷಗಳಾದರೂ

ಇನ್ನೂ ಸುಭದ್ರವಾಗಿದ್ದು ಜಗತ್ತಿಗೆ ಅಚ್ಚರಿಯನ್ನುಂಟುಮಾಡುವ ಸಂಪ್ರದಾಯಗಳಿಂದ ಕೂಡಿವೆ. ಕಾಲದ ವಿಧ್ವಂಸಕ ಪರಿಣಾಮ ಇತರ ಸಂಸ್ಕೃತಿಗಳ ಮತ್ತು ಸಂಸ್ಥೆಗಳ ಮೇಲೆ ಆದಂತೆ ಆದರ ಪರಿಶುದ್ಧತೆಯೂ ಮಲಿನವಾಗಿದೆ.

ಭಾರತ ತನ್ನ ಪ್ರಾಚೀನ ಕಾಲದ ಗತವೈಭವವನ್ನು ಪುನಃ ಹೊಂದಬೇಕಾದರೆ, ಅದು ಸ್ವಾತಂತ್ರ್ಯ ಪ್ರಾಪ್ತಿಯಿಂದ ಮಾತ್ರ ಸಾಧ್ಯ. ಭಾರತೀಯರಾದ ನಾವೂ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದೇವೆಂಬ ಕಾರಣದಿಂದಲೇ ನಮ್ಮ ಹೋರಾಟ ಜಗತ್ತಿನ ಗಮನವನ್ನು ಸೆಳೆದಿಲ್ಲವೆಂಬುದನ್ನು ನಾನು ಅರಿತಿದೇನೆ. ಆದಕ್ಕಾಗಿ ನಾವು ಅನುಸರಿಸಿರುವ ಮಾರ್ಗ ಅಪೂರ್ವ ; ನಮಗೆ ಗೊತ್ತಿರುವ ಇತಿಹಾಸದಲ್ಲಿ ಈ ಮಾರ್ಗವನ್ನು ಅನುಸರಿಸಿದ ಬೇರೆ ಯಾವ ಜನಾಂಗದ ಉಲ್ಲೇಖವೂ ಇಲ್ಲ.

ನಾವು ಅನುಸರಿಸಿರುವ ಮಾರ್ಗ ಹಿಂಸಾಮಾರ್ಗವಲ್ಲ, ರಕ್ತಪಾತದ ಮಾರ್ಗವಲ್ಲ; ಇಂದು, ಸಾಮಾನ್ಯವಾಗಿ ಎಲ್ಲರೂ ಅರ್ಥಮಾಡಿಕೊಳ್ಳುವ ರೀತಿಯ ವ್ಯವಹಾರ ಚಾತುರ್ಯವಲ್ಲ ; ಅದು ಶುದ್ಧಮಾರ್ಗ ; ರಕ್ತ--ರಹಿತ ಕ್ರಾಂತಿಯೊಂದನ್ನು ಯಶಸ್ವಿಯಾಗಿ ನಡೆಸುವ ಮಾರ್ಗ. ಇಲ್ಲಿಯವರೆಗೂ ಜನಾಂಗಗಳು ಪಶು ಸದೃಶವಾಗಿ ಹೋರಾಡಿವೆ. ತಾವು ಶತ್ರುಗಳೆಂದು ಭಾವಿಸಿದವರ ಮೇಲೆ ದ್ವೇಷ ಸಾಧಿಸಿವೆ.

ನಾವು ಮಹಾ ಜನಾಂಗಗಳ ರಾಷ್ಟ್ರಗೀತೆಗಳನ್ನು ಪರಿಶೀಲಿಸಿದರೆ ಶತ್ರುಗಳೆನಿಸಿಕೊಂಡವರ ಮೇಲೆ ಕೆಡುಕು ಬಯಸುವುದನ್ನು ಕಾಣುತ್ತೇವೆ. ಆವು ವಿನಾಶ ಮಾಡುವ ಪ್ರತಿಜ್ಞೆ ಮಾಡಿವೆ; ಇದಕ್ಕಾಗಿ ಭಗವಂತನ ಹೆಸರನ್ನು ಉಪಯೋಗಿಸಲು ಹಿಂಜರಿಯುವುದಿಲ್ಲ. ಶತ್ರುವಿನಾಶಕ್ಕೆ ಭಗವಂತನ ಕೃಪೆಯನ್ನೂ ಬೇಡುತ್ತವೆ. ಭಾರತೀಯರಾದ ನಾವು ಇದನ್ನು ತಲೆ ಕೆಳಗು ಮಾಡಲು ಪ್ರಯತ್ನಿಸಿದ್ದೇವೆ. ಪಶು ಸೃಷ್ಟಿಗೆ ಅನ್ವಯಿಸುವ ನಿಯಮವೇ ಮಾನವಕುಲಕ್ಕೂ ಅನ್ವಯಿಸಬಾರದೆಂಬುದು ನಮ್ಮ ಭಾವನೆ. ಪಶು ಸೃಷ್ಟಿಗೆ ಅನ್ವಯಿಸುವ ನಿಯಮ ಮಾನವನ ಘನತೆಗೆ ವಿರುದ್ಧವಾದುದು.

ನನ್ನ ದೇಶ ರಕ್ತಪಾತದ ಮೂಲಕ ಸ್ವಾತಂತ್ರ್ಯ ಗಳಿಸಲೆತ್ನಿಸುವುದಕ್ಕಿಂತಲೂ, ಆವಶ್ಯಕವೆನಿಸಿದರೆ ನನ್ನ ಮಟ್ಟಿಗೇ ಆದರೆ, ಅದಕ್ಕಾಗಿ ನಾನು ಅನೇಕ ಯುಗಗಳಾದರೂ ಕಾಯುವೆನು. ಅವಿಚ್ಛಿನ್ನವಾದ ಮೂವತ್ತೈದು ವರ್ಷಗಳ ರಾಜಕೀಯ ಅನುಭವದಿಂದ, ಜಗತ್ತು ರಕ್ತಪಾತದ ಬಗೆಗೆ ಹೇಯ ಜುಗುಪ್ಸೆ ಪಟ್ಟಿದೆಯೆಂದು ನನ್ನ ಹೃದಯಾಂತರಾಳಕ್ಕೆ ಅನಿಸಿದೆ. ಇದರಿಂದ ಪಾರಾಗಲು ಜಗತ್ತು ಒಂದು ಮಾರ್ಗವನ್ನು ಅರಸುತ್ತಿದೆ; ಬಹುಶಃ, ಅದನ್ನು ತೋರಿಸುವ ಭಾಗ್ಯ ಈ ಪ್ರಾಚೀನ ದೇಶವಾದ ಭಾರತಕ್ಕೆ ಪ್ರಾಪ್ತವಾದೀತೆಂಬ ನಂಬಿಕೆಯಿಂದ ನಾನು ಹೆಮ್ಮೆಗೊಂಡಿದೇನೆ.

ಆದುದರಿಂದ ಭಾರತದ ಈ ಮಹಾ ಹೋರಾಟಕ್ಕೆ ಹೃತ್ಪೂರ್ವಕ ನೆರವನ್ನೀಯಬೇಕೆಂದು ಭೂಲೋಕದ ಎಲ್ಲ ಹಿರಿಯ ಜನಾಂಗಗಳನ್ನೂ ಆಹ್ವಾನಿಸಲು ನನಗೆ ಯಾವ ರೀತಿಯ ಶಂಕೆಯೂ ಇಲ್ಲ. ಲಕ್ಷೋಪಲಕ್ಷ ಜನ ತಮ್ಮ ರಾಷ್ಟ್ರದ ಗೌರವ ಪ್ರತಿಷ್ಠೆಗಳನ್ನು ಸ್ಥಾಪಿಸಿಕೊಳ್ಳುವುದಕ್ಕೋಸ್ಕರ ಪ್ರತಿಹಿಂಸೆಯಲ್ಲಿ ತೊಡಗದೆ ತಾವೇ ಎಲ್ಲ ಕ್ಲೇಶಗಳನ್ನೂ ಅನುಭವಿಸುವ ದೃಶ್ಯ ಚಿಂತನೆಗೂ ನೆನಪಿಗೂ ಯೋಗ್ಯವೆನಿಸೀತು.

ಈ ಕ್ಲೇಶಾನುಭವವನ್ನು ನಾನು ಆತ್ಮ-ಶುದ್ಧಿಯ ಸಾಧನವೆಂದು ಕರೆದಿದೇನೆ. ಯಾವ ಮಾನವನೇ ಆಗಲಿ, ಅವನ ಅಶಕ್ತಿಯ ಹೊರತು ಸ್ವಾತಂತ್ರ್ಯವನ್ನು ಕಳೆದುಕೊಂಡಿಲ್ಲವೆಂದು ನನ್ನ ಖಚಿತ ಭಾವನೆ. ನಮ್ಮ ಅಶಕ್ತತೆಗಳನ್ನು ಅರಿತು ನನಗೆ ದುಃಖವಾಗಿದೆ. ನಾವು ಭಾರತದಲ್ಲಿ ಜಗತ್ತಿನ ಎಲ್ಲ ಪ್ರಧಾನ ಮತಧರ್ಮಗಳನ್ನೂ ಪ್ರತಿನಿಧಿಸುತ್ತೇವೆ. ನಾವು ಪರಸ್ಪರ ಭಿನ್ನಭಿನ್ನವಾದ ಕುಟುಂಬ ಒಂದರಂತೆ ಇರುವುದನ್ನೂ, ಹಿಂದೂಗಳು ಮುಸಲ್ಮಾನರು ಪರಸ್ಪರ ಹೋರಾಡುವುದನ್ನೂ, ಒಪ್ಪಿಕೊಳ್ಳಲು ಅತೀವ ಅಪಮಾನವೆನಿಸುತ್ತದೆ. ಹಿಂದೂಗಳಾದ ನಾವಂತೂ ನಮ್ಮ ಹತ್ತಿರದ ಬಂಧುಗಳೇ ಆದ ಲಕ್ಷೋಪಲಕ್ಷ ಜನರನ್ನು ಸ್ಪರ್ಶಕ್ಕೂ ಯೋಗ್ಯರಲ್ಲವೆಂದು ಭಾವಿಸುವುದು ಇನ್ನೂ ಹೆಚ್ಚಿನ ಅಪಮಾನಕರ ಸಂಗತಿ. ನಾನೇ " ಅಸ್ಪೃಶ್ಯ "ನೆನ್ನಿಸಿಕೊಳ್ಳಲು ಬಯಸುತ್ತೇನೆ.

ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಒಂದು ಜನಾಂಗಕ್ಕೆ ಇವು ಸಣ್ಣಪುಟ್ಟ ನ್ಯೂನತೆಗಳಲ್ಲ. ಆದುದರಿಂದ ಆತ್ಮ-ಶುದ್ಧಿ ಮೂಲಕ

ಸ್ವಾತಂತ್ರ್ಯ ಬಯಸುವ ಈ ಹೋರಾಟದಲ್ಲಿ ಅಸ್ಪೃಶ್ಯತೆಯ ಅಭಿಶಾಪವನ್ನು ತೊಡೆದುಹಾಕುವುದಕ್ಕೂ ಮತ್ತು ಭಾರತದ ಭಿನ್ನಭಿನ್ನ ಮತಧರ್ಮಗಳನ್ನು ಪ್ರತಿನಿಧಿಸುವ ಎಲ್ಲ ಭಿನ್ನಭಿನ್ನ ವರ್ಗಗಳನ್ನೂ ಕೋಮುಗಳನ್ನೂ ಒಟ್ಟುಗೂಡಿಸುವ ಕಾರ್ಯಕ್ಕೆ ಅತ್ಯಂತ ಪ್ರಾಮುಖ್ಯತೆ ಕೊಟ್ಟಿರುವುದನ್ನೂ ನೀವು ಗಮನಿಸಬಹುದು.

ಇದೇ ರೀತಿಯಲ್ಲಿ ನಮ್ಮ ದೇಶವನ್ನು ಮಾದಕ ದ್ರವ್ಯಗಳ ಅನಿಷ್ಟದಿಂದ ವಿಮುಕ್ತಗೊಳಿಸಲು ನಾವು ಪ್ರಯತ್ನಿಸುತ್ತಿದ್ದೇವೆ. ಮಾದಕ ವಸ್ತುಗಳ ಸೇವನೆ, ಗಿರಣಿಗಳಲ್ಲಿ ದುಡಿಯುವ ಮತ್ತು ಅದೇ ಬಗೆಯ ಕೆಲಸಮಾಡುವ ಅತ್ಯಲ್ಪ ಮಂದಿಯಲ್ಲಿ ಮಾತ್ರ ಬಹುಮಟ್ಟಿಗೆ ರೂಢಿಯಾಗಿರುವುದು ನಮ್ಮ ಅದೃಷ್ಟವೆನ್ನಬೇಕು. ಹಾಗೆಯೇ ಅವುಗಳ ಸೇವನೆ ಪಾಪಕೃತ್ಯವೆಂದು ಪರಿಗಣಿಸಲ್ಪಟ್ಟಿರುವುದೂ ನಮ್ಮ ಅದೃಷ್ಟವೆ. ಯಾವ ಸ್ತ್ರೀ ಅಥವಾ ಪುರುಷ ಆಗಲಿ, ಅವುಗಳನ್ನು ಅಭ್ಯಾಸಮಾಡುವುದು ಶೋಭಾಯಮಾನವೆಂದು ಭಾವಿಸಲಾಗುವುದಿಲ್ಲ. ಇಷ್ಟಿದ್ದರೂ ಈ ಅನಿಷ್ಟಗಳಿಂದ ಪಾರಾಗಲು ನಾವು ನಡೆಸುತ್ತಿರುವ ಹೋರಾಟ ಒಂದು ದುಸ್ತರವಾದ ಕಾರ್ಯವೇ ಆಗಿದೆ.

ಇಂದಿನ ಸರ್ಕಾರ (ಬ್ರಿಟಿಷ್) ಈ ದುಷ್ಟ ಬಾಬನ್ನು ಸುಮಾರು ಇಪ್ಪತ್ತೈದು ಕೋಟಿ ರೂಪಾಯಿಗಳಷ್ಟು (ಸುಮಾರು ೮೫,೦೦೦,೦೦೦ ಡಾಲರುಗಳಷ್ಟು) ಆದಾಯದ ಮೂಲವನ್ನಾಗಿ ಮಾಡಿರುವುದು ಅತ್ಯಂತ ದುಃಖಕರ ವಿಷಯ. ಆದರೆ, ಭಾರತದ ಮಹಿಳೆಯರು ಇದನ್ನು ಶಾಂತಿಮಾರ್ಗದಿಂದ ಮೂಲೋತ್ಪಾಟನ ಮಾಡುವ ಸಾಹಸಮಾಡಿ, ಈ ದುಷ್ಟ ವಸ್ತುಗಳ ಮಾರಾಟಗಾರರಿಗೆ ತೀವ್ರ ಮನಃಪರಿಕೆಯಾಗುವಂತೆ ಎಸಗಿದ್ದಾರೆ. ಇದು ಸ್ತುತ್ಯಕಾರ್ಯ. ಇದರಿಂದ ಈ ದುಷ್ಟ ವ್ಯಸನಗಳಿಗೆ ತುತ್ತಾದವರ ಮೇಲೆ ಅದ್ಭುತ ಪರಿಣಾಮವುಂಟಾಗಿದೆ.

ಕೊನೆಯ ಪಕ್ಷ, ಈ ವಿಷಯದಲ್ಲಾದರೂ ನಮಗೆ ಆಡಳಿತಗಾರರ ಹೃತ್ಪೂರ್ವಕ ಸಹಕಾರ ದೊರೆಯುತ್ತಿದೆ ಎಂದು ಹೇಳಲು ಸಾಧ್ಯವಾದೀತೆಂದು ನಾನು ಆಶಿಸಿದ್ದೆನು. ನಮಗೆ ಸಹಕಾರ ದೊರೆತಿದ್ದರೆ, ಯಾವ ಶಾಸನವೂ ಇಲ್ಲದೆಯೆ, ನಮ್ಮ ದುಃಖತಪ್ತ ದೇಶವನ್ನು ಈ ಮಾದಕ

ವಸ್ತುಗಳಿಂದ ವಿಮುಕ್ತಮಾಡುವ ಸುಧಾರಣೆಯ ಕಾರ್ಯದಲ್ಲಿ ಕೃತಕೃತ್ಯರಾಗಿಸುತ್ತಿದ್ದೇವೆಂದು ನಾನು ಧೈರ್ಯವಾಗಿ ಹೇಳುತ್ತೇನೆ.

ನಮ್ಮ ರಾಷ್ಟ್ರದ ಹೋರಾಟದಲ್ಲಿ ಒಂದು ರಚನಾತ್ಮಕ ಶಕ್ತಿ ಕಾರ್ಯರೂಪಕ್ಕೆ ಬಂದಿದೆ. ೧೯೦೦ ಮೈಲಿ ಉದ್ದವಿರುವ, ೧೫೦೦ ಮೈಲಿ ಅಗಲವಿರುವ ಈ ವಿಸ್ತಾರ ಭೂಭಾಗದಲ್ಲಿ ೭ ಲಕ್ಷ ಹಳ್ಳಿಗಳಲ್ಲಿ ವಾಸಿಸುವ, ಅರೆಹೊಟ್ಟೆಯಿಂದ ಜೀವಿಸುವ, ಲಕ್ಷಾಂತರ ಮಾನವರಿಗೆ ಪ್ರೇರಣೆಯು ಅಸಕ್ತಿ ಅದು. ಈ ಸರಳ ಗ್ರಾಮೀಣರು, ವಿನಾ ಕಾರಣ, ಪ್ರತಿ ವರ್ಷ ಪ್ರಃ ಆರು ತಿಂಗಳ ಕಾಲ ಉದ್ಯೋಗವಿಲ್ಲದೆ ಇರುವಂಥ ಸ್ಥಿತಿ ನಿಜವಾಗಿಯೂ ದುಃಖಕರ ದೃಶ್ಯ. ಆದರೆ ಪ್ರತಿ ಗ್ರಾಮದಲ್ಲಿಯೂ ಇದ್ದ ಜನ, ತಮ್ಮ ಮೂಲಭೂತ ಮಾನವೀಯ ಅಪೇಕ್ಷೆಗಳಾದ ಅನ್ನ, ಬಟ್ಟೆಗಳ ವಿಷಯದಲ್ಲಿ ಸ್ವಾವಲಂಬಿಗಳಾಗಿದ್ದುದು ಬಹಳ ಹಿಂದಿನ ಮಾತೇನಲ್ಲ ಎನ್ನಬಹುದು.

ನಮ್ಮ ದುರದೃಷ್ಟ. ಈಸ್ಟ್ ಇಂಡಿಯಾ ಕಂಪೆನಿಯು ಗ್ರಾಮಗಳಲ್ಲಿ ಉಪಕಸಬಾಗಿದ್ದ, ಆಧುನಿಕ ಯಂತ್ರಗಳು ಇನ್ನೂ ಉತ್ಪತ್ತಿಮಾಡಲು ಸಾಧ್ಯವಿಲ್ಲದಷ್ಟು ಉತ್ತಮವಾದ ನೂಲನ್ನು ತಮ್ಮ ಹಸ್ತಕೌಶಲದಿಂದ ಉತ್ಪತ್ತಿಮಾಡಿ ಪ್ರಸಿದ್ಧಪಡೆದ ಲಕ್ಷಾಂತರ ನೂಲುವವರ ಜೀವನೋಪಾಯದ ವಿಧಾನವನ್ನು ಹೇಗೆ ನಾಶ ಮಾಡಿದರೆಂಬುದನ್ನು ನಾನು ವಿವರಿಸಲಿಚ್ಛಿಸುವುದಿಲ್ಲ. ಈ ಗ್ರಾಮೀಣ ನೂಲುವವರು ಇದ್ದಕಿದ್ದಂತೆ ತಮ್ಮ ಘನ ಉದ್ಯೋಗವನ್ನು ಕಳೆದುಕೊಳ್ಳುವ ಸ್ಥಿತಿಗೆ ಬಂದರು. ಅಂದಿನಿಂದ ಭಾರತದ ಬಡತನ ಹೆಚ್ಚುತ್ತಲೇ ಇದೆ.

ಇದಕ್ಕೆ ಯಾವ ಪ್ರತಿವಾದ ಹೂಡಿದರೂ ಚಿಂತೆಯಿಲ್ಲ. ಈಸ್ಟ್ ಇಂಡಿಯಾ ಕಂಪೆನಿಯ ಆಡಳಿತಕ್ಕೆ ಮುಂಚೆ ಈ ಗ್ರಾಮೀಣರಲ್ಲಿ ಯಾರೂ ನಿರುದ್ಯೋಗಿಗಳಾಗಿರಲಿಲ್ಲವೆಂಬುದು ಚಾರಿತ್ರಿಕ ಸಂಗತಿ; ಇಂದು ಅವರು ನಿರುದ್ಯೋಗಿಗಳಾಗಿರುವುದನ್ನು ಯಾರು ಬೇಕಾದರೂ ಕಣ್ಣಾರೆ ಕಾಣಬಹುದು. ಆದುದರಿಂದ, ವರ್ಷಂಪ್ರತಿ ಆರು ತಿಂಗಳು ಕಾಲ ಉದ್ಯೋಗವಿಲ್ಲದಿದ್ದರೆ, ಈ ಗ್ರಾಮೀಣರು ಅಶನವಿಲ್ಲದವರಾಗುತ್ತಾರೆಂಬುದನ್ನು ಅರಿಯಲು ಹೆಚ್ಚು ಪ್ರಯತ್ನವಾಗಲೀ ಪ್ರಾಜ್ಞತೆಯಾಗಲೀ ಅವಶ್ಯಕವಿಲ್ಲ.

ಆದುದರಿಂದ ಈ ಅರೆಹೊಟ್ಟೆತಿಂದು ಜೀವಿಸುವ ಲಕ್ಷಾಂತರ ಜನಗಳ ಪರವಾಗಿ, ಇವರು ಸ್ವಾತಂತ್ರ್ಯವನ್ನು ಮತ್ತೆ ಗಳಿಸಿಕೊಳ್ಳುವುದಕ್ಕಾಗಿ ಆತ್ಮಾರ್ಪಣೆ ಮಾಡುತ್ತಿರುವ ಬಗೆಗೆ ರಕ್ಷಣೆ ನೀಡಲು ಜಗತ್ತಿನ ಆತ್ಮಸಾಕ್ಷಿಯನ್ನು ನಾನು ಆಹ್ವಾನಿಸದಿರಲೆ?"

## ೨. ಲಂಡನ್ನಿನ ಗಿಲ್ಡ್ ಹಾಲ್‌ನಲ್ಲಿ ಸ್ವಯಂಪ್ರೇರಿತ ದಾರಿದ್ರ್ಯ ಕುರಿತು ಮಾಡಿದ ಭಾಷಣ

[ಸೆಪ್ಟೆಂಬರ್ ೨೭ ರಂದು ಗಾಂಧೀಜೀ ಲಂಡನ್ನಿನ ಗಿಲ್ಡ್‌ಹಾಲ್‌ನಲ್ಲಿ ಸ್ವಯಂ ಪ್ರೇರಿತ ದಾರಿದ್ರ್ಯದ ಮಹತ್ವ ಕುರಿತು ಭಾಷಣ ಮಾಡಿದರು.]

ರಾಜಕಾರಣದ ಗೊಂದಲವನ್ನು ನಾನು ಪ್ರವೇಶಿಸಿದ ಮೇಲೆ, ರಾಜಕೀಯ ಸ್ವಾರ್ಥವೆಂಬ ಅನೀತಿ ಮತ್ತು ಅಸತ್ಯದಿಂದ ಸ್ಪರ್ಶಿತನಾಗದಿರಬೇಕಾದರೆ, ನನಗೆ ಯಾವುದು ಆವಶ್ಯಕವೆಂದು ನನ್ನನ್ನೇ ಪ್ರಶ್ನಿಸಿಕೊಂಡೆ. ಯಾವ ಜನದ ಮಧ್ಯೆ ನಾನು ಜನಿಸಿದೇನೋ ಯಾರ ಕಷ್ಟಗಳನ್ನು ನಾನು ಪ್ರತಿ ದಿನ ವೀಕ್ಷಿಸುವೆನೋ ಅವರ ಸೇವೆಯನ್ನು ಸಲ್ಲಿಸಬೇಕಾದರೆ ಎಲ್ಲ ಐಶ್ವರ್ಯವನ್ನೂ ಎಲ್ಲ ಆಸ್ತಿಯನ್ನೂ ತ್ಯಜಿಸಬೇಕೆಂಬ ಸ್ಪಷ್ಟ ತೀರ್ಮಾನಕ್ಕೆ ಬಂದೆ.

ಈ ನಂಬಿಕೆ ನನಗೆ ಬಂದಕೂಡಲೇ ನಾನು ಎಲ್ಲವನ್ನೂ ತ್ಯಜಿಸಿದೆನೆಂದು ಸತ್ಯವಾಗಿ ಹೇಳಲಾರೆ. ಆರಂಭದಲ್ಲಿ ಪ್ರಗತಿ ನಿಧಾನವಾಗಿತ್ತೆಂದು ನಾನು ಒಪ್ಪಿಕೊಳ್ಳಬೇಕು. ಅಂದಿನ ನನ್ನ ಹೋರಾಟ ಮುಂದುವರಿದ ಬಗೆಯನ್ನು ನಾನು ನೆನಪಿಗೆ ತಂದುಕೊಂಡರೆ, ಕಾಲ ಗತಿಸಿದಂತೆ ನನ್ನದೆಂದು ಭಾವಿಸಿದ್ದ ಅನೇಕ ವಸ್ತುಗಳನ್ನು ತ್ಯಜಿಸಬೇಕಾದುದು ನನಗೆ ಅನಿವಾರ್ಯವಾಯಿತು; ಅವುಗಳನ್ನು ತ್ಯಜಿಸುವುದು ನನಗೊಂದು ನಿಜವಾದ ಆನಂದವೆನಿಸುವ ಕಾಲವೂ ಬಂದಿತು. ಒಂದಾದ ಮೇಲೆ ಮತ್ತೊಂದು, ಜ್ಯಾಮಿತಿಯ ಅನುಪಾತದಂತೆ, ನನ್ನಿಂದ ಕಳಚಿಹೋದವು. ನನ್ನ ಆ ಅನುಭವಗಳನ್ನು ಈಗ ವಿವರಿಸುವಾಗ, ನನ್ನ ಹೆಗಲಿನಿಂದ ದೊಡ್ಡ ಹೊರೆ

ಕಳಚಿ ಬಿದ್ದಿತೆಂದು ಹೇಳಬಲ್ಲೆ; ಅದರ ಪರಿಣಾಮವಾಗಿ ನಾನಿಂದು ಹೆಚ್ಚು ಸುಖದಿಂದಲೂ ಇನ್ನೂ ಹೆಚ್ಚಿನ ಆನಂದದಿಂದಲೂ ಸಂಚರಿಸಬಲ್ಲೆನೆಂದು ಭಾವಿಸಿದ್ದೇನೆ. ಆಗ ನನ್ನದೆಂದು ನಾನು ಹೊಂದಿದ್ದ ಯಾವುದೇ ಆಗಲಿ, ನನಗೆ ತೊಂದರೆ, ಹೊರೆ ಆಗಿದ್ದಿತು.

ಆ ಆನಂದದ ಕಾರಣವೇನೆಂದು ನಾನು ಪರಿಶೀಲಿಸಿದೆ. ನನ್ನದು ಎಂಬುದಾಗಿ ಏನನ್ನಾದರೂ ನಾನು ಇಟ್ಟುಕೊಂಡರೆ, ಇಡಿಯ ಪ್ರಪಂಚ ದಿಂದ ಅದನ್ನು ರಕ್ಷಿಸಿಕೊಳ್ಳಬೇಕಾಗುತ್ತದೆಂಬುದನ್ನು ಅರಿತುಕೊಂಡೆ. ಅನೇಕರಿಗೆ ಒಂದು ವಸ್ತು ಅವಶ್ಯಕವಿದ್ದರೂ, ಅದನ್ನು ಹೊಂದದಿರುವ ಸ್ಥಿತಿಯನ್ನು ಕಂಡೆ; ದುರ್ಭಿಕ್ಷದಿಂದ ಹೊಟ್ಟೆಗಿಲ್ಲದ ಜನರೊಂದಿಗೆ ಒಂದು ವಿವಿಕ್ತ ಸ್ಥಳದಲ್ಲಿ ಇರುವ ಸ್ಥಿತಿ ನನಗೆ ಬಂದು, ಅವರು ನನ್ನಲ್ಲಿರುವ ವಸ್ತು ವನ್ನು ಹಂಚಿಕೊಳ್ಳುವುದಕ್ಕಾಗಲೀ ಅದನ್ನು ನನ್ನಿಂದ ಕಸಿದುಕೊಳ್ಳು ವುದಕ್ಕಾಗಲೀ ಯತ್ನಿಸಿದರೆ, ನಾನು ಪೋಲೀಸಿನವರ ನೆರವನ್ನು ಹೊಂದ ಬೇಕಾದೀತು, ಎಂಬುದನ್ನು ಅರಿತುಕೊಂಡೆ. ಅನಂತರ ನನಗೆ ನಾನೇ ಹೇಳಿಕೊಂಡೆ: "ಅವರು ಅದನ್ನು ಅಪೇಕ್ಷಿಸಿ ತೆಗೆದುಕೊಳ್ಳುವುದಾದರೆ ಅದು ದುರುದ್ದೇಶದಿಂದಲ್ಲ; ಅದರ ಆವಶ್ಯಕತೆ ಅವರಿಗೆ ನನಗಿಂತ ಹೆಚ್ಚಾ ಗಿರುವುದರಿಂದ.

ನಾನು ಇನ್ನೂ ಹೀಗೆ ಅಂದುಕೊಂಡೆ: "ಯಾವುದನ್ನೇ ಆಗಲಿ ನನ್ನದೆನ್ನುವುದು ಪಾಪ; ನಾನು ಹೊಂದಲು ಅಪೇಕ್ಷಿಸುವಂಥ ವಸ್ತು ಗಳನ್ನು ಇತರರೂ ಅಪೇಕ್ಷಿಸಿದಲ್ಲಿ ಅವರೂ ಅದನ್ನು ಹೊಂದಲು ಸಾಧ್ಯ ವಿದೆಯೆಂದು ನನಗೆ ಅರಿವಾದಾಗಲೇ ನಾನು ಅಂಥವನ್ನು ಹೊಂದಬಲ್ಲೆ. ಆದರೆ ಅಂಥದು ಅಸಾಧ್ಯವೆಂದು ನಮಗೆಲ್ಲ ಅರಿವಿದೆ; ನಾವೆಲ್ಲರೂ ಇದೇ ಅನುಭವವನ್ನು ಹೊಂದಿದೇವೆ. ಆದುದರಿಂದ ಎಲ್ಲರೂ ಹೊಂದಬಹು ದಾದ ಒಂದೇ ವಸ್ತುವೆಂದರೆ, 'ಅಸಂಗ್ರಹ' ಏನನ್ನೂ ಕೂಡಿಡದಿರು ವುದು; ಅಥವಾ ಬೇರೆ ಮಾತಿನಲ್ಲಿ ಸಂಕಲ್ಪಪೂರಿತ ತ್ಯಾಗ.

ಇಂದು ನಾಗರಿಕತೆ ಎಂದು ನಾವು ಅರಿತುಕೊಂಡಿರುವುದಕ್ಕೂ ನಾನು ಚಿತ್ರಿಸುತ್ತಿರುವ ಆನಂದದ ಮತ್ತು ಅಪೇಕ್ಷಣೀಯ ಸ್ಥಿತಿಗೂ ಪ್ರತಿ ದಿನ ಹೋರಾಟ ನಡೆಯುತ್ತಿದೆಯೆಂಬುದು ನಿಮಗೇ ಅರಿವಾಗುತ್ತದೆ.

ಆಶೆಯನ್ನು ಹೆಚ್ಚಿಸುತ್ತ ಹೋಗುವುದೇ ಈ ನಾಗರಿಕತೆಯ ಮೂಲ ಆಧಾರ. ನಿಮಗೆ ಒಂದು ಕೊಠಡಿಯಿದ್ದರೆ ಅದರಿಂದ ತೃಪ್ತರಾಗದೆ, ಎರಡು, ಮೂರು ಮತ್ತೊಂದು ಬೇಕೆಂದು ಆಶೆ ಹೆಚ್ಚುತ್ತ ಹೋಗುತ್ತದೆ; ಹೆಚ್ಚುಹೆಚ್ಚಾಗಿ ಹೊಂದಿದಷ್ಟೂ ಸುಖವೆಂಬ ಭಾವನೆ ಬರುತ್ತದೆ. ಕುರ್ಚಿ, ಮೇಜು ಮೊದಲಾದ ವಸ್ತುಗಳನ್ನೂ ಇನ್ನೂ ಇತರ ಸಾಮುಗ್ರಿಗಳನ್ನೂ ಸಂಗ್ರಹಿಸುವುದಕ್ಕೆ ಕೊನೆಯೇ ಇಲ್ಲದೆ ಹೋಗುತ್ತದೆ. ಹೆಚ್ಚು ಸಾಮುಗ್ರಿಗಳನ್ನು ಹೊಂದಿದಷ್ಟೂ ನೀವು ಉತ್ತಮ ನಾಗರಿಕತೆಯ ಪ್ರತಿನಿಧಿಗಳು ಎಂಬ ಭಾವನೆ ಹೆಚ್ಚುತ್ತದೆ. ಆ ನಾಗರಿಕತೆಯ ವಕೀಲರು ಅದನ್ನು ಪ್ರತಿಪಾದಿಸುವಷ್ಟು ಸುಂದರವಾಗಿ ನಾನು ಅದನ್ನು ವರ್ಣಿಸಲಾರೆ; ನನಗೆ ಅರಿವಾದ ರೀತಿಯಲ್ಲಿ ಮಾತ್ರ ಅದನ್ನು ಪ್ರತಿಪಾದಿಸುತ್ತಿದೇನೆ.

ಇದಕ್ಕೆ ಪ್ರತಿಯಾಗಿ, ನೀವು ಕಮ್ಮಿ ಹೊಂದಿದ್ದಷ್ಟೂ ನಿಮ್ಮ ಆಶೆ ಕಮ್ಮಿ; ನೀವು ಉತ್ತಮರಾಗಿರುತ್ತೀರಿ. ಈ ಉತ್ತಮ ಸ್ಥಿತಿ ಯಾವುದರಲ್ಲಿ ಎಂದೀರಿ? ಅದು ಕೇವಲ ಜೀವನದ ಉಪಭೋಗಕ್ಕಲ್ಲ, ಮಾನವ ವ್ಯಕ್ತಿಗಳಿಗೆ ಸ್ವಯಂ ಸೇವೆ ಸಲ್ಲಿಸಿ ಅದರಿಂದ ಆನಂದ ಪಡುವುದಕ್ಕೆ; ಈ ಸೇವೆಗೆ ನಿಮ್ಮ ದೇಹ, ಆತ್ಮ, ಮನಸ್ಸು ಎಲ್ಲವೂ ನಿವೇದಿತವಾಗಿರುತ್ತದೆ........ಈ ದೇಹವೂ ನಿಮ್ಮದಲ್ಲ. ಇದು ಮೂರು ದಿನಗಳ ಅನುಭವಕ್ಕೆ ಕೊಡಲ್ಪಟ್ಟಿದೆ. ಯಾರು ಇದನ್ನು ನಿಮಗೆ ದಯಪಾಲಿಸಿದನೋ ಅವನೇ ಅದನ್ನು ಕೊಂಡೊಯ್ಯುವನು.

ಇದು ನನ್ನ ಪರಮ ನಂಬಿಕೆಯಾದುದರಿಂದ, ಈ ದೇಹವೂ ಭಗವಂತನ ಸಂಕಲ್ಪಾಧೀನ ಎಂಬುದೇ ನನ್ನ ಅವಿಚ್ಛಿನ್ನ ಆಕಾಂಕ್ಷೆಯಾಗಬೇಕು; ಇದು ನನ್ನ ಅಧೀನವಲ್ಲಿ ಇರುವವರೆಗೂ, ಜಾಗ್ರತಾವಸ್ಥೆಯಲ್ಲಿ, ಸದಾ ಇಂದ್ರಿಯೋಪಭೋಗಕ್ಕೂ, ನೀತಿ ನಾಶಕ್ಕೂ ಉಪಯೋಗಿಸಲ್ಪಡದೆ ಕೇವಲ ಸೇವೆಗೇ ಉಪಯೋಗಿಸಲ್ಪಡಬೇಕು. ದೇಹದ ವಿಷಯಕ್ಕೇ ಈ ರೀತಿ ನಿಜ ಇರುವಾಗ ನಾವು ಬಳಸುವ ಉಡುಪು ಮತ್ತಿತರ ವಸ್ತುಗಳ ವಿಷಯಕ್ಕೆ ಇನ್ನೆಷ್ಟು ನಿಜವಾಗಬೇಕು?

ಈ ಸ್ವಯಂ ಪ್ರೇರಿತ ದಾರಿದ್ರ್ಯದ ವ್ರತವನ್ನು ಯಾರು ಸಾಧ್ಯವಾದಷ್ಟು ಪೂರ್ಣ ಸ್ಥಿತಿಗೆ ಸಾಧಿಸಿರುವರೋ—ಕೇವಲ ಪೂರ್ಣ ಸ್ಥಿತಿ

ಯನ್ನು ಹೊಂದುವುದು ಅಸಾಧ್ಯವೇ ಸರಿ—ಆದರೂ ಯಾರು ಮಾನವ ಮಾತ್ರನಿಗೆ ಸಾಧ್ಯವಾದಷ್ಟು ಪೂರ್ಣ ಸ್ಥಿತಿಯನ್ನು ಸಾಧಿಸಿರುವರೋ, ಆ ಆದರ್ಶವನ್ನು ಯಾರು ಮುಟ್ಟಿರುವರೋ ಅವರೆಲ್ಲ ಸರ್ವ ತ್ಯಾಗ ಮಾಡಿದಷ್ಟು ನಿಜವಾಗಿಯೂ ಜಗತ್ತಿನ ಸಕಲೈಶ್ವರ್ಯ ಹೊಂದಿರುವುದಕ್ಕೆ ನಿದರ್ಶನವಾಗಿದೆ.

ಆದರೆ, ನೀವು ಹೀಗೆ ಕೇಳಬಹುದು: "ಮಿ. ಗಾಂಧೀಯವರೇ, ನೀವೊಂದು ತುಂಡು ಬಟ್ಟೆ ಧರಿಸಿದೀರಲ್ಲಾ ಅದು ಯಾರಿಗೆ ಸೇರಿದುದು?" ಎಂದು. ದೇಹವಿರುವವರೆಗೂ ಅದನ್ನು ಮುಚ್ಚಲು ನಾನು ಏನನ್ನಾದರೂ ಉಪಯೋಗಿಸಬೇಕು ಎಂಬುದನ್ನು ಅಂಗೀಕರಿಸುತ್ತೇನೆ. ಅದನ್ನೂ ಯಾರಾದರೂ ನನ್ನಿಂದ ಕಸಿದುಕೊಳ್ಳಲು ಯತ್ನಿಸಿದರೆ ಅವರೇ ಅದನ್ನು ಹೊಂದಬಹುದು. ಅಂಥಾ ಸ್ಥಿತಿ ಬಂದರೆ ನಾನು ಪೋಲೀಸರ ನೆರವನ್ನು ಹೊಂದಲು ಬಯಸುವುದಿಲ್ಲ![೨]

## ೩. ಮಾಡಾಂ ಮಾಂಟೆಸ್ಸೋರಿ*ಯವರ ಸಂಸ್ಥೆಯಲ್ಲಿ ಮಾಡಿದ ಭಾಷಣ.

ಮಾಡಾಂ ಮಾಂಟೆಸ್ಸೋರಿಯವರು ಗಾಂಧೀಜೀಗೆ ಇತ್ತ ಸ್ವಾಗತ ಅರ್ಥಗರ್ಭಿತವಾಗಿತ್ತು. ಆಕೆ ಹೀಗೆ ನುಡಿದರು: 'ಗಾಂಧೀ ಅನೇಕ ವರ್ಷಗಳಿಂದ ನನ್ನ ಮನಸ್ಸನ್ನು ಸೂರೆಗೊಂಡಿದಾರೆ. ನನ್ನಾತ್ಮ ಅವರಿಗಾಗಿ ತವಕಪಟ್ಟಿದೆ. ಈ ಪೂಜ್ಯ ವ್ಯಕ್ತಿ ನಾನು ತರಬೇತು ಕೊಡುತ್ತಿರುವ ಅಧ್ಯಾಪಕರುಗಳಿಗೆ ಹಿರಿಯ ಮಾರ್ಗದರ್ಶನ ಮಾಡಿಯಾರು ಎಂದು ಭಾಸವಾಗುತ್ತದೆ. ಮಾನವ ನಾಗರಿಕತೆ. ಶಿಶು ಶಿಕ್ಷಣ ಈ ಎರಡೂ ವಿಷಯಗಳು ನಮ್ಮಿಬ್ಬರಿಗೂ ಪ್ರಿಯವಾದವು, ಇಬ್ಬರಿಗೂ ಸಂಬಂಧ ಕಲ್ಪಿಸಿ, ಇಬ್ಬರನ್ನೂ

* ಶಿಶು ಶಿಕ್ಷಣ ತಜ್ಞ. ಇಟಲಿ ದೇಶದವಳು. ಈಕೆಯ ಶಿಕ್ಷಣ ಪದ್ಧತಿ ಪ್ರಸಿದ್ಧವಾದುದು.

ನಿಮ್ಮ ಸಮ್ಮುಖಕ್ಕೆ ತಂದು ನಿಲ್ಲಿಸಿವೆ. ನಾವು, ಮಕ್ಕಳು ಹೃಷ್ಟಪುಷ್ಟವಾಗಿ ಬೆಳೆಯಬೇಕೆಂದೂ, ಅವುಗಳ ಜೀವನ ಜಗತ್ತಿನ ಶಾಂತಿಗೆ ಕಾರಣವಾಗುವ ಅಧ್ಯಾತ್ಮದ ಆಧಾರದ ಮೇಲೆ ರಚಿತವಾಗಬೇಕೆಂದೂ ಬೋಧಿಸುತ್ತೇವೆ. ನಾವೆಲ್ಲರೂ–ವಿದ್ಯಾರ್ಥಿಗಳೂ ಮತ್ತು ಗೆಳೆಯರೂ–ಜೀವನ ಕಲೆಯಲ್ಲಿ ನಿಷ್ಣಾತರಾದ ಈ ಮಹನೀಯರ ವಾಣಿ ಕೇಳಲು ಇಲ್ಲಿ ನೆರೆದಿದೇವೆ. ನಮ್ಮೆಲ್ಲರ ಜೀವನದಲ್ಲಿಯೂ ಇದೊಂದು ಚಿರ ಸ್ಮರಣೀಯ ದಿನ." ಇದಕ್ಕೆ ಗಾಂಧೀಜೀ ಇತ್ತ ಉತ್ತರ ಹೀಗಿತ್ತು :

"ಇಲ್ಲಿನ ಮಕ್ಕಳನ್ನೂ ನಿಮ್ಮೆಲ್ಲರನ್ನೂ ಕಾಣಬೇಕೆಂದು ನಾನು ಕಾತರನಾಗಿದ್ದೆ. ಈ ಮಕ್ಕಳನ್ನು ನೋಡಿ ನನಗೆ ಪರಮ ಆನಂದವಾಯಿತು. ಇವರು ಚಿಕ್ಕಂದಿನಿಂದಲೇ ಮೌನಾಚರಣೆಯ ಅರ್ಥವನ್ನು ತಿಳಿದುಕೊಳ್ಳುವಂತೆ ಮಾಡಿರುವುದನ್ನು ಕಂಡು ನನಗೆ ಅವರ್ಣನೀಯ ಹರ್ಷವಾಯಿತು; ತಮ್ಮ ಅಧ್ಯಾಪಕರ ಪಿಸು ಮಾತಿಗನುಗುಣವಾಗಿ ಒಬ್ಬರ ಹಿಂದೆ ಮತ್ತೊಬ್ಬರು ಎಷ್ಟು ಶಾಂತಚಿತ್ತರಾಗಿ ಎಲ್ಲರೂ ಬಂದರು! ಅವರ ಸುಂದರ ಲಾಸ್ಯಭರಿತ ಚಲನವಲನವನ್ನು ಕಂಡಾಗಲಂತೂ ನನ್ನ ಹರ್ಷ ಮಹತ್ತಾಯಿತು. ಇದನ್ನೆಲ್ಲ ದರ್ಶಿಸಿದಾಗ ನನ್ನ ಹೃದಯ ಭಾರತದ ಹಳ್ಳಿಗಳಲ್ಲಿ ಇರುವ ಅರೆಹೊಟ್ಟೆ ತಿಂದು ಜೀವಿಸುವ ಲಕ್ಷಾಂತರ ಮಕ್ಕಳ ಕಡೆಗೆ ಹೋಯಿತು. ಆಗ ನನ್ನನ್ನು ನಾನೇ ಪ್ರಶ್ನಿಸಿಕೊಂಡೆ. 'ಇಲ್ಲಿ ನಿಮ್ಮ ಮಕ್ಕಳಿಗೆ ಕೊಡುತ್ತಿರುವ ಈ ಪದ್ಧತಿಯ ಶಿಕ್ಷಣವನ್ನು ಆ ಮಕ್ಕಳಿಗೂ ಕೊಡಲು ನನಗೆ ಸಾಧ್ಯವಾದೀತೆ?' ಭಾರತದ ಕಡು ಬಡವ ಮಕ್ಕಳಿಗಾಗಿ ನಾವು ಒಂದು ಪ್ರಯೋಗವನ್ನು ನಡೆಸುತ್ತಿದೇವೆ. ಆ ಪ್ರಯೋಗ ಹೇಗಾದೀತೋ ನಾನಂತೂ ಅರಿಯೆ. ಭಾರತದ ಕೀಳು ಗುಡಿಸಿಲುಗಳಲ್ಲಿ ವಾಸಿಸುವ ಮಕ್ಕಳಿಗೆ ನಿಜಸತ್ತ್ವನೀಡುವ ಶಿಕ್ಷಣವನ್ನು ಕೊಡುವ ರೀತಿ ಹೇಗೆ ಎಂಬುದು ನಮ್ಮ ಸಮಸ್ಯೆ. ಇದಕ್ಕೆ ಬೇಕಾದ ಸಾಧನಸಂಪತ್ತು ನಮ್ಮಲ್ಲಿಲ್ಲ.

"ನಾವು ಸ್ವಯಂ ಪ್ರೇರಿತ ಅಧ್ಯಾಪಕರನ್ನು ಆಶ್ರಯಿಸಬೇಕಾಗಿದೆ. ನಾನು ಅವರಿಗಾಗಿ ಹುಡುಕಿದಾಗ ಯೋಗ್ಯರಾದವರು ಎಂದರೆ, ಮಕ್ಕಳನ್ನು ಅರಿತುಕೊಂಡು, ಅವರ ವ್ಯಕ್ತಿತ್ವ ಮತ್ತು ಸಾಮರ್ಥ್ಯವನ್ನು ಅರಿತು

ಕೊಂಡು, ಅವರ ಆತ್ಮಗೌರವಕ್ಕನುಗುಣವಾಗಿ ಅವರ ಸರ್ವ ಶ್ರೇಷ್ಠ ಗುಣಗಳನ್ನು ಹೊರ ಹೊಮ್ಮಿಸ ಬಲ್ಲವರು ದೊರಕುವುದು ಬಹಳ ಕಡಮೆ. ನೂರಾರು ಮಕ್ಕಳ ನನ್ನ ಅನುಭವದಿಂದ–ನಾನು ಸಾವಿರಾರು ಎನ್ನುವುದರಲ್ಲಿದ್ದೆ — ಅವರಲ್ಲಿ ನನ್ನಲ್ಲಿಯೂ ನಿಮ್ಮಲ್ಲಿಯೂ ಇರುವುದ ಕ್ಕಿಂತ ಹೆಚ್ಚು ಸೂಕ್ಷ್ಮವಾದ ಆತ್ಮಗೌರವ ಭಾವನೆ ಇದೆಯೆಂದು ನಾನು ಬಲ್ಲವನಾಗಿದೇನೆ. ನಾವು ನಮ್ಮ ದೊಡ್ಡತನವೆಂಬುದನ್ನು ಬದಿಗಿಟ್ಟು ನಮ್ರತೆಯಿಂದ ವೀಕ್ಷಿಸುವುದಾದರೆ, ಬಾಳಿನ ಅತ್ಯಂತ ಅಮೋಘ ಪಾಠ ಗಳನ್ನು ಏನೂ ಅರಿಯದ ಮಕ್ಕಳೆಂದು ಕರೆಯಲ್ಪಡುವವರಿಂದ ಕಲಿಯ ಬೇಕೇ ಹೊರತು ದೊಡ್ಡವರಾಗಿ ಬೆಳೆದ ಪಂಡಿತ ಜನರಿಂದಲ್ಲ*.

ಈಗ, ಯಾವ ಸೂಕ್ಷ್ಮ ಮಾನವೀಯ ಸಮಸ್ಯೆ ನನ್ನ ಮನದಲ್ಲಿ ಕಾಡುತ್ತಿದೆಯೋ ಅದನ್ನು ಎಂದರೆ, ಲಕ್ಷಾಂತರ ಮಕ್ಕಳಲ್ಲಿರುವ ಸರ್ವ ಶ್ರೇಷ್ಠ ಗುಣಗಳನ್ನು ಹೊರ ಹೊಮ್ಮಿಸುವ ವಿಧಾನ ಹೇಗೆ ಎಂಬ ಸಮಸ್ಯೆ ಯನ್ನು ನಿಮ್ಮ ಮುಂದೆ ಇಟ್ಟಿದೇನೆ. ಆದರೆ ನಾನೊಂದು ಪಾಠ ಕಲಿತಿದೇನೆ. ಆ ಪಾಠ, ಯಾವುದು ಮನುಷ್ಯನಿಗೆ ಅಸಾಧ್ಯವೋ ಅದು ಭಗವಂತನಿಗೆ ಲೀಲಾಜಾಲ. ಆದರೂ, ಭಗವಂತನ ಸೃಷ್ಟಿಯಲ್ಲಿ ಅತ್ಯಂತ ಕೀಳು ಎನಿಸಿಕೊಂಡಿರುವುದರ ಭವಿತವ್ಯವನ್ನು ನಿರ್ಧರಿಸುವ ಅನಂತ ಶಕ್ತಿಯಲ್ಲಿ ನಮಗೆ ನಂಬಿಕೆ ಇರುವುದಾದರೆ ಎಲ್ಲವೂ ಸಾಧ್ಯವೆಂಬ ವಿಷಯದಲ್ಲಿ ನನಗೆ ಶಂಕೆಯೇ ಇಲ್ಲ. ಈ ಪರಮ ನಂಬಿಕೆ ಯಿಂದ ನಾನು ಬದುಕನ್ನು ಸಾಗಿಸುತ್ತಿದೇನೆ; ಭಗವಂತನ ಇಚ್ಛೆಗನುಗುಣ ವಾಗಿ ನನ್ನ ಕಾಲವನ್ನೂ ಕ್ರಿಯೆಯನ್ನೂ ನಡೆಸುತ್ತಿದೇನೆ. ಆದುದರಿಂದ, ನೀವು ಮಕ್ಕಳ ಬಗೆಗೆ ಪ್ರೇಮಭರಿತರಾಗಿ ನಿಮ್ಮ ಅಸಂಖ್ಯ ಸಂಸ್ಥೆಗಳ

---

* "ಮಕ್ಕಳ ಬಾಯಿಂದ ಜ್ಞಾನ ಹೊರ ಹೊಮ್ಮುತ್ತದೆ" ಎಂಬ ನುಡಿಗಿಂತ ಅಮೋಘವೂ ಘನವೂ ಆದ ಬೇರೊಂದು ಸತ್ಯವನ್ನು ಜೀಸಸ್ ಎಂದೂ ನುಡಿಯಲಿಲ್ಲ. ಅದನ್ನು ನಾನು ನಂಬುತ್ತೇನೆ. ನಮ್ರತೆಯಿಂದಲೂ ನಿಷ್ಕಲಂಕ ಮನಸ್ಸಿನಿಂದಲೂ ನಾವು ಮಕ್ಕಳ ಬಳಿ ಸಾರಿದರೆ ಅವರಿಂದ ಜ್ಞಾನಾರ್ಜನೆಯಾದೀತೆಂದು ನನ್ನ ಜೀವನದ ಅನುಭವ.

ಮೂಲಕ ಅವರ ಸರ್ವ ಶ್ರೇಷ್ಠ ಗುಣಗಳನ್ನು ಹೊರ ಹೊಮ್ಮಿಸಲು ಶ್ರಮಿಸುತ್ತಾ, ಆಶಾಭರಿತರಾಗಿ ದುಡಿಯುವಂತೆ, ಈ ಬಗೆಯ ಶಿಕ್ಷಣ ಕೇವಲ ಶ್ರೀಮಂತರ ಮಕ್ಕಳಿಗೆ ಮಾತ್ರವಲ್ಲ, ನಿರ್ಗತಿಕರ ಮಕ್ಕಳಿಗೂ ಸಾಧ್ಯವೆಂದು ನಾನೂ ನುಡಿಯುತ್ತೇನೆ. ಈ ಲೋಕದಲ್ಲಿ ನಿಜ ಶಾಂತಿ ನೆಲೆಸಬೇಕಾದರೆ, ಯುದ್ಧ ಭಾವನೆಯ ಮೇಲೆ ನಾವು ನಿಜವಾದ ಯುದ್ಧ ಮಾಡಬೇಕಾದರೆ, ನಾವು ಶಿಶು ಶಿಕ್ಷಣದಿಂದ ಆರಂಭಿಸಬೇಕೆಂದು ಹೇಳಿ ನೀವು ಸತ್ಯ ನುಡಿದಿದ್ದೀರಿ. ಮಕ್ಕಳು ಅವರಿಗೆ ನಿಸರ್ಗ ಸಹಜವಾದ ನಿಷ್ಕಲಂಕತೆಯಿಂದ ದೊಡ್ಡವರಾಗಿ ಬೆಳೆದರೆ ನಮಗೆ ಹೋರಾಟವೆನ್ನುವುದೇ ಇರದು, ನಿರರ್ಥಕ ನಿರ್ಣಯಗಳನ್ನು ನಾವು ಮಾಡಬೇಕಾದ ಪ್ರಮೇಯವೇ ಇರುವುದಿಲ್ಲ; ನಾವು ಪ್ರೇಮದಿಂದ ಪ್ರೇಮಕ್ಕೂ, ಶಾಂತಿಯಿಂದ ಶಾಂತಿಗೂ ಮುಂದುವರಿಯುತ್ತೇವೆ. ಕೊನೆಗೆ ಜಗತ್ತೆಲ್ಲ ಶಾಂತಿ ಮತ್ತು ಪ್ರೇಮಮಯವಾಗುತ್ತದೆ. ಅರಿತೋ ಅರಿಯದೆಯೋ ಇದನ್ನೇ ಲೋಕವೆಲ್ಲ ಹಂಬಲಿಸುತ್ತಿದೆ.[೩]

## ೪. ಈಟನ್ ಶಾಲೆಯಲ್ಲಿ ಮಾಡಿದ ಭಾಷಣ

ಗಾಂಧೀಜೀ ಈಟನ್ನಿಗೆ ಭೇಟಿ ಕೊಟ್ಟರು. ಈಟನ್ ಸಂಪ್ರದಾಯಪರ ಪಕ್ಷದ ಒಂದು ಪ್ರಬಲ ಸ್ಥಾನವಾಗಿತ್ತು. ಅಲ್ಲಿ ನಡೆದ ಸಭೆಗೆ ಅಧ್ಯಕ್ಷರಾಗಿದ್ದವರು ಗಾಂಧೀಜೀಯನ್ನು ಪರಿಚಯ ಮಾಡಿಕೊಡುತ್ತಾ, "ಮಿಸ್ಟರ್ ಷೌಕತ್ ಅಲೀಯವರು ಮುಸ್ಲಿಂ ಪರ ವಾದವನ್ನು ನಮ್ಮ ಮುಂದಿಟ್ಟಿದ್ದಾರೆ. ನೀವು ಹಿಂದೂ ಪರ ವಾದವನ್ನು ನಮ್ಮ ಮುಂದಿಡುವಿರಾ?" ಎಂದರು. ಗಾಂಧೀಜೀ ವಿದ್ಯಾರ್ಥಿಗಳನ್ನು ಸಂಬೋಧಿಸಿ ಹೀಗೆ ನುಡಿದರು:

"ನಿಮಗೆ ಇಂಗ್ಲೆಂಡಿನಲ್ಲಿ ಒಂದು ಮುಖ್ಯ ಸ್ಥಾನವಿದೆ. ನಿಮ್ಮಲ್ಲಿ ಕೆಲವರು ಪ್ರಧಾನಮಂತ್ರಿಗಳು, ಸೈನ್ಯಾಧಿಪತಿಗಳು, ಆಡಳಿತಗಾರರು ಆಗುವ ಭವಿಷ್ಯವಿದೆ. ನಿಮ್ಮ ಶೀಲ ರೂಪುಗೊಳ್ಳುತ್ತಿರುವ ಈ ಕಾಲದಲ್ಲಿಯೇ ನಿಮ್ಮ ಹೃದಯವನ್ನು ಹೊಗಲು ನಾನು ಕಾತರನಾಗಿದೇನೆ. ಏಕೆಂದರೆ,

ಈಗಲೇ ಅದು ಸುಲಭ ಸಾಂಪ್ರದಾಯಿಕ ರೀತಿಯಲ್ಲಿ ನಿಮಗೆ ಬೋಧಿಸಲ್ಪಡುತ್ತಿರುವ ಸುಳ್ಳು ಇತಿಹಾಸಕ್ಕೆ ವಿರುದ್ಧವಾಗಿ ಕೆಲವಾರು ಅಂಶಗಳನ್ನು ನಿಮ್ಮ ಮುಂದಿಡಲು ಬಯಸುತ್ತೇನೆ. ದೊಡ್ಡ ಅಧಿಕಾರ ಸ್ಥಾನಗಳಲ್ಲಿರುವವರಲ್ಲಿ ನಾನು ವಿಷಯ ಜ್ಞಾನವಿಲ್ಲದಿರುವ ಸ್ಥಿತಿಯನ್ನು ಕಂಡಿರುವೆನೇ ವಿನಾ ಜ್ಞಾನಶೂನ್ಯತೆಯನ್ನಲ್ಲ; ಆ ಜ್ಞಾನವಾದರೂ ಅಸಂಬದ್ಧ ಅಂಶಗಳ ಆಧಾರವನ್ನು ಹೊಂದಿರುತ್ತದೆ; ನೀವು ಸತ್ಯಾಂಶಗಳನ್ನು ಹೊಂದಿರಬೇಕೆಂಬುದು ನನ್ನ ಆಶಯ. ನೀವು ಒಂದಲ್ಲ ಒಂದು ದಿನ ಇತರ ಜನಾಂಗಗಳನ್ನು ಶೋಷಣೆ ಮಾಡುವ ಕಾರ್ಯದಿಂದ ಮುಕ್ತರಾಗಿ, ಶಸ್ತ್ರ ಬಲವನ್ನು ತ್ಯಜಿಸಿ, ನೈತಿಕ ಶಕ್ತಿಯಿಂದ ಜಗತ್ತಿನ ಶಾಂತಿರಕ್ಷಕ ಜನಾಂಗದವರಾಗಬಲ್ಲರೆಂಬುದನ್ನು ಕಲ್ಪಿಸಿಕೊಳ್ಳಬಲ್ಲೆನೇ ಹೊರತು ಸಾಮ್ರಾಜ್ಯ ಶಿಲ್ಪಿಗಳಂತಲ್ಲ. ನನ್ನ ಮಟ್ಟಿಗಾದರೂ ಹಿಂದೂ ಪರ ವಾದವಿಲ್ಲವೆಂಬುದನ್ನು ನಿಮಗೆ ತಿಳಿಸಲಿಚ್ಛಿಸುತ್ತೇನೆ; ನನ್ನ ದೇಶದ ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ ನಿಮಗಿಂತ ಅಧಿಕನೆನಿಸುವ ಹಿಂದೂ ನಾನೇನೂ ಅಲ್ಲ.

ಹಿಂದೂ ಮನೋಭಾವವನ್ನು ಪ್ರತಿನಿಧಿಸುತ್ತೇವೆಂದು ಹೇಳಿಕೊಳ್ಳುವ ಹಿಂದೂ ಮಹಾಸಭೆಯ ಪ್ರತಿನಿಧಿಗಳು ಹಿಂದೂ ಪರ ವಾದವನ್ನು ಮುಂದಿಡಬಹುದಾದರೂ, ಅವರು ಆ ರೀತಿ ಮಾಡುವುದಿಲ್ಲವೆಂದು ನನ್ನ ಅಭಿಪ್ರಾಯ. ದೇಶದ ಸಮಸ್ಯೆಗೆ ಅವರದೂ ರಾಷ್ಟ್ರೀಯ ಪರಿಹಾರವೇ; ಇದು ಅವರು ರಾಷ್ಟ್ರೀಯವಾದಿಗಳಾಗಿರುವುದರಿಂದಲ್ಲ, ಅವರಿಗೆ ಅನುಕೂಲವಾಗಿರುವುದರಿಂದ. ಇದನ್ನು ನಾನು ವಿನಾಶಾತ್ಮಕ ಉಪಾಯವೆಂದು ಕರೆದಿದ್ದೇನೆ; ಅವರು ಬಹು ಸಂಖ್ಯಾತರ ಪ್ರತಿನಿಧಿಗಳಾಗಿರುವುದರಿಂದ ತಮ್ಮ ಹೆಮ್ಮೆಯಿಂದ ದೂರರಾಗಿ, ಅಲ್ಪ ಸಂಖ್ಯಾತ ಪಂಗಡಗಳವರು ಬಯಸುವಂತೆ ನೀಡುವುದಾದರೆ, ಇಂದ್ರಜಾಲವೋ ಎಂಬಂತೆ, ವಾತಾವರಣವೆಲ್ಲ ತಿಳಿಗೊಳ್ಳುವುದೆಂದು ನಾನು ಅವರೊಂದಿಗೆ ವಾದ ಮಾಡುತ್ತಿದೇನೆ.

ಅಸಂಖ್ಯರಾದ ಹಿಂದೂಗಳ ಆಶೋತ್ತರವೇನು ಎಂಬುದು ಯಾರಿಗೂ ಅರಿವಿಲ್ಲ; ಆದರೆ ನಾನು ಇಷ್ಟು ವರ್ಷಗಳು ಅವರೊಂದಿಗೆ ಸಂಸರ್ಗ ಹೊಂದಿರುವುದರಿಂದ, ಅವರು ಕ್ಷುಲ್ಲಕ ಅಂಶಗಳ ಕಡೆ ಯೋಚಿಸುವುದಿಲ್ಲ

ವೆಂದು ಭಾವಿಸುತ್ತೇನೆ; ಚುನಾವಣೆಯ ಸ್ಥಾನಗಳು, ಅಧಿಕಾರ ಸ್ಥಾನಗಳು ಇವೇ ಮೊದಲಾದ ಸಮಸ್ಯೆಗಳಿಂದ ಅವರು ಪೀಡಿತರಾಗಿಲ್ಲ. ಕೋಮುವಾರು ಭಾವನೆಯ ಪೀಡೆ ಬಹಳ ಮಟ್ಟಿಗೆ ಪಟ್ಟಣಗಳಿಗೆ ಸೀಮಿತವಾಗಿದೆ. ಇವು ನೈಜ ಭಾರತವಲ್ಲ; ಲಂಡನ್ ಮತ್ತಿತರ ಪಾಶ್ಚಾತ್ಯ ನಗರಗಳ ಮಾಲಿನ್ಯವನ್ನು ಪ್ರತಿಬಿಂಬಿಸುತ್ತವೆ. ಇವು ಇಂಗ್ಲೆಂಡಿನ ಕಮಿಷನ್ ಏಜೆಂಟುಗಳಂತಾಗಿ, ಅರಿತೋ ಅರಿಯದೆಯೋ, ಗ್ರಾಮಗಳನ್ನು ಸೂರೆ ಮಾಡುವ ಕಾರ್ಯದಲ್ಲಿ ನಿಮ್ಮೊಡನೆ ಭಾಗಿಗಳಾಗುತ್ತವೆ. ಬ್ರಿಟಿಷ್ ಮಂತ್ರಿಗಳು ಅವಿಶ್ರಾಂತರಾಗಿ ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿರುವ ಭಾರತೀಯ ಸ್ವಾತಂತ್ರ್ಯದ ಪ್ರಶ್ನೆಯೊಂದಿಗೆ ಹೋಲಿಸಿದರೆ, ಕೋಮುವಾರು ಸಮಸ್ಯೆ ಎಂಬುದಕ್ಕೆ ಯಾವ ಪ್ರಾಮುಖ್ಯತೆಯೂ ಇಲ್ಲ. ಅತೃಪ್ತ, ದಂಗೆಕೋರ ಮನೋಭಾವದ ಭಾರತವನ್ನು ಬಹು ದೀರ್ಘ ಕಾಲ ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಿಲ್ಲವೆಂಬುದನ್ನು ಮಂತ್ರಿಗಳು ಮರೆಯುತ್ತಾರೆ. ನಮ್ಮ ದಂಗೆ ಅಹಿಂಸಾತ್ಮಕವೆಂಬುದೇನೋ ನಿಜವೇ, ಆದರೂ ಅದೂ ದಂಗೆಯೇ.

ಜನತೆಯ ಕೆಲವಾರು ಭಾಗಗಳನ್ನು ಮಾತ್ರ ಕ್ಷೀಣದೆಸೆಗೊಯ್ಯುತ್ತಿರುವ ಕೋಮುವಾರು ವ್ಯಾಧಿಗಿಂತ ಎಷ್ಟೋ ಪಟ್ಟು ದೊಡ್ಡದು ಭಾರತದ ಸ್ವಾತಂತ್ರ್ಯ ಪ್ರಶ್ನೆ. ವಿದೇಶೀ ಬೆಣೆಯನ್ನು ತೆಗೆದಕೂಡಲೇ ಭಿನ್ನ ಭಿನ್ನವಾಗಿರುವ ಕೋಮುಗಳು ಐಕ್ಯವಾಗುವುದು ಖಚಿತ. ಆದುದರಿಂದ ಹಿಂದೂ ಪರ ವಾದವೆನ್ನುವುದೇ ಇಲ್ಲ; ಅದು ಪ್ರಧಾನತೆಯನ್ನು ಕಳೆದುಕೊಳ್ಳಬೇಕಾಗುತ್ತದೆ. ನೀವು ಈ ಪ್ರಶ್ನೆಯನ್ನು ಅಧ್ಯಯನ ಮಾಡಿದರೆ, ಇದರಿಂದ ನಿಮಗೆ ಯಾವ ಲಾಭವೂ ದೊರಕದು. ಇದರ ಉದ್ರೇಕಕರ ಅಂಶಗಳನ್ನು ಅರಿತಾಗ, ನಾವು ಥೇಮ್ಸ್ ನದಿ ಪಾಲಾದರೆ ಮೇಲೇನೋ ಎಂಬ ಭಾವ-ನಿಮ್ಮಲ್ಲಿ ಉತ್ಪನ್ನವಾದೀತು. ಕೋಮುವಾರು ಸಮಸ್ಯೆಯಿಂದ ಏನೂ ಅಗಾಧ ಸಂಭವಿಸದು, ಅದು ನಿಮಗೆಂದು ಆತಂಕ ತರುವ ವಿಷಯವೇ ಆಗಬಾರದು ಎಂದು ನಾನು ಹೇಳುವಾಗ ಭಗವಂತನಷ್ಟೇ ಸತ್ಯವಾದ ವಿಷಯವನ್ನು ನುಡಿಯುತ್ತಿದೇನೆ. ನೀವು ಇತಿಹಾಸವನ್ನೇ ವ್ಯಾಸಂಗ ಮಾಡುವುದಾದರೆ, ದೊಡ್ಡ ಸಮಸ್ಯೆಗಳನ್ನು

ಕುರಿತು ವ್ಯಾಸಂಗಮಾಡಿ: ಲಕ್ಷಾಂತರ ಜನ ಅಹಿಂಸಾ ಮಾರ್ಗವನ್ನು ಅನುಸರಿಸಲು ಹೇಗೆ ಸಂಕಲ್ಪ ಮಾಡಿದರು, ಹೇಗೆ ಅನುಸರಿಸಿದರು?" ಎಂಬುದನ್ನು ಕುರಿತು ವ್ಯಾಸಂಗಮಾಡಿ.

ಅರಣ್ಯದ ನಿಯಮಗಳನ್ನು ಅನುಸರಿಸುವ ಪಾಶವಿಕ ಪ್ರವೃತ್ತಿಯ ದೃಷ್ಟಿಯಿಂದ ಮಾನವನನ್ನು ಅರಿಯಲು ಎತ್ನಿಸಬೇಡಿ; ಅವನನ್ನು ಸರ್ವ ವಿಧದ ಮಹಾನುಭಾವತೆಯ ದೃಷ್ಟಿಯಿಂದ ಅರಿಯಲು ಯತ್ನಿಸಿ. ಕೋಮುವಾರು ಗಲಭೆಗಳಲ್ಲಿ ಭಾಗವಹಿಸುವವರು ಹುಚ್ಚರ ಆಸ್ಪತ್ರೆಯಲ್ಲಿ ಇರಲು ಯೋಗ್ಯರಾದವರು. ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ, ಪರರಿಗೆ ಯಾವ ಬಗೆಯ ಹಿಂಸೆಯನ್ನೂ ಮಾಡದೆ, ಆತ್ಮಾರ್ಪಣೆಮಾಡಿಕೊಳ್ಳುವ ವ್ಯಕ್ತಿಗಳ ಜೀವನವನ್ನು ಅಧ್ಯಯನ ಮಾಡಿ. ಪ್ರೇಮತತ್ತ್ವವನ್ನು ಅನುಸರಿಸಿ, ಉದಾತ್ತ ಪ್ರವೃತ್ತಿಯಿಂದ ವರ್ತಿಸುವವರ ಜೀವನವನ್ನು ಅಧ್ಯಯನ ಮಾಡಿ. ಇದೆಲ್ಲದರ ಪರಿಣಾಮವಾಗಿ, ನೀವು ಯೌವ್ವನಾ ವಸ್ಥೆಗೆ ಬರುವ ವೇಳೆಗೆ ನಿಮ್ಮ ಕುಲಧನ ಉತ್ತಮವಾಗಿರುತ್ತದೆ. ನಿಮ್ಮ ಜನಾಂಗ ನಮ್ಮ ಜನಾಂಗವನ್ನು ಆಳುತ್ತಿದೆಯೆಂಬುದು ನಿಮಗೊಂದು ಹೆಮ್ಮೆಯ ವಿಷಯವಲ್ಲ. ಏಕೆಂದರೆ, ಗುಲಾಮನೇ ಶೃಂಖಲೆಗೊಳಗಾದ ಹೊರತು ಅವನನ್ನು ಯಾರೂ ಶೃಂಖಲೆಗೊಳಪಡಿಸಲಾರರು. ಯಾವ ರಾಷ್ಟ್ರವೇ ಆಗಲಿ ತಾನೇ ದಾಸ್ಯರಾಷ್ಟ್ರವಾಗುವ ಹೊರತು ಇನ್ನೊಂದನ್ನು ದಾಸ್ಯಕ್ಕೆ ಗುರಿಮಾಡಲಾರದು.

ಇಂದು ಇಂಗ್ಲೆಂಡಿಗೂ ಭಾರತಕ್ಕೂ ಇರುವ ಸಂಬಂಧ ಅತ್ಯಂತ ಪಾಪಕರ, ಅತ್ಯಂತ ಅಸಹಜ. ನಾವು ನಮ್ಮ ಸ್ವಾತಂತ್ರ್ಯಕ್ಕೆ ಪಾತ್ರರಲ್ಲವೆ? ಅದು ನಮ್ಮ ಜನ್ಮಸಿದ್ಧ ಹಕ್ಕು. ನಾವು ಅನುಭವಿಸಿರುವ ತ್ಯಾಗ ಮತ್ತು ಕ್ಲೇಶಾನುಭವಗಳಿಂದ ಅದಕ್ಕೆ ಇಮ್ಮಡಿ ಪಾತ್ರರಾಗಿದೇವೆ. ನೀವೆಲ್ಲ ದೊಡ್ಡವರಾದ ಮೇಲೆ, ನಿಮ್ಮ ಜನಾಂಗವನ್ನು ಶೋಷಣೆಯ ಪಾಪ ವಿಮುಕ್ತವನ್ನಾಗಿಮಾಡಿ, ಅದರ ವೈಭವಕ್ಕೆ ವಿಶಿಷ್ಟಕಾಣಿಕೆ ಸಲ್ಲಿಸುವಿ ರೆಂದು ನಾನು ಅಪೇಕ್ಷಿಸುತ್ತೇನೆ. ಇದರಿಂದ ಮನುಜಕುಲದ ಪ್ರಗತಿಗೂ ನೀವು ಕಾಣಿಕೆ ನೀಡಿದಂತಾಗುತ್ತದೆ.[೪]

# ೫. ಆತ್ಮಸಾಕ್ಷೀ ಪೂರ್ವಕ ಸಮರ ವಿರೋಧಿಗಳ ಸಭೆಯಲ್ಲಿ ಮಾಡಿದ ಭಾಷಣ

[ದುಂಡು ಮೇಜಿನ ಪರಿಷತ್ತನ್ನು ಮುಗಿಸಿಕೊಂಡು ಲಂಡನ್ನಿನಿಂದ ಭಾರತಕ್ಕೆ ಹಿಂದಿರುಗುವಾಗ ಸ್ವಿಟ್ಜರ್ಲೆಂಡಿನ ಆತ್ಮಸಾಕ್ಷೀ ಪೂರ್ವಕ ಸಮರ ವಿರೋಧಿಗಳ ಸಭೆಯೊಂದರಲ್ಲಿ ಭಾಷಣಮಾಡುತ್ತಾ ಗಾಂಧೀಜೀ ತಮ್ಮ ಹೃದಯಾಂತರಾಳದ ಭಾವಗಳನ್ನು ತೋಡಿಕೊಂಡರು. “ದೇವರನ್ನು ನೀವೇಕೆ ಸತ್ಯವೆಂದು ಭಾವಿಸುವಿರಿ?” ಎಂದು ಒಬ್ಬರು ಕೇಳಿದ ಪ್ರಶ್ನೆಗೆ ಅವರು ಕೊಟ್ಟ ಉತ್ತರವಿದು.]

ನಾನು ಹುಡುಗನಾಗಿದ್ದಾಗ, ಹಿಂದೂ ಶಾಸ್ತ್ರಗಳಲ್ಲಿ ದೇವರ ಸಹಸ್ರ ನಾಮಗಳಿಂದು ಕರೆಯಲ್ಪಡುವುದನ್ನು ಪುನಶ್ಚರಣೆಮಾಡಲು ಕಲಿತು ಕೊಂಡೆ. ಆದರೆ ಈ ಒಂದು ಸಹಸ್ರನಾಮಗಳಿಗೇ ದೇವರ ಹೆಸರೆಲ್ಲ ಮುಗಿದು ಹೋಗುವುದಿಲ್ಲ. ಎಷ್ಟು ಜೀವರಾಶಿಯಿದೆಯೋ ಅಷ್ಟೂ ದೇವರ ಹೆಸರುಗಳಿವೆಯೆಂದು ನಾವು ನಂಬುತ್ತೇವೆ; ಅದು ಸತ್ಯವೆಂದು ನನ್ನ ಭಾವನೆ. ಆದುದರಿಂದಲೇ ದೇವರು ನಾಮರಹಿತ ಎನ್ನುತ್ತೇವೆ; ಹಾಗೆಯೇ ದೇವರಿಗೆ ಅನಂತ ರೂಪಗಳಿರುವುದರಿಂದ ಅವನನ್ನು ನಿರಾಕಾರ ಎನ್ನುತ್ತೇವೆ. ಅವನು ಅನಂತ ನಾಲಗೆಗಳಿಂದ ಮಾತನಾಡುವುದರಿಂದ, ಅವನನ್ನು ವಾಕ್ ರಹಿತ ಎನ್ನುತ್ತೇವೆ. ನಾನು ಇಸ್ಲಾಂ ಧರ್ಮವನ್ನು ವ್ಯಾಸಂಗ ಮಾಡಲಾರಂಭಿಸಿದ ಮೇಲೆ, ಅದರಲ್ಲಿಯೂ ದೇವರಿಗೆ ಅನೇಕ ನಾಮಗಳಿರುವುದನ್ನು ಕಂಡೆ.

‘ದೇವರು ಪ್ರೇಮಸ್ವರೂಪ’ ಎನ್ನುವವರೊಂದಿಗೆ ನಾನೂ ಅದೇ ರೀತಿ ನುಡಿಯುತ್ತೇನೆ. ಆದರೆ, ದೇವರು ಪ್ರೇಮಸ್ವರೂಪನಿದ್ದರೂ ಅವನು ಎಲ್ಲಕ್ಕಿಂತ ಮಿಗಿಲಾಗಿ ಸತ್ಯಸ್ವರೂಪ ಎಂದು ನನ್ನ ಹೃದಯಾಂತರಾಳದಲ್ಲಿ ನುಡಿಯುತ್ತದೆ. ಮಾನವ ಭಾಷೆಯಲ್ಲಿ ದೇವರ ಪೂರ್ಣ ವಿವರಣೆಯನ್ನು ಕೊಡಲು ಸಾಧ್ಯವಾಗುವುದಾದರೆ, ಅದು ದೇವರು ಸತ್ಯಸ್ವರೂಪ ಎಂಬ ಅಂತಿಮ ತೀರ್ಮಾನಕ್ಕೆ ನಾನು ಬಂದಿದೇನೆ. ಎರಡು ವರ್ಷಗಳ ಹಿಂದೆ ನಾನು ಒಂದು ಹೆಜ್ಜೆ ಮುಂದೆ ಹೋಗಿ ’ ಸತ್ಯವೇ ದೇವರು ಎಂದೆ.

'ದೇವರು ಸತ್ಯ' ಮತ್ತು 'ಸತ್ಯವೇ ದೇವರು' ಎಂಬ ಈ ಎರಡು ವಚನಗಳಿಗೂ ಇರುವ ಸೂಕ್ಷ್ಮ ವ್ಯತ್ಯಾಸ ನಿಮಗೆ ಅರಿವಾಗಬಹುದು. ಐವತ್ತು ವರ್ಷಗಳ ಹಿಂದೆ ಆರಂಭವಾಗಿ, ಅವಿಚ್ಛಿನ್ನ ಸತ್ಯಶೋಧನೆ ನಡೆಸಿದುದರ ಪರಿಣಾಮವಾಗಿ ನಾನು ಆ ತೀರ್ಮಾನಕ್ಕೆ ಬಂದೆ. ಸತ್ಯಸಾಕ್ಷಾತ್ಕಾರಕ್ಕೆ ಅತ್ಯಂತ ಸಮೀಪದ ಮಾರ್ಗ ಪ್ರೇಮದ ಮೂಲಕ ಎಂದು ನನಗೆ ಗೋಚರಿಸಿತು. ಆಂಗ್ಲ ಭಾಷೆಯಲ್ಲಿ ಪ್ರೇಮ ಶಬ್ದಕ್ಕೆ ನಾನಾರ್ಥಗಳಿರುವುದನ್ನೂ ಮನಗಂಡೆ; ಮಾನವ ಪ್ರೇಮ ಕಾಮದ ರೂಪ ಪಡೆದಾಗ ಕೀಳು ಸ್ಥಿತಿಗೆ ಬರಬಹುದು. ಪ್ರೇಮವನ್ನು ಅಹಿಂಸೆಯ ಅರ್ಥದಿಂದ ನೋಡಿದಾಗ, ಜಗತ್ತಿನಲ್ಲಿ ಅದರ ಅನುಯಾಯಿಗಳು ಬಹಳ ಕಡಮೆ ಸಂಖ್ಯೆ ಇರುವುದನ್ನೂ ಮನಗಂಡೆ. ಆದರೆ ಸತ್ಯಕ್ಕೆ ಎರಡು ಅರ್ಥವಿರುವುದನ್ನು ಎಂದೂ ಕಾಣಲಿಲ್ಲ; ನಿರೀಶ್ವರವಾದಿಗಳೂ ಸತ್ಯದ ಆವಶ್ಯಕತೆ ಬಗೆಗೆ ಆಕ್ಷೇಪಣೆಯೊಡ್ಡಲಿಲ್ಲ. ಅವರು ಸತ್ಯಶೋಧನೆ ಮಾಡಬೇಕೆನ್ನುವ ಆವೇಶದಲ್ಲಿ, ತಮ್ಮ ದೃಷ್ಟಿಪಥದಿಂದ ನ್ಯಾಯವಾಗಿಯೇ ಈಶ್ವರನ ಅಸ್ತಿತ್ವವನ್ನು ನಿರಾಕರಿಸಲು ಹಿಂದೆ ಮುಂದೆ ನೋಡಿಲ್ಲ. ಈ ಕಾರಣದಿಂದಲೇ ನಾನು ದೇವರು ಸತ್ಯ ಎನ್ನುವುದಕ್ಕೆ ಪ್ರತಿಯಾಗಿ ಸತ್ಯವೇ ದೇವರು ಎನ್ನಬೇಕೆನ್ನುತ್ತೇನೆ. ಇದರ ಜೊತೆಗೆ, ಮತ್ತೊಂದು ಮಹಾ ಆತಂಕವನ್ನೂ ಪರಿಗಣಿಸಿ; ಇದರಂತೆ ಲಕ್ಷಾಂತರ ಜನ ದೇವರ ಹೆಸರನ್ನು ಹೇಳುತ್ತಲೇ ಹೇಳಬಾರದ ಅಕೃತ್ಯಗಳನ್ನು ಎಸಗಿದ್ದಾರೆ, ವಿಜ್ಞಾನಿಗಳೂ ಸತ್ಯದ ಹೆಸರಿನಲ್ಲಿ ಅನೇಕವೇಳೆ ಅಕೃತ್ಯಗಳನ್ನು ಮಾಡಿಲ್ಲವೆಂದಲ್ಲ ನನ್ನ ವಾದ. ಹಿಂದೂ ತತ್ತ್ವಜ್ಞಾನದಲ್ಲಿ ಮತ್ತೊಂದು ಅಂಶವಿದೆ; ದೇವರೊಬ್ಬನೇ ಸತ್ಯ, ಉಳಿದುದೆಲ್ಲ ಅಸತ್ಯ. ಇದೇ ಸತ್ಯಾಂಶ ಇಸ್ಲಾಮಿನ ಕಲ್ಮಾದಲ್ಲಿಯೂ ಪ್ರಮುಖವಾಗಿ ಉದಾಹರಿಸಲ್ಪಟ್ಟಿರುವುದು ಕಂಡುಬರುತ್ತದೆ. ದೇವರೊಬ್ಬನೇ ಸತ್ಯ ಉಳಿದುದೆಲ್ಲ ಅಸತ್ಯ ಎಂಬುದು ಅಲ್ಲಿ ಸ್ಪಷ್ಟವಾಗಿ ಘೋಷಿಸಲ್ಪಟ್ಟಿರುವುದು ಕಂಡು ಬರುತ್ತದೆ. ಸತ್ಯ ಶಬ್ದಕ್ಕೆ ಸಂಸ್ಕೃತದಲ್ಲಿ ಅರ್ಥ ಇರುವುದು, ಸತ್ ಎಂದು. ಇವು ಮತ್ತು ಇತರ ಕಾರಣಗಳಿಂದ, ಸತ್ಯವೇ ದೇವರು ಎಂಬ ವಿವರಣೆ ನನಗೆ ಅತ್ಯಂತ ಸಮಾಧಾನ ಕೊಡುತ್ತದೆಂಬ ತೀರ್ಮಾನಕ್ಕೆ ನಾನು ಬಂದಿದೇನೆ. ಸತ್ಯವನ್ನು ದೇವರನ್ನಾಗಿ ಕಾಣಲು ಎತ್ನಿಸಿದಾಗ

ಪ್ರೇಮ ಎಂದರೆ, ಅಹಿಂಸೆಯೊಂದೇ ಅನಿವಾರ್ಯ ಮಾರ್ಗವೆನ್ನುವುದು ಗೋಚರಿಸುತ್ತದೆ. ಮಾರ್ಗ ಮತ್ತು ಗುರಿಗಳೆರಡೂ ಅಂತ್ಯದಲ್ಲಿ ಅಭಿನ್ನವೆಂಬುದನ್ನು ನಾನು ನಂಬುವುದರಿಂದ ದೇವರು ಪ್ರೇಮ ಸ್ವರೂಪ ಎಂದು ಕರೆಯಲು ನಾನು ಶಂಕಿಸಬಾರದು.

ಸತ್ಯವೆಂದರೆ ನಿಮ್ಮ ಅಂತರಂಗ ವಾಣಿ. ದೇವರನ್ನು ಸತ್ಯಸ್ವರೂಪದಲ್ಲಿ ಕಾಣಬೇಕೆಂದು ವೈಯಕ್ತಿಕ ಪ್ರಯತ್ನಮಾಡುವವರು ಹಲವಾರು ವ್ರತನಿಯಮಗಳನ್ನು ಅನುಸರಿಸಬೇಕು. ಸತ್ಯಸಾಗರದ ಮೇಲ್ಮೈ ಮೇಲೆ ಈಜಾಡ ಬಯಸುವವರು ಶೂನ್ಯರಾಗಬೇಕು.

“ಈ ಯುಗದ ನಾಯಕನಲ್ಲಿ ಯಾವ ಗುಣಗಳಿರಬೇಕು ತಿಳಿಸುವಿರಾ?” ಎಂದು ಒಬ್ಬ ಶಾಂತಿವಾದಿ ಪ್ರಶ್ನಿಸಿದ. “ಇಪ್ಪತ್ತುನಾಲ್ಕು ಘಂಟೆಗಳ ಪ್ರತಿಯೊಂದು ನಿಮಿಷವೂ ದೈವಸಾಕ್ಷಾತ್ಕಾರವೇ ಅದು” ಎಂದು ಉತ್ತರವಿತ್ತರು ಗಾಂಧೀಜೀ. ಮುಂದುವರಿಸಿ, “ಅವನನ್ನು ಕಾಣಲು ಮಾರ್ಗ ಅಹಿಂಸೆಯೊಂದೇ. ನಾಯಕನಾದವನು ಪೂರ್ಣ ಆತ್ಮಸ್ವಾಮ್ಯ ಸಾಧಿಸಿರಬೇಕು. ಕೋಪ, ಭಯ ಮತ್ತು ಸಟೆ ಇವುಗಳ ಲೇಶವೂ ಇರಬಾರದು. ಅಹಂಕಾರ ಶೂನ್ಯನಾಗಬೇಕು. ಆಹಾರದಿಂದಾಗಲೀ ಲೈಂಗಿಕ ಸಂಬಂಧದಿಂದಾಗಲೀ ಭೋಗಪಡಬಾರದು. ಇದೊಂದು ಬಗೆಯ ಶುದ್ಧಿಕ್ರಿಯೆ. ಇದರಿಂದ ಸತ್ತ್ವ ಜನಿಸುತ್ತದೆ. ಅದು ನಿನ್ನದಲ್ಲ, ಭಗವಂತನದು.”[೫]

## ೬. ಹರಿಜನ ಸಮಸ್ಯೆ ಪರಿಹಾರಕ್ಕಾಗಿ ಉಪವಾಸ ಆರಂಭ ಮಾಡುವ ಮುನ್ನ ಕೊಟ್ಟ ಹೇಳಿಕೆ.

[೧೯೩೩ ರ ಮೇ ೮ ನೆಯ ತಾರೀಖಿನಂದು ಹರಿಜನ ಸಮಸ್ಯೆ ಪರಿಹಾರಾರ್ಥವಾಗಿ ಗಾಂಧೀಜೀ, ಇಪ್ಪತ್ತೊಂದು ದಿವಸಗಳ ಉಪವಾಸ ಆರಂಭ ಮಾಡುವ ಕೆಲವು ಗಂಟೆಗಳ ಮುನ್ನ ಈ ಕೆಳಗಿನ ಹೇಳಿಕೆಯನ್ನಿತ್ತರು.]

ಸತ್ಯಸ್ವರೂಪಿಯಾದ ಭಗವಂತ ನನ್ನನ್ನು ಈಡುಮಾಡಿರುವ ಈ ಮಹಾಪರೀಕ್ಷೆಗೆ, ದಿನ ಕಳೆದಂತೆ ಹೊಸ ಹೊಸ ಸಮರ್ಥನೆ ಕಂಡುಬರು

ತ್ತಿದೆ. ಉಪವಾಸವೇ ಇಲ್ಲದಿದ್ದರೆ, ಈ ಅಂಶಗಳು ನನ್ನನ್ನು ಸತ್ತ್ವ ಹೀನನನ್ನಾಗಿ ಮಾಡುತ್ತಿದ್ದವು. ಇದರಿಂದ ಧ್ಯೇಯಗಳ ಮೇಲೆ ಏನೇ ಪರಿಣಾಮವಾಗಲಿ, ನನಗಂತೂ ಒಂದು ವರಪ್ರದಾನವಾದಂತಿದೆ. ಉಪ ವಾಸವನ್ನು ಮುಗಿಸಿ ನಾನು ಬದುಕುವೆನೋ ಇಲ್ಲವೋ ಎಂಬುದು ಒಂದು ಕ್ಷಣವೂ ನನ್ನ ಚಿಂತನೆಯಲ್ಲಿಲ್ಲ. ಉಪವಾಸವನ್ನೇ ಮಾಡದಿದ್ದರೆ, ನಾನು ಹರಿಜನರಿಗೆ ಸಲ್ಲಿಸಬಹುದಾದ ಎಲ್ಲ ಸೇವೆಗೂ ಅಸಮರ್ಥನಾಗುತ್ತಿದ್ದೆನೋ ಏನೋ; ಅಷ್ಟೇ ಏಕೆ, ಎಲ್ಲ ಬಗೆಯ ಸೇವೆಗೂ ಅಸಮರ್ಥನಾಗುತ್ತಿದ್ದೆನೋ ಏನೋ. ಉಪವಾಸವನ್ನು ನಿಲ್ಲಿಸಬೇಕೆಂದು ಒತ್ತಾಯ ಮಾಡಿ ನನಗೆ ತಾರುಗಳ ಮೂಲಕ ಮೊರೆಯಿಟ್ಟಿರುವ ಗೆಳೆಯರು, ನನ್ನ ರೀತಿಯಲ್ಲಿ ಬೆಳವಣಿಗೆ ಹೊಂದಿದವರಿಗೆ ಉಪವಾಸಗಳು ಅನಿವಾರ್ಯ ಎಂಬ ಅಂಶವನ್ನು ಅರಿತುಕೊಳ್ಳುವರೆಂದು ನಾನು ನಂಬಿದ್ದೇನೆ. ನನ್ನ ಉಪವಾಸ ಭಗವಂತನ ಕರೆಯಾಗಿತ್ತು ಎಂಬ ನನ್ನ ನಿಲುವಿನಿಂದ ಭಿನ್ನವಾದ ವಾದವಿದೆಂದು ನಾನು ಹೇಳಬಯಸುತ್ತೇನೆ....

ಹರಿಜನ ಸಂಘದವರು ನನಗೆ ಒಂದು ತಾರನ್ನು ಕಳುಹಿಸಿ, ನನ್ನ ಉಪವಾಸ ಅನಗತ್ಯವಾಗಿತ್ತೆಂದೂ, ಅವರು ಸವರ್ಣ ಹಿಂದೂಗಳಿಂದ ನೆರವನ್ನು ಅಪೇಕ್ಷಿಸುತ್ತಿಲ್ಲವೆಂದೂ ತಿಳಿಸಿದ್ದಾರೆ. ಸಂಘದ ದೃಷ್ಟಿಯಿಂದ ಅದೇನೋ ಸರಿಯೆ. ಆದರೆ, ನನ್ನ ಉಪವಾಸದ ಬಗೆಗೆ ಒಂದು ವಿಷಯ ಮಾತ್ರ ಸ್ಪಷ್ಟವಾಗಿ ಅರಿವಾಗಬೇಕು; ಈ ಉಪವಾಸ ಹರಿಜನರಿಗೆ ನೆರ ವನ್ನು ನೀಡುವುದಕ್ಕಂತೂ ಅಲ್ಲ; ಅದು ನನ್ನ ಮತ್ತು ಸಹೋದ್ಯೋಗಿ ಗಳ ಶುದ್ಧ್ಯರ್ಥವಾಗಿ. ಹರಿಜನ ಸೇವೆ. ಸವರ್ಣ. ಹಿಂದೂಗಳು ಎಸಗ ಬೇಕಾದ ಅಗತ್ಯ ಕರ್ಮ; ತಮ್ಮ ಸಹೋದರರಿಗೆ ತಾವು ಎಸಗಿದ ಪಾತಕಗಳ ಶುದ್ಧ್ಯರ್ಥವಾಗಿ ಮಾಡಲೇ ಬೇಕಾದ ಪ್ರಾಯಶ್ಚಿತ್ತ ಕರ್ಮ. ಸನಾತನಿಗಳು ಈ ಉಪವಾಸದಲ್ಲಿ ಹೊಸ ರೀತಿಯ ಬಲಾತ್ಕಾರವನ್ನು ಕಾಣುತ್ತಿದ್ದಾರೆ. ಪ್ರತಿಯೊಂದು ದೇವಾಲಯವೂ ಹರಿಜನ ಪ್ರವೇಶಕ್ಕೆ ತೆರೆಯಲ್ಪಟ್ಟರೂ, ಅಸ್ಪೃಶ್ಯತೆ ಪೂರ್ಣವಾಗಿ ತೊಡೆದುಹಾಕಲ್ಪಟ್ಟರೂ ಮೂರು ವಾರಗಳ ಪೂರ್ಣ ಕಾಲ ಮುಗಿಯುವವರೆಗೂ ಉಪವಾಸ ನಿಲ್ಲಿಸ ಲ್ಪಡುವುದಿಲ್ಲವೆಂಬ ಅಂಶ ಅವರಿಗೆ ಗೋಚರಿಸಿದ ಮೇಲಾದರೂ ನನ್ನ

ಉಪವಾಸವನ್ನು ಬಲಾತ್ಕಾರವೆಂದು ಭಾವಿಸುವುದು ಸರಿಯಲ್ಲವೆಂದು ಅವರು ಒಪ್ಪಿಕೊಂಡಾರು.

ನಾನು ಕೈಗೊಳ್ಳಲಿರುವ ಉಪವಾಸ ಅಹಿತ ಭಾವನೆಯನ್ನು ನಿರ್ಮೂಲ ಮಾಡುವ ಉದ್ದೇಶದಿಂದ ಕೂಡಿದೆ; ಇದು ಪೂರ್ಣ ನೈತಿಕ ಸ್ವರೂಪದ್ದು, ಪೂರ್ಣ ನೀತಿವಂತ ವ್ಯಕ್ತಿಗಳಿಂದಲೇ ಆಚರಿಸಲ್ಪಡತಕ್ಕದು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಮಹಾ ಸತ್ತ್ವಪರೀಕ್ಷೆಯನ್ನು ಭಗವಂತ ಹರಸಲಿ, ಧ್ಯೇಯವನ್ನು ಪೂರ್ಣಗೊಳಿಸಲಿ.

## ೭. ಎರವಡಾ ಸೆರೆಮನೆಯಿಂದ ಬಿಡುಗಡೆಯಾದ ತರುವಾಯ ಇತ್ತ ಹೇಳಿಕೆ

[ಮೇ ಎರಡು ಸೋಮವಾರ ಮಧ್ಯಾಹ್ನ ೧೨ಕ್ಕೆ ಸರಿಯಾಗಿ ಗಾಂಧೀಜೀ ಉಪವಾಸವನ್ನು ಆರಂಭಿಸಿದರು. ಆದರೆ ಅದೇ ದಿವಸ ರಾತ್ರಿ ೯-೩೦ಕ್ಕೆ ಭಾರತ ಸರಕಾರ ಒಂದು ಆಜ್ಞೆಯನ್ನು ಹೊರಡಿಸಿ, ಅವರನ್ನು ಬಿಡುಗಡೆ ಮಾಡಿರುವ ನಿರ್ಧಾರವನ್ನು ತಿಳಿಸಿತು. ಗಾಂಧೀಜೀ, ಕಾಂಗ್ರೆಸ್ ಅಧ್ಯಕ್ಷ ಶ್ರೀ ಎಂ. ಎಸ್. ಅಣೆ ಅವರ ಒಪ್ಪಿಗೆ ಪಡೆದು ಈ ಕೆಳಗಿನ ಹೇಳಿಕೆಯನ್ನು ಪ್ರಕಟಗೊಳಿಸಿದರು.]

ನಾನು ಈ ಬಿಡುಗಡೆಯಿಂದ ಸ್ವಲ್ಪವೂ ಹರ್ಷಿತನಾಗಿಲ್ಲ. ಇದರಿಂದ ದೊರೆತ ಅವಕಾಶವನ್ನು ಸವಿನಯ ಶಾಸನಭಂಗ ಚಳುವಳಿಯನ್ನು ಮುಂದುವರಿಸುವುದಕ್ಕಾಗಲೀ ಅಥವಾ ಅದನ್ನು ನಿರ್ದೇಶನ ಮಾಡುವುದಕ್ಕಾಗಲೀ ಹೇಗೆ ಉಪಯೋಗಿಸಿಕೊಳ್ಳಲಿ? ಸತ್ಯಾನ್ವೇಷಕನೂ ಗೌರವ ಶೀಲನೂ ಆದ ನನ್ನ ಮೇಲೆ ಇದು ಪ್ರಚಂಡ ಹೊರೆಯನ್ನೂ ಮತ್ತು ಪ್ರಯಾಸವನ್ನೂ ಹೇರಿದೆ. ಈ ಉಪವಾಸ ಮುಂದುವರಿಯಲೇ ಬೇಕು. ನಾನು ಯಾವ ವಿಷಯಕ್ಕಾದರೂ ಉದ್ರೇಕಗೊಳ್ಳಬಾರದೆಂದೂ ಯಾವುದೇ ಬಗೆಯ ವಿವಾದದಲ್ಲಿ ಭಾಗವಹಿಸಬಾರದೆಂದೂ ಆಶಿಸಿದ್ದೆ; ಅದೇ ರೀತಿ ಈಗಲೂ ಆಶಿಸುತ್ತಿದ್ದೇನೆ. ಹರಿಜನ ಸೇವೆಗೆ ಸಂಬಂಧಿಸಿದ

ಯಾವುದೇ ವಿಷಯದಲ್ಲಿ ನಾನು ಚಿಂತನೆ ಮಾಡಿದರೂ ಉಪವಾಸದ ಉದ್ದೇಶ ವಿಫಲವಾದಂತೆಯೇ ಆಗುತ್ತದೆ. ಈಗ ಹೇಗಿದ್ದರೂ ಬಂಧ ಮುಕ್ತನಾಗಿರುವುದರಿಂದ ಸವಿನಯ ಶಾಸನೋಲ್ಲಂಘನ ಚಳುವಳಿ ಬಗೆಗೆ ಪರಿಶೀಲಿಸಲು ನನ್ನ ಶಕ್ತಿಯಲ್ಲಿ ಅಲ್ಪಸ್ವಲ್ಪವನ್ನಾದರೂ ವಿನಿಯೋಗಿಸುವುದು ಅನಿವಾರ್ಯ.

ಈ ಸಮಯದಲ್ಲಿ, ಚಳುವಳಿಯ ಬಗ್ಗೆ ನನ್ನ ಅಭಿಪ್ರಾಯಗಳು ಬದಲಾಯಿಸಿಲ್ಲವೆಂದು ಮಾತ್ರ ಹೇಳಬಲ್ಲೆ. ಅಸಂಖ್ಯ ಮಂದಿ ಶಾಸನೋಲ್ಲಂಘಕರು ತೋರಿಸಿರುವ ಧೈರ್ಯ ಮತ್ತು ಆತ್ಮತ್ಯಾಗಗಳ ಬಗೆಗೆ ನನ್ನ ಪೂರ್ಣ ಶ್ಲಾಘನೆ ಸಲ್ಲುತ್ತದೆ. ಇದನ್ನು ಹೇಳಿದರೂ, ಚಳುವಳಿ ನಡೆದ ಗೋಪ್ಯ ರೀತಿಯಿಂದ ಅದರ ಯಶಸ್ವಿಗೆ ಧಕ್ಕೆ ತಗುಲುವುದೆಂದು ಹೇಳದಿರಲಾರೆ. ಆದರೆ ದೇಶದಾದ್ಯಂತ ಚಳುವಳಿಯನ್ನು ನಡೆಸುತ್ತಿರುವವರು ಅದು ಮುಂದುವರಿಯಲೇ ಬೇಕೆಂದು ಅಪೇಕ್ಷೆ ಮಾಡುವುದಾದರೆ, ಅವರು ಎಲ್ಲ ಗೋಪ್ಯ ರೀತಿಯ ವಿಧಾನವನ್ನೂ ತ್ಯಜಿಸಬೇಕೆಂದು ನನ್ನ ಬಿನ್ನಹ. ಹಾಗೆ ಮಾಡುವುದರಿಂದ ಒಬ್ಬ ಸವಿನಯ ಶಾಸನೋಲ್ಲಂಘಕ ದೊರೆಯದಂತಾದರೂ ನಾನು ಚಿಂತಿಸುವುದಿಲ್ಲ.

ಸಾಮಾನ್ಯ ಜನ ಭಯಭರಿತರಾಗಿದಾರೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಸರಕಾರದ ಸುಗ್ರೀವಾಜ್ಞೆಗಳಿಂದ ಅವರು ಧೈರ್ಯಹೀನರಾಗಿದ್ದಾರೆ. ಅವರು ಧೃತಿಗೆಟ್ಟಿರುವುದರ ಪರಿಣಾಮವಾಗಿಯೇ ಗೋಪ್ಯ ವಿಧಾನಗಳಲ್ಲಿ ತೊಡಗಲು ಆರಂಭಿಸಿದಾರೆಂದು ನಾನು ಭಾವಿಸುತ್ತೇನೆ. ಸವಿನಯ ಶಾಸನಭಂಗ ಚಳುವಳಿ, ಅದರಲ್ಲಿ ಭಾಗವಹಿಸುವ ಸ್ತ್ರೀಪುರುಷರ ಗುಣವನ್ನವಲಂಬಿಸಿದೆಯೇ ಹೊರತು ಸಂಖ್ಯೆಯನ್ನಲ್ಲ. ನಾನು ಚಳುವಳಿಯ ನಾಯಕನಾಗಿರುವವರೆಗೂ ಸಂಖ್ಯೆಯನ್ನು ಪರಿಗಣಿಸದೆ ಗುಣಕ್ಕೇ ಪ್ರಾಧಾನತೆ ಕೊಡುತ್ತೇನೆ. ಇದನ್ನು ಸಾಧಿಸುವುದಾದರೆ, ಚಳುವಳಿಯ ಅಂತಸ್ತು ತತ್‌ಕ್ಷಣ ಮೇಲಕ್ಕೆ ಏರುತ್ತದೆ.

ವಾಸ್ತವ ಚಳುವಳಿಗೆ ಸಂಬಂಧಿಸಿದಂತೆ ಏನನ್ನೂ ಹೇಳಲಾರೆ. ಈಗ ವ್ಯಕ್ತಪಡಿಸಿರುವ ಚಿಂತನೆಗಳನ್ನು ಈ ಎಲ್ಲ ತಿಂಗಳೂ ನನ್ನಲ್ಲಿಯೇ ಇಟ್ಟುಕೊಂಡಿದ್ದೆ. ನಾನು ಅಪೇಕ್ಷಿಸಲಿ, ಇಲ್ಲದಿರಲಿ, ಎಲ್ಲ ಸವಿನಯ

ಶಾಸನೋಲ್ಲಂಘಕರು ಇನ್ನು ಮೂರು ವಾರಗಳ ಪರ್ಯಂತ ಪ್ರಚಂಡ ಸಂದಿಗ್ಧ ಪರಿಸ್ಥಿತಿಯಲ್ಲಿರುವರು. ಕಾಂಗ್ರೆಸ್ ಅಧ್ಯಕ್ಷರು ಚಳುವಳಿಯನ್ನು ಒಂದು ತಿಂಗಳು ಅಥವಾ ಆರು ವಾರಗಳ ಕಾಲ ನಿಲ್ಲಿಸಲಾಗಿದೆಯೆಂದು ಹೇಳಿಕೆಯನ್ನಿತ್ತರೆ, ಒಳ್ಳೆಯದೇ ಆದೀತು.

ಈಗ ಸರಕಾರವನ್ನು ಕುರಿತು ಒಂದು ಪ್ರಾರ್ಥನೆ. ಈ ನಾಡಿನಲ್ಲಿ ನಿಜವಾದ ಶಾಂತಿ ಇರಬೇಕೆಂಬುದು ಅದರ ಇಚ್ಛೆಯಾದರೆ, ರಾಜ್ಯದಲ್ಲಿ ಆಡಳಿತವೆನ್ನುವುದೇ ಇಲ್ಲವೆಂದು ಭಾವಿಸುವುದಾದರೆ, ಚಳುವಳಿಯನ್ನು ನಿಲ್ಲಿಸಿರುವ ಈ ಅಭಿಸಂಧಿಯನ್ನು ಉಪಯೋಗಿಸಿಕೊಂಡು ಯಾವ ಷರತ್ತೂ ಇಲ್ಲದೆ ಎಲ್ಲ ಸವಿನಯ ಶಾಸನೋಲ್ಲಂಘಕರನ್ನೂ ಬಿಡುಗಡೆ ಮಾಡಬೇಕು. ನಾನು ಈ ಅಗ್ನಿಪರೀಕ್ಷೆಯಿಂದ ಪಾರಾಗಿ ಬದುಕಿದರೆ, ಸರಕಾರದ ಅನುಕೂಲಕ್ಕಾಗಿಯೇ ಪರಿಸ್ಥಿತಿಯನ್ನು ಪರಿಶೀಲನೆ ಮಾಡುವ ಅವಕಾಶ ನನಗೆ ದೊರೆತೀತು. ಆಗ, ನಾನು ಇಂಗ್ಲೆಂಡಿನಿಂದ ಭಾರತಕ್ಕೆ ಹಿಂತಿರುಗಿ ಬಂದಮೇಲೆ ಯಾವ ಸ್ಥಿತಿಯಲ್ಲಿ ಹಸ್ತಕ್ಷೇಪಕ್ಕೆ ಒಳಗಾದೆನೋ ಅಲ್ಲಿಂದಲೇ ಮುಂದುವರಿಸುವೆನು.

ನನ್ನ ಪ್ರಯತ್ನದ ಫಲವಾಗಿ ಸರಕಾರಕ್ಕೂ ಕಾಂಗ್ರೆಸ್ಸಿಗೂ ಒಂದು ಒಪ್ಪಂದ ಏರ್ಪಡದೆ ಹೋದರೆ, ಶಾಸನೋಲ್ಲಂಘನ ಚಳುವಳಿಯು ಪುನಃ ಆರಂಭಿಸಲ್ಪಡುವುದು. ಆಗ, ಸರಕಾರವೂ ಇಷ್ಟಪಟ್ಟರೆ, ತನ್ನ ವಿಶೇಷಾಜ್ಞೆಗಳ ಆಡಳಿತವನ್ನು ಪುನಃ ಆರಂಭಿಸಬಹುದು.

ಸರಕಾರಕ್ಕೆ ನಿಜವಾಗಿಯೂ ಮನಸ್ಸಿರುವುದಾದರೆ, ಯಾವುದಾದರೂ ಕಾರ್ಯವಿಧಾನವನ್ನು ಕಂಡುಹಿಡಿಯುವ ಬಗೆಗೆ ನನಗೆ ಅನುಮಾನವೇ ಇಲ್ಲ. ಆದರೆ, ಇಷ್ಟೊಂದು ಮಂದಿ ಸವಿನಯ ಶಾಸನೋಲ್ಲಂಘಕರು ಸೆರೆಮನೆಯಲ್ಲಿರುವಾಗ ಚಳುವಳಿಯನ್ನು ನಿಲ್ಲಿಸಲು ಸಾಧ್ಯವಿಲ್ಲವೆಂಬ ವಿಷಯದಲ್ಲಿ ನಾನು ಖಚಿತ ಅಭಿಪ್ರಾಯ ಹೊಂದಿದೇನೆ. ಸರದಾರ್ ವಲ್ಲಭಭಾಯಿ, ಅಬ್ದುಲ್ ಗಫಾರ್‌ಖಾನ್, ಪಂಡಿತ ಜವಾಹರಲಾಲ್ ನೆಹರೂ ಮೊದಲಾದವರು ಜೀವಂತ ಸಮಾಧಿಯಾಗಿರುವವರೆಗೂ ಯಾವ ಒಪ್ಪಂದವೂ ಆಗಲಾರದು. ವಾಸ್ತವವಾಗಿ ಸೆರೆಮನೆಯ ಹೊರಗಡೆ ಇರುವ ಯಾರಿಗೂ ಚಳುವಳಿಯನ್ನು ನಿಲ್ಲಿಸುವ ಅಧಿಕಾರವಿಲ್ಲ. ನಾನು

ಬಂಧನಕ್ಕೊಳಗಾದ ಸಮಯದಲ್ಲಿ ಯಾವ ಕಾರ್ಯಕಾರೀ ಸಮಿತಿ ಇತ್ತೋ ಅದಕ್ಕೆ ಮಾತ್ರ ಆದು ಸಾಧ್ಯ.

ಸವಿನಯ ಶಾಸನೋಲ್ಲಂಘನೆಯನ್ನು ಕುರಿತು ಇನ್ನೇನು ಹೆಚ್ಚಿಗೆ ಹೇಳಲು ನಾನು ಬಯಸುವುದಿಲ್ಲ. ಬಹುಶಃ ಈಗಾಗಲೇ ನಾನು ಬಹಳ ಹೇಳಿದೇನೇನೋ. ಆದರೂ ಇನ್ನೇನನ್ನಾದರೂ ಹೇಳಬೇಕಾದರೆ ಅದನ್ನು ನನ್ನಲ್ಲಿ ಶಕ್ತಿ ಇರುವುದರೊಳಗೆ ಹೇಳುತ್ತೇನೆ. ಆದುದರಿಂದ ಪತ್ರಿಕಾ ಪ್ರತಿನಿಧಿಗಳು ನನ್ನನ್ನು ಇನ್ನು ಹೆಚ್ಚು ಪೀಡಿಸಬಾರದೆಂದು ಬೇಡುತ್ತೇನೆ; ಹಾಗೆಯೇ ಭೆಟ್ಟಿಗೆ ಬರುವವರೂ ಸಂಯಮದಿಂದ ವರ್ತಿಸಬೇಕೆಂದು ಬೇಡುತ್ತೇನೆ. ನಾನಿನ್ನೂ ಸೆರೆಮನೆಯಲ್ಲಿದ್ದಂತೆಯೇ ಎಂಬುದಾಗಿ ಅವರೆಲ್ಲರೂ ಭಾವಿಸಲಿ. ರಾಜಕೀಯ ಮಾತುಕತೆಯನ್ನೇ ಆಗಲೀ, ಬೇರಾವ ಬಗೆಯ ಮಾತುಕತೆಯನ್ನೇ ಆಗಲೀ ನಡೆಸಲು ನಾನು ಶಕ್ತನಾಗಿರುವುದಿಲ್ಲ. ನಾನು ಶಾಂತಚಿತ್ತನಾಗಿರಲು ಬಯಸುತ್ತೇನೆ. ಸರಕಾರ ನನ್ನನ್ನು ಬಿಡುಗಡೆ ಮಾಡಿದ್ದರೂ ನಾನು ಆದನ್ನು ದುರುಪಯೋಗ ಪಡಿಸುವುದಿಲ್ಲವೆಂಬ ಭರವಸೆಯನ್ನು ನೀಡ ಬಯಸುತ್ತೇನೆ. ಈ ಪರೀಕ್ಷೆಯಲ್ಲಿ ನಾನು ಸುರಕ್ಷಿತವಾಗಿ ಪಾರಾಗಿ ಬಂದರೆ, ಆಗ ರಾಜಕೀಯ ವಾತಾವರಣ ಇಂದಿನಷ್ಟೇ ಮಬ್ಬಿನಿಂದ ಕೂಡಿದ್ದರೆ, ಸವಿನಯ ಶಾಸನೋಲ್ಲಂಘನೆಯನ್ನು ಮುಂದುವರಿಸುವ ಬಗೆಗೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಯಾವೊಂದು ಅಭಿಕ್ರಮವನ್ನೂ ತೆಗೆದುಕೊಳ್ಳದೆ, ಸರಕಾರ ನನ್ನನ್ನು ಎರವಡಾ ಸೆರೆಮನೆಗೆ ಕೊಂಡೊಯ್ಯಬೇಕೆಂದು ಅದಕ್ಕೆ ಆಹ್ವಾನವೀಯುತ್ತೇನೆ; ಈಗ ನಾನು ತ್ಯಜಿಸಿ ಬಂದಿದೇನೋ ಎಂಬಂತೆ ಕಾಣುವ ಸಂಗಾತಿಗಳ ಜೊತೆ ಸೇರುತ್ತೇನೆ ಅಲ್ಲಿ.[೭]

## ೮. ಸಾಬರಮತಿ ಆಶ್ರಮವನ್ನು ವಿಸರ್ಜಿಸುವ ಸಂದರ್ಭದಲ್ಲಿ ಇತ್ತ ಹೇಳಿಕೆ

[ಗಾಂಧೀಜೀ ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಹಿಂದಿರುಗಿ ಬಂದ ಮೇಲೆ, ಸ್ಥಾಪಿಸಿದ ಮೊದಲನೆಯ ಆಶ್ರಮ, ಸಾಬರಮತಿ. ಹದಿನೆಂಟು ವರ್ಷಗಳ ತರುವಾಯ ೧೯೩೩ರ ಜುಲೈ ೨೬ರಂದು ಅದನ್ನು ವಿಸರ್ಜಿಸುವ ನಿರ್ಧಾರವನ್ನು ಅವರು ಕೈಗೊಂಡರು. “ಆಶ್ರಮದ ವಿಸರ್ಜನೆಯೆಂದರೆ, ಅದರ ನಿವಾಸಿಗಳು ಸಂಚಾರೀ ಆಶ್ರಮವಾಗುವುದೆಂದು ಅರ್ಥ. ಅವರ ಪೈಕಿ ಸ್ತ್ರೀಪುರುಷರೆಲ್ಲ, ಸೆರೆಮನೆಯಲ್ಲಿರಲಿ, ಹೊರಗಡೆ ಇರಲಿ, ಎಲ್ಲಿದ್ದರೂ ಆಶ್ರಮದ ಆದರ್ಶಗಳನ್ನು ಪಾಲಿಸುವ ಹೊಣೆಯನ್ನು ಹೊತ್ತಿದ್ದಾರೆ”, ಎಂದು ಅವರು ಬರೆದರು. ಹಾಗೆಯೇ ಜೊಂಬಾಯಿ ಸರಕಾರಕ್ಕೆ ಒಂದು ಪತ್ರ ಬರೆದು, ಆಶ್ರಮವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಅದರ ಇಚ್ಛೆಗೆ ಬಂದಂತೆ ಮಾಡಬಹುದೆಂದೂ ತಿಳಿಸಿದರು :]

“ಆಶ್ರಮದಲ್ಲಿ ಇಂದು ೧೦೭ ಮಂದಿ ಇದ್ದಾರೆ; ಪುರುಷರು ೪೨, ಸ್ತ್ರೀಯರು ೩೧, ಬಾಲಕರು ೧೨, ಬಾಲಕಿಯರು ೨೨. ಸೆರೆಮನೆಯಲ್ಲಿರುವವರ ಮತ್ತು ಆಶ್ರಮದ ಹೊರಗಡೆ ಬೇರೆ ಕಾರ್ಯದಲ್ಲಿ ತೊಡಗಿರುವವರ ಸಂಖ್ಯೆ ಇದರಲ್ಲಿ ಸೇರಿಲ್ಲ. ಆಶ್ರಮದಲ್ಲಿ ಈವರೆಗೆ ೧೦೦೦ ಮಂದಿಗೆ ಖಾದೀ ತಯಾರಿಕೆಯಲ್ಲಿ ಶಿಕ್ಷಣ ಕೊಡಲಾಗಿದೆ. ನನಗೆ ತಿಳಿದಿರುವಂತೆ ಇವರೆಲ್ಲ ಉಪಯುಕ್ತ ರಚನಾತ್ಮಕ ಕಾರ್ಯದಲ್ಲಿ ನಿರತರಾಗಿ ಗೌರವದಿಂದ ಜೀವನ ನಡೆಸುತ್ತಿದಾರೆ. ಆಶ್ರಮವು ಸರಕಾರದ ನಿಬಂಧನೆಯ ಪ್ರಕಾರ ದಾಖಲಾಗಿದೆ. ಅದರ ಅಧೀನದಲ್ಲಿರುವ ನಿಧಿ ಸ್ಪಷ್ಟವಾದ ಉದ್ದೇಶಗಳಿಗೆ ಅಂಕಿತವಾಗಿದೆ. ಸ್ಥಿರ ಆಸ್ತಿಯ ಬೆಲೆ, ರೂ. ೩,೫೦,೦೦೦ಕ್ಕೆ ಮೀರಿದ್ದರೆ, ಚರ ಆಸ್ತಿ ಮತ್ತು ನಗದು ಹಣ ರೂ. ೩,೦೦,೦೦೦ಕ್ಕೂ ಮಿಕ್ಕಿದೆ. ಆಶ್ರಮವು ರಾಜಕಾರಣದಲ್ಲಿ ಭಾಗವಹಿಸುವುದಿಲ್ಲ.”

ಆಶ್ರಮವು, ಸತ್ಯಾಗ್ರಹದ ಚಳುವಳಿಗೆ ಯಾವ ವಿಧದಲ್ಲಿಯೂ ಸಂಬಂಧಿಸದಂತೆ, ನಿರುಪಾಧಿಕವಾಗಿ ರಚನಾತ್ಮಕ ಕಾರ್ಯವನ್ನೂ ನಡೆಸುವುದು ಸಾಧ್ಯವಿಲ್ಲವೆಂಬ ಅಂಶ ಗಾಂಧೀಜೀಗೆ ಅರಿವಾಯಿತು. “ಇಂಥ ಸ್ಥಿತಿಯನ್ನು ಅಂಗೀಕರಿಸುವುದು ಆಶ್ರಮದ ತತ್ತ್ವವನ್ನೇ ಬಿಟ್ಟಂತೆ.

ಆಶ್ರಮದ ಚಟುವಟಿಕೆಗಳಿಗೂ ಅದರ ವೈಯಕ್ತಿಕ ಸದಸ್ಯರು ಸವಿನಯ ಶಾಸನಭಂಗ ಚಳುವಳಿಯಲ್ಲಿ ಭಾಗವಹಿಸುವುದಕ್ಕೂ ಸಾಧ್ಯವಿದೆಯೆಂದು ಇಲ್ಲಿಯ ತನಕ ನನ್ನ ನಂಬಿಕೆಯಾಗಿತ್ತು. ಕಾಂಗ್ರೆಸ್ಸಿನ ಗುರಿ, ಕ್ಷಿಪ್ರದಲ್ಲೇ ಈಡೇರದಿದ್ದರೂ ಸರಕಾರಕ್ಕೂ ಕಾಂಗ್ರೆಸ್ಸಿಗೂ ಗೌರವಯುತ ಶಾಂತಿ ಏರ್ಪಡುವುದೆಂದು ನಾನು ನಂಬಿದ್ದೆ. ಆದರೆ, ಕಾಂಗ್ರೆಸ್, ನನ್ನ ಮೂಲಕ ವೈಸ್‌ರಾಯರೊಡನೆ ನಡೆಸಿದ ಪ್ರಾಮಾಣಿಕ ಸಂಧಾನ ದುರದೃಷ್ಟವಶಾತ್ ತಿರಸ್ಕೃತವಾಗಿರುವುದರಿಂದ ಸರಕಾರಕ್ಕೆ ಶಾಂತಿಯು ಅಪೇಕ್ಷೆಯಿಲ್ಲವೆಂಬುದು ಸ್ಪಷ್ಟವಾಗುತ್ತದೆ. ರಾಷ್ಟ್ರದ ಅತ್ಯಂತ ದೊಡ್ಡದೂ ಜನಪ್ರಿಯವೂ ಆದ ರಾಜಕೀಯ ಸಂಸ್ಥೆ ತನಗೆ ಶರಣು ಬರಬೇಕೆಂದು ಅದರ ಇಚ್ಛೆ. ಸದ್ಯದಲ್ಲಿ ಕಾಂಗ್ರೆಸ್ ತನ್ನ ಮಾರ್ಗದರ್ಶಕರಲ್ಲಿ ಇಟ್ಟಿರುವ ನಂಬಿಕೆ ಮುಂದುವರಿಯುವವರೆಗೂ ಇದು ಸಾಧ್ಯವಿಲ್ಲ.

ಈ ಚಳುವಳಿಯು ಕರ್ತೃವಾದ ನನ್ನಿಂದ ಅತ್ಯಂತ ದೊಡ್ಡ ತ್ಯಾಗವನ್ನು ನಿರೀಕ್ಷಿಸುವಂತೆ ಕಾಣುತ್ತದೆ. ಆದುದರಿಂದ, ಯಾವುದು ನನಗೆ ಅತ್ಯಂತ ಪ್ರಿಯವೋ ಸಮೀಪವೋ, ಯಾವುದನ್ನು ಬೆಳೆಸಲು ಹದಿನೆಂಟು ವರ್ಷಗಳಿಂದ ನಾನೂ ನನ್ನ ಇತರ ಸಹೋದ್ಯೋಗಿಗಳೂ ಅನಂತ ತಾಳ್ಮೆಯಿಂದ ಮತ್ತು ಎಚ್ಚರಿಕೆಯಿಂದ ದುಡಿದಿದೇವೋ, ಅದನ್ನೇ ತ್ಯಾಗಮಾಡುವುದು ಯುಕ್ತ. ಆಶ್ರಮದ ಪ್ರತಿಯೊಂದು ಪಶುವೂ ಪ್ರತಿಯೊಂದು ವೃಕ್ಷವೂ ತನ್ನ ಇತಿಹಾಸವನ್ನೂ ಮತ್ತು ಪವಿತ್ರ ಸಂಬಂಧವನ್ನೂ ಹೊಂದಿದೆ. ಆಶ್ರಮದ ಸಕಲವೂ ಒಂದೇ ಕುಟುಂಬಕ್ಕೆ ಸೇರಿದುವು. ಒಂದು ಕಾಲದಲ್ಲಿ ಬಂಜರಾಗಿದ್ದ ಭೂಮಿ, ಮಾನವ ಪ್ರಯತ್ನದ ಫಲವಾಗಿ ಇಂದು ಒಂದು ಆದರ್ಶ ನಂದನವಾಗಿದೆ. ಆದುದರಿಂದ ಈ ಕುಟುಂಬವನ್ನು ಪರಿಚ್ಛಿನ್ನಗೊಳಿಸಿ, ಕಾರ್ಯಚಟುವಟಿಕೆಗಳನ್ನೆಲ್ಲ ನಿಲ್ಲಿಸುವುದು ನನಗೆ ದುಃಖವಿಲ್ಲದೆ ಇಲ್ಲ. ನಾನು ಪ್ರಾರ್ಥನಾಪರನಾಗಿ ಆಶ್ರಮವಾಸಿಗಳೊಂದಿಗೆ ದೀರ್ಘಕಾಲ ವಿಚಾರ ಮಾಡಿದೇನೆ. ಎಲ್ಲ ಸ್ತ್ರೀ, ಪುರುಷರೂ ಇಂದು ನಡೆಸುತ್ತಿರುವ ಕಾರ್ಯ ಚಟುವಟಿಕೆಗಳನ್ನು ನಿಲ್ಲಿಸಬೇಕೆಂಬ ಸೂಚನೆಗೆ ಸರ್ವಾನುಮತವಿತ್ತಿದಾರೆ.

ಆಶ್ರಮವು ಕಳೆದ ಎರಡು ವರ್ಷಗಳಿಂದ ಭೂಗಂದಾಯವನ್ನು ಕೊಡಲು ನಿರಾಕರಿಸಿದೆ. ಇದರ ಪರಿಣಾಮವಾಗಿ, ಸರಕಾರ ಬಹಳ ಬೆಲೆ ಬಾಳುವ ವಸ್ತುಗಳನ್ನು ಸ್ವಾಧೀನಪಡಿಸಿಕೊಂಡು ಅವುಗಳ ಮಾರಾಟ ಮಾಡಿದೆ. ಈ ಕಾರ್ಯ ವಿಧಾನದ ಬಗೆಗೆ ನನ್ನ ಆಕ್ಷೇಪವಿಲ್ಲ. ಆದರೆ ಒಂದು ದೊಡ್ಡ ಸಂಸ್ಥೆಯನ್ನು ಇಂಥ ಪರಿಸ್ಥಿತಿಯಲ್ಲಿ ಮುಂದುವರಿಸುವುದು ಯಾರಿಗೂ ಹಿತವಲ್ಲ, ಲಾಭವಲ್ಲ. ಯಾವುದೇ ಸಂದರ್ಭದಲ್ಲಿ ವ್ಯಕ್ತಿಯೊಬ್ಬ ಸರಕಾರದೊಂದಿಗೆ ವಿರಸ ಹೊಂದಿದರೆ ಆ ಸರಕಾರ ಜನಪ್ರಿಯವೇ ಆಗಿರಲಿ, ವಿದೇಶೀ ಹತೋಟಿಯಲ್ಲೇ ಇರಲಿ ಅದು ಆ ನಾಗರಿಕ ವ್ಯಕ್ತಿಯ ಆಸ್ತಿಪಾಸ್ತಿಗಳನ್ನು ಬಲಾತ್ಕಾರವಾಗಿ ವಶಪಡಿಸಿಕೊಳ್ಳುವುದು ನ್ಯಾಯವೋ ಅಲ್ಲವೋ ಎಂಬ ಬಗೆಗೆ ಇರುವ ಸಂದೇಹವನ್ನು ನಾನು ಪೂರ್ಣವಾಗಿ ಅರಿತಿದೇನೆ. ಆದುದರಿಂದ ಅನಿವಾರ್ಯ ಸ್ಥಿತಿಯನ್ನು ನಿರೀಕ್ಷಿಸುವುದು ಸಾಮಾನ್ಯ ವಿವೇಕವೆಂದು ನನಗೆ ಅನಿಸುತ್ತದೆ.

ಹೀಗೆ ಆಶ್ರಮವನ್ನು ವಿಸರ್ಜಿಸುವುದರ ಜೊತೆಗೆ, ಅದಕ್ಕೆ ಸಂಬಂಧಿಸಿದ ಎಲ್ಲವನ್ನೂ ಸಾರ್ವಜನಿಕ ಉದ್ದೇಶಗಳಿಗೆ ವಿನಿಯೋಗಿಸಬೇಕೆಂಬುದು ನಮ್ಮ ಇಚ್ಛೆ. ಸರಕಾರವೇ, ಯಾವುದೇ ಕಾರಣಕ್ಕಾಗಿ, ಚರ ಆಸ್ತಿಯನ್ನೆಲ್ಲ ಅಥವಾ ಅದರ ಕೆಲವು ಭಾಗವನ್ನೋ ಮತ್ತು ಹಣವನ್ನೋ ತನ್ನ ವಶಕ್ಕೆ ತೆಗೆದುಕೊಂಡ ಹೊರತು, ಅವೆಲ್ಲವನ್ನೂ ಸ್ವೀಕರಿಸಿ, ಅವನ್ನು ಮೀಸಲಾದ ಸಾರ್ವಜನಿಕ ಉದ್ದೇಶಗಳಿಗೆ ಉಪಯೋಗಿಸಲು ಸಂಕಲ್ಪಮಾಡಿ, ಅದೇ ರೀತಿ ಉಪಯೋಗಿಸುವ ಗೆಳೆಯರಿಗೆ ನೀಡಬಯಸುತ್ತೇವೆ. ಖಾದೀ ದಾಸ್ತಾನು, ಕರ್ಮಾಲಯ ಮತ್ತು ನೆಯ್ಗೆ ಕುಟೀರ ಇವುಗಳನ್ನು ಅಖಿಲ ಭಾರತ ಚರಖಾ ಸಂಘಕ್ಕೆ ನೀಡಲಾಗುವುದು. ಆ ಕಾರ್ಯಗಳು ಈಗಲೂ ಆ ಸಂಸ್ಥೆಯ ವತಿಯಿಂದಲೇ ನಡೆಯುತ್ತಿವೆ. ಗೋವುಗಳು ಮತ್ತಿತರ ದನಕರುಗಳು ಗೋ-ಸೇವಾ ಸಂಘದ ಪ್ರತಿನಿಧಿಗಳಿಗೆ ಕೊಡಲ್ಪಡುವುವು. ಹಾಲಿನ ಕೇಂದ್ರ ಈಗಲೂ ಆ ಸಂಸ್ಥೆಯ ಪರವಾಗಿಯೇ ನಡೆಯುತ್ತಿದೆ. ಪುಸ್ತಕ ಭಂಡಾರವು, ಅದರ ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯನ್ನು ಹೊತ್ತುಕೊಳ್ಳುವ ಸಂಸ್ಥೆಗೆ ಕೊಡಲ್ಪಟ್ಟೀತು. ಬೇರೆ ಬೇರೆಯವರಿಗೆ ಸೇರಿದ ಹಣ ಮತ್ತು ವಸ್ತುಗಳು ಅವರಿಗೇ ಹಿಂದಕ್ಕೆ ಕೊಡಲ್ಪಡುವುವು

ಅಥವಾ ಅವರ ಪರವಾಗಿ ಅವುಗಳ ಹೊಣೆ ತೆಗೆದುಕೊಳ್ಳುವ ಗೇಣಿಯರಿಗೆ ಕೊಡಲ್ಪಡುವುವು.

ಇನ್ನು ಉಳಿಯುವುದು ಭೂಮಿ, ಕಟ್ಟಡಗಳು ಮತ್ತು ಫಸಲು. ಸರಕಾರ ಇವುಗಳನ್ನು ಸ್ವಾಧೀನ ಪಡಿಸಿಕೊಂಡು ಇಚ್ಛೆ ಬಂದಂತೆ ಮಾಡಲಿ. ಇವುಗಳನ್ನೂ ನಾನು ಗೇಣಿಯರಿಗೇ ಸಂತೋಷದಿಂದ ನೀಡುತ್ತಿದ್ದೆನು. ಆದರೆ ಅವರೂ ಭೂಗಂದಾಯ ಬಾಕಿಯನ್ನು ಕೊಡುವ ಬಗೆಗೆ ನಾನು ಸಮ್ಮತಿಸಲಾರೆ; ಇದರಿಂದ ಸ್ವಾಭಾವಿಕವಾಗಿಯೇ ನನ್ನ ಸಹವರ್ತಿ ಸತ್ಯಾಗ್ರಹಿಗಳಿಗೂ ನೀಡಲಾರೆ. ನನ್ನ ಇಷ್ಟವಾದರೂ ಇಷ್ಟೆ. ಭೂಮಿ, ಕಟ್ಟಡಗಳು, ಬೆಲೆ ಬಾಳುವ ವೃಕ್ಷಗಳು ಮತ್ತು ಫಸಲು ಅನೇಕ ಸಂದರ್ಭಗಳಲ್ಲಿ ನಿರರ್ಥಕವಾಗಿ ಪಾಳು ಬಿದ್ದಿರುವುದಕ್ಕೆ ಪ್ರತಿಯಾಗಿ ಉಪಯೋಗಕ್ಕೆ ಬರುವಂತಾಗಬೇಕು. ಭೂಮಿಯ ಒಂದು ಭಾಗದಲ್ಲಿ ಕೆಲವು ಕಟ್ಟಡಗಳಿವೆ. ಅವುಗಳಲ್ಲಿ ಹರಿಜನ ಕುಟುಂಬಗಳು ವಾಸಿಸುತ್ತಿವೆ. ಅವರು ಈವರೆಗೂ ಬಾಡಿಗೆ ಏನನ್ನೂ ಕೊಡುತ್ತಿಲ್ಲ. ಸತ್ಯಾಗ್ರಹ ಚಳುವಳಿಯಲ್ಲಿ ಭಾಗ ವಹಿಸಬೇಕೆಂದು ಅವರಿಗೆ ಕರೆ ನೀಡುವ ಇಚ್ಛೆ ನನಗಿಲ್ಲ. ಇನ್ನು ಮುಂದಕ್ಕೆ ಅವರು ಪ್ರತಿ ವರ್ಷ ಒಂದು ರೂಪಾಯಿಯ ಕಂದಾಯವನ್ನು ಆಶ್ರಮದ ಧರ್ಮದರ್ಶಿಗಳಿಗೆ ಕೊಡುತ್ತಾ, ಬಾಕಿ ನಿಂತಿರುವ ಸರಕಾರೀ ಕಂದಾಯಕ್ಕೂ ಬಾಧ್ಯರಾಗಿರತಕ್ಕದು.

ಯಾವುದೇ ಕಾರಣದಿಂದ ಸರಕಾರ ಈ ಆಸ್ತಿಯನ್ನು ಸ್ವಾಧೀನಪಡಿಸಿಕೊಳ್ಳಲು ನಿರಾಕರಿಸಿದರೂ. ಆಶ್ರಮವಾಸಿಗಳು ಆದಷ್ಟೂ ಜಾಗ್ರತೆ ಎಂದರೆ, ಜುಲೈ ೩ರ ತರುವಾಯ ಅದನ್ನು ತ್ಯಜಿಸಿ ಬಿಡುತ್ತಾರೆ. ಸರಕಾರ, ಆ ತಾರೀಖು ಬರುವುದನ್ನು ನಿರೀಕ್ಷಿಸದಿರುವ ಪಕ್ಷದಲ್ಲಿ ಈ ಪತ್ರಕ್ಕೆ, ಕೊನೆಯ ಪಕ್ಷ, ಇದರಲ್ಲಿ ನಮೂದಿಸಿರುವ ಚರ ಆಸ್ತಿಯ ಸಂಬಂಧವಾಗಿಯೂದರೂ ತನ್ನ ಅಭಿಪ್ರಾಯವನ್ನು ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ. ಇದರಿಂದ ಅವುಗಳನ್ನು ಸ್ಥಳಾಂತರ ಮಾಡಲೇಬೇಕಾದ ಸಂದರ್ಭ ಬಂದರೆ, ಆ ರೀತಿ ಸಕಾಲದಲ್ಲಿ ಮಾಡಲು ನನಗೆ ಸಹಾಯವಾದೀತು.."೮

## ೯. ಗುಜರಾತಿನ ಜನತೆಗೆ ಮನವಿ

"ಮಂಗಳವಾರ ಬೆಳಗ್ಗೆ, ಜುಲೈ ೩೧ ರಂದು, ದೈವೇಚ್ಛೆಯಂತೆ ಮೂವತ್ತುಮೂರು ಮಂದಿ ಸಂಗಾತಿಗಳೊಂದಿಗೆ ನಾನು ಆಶ್ರಮವನ್ನು ಪರಿತ್ಯಜಿಸಿ ಯಾತ್ರೆ ಹೊರಡುವವನಿದ್ದೇನೆ. ಈ ಸಂಗಾತಿಗಳಲ್ಲಿ ಅನೇಕರು ನನಗಿಂತ ಅಶಕ್ತರಾಗಿದ್ದಾರೆ; ಏಕೆಂದರೆ, ನನ್ನೊಂದಿಗೆ ಗಂಡಸರ ಸಂಖ್ಯೆ ಯಷ್ಟೇ ಹೆಂಗಸರೂ ಇದ್ದಾರೆ. ಅವರ ತ್ಯಾಗೇಚ್ಛೆಯನ್ನು ನಾನು ತಡೆಯ ಲಾರದವನಾಗಿದೇನೆ. ನಮ್ಮೆಲ್ಲರ ಪ್ರತಿಜ್ಞೆಯನ್ನು ನೆರವೇರಿಸಲು ನೆರವನ್ನು ನೀಡಲೆಂದು ಭಗವಂತನನ್ನು ಪ್ರಾರ್ಥಿಸುತ್ತೇವೆ.

"ನಮ್ಮ ಸದ್ಯದ ಗುರಿ ರಾಸ್*. ಅದನ್ನು ತಲುಪಲು ನಮಗೆ ಅವ ಕಾಶವಾದರೆ, ನಾವು ಯಾತ್ರೆಯನ್ನು ಮುಂದುವರಿಸುತ್ತೇವೆ. ಆದರೆ, ಯಾತ್ರೆ ಮುಂದುವರಿಯುತ್ತ ಹೋದಂತೆ ನಮ್ಮೆಲ್ಲರ ಬಂಧನವಾಗುವುದೇ ಹೆಚ್ಚು ಸಂಭವ. ಹಾಗೇನಾದರೂ ನಾವು ಬಂಧಿತರಾಗದಿದ್ದರೆ. ನಿರ್ಭ ಯತೆಯ ಸಂದೇಶವನ್ನು ಪ್ರತಿಯೊಂದು ಹಳ್ಳಿಯ ಕುಟುಂಬಕ್ಕೂ ಸಾರುವುದು ನಮ್ಮ ಯೋಜನೆ.

"ನಾವು ಭೇಟಿ ಕೊಡುವ ಹಳ್ಳಿಗಳಲ್ಲಿ ಜನ ಏನನ್ನು ಮಾಡಬೇಕೆಂಬು ದನ್ನು ಸಂಗ್ರಹವಾಗಿ ವಿವರಿಸುತ್ತೇನೆ. ನಮ್ಮಲ್ಲಿ ಒಂದು ದುಗ್ಗಾಣಿಯೂ ಇರುವುದಿಲ್ಲ. ಬಡ ಗ್ರಾಮಸ್ಥರು ನಮಗೆ ನೀಡುವಂಥದನ್ನು ಅತ್ಯಂತ ಹರ್ಷದಿಂದಲೂ ಕೃತಜ್ಞತೆಯಿಂದಲೂ ನಾವು ಸ್ವೀಕರಿಸುತ್ತೇವೆ. ಅವರು ಆನಂದದಿಂದ ನೀಡುವ ಅತ್ಯಂತ ಸಾಮಾನ್ಯ ಆಹಾರವೂ ನಮಗೆ ಮೃಷ್ಟಾನ್ನ ವಿದ್ದಂತೆ. ಈಗ ಮಳೆಗಾಲವಾದುದರಿಂದ, ಕೇವಲ ಮೇಲ್ಹಾವಣಿಯುಳ್ಳ, ಗುಡಿಸಿಲಿನ ಆಶ್ರಯಕ್ಕೇ ನಾವು ಕೃತಜ್ಞರಾಗಿದ್ದು, ಹಂತಹಂತವಾಗಿ ಯಾತ್ರೆಯನ್ನು ಮುಂದುವರಿಸುತ್ತೇವೆ. ನಮ್ಮಲ್ಲಿ ಅನೇಕರು ಶಕ್ತರಲ್ಲ ದಿರುವುದರಿಂದ ನಮ್ಮ ಕಾರ್ಯಕ್ರಮ ಬಹಳ ಕಟ್ಟುನಿಟ್ಟಾದುದಾಗಿರು ವುದಿಲ್ಲ. ನಮ್ಮ ಪಾದಗಳು ಸೋತೆಡೆ ನಾವು ತಂಗುತ್ತೇವೆ. ಆದರೆ

---

* ಒಂದು ಸ್ಥಳ.

ಯಾವುದೇ ಸ್ಥಳದಲ್ಲಿ ಒಂದು ರಾತ್ರಿಗಿಂತ ಹೆಚ್ಚು ತಂಗಲು ನಾವು ಇಚ್ಛಿಸುವುದಿಲ್ಲ.

“ಮಂಗಳವಾರಕ್ಕೆ ಪೂರ್ವಭಾವಿಯಾಗಿಯೇ ಸರಕಾರ ನನ್ನನ್ನು ಬಂಧನ ಮಾಡುವ ಸಂಭವವೂ ಉಂಟು. ಆ ಸಂದರ್ಭದಲ್ಲಿಯೂ ಯಾತ್ರೆ ಮುಂದುವರಿಯುವುದು. ಒಬ್ಬನೇ ಯಾತ್ರಿಕ ಸ್ವತಂತ್ರನಾಗಿರುವವರೆಗೂ ಅದು ಮುಂದುವರಿಯುತ್ತದೆ. ನಮ್ಮ ತ್ಯಾಗಭಾವ ಪರಿಶುದ್ಧವಾದುದಾಗಿದ್ದರೆ. ಕೋಟಿ ಕೋಟಿ ಮಂದಿ ಹಾತೊರೆಯುತ್ತಿರುವ ಸ್ವರಾಜ್ಯವನ್ನು ಪಡೆಯಲು ಆವಶ್ಯಕವಾದ ಅಹಿಂಸಾ ಶಕ್ತಿಯನ್ನು ಅದು ಉತ್ಪನ್ನ ಮಾಡೀತು.”

[ಆಗಸ್ಟ್ ೧ ರಂದು ಗಾಂಧೀಜೀ, ಕಸ್ತೂರ ಬಾ, ಮಹಾದೇವ ದೇಸಾಯಿ, ಮತ್ತಿತರ ಮೂವತ್ತು ಮಂದಿ ಆಶ್ರಮವಾಸಿಗಳ ಬಂಧನವಾಯಿತು. ಅವರನ್ನೆಲ್ಲ ಸಾಬರಮತಿ ಸೆರೆಮನೆಗೆ ಒಯ್ಯಲಾಯಿತು.]

## ೧೦—ಹರಿಜನ ಪ್ರವಾಸದಲ್ಲಿ, ನಾಗಪುರದಲ್ಲಿ ಗಾಂಧೀಜೀ ಮಾಡಿದ ಭಾಷಣ

[೧೯೩೩ರ ನವೆಂಬರ್ ೮ನೆಯ ತಾರೀಖು, ೩೦,೦೦೦ ಜನರನ್ನುದ್ದೇಶಿಸಿ ಭಾಷಣ ಮಾಡಿದರು, ಗಾಂಧೀಜೀ. ಇಷ್ಟು ಅಪಾರ ಸಂಖ್ಯೆಯಲ್ಲಿ ನಾಗಪುರದಲ್ಲಿ ಹಿಂದೆ ಎಂದೂ ಜನರು ನೆರೆದಿರಲಿಲ್ಲ. ಗಂಡಸರು, ಹೆಂಗಸರು ನೆರೆದಿದ್ದ ಈ ಜನಸ್ತೋಮವನ್ನು ಕಂಡು ಅವರಿಗೆ ಬಹಳ ಸಂತೋಷವಾಯಿತು. ಮನ ಬಿಚ್ಚಿ ಹೀಗೆಂದು ನುಡಿದರು :]

“ನನ್ನ ದೃಷ್ಟಿಯಲ್ಲಿ ಈ ಹರಿಜನ ಕಾರ್ಯ ಮುಖ್ಯವಾಗಿ ಧಾರ್ಮಿಕವಾದದ್ದು. ಇದರಿಂದ ಇತರ ಪರಿಣಾಮಗಳಾಗುವುದೇನೋ ನಿಜ. ಧಾರ್ಮಿಕ ಕಾರ್ಯ ಯಾವುದೇ ಆಗಲಿ, ಜೀವನದ ಅನೇಕ ಕ್ಷೇತ್ರಗಳ ಮೇಲೆ ಅದರ ಪ್ರಭಾವ ಉಂಟಾಗುವುದು. ಒಂದು ಆಂದೋಲನ ಧಾರ್ಮಿಕವೆಂದು ಗುರುತಿಸುವುದಕ್ಕೆ ಇದೊಂದು ಒರೆಗಲ್ಲು. ಈ ಆಂದೋಲನವನ್ನು ನಾನು ಕೈಗೊಂಡಿರುವುದು ಯಾವ ಧರ್ಮಕ್ಕೂ, ಯಾವ ಕೋಮಿಗೂ ವಿರುದ್ಧ

ವಾಗಿ ಅಲ್ಲವೆಂದು ನಾನು ಬಹಳ ನಮ್ರತೆಯಿಂದಲೂ, ಆದರೆ ಪೂರ್ಣ ವಿಶ್ವಾಸದಿಂದಲೂ ಹೇಳಬಯಸುತ್ತೇನೆ. ಈ ಐವತ್ತು ವರ್ಷಗಳಲ್ಲಿ ನಾನು ಮಾಡಿರುವ ಯಾವ ಕಾರ್ಯವೇ ಆಗಲಿ ಒಬ್ಬ ವ್ಯಕ್ತಿಯು ಅಥವಾ ಕೋಮಿನ ವಿರುದ್ಧ ನಡೆಯಿತೆಂದು ಸಿದ್ಧಪಡಿಸಲು ಸಾಧ್ಯವಿಲ್ಲ. ಯಾರನ್ನೂ ನನ್ನ ಶತ್ರುವೆಂದು ನಾನು ಎಣಿಸುವುದಿಲ್ಲ. ಹಾಗೆ ಎಣಿಸಬಾರದೆಂಬುದೇ ನನ್ನ ಶ್ರದ್ಧೆಯಾಗಿದೆ. ಯಾವ ಜೀವಂತ ವಸ್ತುವಿಗೂ ನಾನು ಕೇಡುಕನ್ನು ಕೋರಲಾರೆ. ಹಿಂದೂ ಜನರ ಅಂತಃಕರಣದಿಂದ ಈ ಅಸ್ಪೃಶ್ಯತೆಯ ಭಾವನೆಯೆಂಬ ಮಾಲಿನ್ಯ ಪೂರ್ತಿಯಾಗಿ ತೊಡೆದು ಹಾಕಿದ ಪಕ್ಷಕ್ಕೆ, ಇದರಿಂದ ಭಾರತದಲ್ಲಿ ವಾಸಿಸುವ ಎಲ್ಲ ಕೋಮುಗಳ ಮೇಲೂ, ಅಷ್ಟೇ ಅಲ್ಲ, ಇಡಿಯ ಜಗತ್ತಿನ ಮೇಲೂ ಉತ್ತಮ ಪ್ರಭಾವ ಬೀರಿದಂತಾಗುವುದೆಂದು ನನ್ನ ದೃಢವಾದ ನಂಬಿಕೆ. ಈ ನಂಬಿಕೆ ನನ್ನಲ್ಲಿ ದಿನೇದಿನೇ ಬಲಗೊಳ್ಳುತ್ತಲಿದೆ. ಕೋಟ್ಯಂತರ ಮಾನವರ ವಿಷಯದಲ್ಲಿ ಅಸ್ಪೃಶ್ಯತಾ ಭಾವನೆಯನ್ನು ನಾನು ದೂರಮಾಡಿದೆನಾದರೆ ಇತರ ಮಾನವಕೋಟಿಯ ವಿಚಾರದಲ್ಲಿ ಈ ಭಾವನೆಯನ್ನು ತಾಳುವುದು ಸಾಧ್ಯವಿಲ್ಲ. ಹಿಂದೂ ಸಮಾಜದ ಹೃದಯದಿಂದ ಮೇಲು ಕೀಳೆಂಬ ಈ ಭಾವನೆಯನ್ನು ತೊಡೆದುಹಾಕಿದ್ದೇ ಆದರೆ ಹಿಂದೂ ಸಮಾಜದ ಎಲ್ಲ ಕೋಮುಗಳಲ್ಲಿಯೂ ಈಗ ಕಂಡುಬರುವ ಪರಸ್ಪರ ಮಾತ್ಸರ್ಯವೂ ಮತ್ತು ಅವಿಶ್ವಾಸಗಳೂ ದೂರವಾಗುವುವು. ಈ ಕಾರಣದಿಂದಲೇ ಈ ಉದ್ಯಮಕ್ಕಾಗಿ ನನ್ನ ಜೀವವನ್ನೇ ನಾನು ಪಣವಾಗಿ ಮಾಡಿದ್ದೇನೆ. ಅಸ್ಪೃಶ್ಯತೆಯ ವಿರುದ್ಧವಾಗಿ ನಾನು ಹೂಡಿರುವ ಈ ಸಮರದಲ್ಲಿ, ಹಿಂದೂ ಸಮಾಜದ ಸ್ಪೃಶ್ಯ ಮತ್ತು ಅಸ್ಪೃಶ್ಯರ ಐಕ್ಯತೆಗೆ ಮಾತ್ರವಲ್ಲ—ಹಿಂದೂ ಮುಸ್ಲಿಮ್, ಕ್ರೈಸ್ತ ಮತ್ತಿತರ ಕೋಮುಗಳ ಐಕ್ಯತೆಗಾಗಿ ನಾನು ಹೋರಾಡುತ್ತಿದ್ದೇನೆ. ಹಿಂದೂಗಳ ಸಂಖ್ಯಾಬಲ ಹೆಚ್ಚಿಸುವುದರಲ್ಲಿ ನಾನು ಆಸಕ್ತನಾಗಿದ್ದೇನೆಂದು ನೀವು ಒಂದು ಕ್ಷಣಕ್ಕೂ ಭಾವಿಸಬೇಡಿ. ನನಗೆ ಗುಣವೇ ಮುಖ್ಯ. ಸಂಖ್ಯಾ ಪ್ರಮಾಣವಲ್ಲ. ಒಂದು ಲಕ್ಷ ಖೋಟಾ ನಾಣ್ಯಗಳನ್ನು ನಾನು ಸಂಗ್ರಹಿಸಿದರೆ ಅದು ಕೇವಲ ನಿರರ್ಥಕವಾದ ಹೊರೆ. ಒಂದು ಸಾಚಾ ನಾಣ್ಯ ಅದೆಲ್ಲಕ್ಕಿಂತಲೂ ಬೆಲೆಯುಳ್ಳದ್ದು. ಒಂದು ಧರ್ಮದ ಅನುಯಾಯಿಗಳಲ್ಲಿ, ತಾವು ಹೇಳುವುದೊಂದು, ತಮ್ಮ ಜೀವನದ ಆಚ

ರಹಿ ಬೇರೊಂದು ಆದ ಪಕ್ಷಕ್ಕೆ, ಅಂತಹ ಅನುಯಾಯಿಗಳ ಸಂಖ್ಯೆ ಎಷ್ಟೇ ಇದ್ದರೂ ಆ ಧರ್ಮವನ್ನು ಅವರು ಊರ್ಜಿತಗೊಳಿಸಲಾರರು. ಹಿಂದೂ ಧರ್ಮಕ್ಕೆ ಸೇರಿದವರು ಈ ಅಸ್ಪೃಶ್ಯತೆಯ ದೋಷಕ್ಕೆ ಅವಕಾಶ ಕೊಡು ವವರೆಗೂ, ಅವರ ಸಂಖ್ಯೆ ಕೋಟಿಗಟ್ಟಲೆ ಇದ್ದಾಗ್ಯೂ, ಈ ದೊಡ್ಡ ಹಿಂದೂ ಧರ್ಮ ನಾಶಕ್ಕೆ ಗುರಿಯಾಗುವುದು. ಅಸ್ಪೃಶ್ಯರು ಕೋಟಿಗಟ್ಟಲೆಯಲ್ಲಿರು ವುದು ಇದಕ್ಕೆ ಕಾರಣವಲ್ಲ. ಅಸ್ಪೃಶ್ಯರ ಸಂಖ್ಯೆ ಸ್ವಲ್ಪವೇ ಇದ್ದರೂ ಈ ವಿಪತ್ತು ಒದಗುವುದು. ಆರ್ಸೆನಿಕ್ ಎಂಬ ತೀವ್ರವಾದ ವಿಷವನ್ನು ಹಾಲಿನಲ್ಲಿ ಬೆರೆಸಿದರೆ—ಆ ಹಾಲು ಸ್ವಲ್ಪವೇ ಇರಲಿ ಹೆಚ್ಚೇ ಇರಲಿ–ಅದೆಲ್ಲ ವನ್ನೂ ಚೆಲ್ಲಬೇಕಾಗುವುದು. ನಾವೆಲ್ಲರೂ ಒಬ್ಬನೇ ಆದ ಭಗವಂತನ ಮಕ್ಕಳೆಂದು ನಂಬುವುದಾದರೆ, ಆ ಭಗವಂತನು ಸತ್ಯ ಮತ್ತು ನ್ಯಾಯದ ಸ್ವರೂಪನಾದರೆ, ಅವನ ಮಕ್ಕಳಾದ ನಮ್ಮಲ್ಲಿ ಅಸ್ಪೃಶ್ಯತೆಗೆ ಅವಕಾಶ ಹೇಗೆ ಇದ್ದೀತು? ಸತ್ಯ ಮತ್ತು ನ್ಯಾಯಗಳ ಸ್ವರೂಪಿಯಾದ ಭಗವಂತನು ತನ್ನ ಮಕ್ಕಳಲ್ಲಿ ಮೇಲು ಕೀಳೆಂಬ ವ್ಯತ್ಯಾಸಗಳನ್ನು ಸೃಷ್ಟಿಸುವುದು ಸಾಧ್ಯವಿಲ್ಲ. ಆದ್ದರಿಂದ ಜಾತಿಮತಗಳೆಂಬ ಭೇದವಿಲ್ಲದೆ ನೀವೆಲ್ಲರೂ ಈ ಉದ್ಯಮದಲ್ಲಿ ನೆರವಾಗಬೇಕೆಂದೂ, ನೀವು ಇದರ ಯಶಸ್ಸಿಗೆ ಪ್ರಾರ್ಥಿಸ ಬೇಕೆಂದೂ ನಿಮ್ಮನ್ನು ಆಹ್ವಾನಿಸುತ್ತಿದ್ದೇನೆ. ಹೀಗೆ ಮಾಡಿದರೆ ನಾವು ಶಾಂತಿ ಸೌಹಾರ್ದಗಳಿಂದ ಬಾಳಬಹುದು.

ಭಿನ್ನ ಭಿನ್ನ ಧರ್ಮಾವಲಂಬಿಗಳಲ್ಲಿ ಸೌಹಾರ್ದವಿರಬೇಕೆಂದು ನಾನು ಬಯಸುವುದಾದರೆ, ಸನಾತನಿಗಳೆಂದು ಅನಿಸಿಕೊಳ್ಳುವವರಲ್ಲಿ ಮತ್ತು ಸುಧಾರಕರ ಮಧ್ಯೆ ವೈಮನಸ್ಯವಿರಬೇಕೆಂದು ನಾನು ಬಯಸಲು ಸಾಧ್ಯವಿಲ್ಲ. ಸನಾತನಿಗಳ ವಿಷಯದಲ್ಲಿ ನನಗೆ ಯಾವ ವಿಧವಾದ ದುರ್ಭಾವನೆಯಿರಲೂ ಸಾಧ್ಯವಿಲ್ಲ. ಅವರು ತಮ್ಮ ವಿಷಯದಲ್ಲಿ ಸುಧಾರಕರು ಯಾವ ಸಹಿಷ್ಣುತೆ ಯನ್ನು ತಾಳಬೇಕೆಂದು ಬಯಸುವರೋ ಅದೇ ಸಹಿಷ್ಣುತೆಯನ್ನು ಸುಧಾರಕರ ವಿಷಯದಲ್ಲಿ ಅವರೂ ತಾಳಬೇಕೆಂದು ನಾನು ಕೇಳಿಕೊಳ್ಳು ತ್ತೇನೆ. ಇತರ ಮತೀಯರ ಧರ್ಮಾನುಷ್ಠಾನದ ವಿಷಯದಲ್ಲಿ ಅವರು ಸಹಿಷ್ಣುತೆಯನ್ನು ತಾಳಿದ ಮೇಲೆ ಸುಧಾರಕರ ಸಿದ್ಧಾಂತ—ಆಚರಣೆಗಳ ಬಗೆಗೂ ಏಕೆ ತಾಳಬಾರದು? ಅಸ್ಪೃಶ್ಯತೆ ಹಿಂದೂ ಧರ್ಮದ ಮುಖ್ಯಾಂಶ

ಗಳಲ್ಲೊಂದೆಂಬ ನಂಬಿಕೆ ಸನಾತನಿಗಳಿಗಿರುವವರೆಗೂ ಈ ಉದ್ಯಮದಲ್ಲಿ ಅವರ ಸಹಕಾರ ಅಪೇಕ್ಷಿಸತಕ್ಕದ್ದಲ್ಲ. ನಾನೂ ಮತ್ತು ಇತರ ಸುಧಾರಕರೂ ಅಸ್ಪೃಶ್ಯತೆ ಒಂದು ಕಳಂಕವೆಂದು ದೃಢವಾಗಿ ನಂಬಿದ್ದೇವೆ. ಅದು ಕಳಂಕವೇ ಆದರೆ, ಸುಧಾರಕರೂ ಸಹ ತಾಳ್ಮೆಯಿಂದಲೂ ಸೌಜನ್ಯ ದಿಂದಲೂ ತಮ್ಮ ಕಾರ್ಯವನ್ನು ಮಾಡುತ್ತ ಹೋದರೆ ಸನಾತನಿಗಳ ಹೃದಯುವು ಕರಗುವುದು. ಈ ಮಹಾ ಉದ್ಯಮದಲ್ಲಿ ಬಲಾತ್ಕಾರಕ್ಕಾಗಲಿ, ಹಿಂಸೆಗಾಗಲಿ ಸ್ಥಾನವಿಲ್ಲ. ನಮ್ಮ ಹಿಂದೂ ಧರ್ಮದ ಶಾಸ್ತ್ರಗಳನ್ನು ನಾನು ಶ್ರದ್ಧೆಯಿಂದ ನನ್ನ ಶಕ್ತಿಗೆ ಸಾಧ್ಯವಾದಷ್ಟು ಅಧ್ಯಯನ ಮಾಡಿದ್ದೇನೆ; ವಿದ್ವಾಂಸರೊಂದಿಗೆ ವಿಚಾರ ಮಾಡಿದ್ದೇನೆ. ಎಲ್ಲಕ್ಕೂ ಹೆಚ್ಚಾಗಿ ಶ್ರದ್ಧಾ ಪೂರ್ವಕವಾಗಿ ನನ್ನಲ್ಲಿ ರೂಪುಗೊಂಡಿರುವ ನಂಬಿಕೆಯನ್ನು ಸನಾತನಿಗಳ ಮುಂದಿಡುತ್ತೇನೆ. ಇದರಿಂದ ನಿಜವಾಗಿಯೂ ಆಂತರಿಕ ಕಲಹಗಳು ಉದ್ಭವಿಸಲು ಕಾರಣವೇ ಇಲ್ಲ! ಈ ಉದ್ಯಮವನ್ನು ವಿರೋಧಿಸುವ ಅನೇಕರು ಇದರ ಇಂಗಿತವನ್ನು ಅರಿಯಲು ಶ್ರಮವಹಿಸಲಿಲ್ಲವೆಂಬುದನ್ನು ನಾನು ಗಮನಿಸಿದ್ದೇನೆ. ಈಗ ನಾನು ಕೈಗೊಂಡಿರುವ ಪ್ರವಾಸದ ಉದ್ದೇಶ, ಸುಧಾರಕರ ನಿಲುವು ಏನೆಂಬುದನ್ನು ಜನರ ಮುಂದೆ ಸ್ಪಷ್ಟವಾಗಿ ನಿರೂಪಿಸುವುದೇ. ಅಸ್ಪೃಶ್ಯ ಸೇವಾ ಸಂಘದ ಉದ್ದೇಶವನ್ನೂ, ಚಟುವಟಿಕೆ ಗಳನ್ನೂ ಜನರು ತಿಳಿದುಕೊಂಡು, ಈಗಿರುವ ವಿರೋಧ ಕ್ರಮೇಣ ಮಾಯವಾಗುವುದೆಂಬುದೇ ನನ್ನ ವಿಶ್ವಾಸವಾಗಿದೆ. ಅವರ ಸಂಶಯ ಗಳನ್ನು ದೂರಮಾಡಲು ನಾವು ಇಚ್ಛಿಸುತ್ತೇವೆ. ಅವರ ನಂಬಿಕೆಗಳಿಗೆ ವಿರುದ್ಧವಾಗಿ ಅವರು ನಡೆಯಬೇಕೆಂದು ನಾವು ಒತ್ತಾಯಪಡಿಸಲಿಚ್ಛಿಸು ವುದಿಲ್ಲ. ಬಹಳ ಸೌಜನ್ಯದಿಂದಲೂ, ಅವರ ಬುದ್ಧಿ ಮತ್ತು ವಿಚಾರಪರತೆಗೂ ಅವರ ಹೃದಯಕ್ಕೂ ಮೆಚ್ಚುವ ರೀತಿಯಲ್ಲಿ ನಮ್ಮ ಕಾರ್ಯ ಮಾಡುವುದ ರಿಂದಲೂ ಈ ಸುಧಾರಣೆಯ ಕಡೆ ಅವರ ಮನಸ್ಸನ್ನು ಒಲಿಸಲು ನಾವು ಪ್ರಯತ್ನಿಸುತ್ತೇವೆ. ಇತರರ ಮೇಲೆ ಕ್ಲೇಶಗಳನ್ನು ಹೇರುವುದರಿಂದ ಪ್ರೇಮ ತನ್ನ ಸ್ವರೂಪವನ್ನು ಅಭಿವ್ಯಕ್ತ ಮಾಡಲಾರದು. ಪ್ರೇಮದ ಮಾರ್ಗ ಆತ್ಮದಂಡನೆ, ಆತ್ಮಶುದ್ಧೀಕರಣ. ಸುಧಾರಕರು ತಮ್ಮ ನಿತ್ಯ ಜೀವನದಲ್ಲಿ ಹೆಚ್ಚುಹೆಚ್ಚಾಗಿ ತ್ಯಾಗ, ಪರಿಶುದ್ಧತೆ, ಕಷ್ಟಸಹಿಷ್ಣುತೆ—

ಈ ಗುಣಗಳುಳ್ಳವರಾದರೆ, ಅಸ್ಪೃಶ್ಯತೆ ಹಿಂದೂ ಧರ್ಮದ ಒಂದು ವಿವಾದ ಅಂಶವೆಂದು ನಂಬಿ ಅದರಲ್ಲಿ ಪೂರ್ಣ ವಿಶ್ವಾಸವನ್ನಿಟ್ಟಿರುವ ಸನಾತನಿಗಳ ಹೃದಯವನ್ನು ಖಂಡಿತವಾಗಿ ಕರಗಿಸಬಲ್ಲರು.

ಅಸ್ಪೃಶ್ಯರು ತಮ್ಮಲ್ಲಿರುವ ದೋಷಗಳ ಪ್ರಯುಕ್ತ ಹೀಗಾಗಿರುವುದೆಂದು ಹೇಳುತ್ತಾರೆ. ಆದರೆ ಸ್ಪೃಶ್ಯರು ಉತ್ತಮರಾಗಿರುವರೆ? ಅವರು ಪಾಪರಹಿತರೆ? ಅಸ್ಪೃಶ್ಯತೆಯನ್ನು ಸಮರ್ಥನೆ ಮಾಡುವ ಕೆಲ ಜನರು ಅಸ್ಪೃಶ್ಯರು ಯಾವಾಗಲೂ ಅಸ್ಪೃಶ್ಯರಾಗಿಯೇ ಉಳಿಯುವರೆಂದೂ ಅವರ ನಡತೆ ಎಷ್ಟೇ ಶುದ್ಧವಾದರೂ, ಅವರಲ್ಲಿ ಜನ್ಮತಃ ಬಂದಿರುವ ದೋಷ ನಿವಾರಣೆಯಾಗಲಾರದೆಂದೂ ಸಹ ವಾದ ಹುಡುಕುತ್ತಾರೆ. ಅವರು ಎಂದಿಗೂ ಸಮಾಜದಿಂದ ಭ್ರಷ್ಟರಾಗಿಯೇ ಉಳಿಯಬೇಕೆಂಬುದೇ ಇವರ ವಾದ. ಆದರೆ ನಿಜಾಂಶವೇನೆಂದರೆ ಅಸ್ಪೃಶ್ಯರಲ್ಲಿ ನಾವು ಕಾಣುವ ದೋಷಗಳೂ ನ್ಯೂನತೆಗಳೂ, ನಮ್ಮ ನ್ಯೂನತೆಗಳ ಹಾಗೂ ಪಾಪಗಳ ಪ್ರತಿಬಿಂಬ. ನಾವು ಈ ಅಸಹಾಯರ ಮೇಲೆ ಎಸಗಿರುವ ದೌರ್ಜನ್ಯದ ನೇರವಾದ ಫಲವಿದು. ಅಸ್ಪೃಶ್ಯತೆಯನ್ನು ಬುಡ ಸಮೇತ ನಿರ್ಮೂಲ ಮಾಡುವುದು, ನಮ್ಮ ಜೀವನವನ್ನು ಹೆಚ್ಚುಹೆಚ್ಚಾಗಿ ಪರಿಶುದ್ಧ ಮಾಡುವುದು ಇವೇ ಈ ಅಸ್ಪೃಶ್ಯರ ಉದ್ಧಾರಕ್ಕೆ ನಿಜವಾದ ಮಾರ್ಗ. ಆದ್ದರಿಂದ ಈ ಉದ್ಯಮಕ್ಕೆ ದ್ರವ್ಯ ಸಹಾಯಕ್ಕಿಂತಲೂ ಶುದ್ಧವಾದ ನಡತೆ ಆವಶ್ಯಕ. ಈ ದೋಷವನ್ನು ದೂರಮಾಡಿ ನಮ್ಮ ಆತ್ಮಶುದ್ಧಿಯನ್ನು ಸಾಧಿಸಿಕೊಳ್ಳುವೆವೆಂಬ ದೃಢ ಸಂಕಲ್ಪಕ್ಕೆ ಈ ಧನ ಸಹಾಯ ಒಂದು ಸಂಕೇತವಾಗಿರಬೇಕು.

ಸಹ ಭೋಜನವೂ ಈ ಸುಧಾರಣೆಯ ಒಂದು ಅಂಗವೆ—ಹೇಗೆ? ಎಂಬ ಪ್ರಶ್ನೆಯನ್ನು ಆಗಾಗ್ಗ ಕೇಳುತ್ತಾರೆ. ನನ್ನ ವೈಯಕ್ತಿಕ ಅಭಿಪ್ರಾಯವೇನೆಂಬುದನ್ನು ಎಲ್ಲರೂ ಬಲ್ಲರು. ನನ್ನ ಎಳೆಯ ವಯಸ್ಸಿನಿಂದಲೂ ನಾನು ಎಲ್ಲರೊಂದಿಗೂ ಸಹ ಭೋಜನ ಮಾಡಿದ್ದೇನೆ. ಆದರೆ ಶುಚಿತ್ವ ನಿಯಮಗಳ ಪಾಲನೆಯಾಗಬೇಕು. ಅಷ್ಟೇ ನಾನು ಬಯಸಿದ್ದು. ಈ ಪ್ರಸ್ತುತ ಉದ್ಯಮದಲ್ಲಿ ಸಹ ಭೋಜನದ ಮಾತಿಲ್ಲ. ಸಹ ಭೋಜನಾದಿ ವಿಷಯಗಳನ್ನು ತಮ್ಮ ಮಟ್ಟಿಗೆ ವ್ಯಕ್ತಿಗಳೇ ನಿರ್ಧರಿಸಿಕೊಳ್ಳಬೇಕು. ಅಸ್ಪೃಶ್ಯ ಸೇವಾಸಂಘ ಕೈಗೊಂಡಿರುವ ಉದ್ಯಮ ಎಲ್ಲ ಬಗೆಯ ಅಸ್ಪೃಶ್ಯ

ತೆಯ ನಿವಾರಣೆ—ಅಷ್ಟೇ—ಕೇವಲ ಅಸ್ಪೃಶ್ಯರಿಗೆ ಅನ್ವಯಿಸುವಂತಹ ವಿಶಿಷ್ಟವಾದ ಅಂಶಗಳ ನಿವಾರಣೆ. ಇತರ ಹಿಂದೂಗಳಿಗಿರುವ ಸಾರ್ವಜನಿಕ ಹಕ್ಕುಬಾಧ್ಯತೆಗಳಿಗೂ ಅನುಕೂಲಗಳಿಗೂ ಅವರೂ ಬಾಧ್ಯರಾಗಬೇಕು. ಅಂದರೆ ಭಾವಿಗಳು, ಶಾಲೆಗಳು, ರಸ್ತೆಗಳು, ದೇವಸ್ಥಾನಗಳು ಮುಂತಾದ ಸಾರ್ವಜನಿಕ ಸಂಸ್ಥೆಗಳಿಗೆ ಅವರಿಗೂ ಪ್ರವೇಶ ದೊರೆಯಬೇಕು.

ಅಸ್ಪೃಶ್ಯತಾ ನಿವಾರಣಾ ಮಸೂದೆಗಳ ಬಗೆಗೆ ಬಂದಿರುವ ಆಕ್ಷೇಪಣೆಗಳ ವಿಚಾರದಲ್ಲಿ ಒಂದು ಮಾತು. ಧಾರ್ಮಿಕ ವಿಷಯಗಳಲ್ಲಿ ಸರಕಾರದ ಹಸ್ತಕ್ಷೇಪವಾಗುತ್ತಿದೆಯೆಂದು ಸನಾತನಿಗಳ ವಾದ. ಹಸ್ತಕ್ಷೇಪವೆಂದರೆ ಅಕ್ರಮವಾದ ರೀತಿಯ ವರ್ತನೆ ಎಂಬುದು ಅವರ ಅರ್ಥವೆಂದು ನಾನು ಭಾವಿಸುತ್ತೇನೆ. ಏಕೆಂದರೆ ಕೆಲವು ಸಂದರ್ಭಗಳಲ್ಲಿ ಕಾನೂನಿನ ಮೂಲಕ ಸರಕಾರ ಪ್ರವೇಶಮಾಡಬೇಕೆಂದು ಕೋರಲಾಗಿದೆ. ಇದು ಅನಿವಾರ್ಯವೆಂದೂ ಭಾವಿಸಲಾಗಿದೆ. ಇದಕ್ಕೆ ನಿದರ್ಶನಗಳನ್ನು ನಾನು ಕೊಡಬಲ್ಲೆ. ಹೊರಗಿನ ಒತ್ತಾಯದಿಂದ ಮುಕ್ತವಾಗಿರುವುದನ್ನು ಅರಿಸಲಾಗಿದೆ. ಧಾರ್ಮಿಕ ವಿಷಯಗಳಲ್ಲಿ ಒತ್ತಾಯವಿರಬಾರದೆಂದು ಸನಾತನಿಗಳಿಗಿಂತಲೂ ನಾನು ಹೆಚ್ಚಾಗಿ ಅಪೇಕ್ಷಿಸುವವನು. ಈ ಮಸೂದೆಗಳಾದರೊ ಯಾವ ಒತ್ತಾಯವನ್ನಾಗಲಿ ಅನುಚಿತವಾದ ಹಸ್ತಕ್ಷೇಪವನ್ನಾಗಲಿ ಮಾಡುವಂತಹವಲ್ಲ. ಇಲ್ಲಿ ಸರಕಾರ ಪ್ರವೇಶಿಸುತ್ತಿರುವುದು ಎಲ್ಲರ ಹಿತದೃಷ್ಟಿಯಿಂದ; ಅನಿವಾರ್ಯವಾಗಿರುವುದರಿಂದ. ಹರಿಜನರಿಗೆ ದೇವಸ್ಥಾನಗಳಲ್ಲಿ ಪ್ರವೇಶ ದೊರೆಯಲೇಬೇಕೆಂದು ಸರಕಾರ ಒತ್ತಾಯಪಡಿಸಿದ ಪಕ್ಷಕ್ಕೆ ಅದು ನಿಸ್ಸಂದೇಹವಾಗಿಯೂ ಅಕ್ರಮವಾದೀತು. ಆದರೆ ದೇವಸ್ಥಾನಗಳಿಗೆ ಹೋಗುವ ಅಥವಾ ಧರ್ಮದರ್ಶಿಗಳ ನಿರ್ದಿಷ್ಟವಾದ ಬಹು ಸಂಖ್ಯಾತರ ಅಭಿಪ್ರಾಯದ ಮೇರೆಗೆ ದೇವಸ್ಥಾನಗಳಿಗೆ ಐಚ್ಛಿಕ ಪ್ರವೇಶ ಸಮಂಜಸವೆಂದು ಕಾನೂನಿನ ಪ್ರಕಾರ ವಿಧಿಸುವುದು ಅಕ್ರಮವಾಗಲಾರದು. ಈ ಬಗೆಯ ಕಾನೂನಿಲ್ಲದಿದ್ದರೆ, ಪರಿಣಾಮದಲ್ಲಿ ಒತ್ತಾಯವೇ ಸಂಭವಿಸೀತು. ದೇವಸ್ಥಾನಗಳ ಪ್ರವೇಶದ ಈ ಮಸೂದೆ ಬಹು ಸಂಖ್ಯಾತರ ಆಚರಣೆಗೆ ಕಾನೂನಿನ ಮನ್ನಣೆಯನ್ನೊದಗಿಸುತ್ತದೆ, ಅಷ್ಟೆ. ಮತ್ತೊಂದು ಮಸೂದೆ ಈ ಮೊದಲೇ ತರಬೇಕಾಗಿತ್ತು. ಅದು ಅಸ್ಪೃಶ್ಯತೆಯನ್ನು ಪೂರ್ತಿಯಾಗಿ

ತೊಡೆದುಹಾಕುವುದಿಲ್ಲ. ಲೌಕಿಕ ವ್ಯವಹಾರಗಳಲ್ಲಿ ಅಸ್ಪೃಶ್ಯತೆಯಿಂದ ಆಗುವ ಪರಿಣಾಮಗಳನ್ನು ನಿವಾರಿಸುವ ಪ್ರಯತ್ನ ಅದರಲ್ಲಿದೆ. ಈ ಬಗೆಯ ಪರಿಣಾಮಗಳಾಗುವಂತೆ ಬಿಡುವುದು ನಿರಾತಂಕವಾದ ಧರ್ಮಾನುಷ್ಠಾನಕ್ಕೆ ಒಂದು ಅಸಹನೀಯವಾದ ಅಡಚಣೆಯನ್ನು ಒಡ್ಡಿದಂತಾಗುವುದು. ಧರ್ಮಾನುಷ್ಠಾನಕ್ಕೆ ಸಂಬಂಧಿಸಿದ ಕರ್ತವ್ಯಗಳಿಗೆ ಕಾನೂನಿನ ಮೂಲಕ ಸರಕಾರ ಮನ್ನಣೆಕೊಡುವುದಾದರೆ ಅದು ಅಕ್ರಮವಾದ ಹಸ್ತಕ್ಷೇಪವಾಗುವುದೆಂಬುದನ್ನು ಯಾರೂ ನಿರಾಕರಿಸುವಂತಿಲ್ಲ. ಇಚ್ಛಾಪೂರ್ವಕವಾದ ಸ್ಪೃಶ್ಯರೂ ಅಸ್ಪೃಶ್ಯರೂ—ಇಬ್ಬರ ಅಸ್ಪೃಶ್ಯತಾ ಸಂಪ್ರದಾಯವು ನಡೆಯುತ್ತಲಿದೆ. ಅಸ್ಪೃಶ್ಯರು ಇದಕ್ಕೆ ಮನ್ನಣೆಯನ್ನು ಕೊಡಲೇಬೇಕೆಂದು ಸರಕಾರ ಕಾನೂನು ಮಾಡಿದ್ದೇ ಆದರೆ, ಇದು ಧಾರ್ಮಿಕ ವಿಚಾರದಲ್ಲಿ ಸರಕಾರದ ಅಕ್ರಮ ಪ್ರವೇಶವೇ ಆದೀತು. ಅದ್ದರಿಂದ ಈ ಮಸೂದೆಯ ಉದ್ದೇಶವಾದರೂ ಇಷ್ಟೆ: ಲೌಕಿಕ ವ್ಯವಹಾರಗಳಲ್ಲಿ ಅಸ್ಪೃಶ್ಯತೆಗೆ ಅದು ಮನ್ನಣೆ ಕೊಡುವುದಿಲ್ಲ. ಹಾಗೂ ಧಾರ್ಮಿಕ ದೃಷ್ಟಿಯಿಂದ ಮಾಡುವ ಆಚರಣೆಗೂ ಅದರ ಉಲ್ಲಂಘನೆಯಿಂದಾಗುವ ಧಾರ್ಮಿಕ ಪರಿಣಾಮಗಳಿಗೂ ಯಾವ ಅಡ್ಡಿಯನ್ನೂ ಉಂಟುಮಾಡುವುವಿಲ್ಲ. ಅದ್ದರಿಂದ ಈ ಮಸೂದೆಯನ್ನು ಆಕ್ಷೇಪಿಸುವವರು, ತಮ್ಮ ವಾದದಲ್ಲಿ ವಿಶ್ವಾಸವುಳ್ಳವರಾದರೆ, ಈ ಮಸೂದೆಯನ್ನು ಚೆನ್ನಾಗಿ ವಿಮರ್ಶೆಮಾಡಿ ಅದರಲ್ಲಿ ಒತ್ತಾಯದ ಅಂಶವಿಲ್ಲವೆಂದು ಮನಗಾಣುವವರಾದರೆ, ಅವರು ತಮ್ಮ ಆಕ್ಷೇಪಣೆಗಳನ್ನು ಬಿಟ್ಟುಬಿಡಬೇಕು.

## ೧೧. ಸವಿನಯ ಶಾಸನೋಲ್ಲಂಘನೆಯನ್ನು ತಮ್ಮ ಪೂರ್ತಿಗೆ ಸೀಮಿತಗೊಳಿಸುವ ಸಂದರ್ಭದಲ್ಲಿ ಗಾಂಧೀಯವರು ಪಾಟ್ನಾದಿಂದ ಕೊಟ್ಟ ಹೇಳಿಕೆ—

[ಡಿಲ್ಲಿಯಲ್ಲಿ ನಡೆದ ಸಮ್ಮೇಳನದಲ್ಲಿ ಅಂಗೀಕರಿಸಲಾದ ತಾತ್ಪೂರ್ತಿಕ ನಿರ್ಣಯಗಳಿಗೆ ಗಾಂಧೀಯವರ ಬೆಂಬಲವನ್ನು ಪಡೆಯಲು, ಏಪ್ರಿಲ್ ನಾಲ್ಕನೆಯ ತಾರೀಖು ಡಾ. ಅನ್ಸಾರಿ, ಭುಲಾಭಾಯಿ ದೇಸಾಯಿ ಮತ್ತು ಡಾ. ಬಿಧನ್‌ರಾಯ್ ಅವರುಗಳು ಪಾಟ್ನಾವನ್ನು ತಲಪಿದರು. ಮುಂದೆ ಬರಲಿರುವ ಚುನಾವಣೆಗಳಲ್ಲಿ ಭಾಗವಹಿಸಲು ಸ್ವರಾಜ್ಯ ಪಕ್ಷವನ್ನು ಪುನಃ ಚೇತನಗೊಳಿಸಲು ಸಮ್ಮೇಳನದಲ್ಲಿ ನಿರ್ಣಯಿಸಲಾಗಿತ್ತು. ಡಿಲ್ಲಿಯಲ್ಲಾದ ನಿರ್ಣಯಗಳಿಗೆ ಸಂಬಂಧವಿಲ್ಲದೆ, ಸ್ವತಂತ್ರವಾಗಿ ಸ್ವರಾಜ್ಯಕ್ಕಾಗಿ ಶಾಸನೋಲ್ಲಂಘನದ ಕಾರ್ಯಕ್ರಮವನ್ನು ನಿಲ್ಲಿಸಬೇಕೆಂದು ಗಾಂಧೀಯವರು ನಿರ್ಧರಿಸಿದ್ದರು. ಆದ್ದರಿಂದ ಶಾಸನ ಸಭೆಗಳಲ್ಲಿ ಕೆಲಸಮಾಡುವುದು ನಿರರ್ಥಕವೆಂದು ಅವರು ೧೯೨೦ ರಲ್ಲಿ ತಾಳಿದ ಅಭಿಪ್ರಾಯದಲ್ಲಿ ಯಾವ ಬದಲಾವಣೆ ಆಗದಿದ್ದರೂ, ಸ್ವರಾಜ್ಯ ಪಕ್ಷವನ್ನು ಮತ್ತೆ ಚೇತನಗೊಳಿಸಬೇಕೆಂಬ ನಿರ್ಣಯವನ್ನು ಅವರು ಸ್ವಾಗತಿಸಿದರು. ಏಪ್ರಿಲ್ ೭ ನೆಯ ತಾರೀಖು ಪಾಟ್ನಾದಿಂದ ಅವರು ಕೊಟ್ಟ ಹೇಳಿಕೆಯಲ್ಲಿ ಅವರು ಈ ರೀತಿ ನುಡಿದರು:—]

ಈ ಹೇಳಿಕೆಯನ್ನು ೨ ನೆಯ ತಾರೀಖು, ಈಸ್ಟರ್ ಸೋಮವಾರ ನನ್ನ, ಮೌನದ ದಿನದಲ್ಲಿ ಸಹಾರಸ ಎಂಬ ಸ್ಥಳದಿಂದ ನಾನು ಬರೆಯುತ್ತಿದ್ದೇನೆ. ಇದನ್ನು ರಾಜೇಂದ್ರಬಾಬು ಅವರಿಗೆ ತೋರಿಸಿದೆ. ಆಮೇಲೆ ಅಲ್ಲಿದ್ದ ಇತರ ಮಿತ್ರರಿಗೂ ತೋರಿಸಿದೆ. ನಾನು ಮೊದಲು ಬರೆದ ಕರಡಿನಲ್ಲಿ ಬಹಳ ಬದಲಾವಣೆಯಾಗಿದೆ. ಆದರೆ ತತ್ತ್ವತಃ ನಾನು ಸೋಮವಾರ ಬರೆದಂತೆಯೇ ಇದೆ. ನನ್ನ ಅಂತರಂಗವನ್ನು ಚೆನ್ನಾಗಿ ಪರೀಕ್ಷಿಸಿ, ದೇವರಲ್ಲಿ ಮೊರೆಯಿಟ್ಟುದರ ಫಲವೇ ಈ ನನ್ನ ನಿರ್ಧಾರ ಮತ್ತು ಇದರಲ್ಲಿರುವ ಪ್ರತಿಯೊಂದು ಶಬ್ದ. ಯಾವ ವ್ಯಕ್ತಿಯ ವಿಷಯದಲ್ಲಿಯಾಗಲಿ ಈ ನಿರ್ಧಾರದಲ್ಲಿ ಆರೋಪಣೆ ಇಲ್ಲ. ನನ್ನ ಶಕ್ತಿ ಸೀಮಿತವೆಂಬುದನ್ನು ಇದರಲ್ಲಿ ನಾನು ಒಪ್ಪಿಕೊಂಡಿದ್ದೇನೆ. ಇಷ್ಟು ವರ್ಷಗಳಾಗಿ ನಾನು ಹೊತ್ತು ಬಂದ ಜವಾ

ಬುದಾರಿ ಎಷ್ಟು ಗುರುತರವಾದುದೆಂಬ ನನ್ನ ಅರಿವನ್ನು ಇದರಲ್ಲಿ ವ್ಯಕ್ತ ಮಾಡಿದ್ದೇನೆ.

ಸತ್ಯಾಗ್ರಹ ಆಶ್ರಮದಲ್ಲಿರುವ ಆಶ್ರಮವಾಸಿಗಳೊಂದಿಗೂ ಅವರ ಮಿತ್ರರೊಂದಿಗೂ ನಾನು ನಡೆಸಿದ ಅನೌಪಚಾರಿಕವೂ ಆತ್ಮೀಯವೂ ಆದ ಮಾತುಕತೆಗಳಿಂದ ಇದಕ್ಕೆ ಸ್ಫೂರ್ತಿ ದೊರೆಯಿತು. ವಿಶೇಷವಾಗಿ ಮತ್ತೊಂದು ಪ್ರೇರಣೆಯೂ ಆಯಿತು. ಅನೇಕ ವರ್ಷಗಳಿಂದ ನನಗೆ ಪರಿಚಯವುಳ್ಳ ಆದರಣೀಯರಾದ ಸಹೋದ್ಯೋಗಿಯೊಬ್ಬರು ನೆರೆಮನೆಯಲ್ಲಿ ತಮಗೆ ನೇಮಿಸಿದ ಕೆಲಸವನ್ನು ಮಾಡಲು ನಿರಾಕರಿಸಿ ತಮ್ಮ ಸ್ವಂತ ಅಧ್ಯಯನದಲ್ಲಿ ನಿರತರಾದರೆಂಬ ಅರ್ಥಪೂರ್ಣವಾದ ಸುದ್ದಿ ನನಗೆ ಮುಟ್ಟಿತು. ಈ ರೀತಿಯ ನಡತೆ ಸತ್ಯಾಗ್ರಹದ ನಿಯಮಕ್ಕೆ ವಿರುದ್ಧವಾದುದು. ಈ ಮಿತ್ರರನ್ನು ನಾನು ಬಹಳ ಪ್ರೀತಿಸುತ್ತೇನೆ. ಈ ಬಗೆಯ ಆಚರಣೆಯಿಂದ ಅವರ ನ್ಯೂನತೆಗಿಂತಲೂ ನನ್ನಲ್ಲಿರುವ ನ್ಯೂನತೆಯನ್ನೇ ನಾನು ಮನಗಂಡೆ. ಅವರ ನ್ಯೂನತೆಗಳನ್ನು ನಾನು ಅರಿತೇ ಇದ್ದೆನೆಂದು ಅವರು ಭಾವಿಸಿದ್ದುದಾಗಿ ನನಗೆ ಹೇಳಿದರು. ನಾನು ಅಂಧನಾಗಿದ್ದೆ. ಒಬ್ಬ ನಾಯಕನು ಹೀಗೆ ಕಣ್ಣುಮುಚ್ಚಿರುವುದು ಅಕ್ಷಮ್ಯವಾದ ಅಪರಾಧ. ಈ ರೀತಿಯ ಶಾಂತ ರೀತಿಯ ಶಾಸನೋಲ್ಲಂಘನದ ಕಾರ್ಯಕ್ರಮಕ್ಕೆ ನಾನೊಬ್ಬನೇ ಏಕಮಾತ್ರ ಪ್ರತಿನಿಧಿಯಾಗಿರಬೇಕೆಂದು ನನಗೆ ತಟ್ಟನೆ ವೇದ್ಯವಾಯಿತು.

ಹೋದ ಜುಲೈ ತಿಂಗಳು ಪೂನಾದಲ್ಲಿ ಅನೌಪಚಾರಿಕ ಸಮ್ಮೇಳನದಲ್ಲಿ ನಾವು ಸೇರಿದ್ದಾಗ ವೈಯಕ್ತಿಕ ಶಾಸನೋಲ್ಲಂಘನ ಮಾಡಲು ಅನೇಕರು ಸ್ವಾಗತಿಸಿದರೂ, ಸತ್ಯಾಗ್ರಹದ ಸಂದೇಶವನ್ನು ಜೀವಂತವಾಗಿ ಉಳಿಸಲು ಒಬ್ಬ ವ್ಯಕ್ತಿ ಇದ್ದರೂ ಸಾಕೆಂದು ನಾನು ಹೇಳಿದ್ದೆನು. ಈ ವಿಷಯವನ್ನು ನನ್ನ ಅಂತರಂಗದಲ್ಲಿ ಕೂಲಂಕಷವಾಗಿ ವಿಮರ್ಶಿಸಿ, ಈಗಿನ ಪರಿಸ್ಥಿತಿಯಲ್ಲಿ ನಮ್ಮ ಉದ್ಯಮ ಪೂರ್ಣ ಸ್ವರಾಜ್ಯಪ್ರಾಪ್ತಿಗೆ ಸಹಾಯಕವಾಗಬೇಕಾದರೆ ಬೇರೆ ಯಾರೂ ಅಲ್ಲದೆ ನಾನೊಬ್ಬನೇ ಈ ಶಾಸನೋಲ್ಲಂಘನದ ಜವಾಬುದಾರಿಯನ್ನು ಸದ್ಯಕ್ಕೆ ವಹಿಸಬೇಕೆಂಬ ನಿರ್ಧಾರಕ್ಕೆ ಬಂದಿರುವೆನು.

ಸತ್ಯಾಗ್ರಹದ ಪೂರ್ಣ ಸಂದೇಶ ನಮ್ಮ ಜನ ಸಾಮಾನ್ಯರಿಗೆ ಇನ್ನೂ ಮುಟ್ಟಿಲ್ಲವೆಂದು ನನಗನಿಸುತ್ತದೆ. ಏಕೆಂದರೆ ಅದನ್ನು ಪ್ರಚಾರಮಾಡು ವುದರಲ್ಲಿ ಅದರ ಶುದ್ಧ ಸ್ವರೂಪ ಕೆಟ್ಟು ಹೋಗಿದೆ. ಆಧ್ಯಾತ್ಮಿಕ ಸಲಕರಣೆಗಳನ್ನೂ ಸಾಧನಗಳನ್ನೂ, ಈ ಆಧ್ಯಾತ್ಮಿಕ ಭೂಮಿಕೆಯಿಲ್ಲದ ಮಾರ್ಗಗಳಲ್ಲಿ ಪ್ರಯೋಗಿಸಿ ಕಲಿಸಲೆತ್ನಿಸುವುದರಿಂದ ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತವೆಂಬ ಅಂಶ ಸ್ಪಷ್ಟಗೊಂಡಿದೆ. ಆಧ್ಯಾತ್ಮಿಕ ಉಪದೇಶ ಗಳು ತಮ್ಮ ಸ್ವಂತ ಶಕ್ತಿಯಿಂದಲೇ ಪ್ರಚಾರಗೊಳ್ಳುತ್ತವೆ. ಈ 'ಹರಿಜನ ಪ್ರವಾಸದಲ್ಲಿ' ನಾನು ಕಂಡ ಜನ ಸಾಮಾನ್ಯರ ಪ್ರತಿಕ್ರಿಯೆ ನನ್ನ ಅಭಿಪ್ರಾಯಕ್ಕೆ ಬಹಳ ಬಲವತ್ತರವಾದ ನಿದರ್ಶನವನ್ನು ಒದಗಿಸಿದೆ. ಜನಸ್ತೋಮ ತಾನಾಗಿಯೇ ಈ ಉದ್ಯಮಕ್ಕೆ ಅದ್ಭುತವಾದ ಸ್ವಾಗತ ನೀಡಿದೆ. ಕಾರ್ಯಕರ್ತರಿಗೇ ಇದು ಆಶ್ಚರ್ಯವನ್ನುಂಟುಮಾಡಿತು. ಜನರು ತಂಡೋಪತಂಡವಾಗಿ ನೆರೆದರು. ಅಮಿತ ಉತ್ಸಾಹವನ್ನು ತೋರಿಸಿದರು. ಇಷ್ಟು ಜನರನ್ನು ನಮ್ಮ ಕಾರ್ಯಕರ್ತರು ಎಂದೂ ಸಂದರ್ಶಿಸಿರಲಿಲ್ಲ.

ಸತ್ಯಾಗ್ರಹ ಕೇವಲ ಆಧ್ಯಾತ್ಮಿಕ ಶಸ್ತ್ರ. ಅದನ್ನು ಲೌಕಿಕವೆಂದು ಕಾಣುವ ಉದ್ದೇಶಗಳಿಗಾಗಿ ಉಪಯೋಗಿಸಬಹುದು: ಅದನ್ನು ಪ್ರಯೋ ಗಿಸುವ ನಾಯಕನಿಗೆ ಅದೊಂದು ಆಧ್ಯಾತ್ಮಿಕ ಸಾಧನೆಯೆಂಬ ಅರಿವು ಇದ್ದ ಪಕ್ಷಕ್ಕೆ ಮಾತ್ರ ಅದರ ಅರಿವಿಲ್ಲದ ಸ್ತ್ರೀಪುರುಷರ ಮೂಲಕವೂ ಈ ಪ್ರಯೋಗವನ್ನು ನಡೆಸಬಹುದು. ಎಲ್ಲರಿಗೂ ವೈದ್ಯಕೀಯ ಶಸ್ತ್ರ ಗಳನ್ನುಪಯೋಗಿಸಲು ಬರುವುದಿಲ್ಲ. ಆದರೆ ಒಬ್ಬ ತಜ್ಞನು ಅವರ ಹಿಂದೆ ನಿಂತಿದ್ದ ಪಕ್ಷಕ್ಕೆ ಅನೇಕರು ಈ ಶಸ್ತ್ರಗಳನ್ನು ಉಪಯೋಗಿಸಬಲ್ಲರು. ನಾನಿನ್ನೂ ತಯಾರಿ ಪಡೆಯುತ್ತಿರುವ ಸತ್ಯಾಗ್ರಹ ತಜ್ಞನೆಂದು ಹೇಳಿ ಕೊಳ್ಳಬಲ್ಲೆ. ವೈದ್ಯ ಶಾಸ್ತ್ರವನ್ನು ಪೂರ್ಣವಾಗಿ ಅರಿತ ಶಸ್ತ್ರಚಿಕಿತ್ಸಾ ನಿಪುಣನಿಗಿಂತಲೂ ನಾನು ಹೆಚ್ಚು ಜಾಗರೂಕನಾಗಿರಬೇಕಾದುದು ಅವಶ್ಯ ವಾಗಿದೆ. ನಾನು ಇನ್ನೂ ಒಬ್ಬ ವಿನಮ್ರ ಅನ್ವೇಷಕ. ಮುಂದಿರುವ ಹೆಜ್ಜೆ ಮಾತ್ರ ಗೋಚರಿಸುತ್ತದೆ: ಇದಕ್ಕೂ ಹೆಚ್ಚಾಗಿ ಅಭ್ಯಾಸಿ ಕಾಣ ಲಾರನು. ಸತ್ಯಾಗ್ರಹ ಶಾಸ್ತ್ರದ ಮರ್ಮವೇ ಅಂತಹುದು.

ಆಶ್ರಮ ನಿವಾಸಿಗಳೊಂದಿಗೆ ನಾನು ನಡೆಸಿದ ಮಾತುಕತೆಗಳಿಂದ

ಪ್ರೇರಿತವಾದ ಮನಸ್ಸಿನ ಶೋಧನೆಯ ಪರಿಣಾಮವಾಗಿ ನಾನು ಮಾಡಿರುವ ನಿರ್ಧಾರವೇನೆಂದರೆ ಸ್ವರಾಜ್ಯ ಪ್ರಾಪ್ತಿಗೆ ಶಾಸನೋಲ್ಲಂಘನೆ ಮಾಡುವ ಉದ್ಯಮವನ್ನು ಕಾಂಗ್ರೆಸ್ಸಿಗರು ಸದ್ಯಕ್ಕೆ ಕೈಬಿಡಬೇಕೆಂದು ನಿರ್ದಿಷ್ಟವಾದ ಅನ್ಯಾಯಗಳಿಗಾಗಿ ಮಾಡುವ ಮಾತು ಬೇರೆ. ಈ ವಿಷಯವನ್ನು ಅವರು ನನಗೇ ಬಿಡಬೇಕು. ನಾನು ಜೀವಂತವಾಗಿರುವವರೆಗೂ, ಅದನ್ನು, ಇತರರು ಕೈಗೊಳ್ಳುವ ಪಕ್ಷಕ್ಕೆ ಅದು ನನ್ನ ಮೇಲ್ವಿಚಾರಣೆಯಲ್ಲಿಯೇ ಆಗಬೇಕು. ಸತ್ಯಾಗ್ರಹ ಶಸ್ತ್ರವನ್ನು ನನಗಿಂತಲೂ ಚೆನ್ನಾಗಿ ಅರಿತವರೂ, ಜನರ ವಿಶ್ವಾಸಕ್ಕೆ ಪಾತ್ರರೂ ಆದ ಯಾರಾದರೂ ಹೇಳಿಕೊಂಡರೆ ಅದು ಬೇರೆ ಮಾತು. ಸತ್ಯಾಗ್ರಹ ಕರ್ತನೂ, ಪ್ರವರ್ತಕನೂ ನಾನಾಗಿರುವುದರಿಂದ ಈ ಅಭಿಪ್ರಾಯವನ್ನು ವ್ಯಕ್ತಮಾಡುತ್ತಿದ್ದೇನೆ. ನನ್ನ ಸಲಹೆಯಂತೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಶಾಂತಿಯುತ ಶಾಸನೋಲ್ಲಂಘನವನ್ನು ಈವರೆಗೂ ಆಚರಿಸಿದವರು ಇನ್ನು ಮುಂದೆ ದಯಮಾಡಿ ಆಚರಿಸಬಾರದು. ಸ್ವಾತಂತ್ರ್ಯಕ್ಕಾಗಿ ಭಾರತ ದೇಶವು ಹೂಡಿರುವ ಈ ಶಾಂತಿ ಸಮರದ ಹಿತದೃಷ್ಟಿಯಿಂದ ಇದೇ ಉತ್ತಮ ಮಾರ್ಗವೆಂದು ನನ್ನ ಖಚಿತವಾದ ಅಭಿಮತ.

ಮಾನವಕೋಟಿಯ ಅಭ್ಯುದಯಕ್ಕೆ ಬಳಸಬಲ್ಲ ಸತ್ಯಾಗ್ರಹವೆಂಬ ಈ ಅತ್ಯುತ್ತಮ ಆಯುಧದ ವಿಷಯದಲ್ಲಿ ನಾನು ಅತೀವ ಶ್ರದ್ಧೆಯುಳ್ಳವನಾಗಿದ್ದೇನೆ. ಹಿಂಸೆ ಹಾಗೂ ಯುದ್ಧದ ಬದಲು ಪೂರ್ಣವಾಗಿ ಬಳಸಬಹುದಾದ ಆಯುಧವಿದೆಂದು ಹೇಳಲಾಗಿದೆ. ಆದಕಾರಣ ಹಿಂಸಾಕೃತ್ಯಗಳನ್ನೆಸಗಿ ಸರಕಾರವನ್ನು ಪಲ್ಲಟ ಮಾಡಬೇಕೆಂದು ಬಯಸುವವರ ಮನಸ್ಸನ್ನೂ ಬದಲಾಯಿಸುವ ಶಕ್ತಿ ಇದರಲ್ಲಿದೆ. ಈ ಹಿಂಸಾವಾದಿಗಳನ್ನು ನಿರ್ಮೂಲ ಮಾಡಲು ಇಡೀ ಜನಾಂಗವನ್ನೆಲ್ಲ ನಿರ್ವೀರ್ಯರನ್ನಾಗಿ ಮಾಡಲೆಳಸುವ ಆಳರಸರ ಮನಸ್ಸನ್ನೂ ಬದಲಾಯಿಸುವ ಶಕ್ತಿ ಇದರಲ್ಲಿದೆ. ಆದರೆ ಅಸಂಪೂರ್ಣವಾಗಿಯೇ ಅಸಡ್ಡೆಯಿಂದಲೂ ಅನೇಕರು ನಡೆಸಿರುವ ಶಾಸನೋಲ್ಲಂಘನೆ — ಅದರ ಪರಿಣಾಮಗಳು ಎಷ್ಟೇ ಅದ್ಭುತವಾಗಿದ್ದರೂ, ಈ ಈರ್ವರ—ಹಿಂಸಾವಾದಿಗಳ ಹಾಗೂ ಆಳರಸರ ಮನಸ್ಸನ್ನು ಮುಟ್ಟಲಿಲ್ಲ. ಇದರ ನಿಜವಾದ ಶಕ್ತಿಯನ್ನು ಪರೀಕ್ಷಿಸಬೇಕಾದರೆ, ಸತ್ಯಾಗ್ರಹ

ಒಂದು ಸಮಯುವಲ್ಲಿ ಯೋಗ್ಯತೆಯುಳ್ಳ ಒಬ್ಬರೇ ಆಚರಿಸುವಂತಿರಬೇಕು. ಈ ಪ್ರಯೋಗ ಎಂದೂ ನಡೆದಿಲ್ಲ. ಅದನ್ನು ಈಗ ಮಾಡಲು ಸಾಧ್ಯವಾದೀತು.

ಸತ್ಯಾಗ್ರಹವೆಂದರೆ ಕೇವಲ ಶಾಂತಿಯುತವಾದ ಶಾಸನೋಲ್ಲಂಘನೆ ಎಂಬ ತಪ್ಪು ತಿಳಿವಳಿಕೆಯು ವಿಚಾರದಲ್ಲಿ ನಾನು ಎಚ್ಚರಿಕೆಯನ್ನು ಕೊಡಬೇಕು. ಸತ್ಯಾಗ್ರಹವೆಂದರೆ ಕಠೋರವಾದ ಎಡೆಬಿಡದ ಸತ್ಯಾನ್ವೇಷಣೆ. ಈ ಬಗೆಯ ಅನ್ವೇಷಣೆಯಿಂದ ಅನ್ವೇಷಕನಿಗೆ ಲಭಿಸಿದ ಶಕ್ತಿಯನ್ನು ಪ್ರಯೋಗಿಸಬೇಕಾದರೆ ಅದು ಪೂರ್ಣ ಅಹಿಂಸಾ ಮಾರ್ಗದಿಂದ ಮಾತ್ರ ಸಾಧ್ಯ.

ಹೀಗೆ ಮಾಡುವುದಾದರೆ ಅನೇಕ ಶಾಸನೋಲ್ಲಂಘಕರು ಸುಮ್ಮನೆ ಇರಬೇಕಾಗುತ್ತದೆ. ಅವರಾವ ಕಾರ್ಯವನ್ನು ಮಾಡಬೇಕು ? ಕರೆ ಬಂದಾಗ ಅದಕ್ಕೆ ಓ ಕೊಡಲು ಅವರು ಸಿದ್ಧರಾಗಿರಬೇಕಾದರೆ ಆತ್ಮತ್ಯಾಗ ಮತ್ತು ಸ್ವೇಚ್ಛೆಯಿಂದಲೇ ಬಡತನವನ್ನು ವರಿಸುವುದರಲ್ಲಿರುವ ಕಲೆಯನ್ನೂ ಸೌಂದರ್ಯವನ್ನೂ ಅವರು ಕಲಿಯುವವರಾಗಬೇಕು. ಖಾದೀ ಪ್ರಚಾರ, ತಾವೂ ನೂಲುವುದು ನೇಯುವುದು, ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ತಮ್ಮ ನಿರ್ದುಷ್ಟವಾದ ನಡವಳಿಕೆಯಿಂದ ಎಲ್ಲ ಕೋಮಿನ ಜನರಲ್ಲಿಯೂ ಪರಸ್ಪರ ಸೌಹಾರ್ದವನ್ನು ವೃದ್ಧಿ ಮಾಡುವುದು, ತಮ್ಮ ಸ್ವಂತ ಆಚರಣೆಯಲ್ಲಿ ಅಸ್ಪೃಶ್ಯತಾಭಾವನೆ ಯಾವ ರೀತಿಯಲ್ಲಾಗಲಿ ರೂಪದಲ್ಲಾಗಲಿ ಇಲ್ಲದಂತೆ ಮಾಡುವುದು : ಮಾದಕದ್ರವ್ಯ ಸೇವನೆಯನ್ನು ನಿಷೇಧಿಸುವಂತೆ ಪ್ರತ್ಯಕ್ಷವಾಗಿ ಇದಕ್ಕೆ ಕಟ್ಟುಬಿದ್ದಿರುವ ವ್ಯಕ್ತಿಗಳೊಂದಿಗೆ ಬೆರೆತು ಅವರ ದುಷ್ಟ ಚಾಳಿಯಿಂದ ಅವರನ್ನು ತಪ್ಪಿಸುವುದು, ಸಾಮಾನ್ಯವಾಗಿ ತಮ್ಮ ಶೀಲವನ್ನು ಪರಿಶುದ್ಧವನ್ನಾಗಿಡಲು ಸತತ ಪ್ರಯತ್ನ—ಈ ಮೂಲಕ ರಾಷ್ಟ್ರನಿರ್ಮಾಣ ಕಾರ್ಯಗಳಲ್ಲಿ ಅವರು ತೊಡಗಬೇಕು. ಬಡ ಜನರ ಜೀವನ ದರ್ಜೆಗೆ ತಕ್ಕಂತೆ ತಮ್ಮ ಬಾಳನ್ನು ನಡೆಸಲು ಈ ಸೇವಾಕಾರ್ಯಗಳು ನೆರವಾಗುತ್ತವೆ. ಈ ಬಡತನದ ಜೀವನವನ್ನು ನಡೆಸಲು ಯಾರಿಗೆ ಆಗುವುದಿಲ್ಲವೊ ಅಂಥವರು ಹೆಚ್ಚು ಸಂಪಾದನೆಯನ್ನು ಒದಗಿಸುವ ರಾಷ್ಟ್ರದ ಏಳಿಗೆಗೆ ಸಹಾಯವಾಗುವ ಅಷ್ಟು ವ್ಯವಸ್ಥಿತಗೊಳ್ಳದ ಸಣ್ಣ ಕೈಗಾರಿಕೆಗಳನ್ನು

ಪ್ರಾರಂಭಿಸಿ ಕೆಲಸ ಮಾಡಬಹುದು. ಈ ಒಂದು ಮಾತು ಸ್ಪಷ್ಟವಿರಲಿ: ಕಾನೂನಿಗೂ, ನಿಯಮಗಳಿಗೂ ಬದ್ಧರಾಗಿ, ಅವುಗಳನ್ನು ಅರಿತು, ಅವುಗಳ ಪಾಲನೆ ವಿಧೇಯತೆಯಿಂದ ತಾವಾಗಿ ಮಾಡುವ ಕರ್ತವ್ಯನಿಷ್ಠೆ ಯಾರಲ್ಲಿರುವುದೊ ಅಂಥವರೇ ಶಾಸನೋಲ್ಲಂಘನಕ್ಕೆ ಅಧಿಕಾರ ಪಡೆದವರು.೧೧

## ೧೨. ಕಾಂಗ್ರೆಸ್ಸಿನಿಂದ ನಿವೃತ್ತಿ—ಹೇಳಿಕೆ

[ ಗಾಂಧೀಯವರ ಚಟುವಟಿಕೆಗಳೂ, ಹೇಳಿಕೆಗಳೂ, ಅವರು ಪೂರ್ತಿಯಾಗಿ ಕಾಂಗ್ರೆಸ್ಸಿನಿಂದ ನಿವೃತ್ತಿಯಾಗುವರೆಂಬ ವದಂತಿಯನ್ನು ಹುಟ್ಟಿಸಿದುವು. ಇದನ್ನು ಅವರು ಸ್ಥಿರೀಕರಿಸಿ, ವರ್ಧಾಗಂಜಿನಿಂದ, ೧೯೩೪ರ ಸೆಪ್ಟಂಬರ್ ೧೭ನೆಯ ತಾರೀಖು ಒಂದು ದೀರ್ಘವಾದ ಹೇಳಿಕೆಯನ್ನಿತ್ತು ತಮ್ಮ ನಿವೃತ್ತಿಗೆ ಕಾರಣಗಳನ್ನು ಈ ರೀತಿ ತಿಳಿಸಿದರು: ]

ನಾನು ಭೌತಿಕ ದೃಷ್ಟಿಯಲ್ಲಿ ಕಾಂಗ್ರೆಸ್ಸಿನಿಂದ ನಿವೃತ್ತನಾಗುವ ವಿಚಾರ ಮಾಡುತ್ತಿರುವೆನೆಂದು ಹುಟ್ಟಿರುವ ವಾರ್ತೆ ನಿಜವಾದುದು. ಆದರೆ ಕಾರ್ಯಕಾರೀ ಸಮಿತಿಯು (Working Commitee) ಮತ್ತು ಪಾರ್ಲಿಮೆಂಟರಿ ಬೋರ್ಡಿನ ಸಭೆಗಾಗಿ ಕಳೆದ ವಾರ ವರ್ಧಾಕ್ಕೆಬಂದ ಮಿತ್ರರು ಮಾಡಿದ ಸಲಹೆಗಳ ಮೇರೆಗೆ, ನಾನು ಕಾಂಗ್ರೆಸ್ಸನ್ನು ಬಿಡುವುದೇ ಆದರೆ, ಮುಂದಿನ ಕಾಂಗ್ರೆಸ್ ಅಧಿವೇಶನದ ಅನಂತರ ಹಾಗೆ ಮಾಡಬೇಕೆಂದು ಒಪ್ಪಿದೆನು. ಪಂಡಿತ್ ಗೋವಿಂದ ವಲ್ಲಭಪಂತರೂ ರಫಿ ಅಹಮದ್ ಕಿದ್ವಾಯಿ ಅವರೂ ಒಂದು ಮಧ್ಯಮಾರ್ಗವನ್ನು ಸೂಚಿಸಿದರು: ಕಾಂಗ್ರೆಸ್ಸಿನಲ್ಲೇ ಉಳಿದುಕೊಂಡು, ಸಂಸ್ಥೆಯ ಆಡಳಿತದಲ್ಲಿ ಯಾವ ಕಾರ್ಯಭಾರವನ್ನೂ ವಹಿಸದೆ ಇರುವುದು. ಆದರೆ ಸರದಾರ್ ವಲ್ಲಭಭಾಯಿ ಪಟೇಲ್ ಮತ್ತು ಮೌಲಾನಾ ಅಬುಲ್‌ಕಲಾಂ ಆಜಾದರು ಈ ಮಾರ್ಗವನ್ನು ತೀವ್ರವಾಗಿ ನಿರಾಕರಿಸಿದರು. ಕಾಂಗ್ರೆಸ್ಸಿನಿಂದ ನಾನು ನಿವೃತ್ತನಾಗುವ ಸಮಯ ಬಂದಿದೆಯೆಂಬ ನನ್ನ ಅಭಿಪ್ರಾಯವನ್ನು ಸರದಾರ್ ವಲ್ಲಭಭಾಯಿ ಪಟೇಲರು ಒಪ್ಪಿದರು: ಆದರೆ ಅನೇಕರು ಇದಕ್ಕೆ ಒಪ್ಪಲಿಲ್ಲ. ಪೂರ್ವಾಪರ ಎಲ್ಲ ವಿಚಾರಗಳನ್ನೂ ಗಣನೆಗೆ

ತೆಗೆದುಕೊಂಡು ಅಕ್ಟೋಬರ್‌ನಲ್ಲಿ ನಡೆಯುವ ಅಧಿವೇಶನದ ನಂತರ ಈ ಅಂತಿಮ ಕಾರ್ಯವನ್ನು ಮಾಡಬೇಕೆಂಬ ಸುರಕ್ಷಿತವೂ ವಿವೇಕಯುಕ್ತವೂ ಆದ ನಿರ್ಧಾರಕ್ಕೆ ಬಂದಿದ್ದೇನೆ. ಕಾಂಗ್ರೆಸ್ಸಿನಲ್ಲಿರುವ ಅನೇಕ ಬುದ್ಧಿವಂತರು ನನ್ನ ವಿಧಾನದಿಂದಲೂ ಅಭಿಪ್ರಾಯಗಳಿಂದಲೂ ಅವುಗಳಿಂದ ಪ್ರೇರಿತವಾದ ಕಾರ್ಯಕ್ರಮಗಳಿಂದಲೂ ಬೇಸರಗೊಂಡಿರುವರೆಂದೂ, ಕಾಂಗ್ರೆಸ್ಸಿನ ಸಹಜವಾದ ವಿಕಾಸಕ್ಕೆ ನಾನು ಸಹಾಯಕನಾಗಿಲ್ಲದೆ ಅಡ್ಡಿಯಾಗಿದ್ದೇನೆಂದೂ, ಕಾಂಗ್ರೆಸ್ ಸಂಸ್ಥೆ ಉತ್ತಮ ಪ್ರಜಾಶಕ್ತಿ, ಪ್ರತಿನಿಧಿತ್ವದಿಂದ ಕೂಡಿದ ಸಂಸ್ಥೆಯಾಗಿರದೆ ನನ್ನ ವ್ಯಕ್ತಿತ್ವದ ಪ್ರಭಾವಕ್ಕೆ ಬಹಳ ಒಳಗಾಗಿದೆಯೆಂದೂ, ಅದರಲ್ಲಿ ಸ್ವತಂತ್ರ ವಿಚಾರಕ್ಕೆ ಅವಕಾಶವಿಲ್ಲದಂತೆ ಆಗಿದೆಯೆಂದೂ—ಈ ಬಗೆಯ ವಿಚಾರಗಳು ನನ್ನಲ್ಲಿ ಮೂಡಿದ್ದುವು—ನನ್ನ ಈ ಭಾವನೆಗಳು ನಿಜವೇ ಎಂದು ಪರೀಕ್ಷಿಸಲು ನನ್ನ ನಿವೃತ್ತಿಯನ್ನು ಮುಂದೂಡಬೇಕೆಂದು ಒತ್ತಾಯಮಾಡಿದುದರ ಫಲವಾಗಿ ನನಗೆ ಅವಕಾಶ ದೊರೆಯುವಂತೆ ಆದುದರಿಂದ ಅದು ನನ್ನನ್ನು ಆಕರ್ಷಿಸಿತು.

ನನ್ನ ಈ ಭಾವನೆ ನಿಜವೇ ಇಲ್ಲವೆ ಎನ್ನುವುದನ್ನು ಪರೀಕ್ಷಿಸಬೇಕಾದರೆ ನನಗೆ ಇಂತಹ ಭಾವನೆ ಉಂಟಾದುದಕ್ಕೆ ಕಾರಣಗಳನ್ನೂ ಆ ಆಧಾರದ ಮೇಲೆ ನನ್ನ ಸಲಹೆಗಳನ್ನೂ ಸಾರ್ವಜನಿಕರ ಮುಂದಿಡಬೇಕು, ನನ್ನ ಸಲಹೆಗಳ ಬಗೆಗೆ ಕಾಂಗ್ರೆಸ್ಸಿಗರು ತಮ್ಮ ಮತವನ್ನು ಕೊಟ್ಟು ತಮ್ಮ ಅಭಿಮತವನ್ನು ಸ್ಪಷ್ಟಪಡಿಸಬಹುದು.

ನನ್ನಿಂದ ಸಾಧ್ಯವಾದಷ್ಟು ಸಂಕ್ಷೇಪವಾಗಿ ಇದನ್ನು ನಿಮ್ಮ ಮುಂದೆ ಇಡಲು ಪ್ರಯತ್ನಿಸುತ್ತೇನೆ. ಅನೇಕ ಕಾಂಗ್ರೆಸ್ಸಿಗರಿಗೂ ನನಗೂ ಮಧ್ಯೆ ಮೂಲಭೂತವಾದ ಕೆಲವು ಭಿನ್ನಾಭಿಪ್ರಾಯಗಳು ಉಂಟಾಗಿವೆ. ಮತ್ತು ಈ ಅಂತರ ಹೆಚ್ಚುತ್ತಿದೆಯೆಂದು ನನಗೆ ತೋರಿದೆ. ನನ್ನ ವಿಷಯದಲ್ಲಿ ಅನುಪಮವಾದ ನಿಷ್ಠೆ ಅಡ್ಡ ಬಾರದಿದ್ದರೆ, ಅನೇಕ ಮೇಧಾವಿಗಳಾದ ಕಾಂಗ್ರೆಸ್ಸಿಗರು ನಾನು ಹಿಡಿಯುತ್ತಿರುವ ದಾರಿಗೆ ನೇರವಾಗಿ ವಿರೋಧವಾದ ದಾರಿಯನ್ನು ಸಂತೋಷದಿಂದಲೂ ಉತ್ಸಾಹದಿಂದಲೂ ಹಿಡಿಯುತ್ತಿದ್ದರೆಂದು ತೋರುತ್ತದೆ. ನಾನು ಕಾಂಗ್ರೆಸ್ಸಿಗರ ಮುಂದೆ ಮಂಡಿಸಿದ ಸಲಹೆಗಳನ್ನು ಅವರು ಎಷ್ಟೇ ಆಕ್ಷೇಪಿಸಿದರೂ ನನ್ನ ಬಗೆಗೆ ಅನ್ಯಾದೃಶ ನಿಷ್ಠೆ

ಯನ್ನೂ ಶ್ರದ್ಧೆಯನ್ನೂ ತೋರಿದ್ದಾರೆ. ಯಾವ ನಾಯಕನೂ ಇದಕ್ಕಿಂತಲೂ ಹೆಚ್ಚಾಗಿ ಬಯಸಲು ಸಾಧ್ಯವಿಲ್ಲ. ಈ ಬಗೆಯ ನಿಷ್ಠೆ ಮತ್ತು ಶ್ರದ್ಧೆಗಳನ್ನು ನಾನು ಮುಂದೆಯೂ ನಿರೀಕ್ಷಿಸುತ್ತ ಹೋಗುವುದೆಂದರೆ ಅವರ ಮೇಲೆ ದೊಡ್ಡ ಭಾರ ಹೇರುವಂತಾಗುವುದು. ಅವರು ತೋರಿಸುವ ಭಕ್ತಿಯ ಕಾರಣದಿಂದ ಅವರಿಗೂ ನನಗೂ ಇರುವ ಭಿನ್ನಾಭಿಪ್ರಾಯಗಳ ಕಡೆಗೆ ನಾನು ಕಣ್ಣುಮುಚ್ಚಿಕೊಂಡು ಇರಬಾರದು. ಬುದ್ಧಿವಂತರಾದ ಕಾಂಗ್ರೆಸ್ಸಿಗರಿಗೂ ನನಗೂ ಇರುವ ಭಿನ್ನಾಭಿಪ್ರಾಯಗಳು ಮೂಲಭೂತವಾದುವು.

ಅವುಗಳನ್ನು ಈಗ ನಾನು ಪ್ರಸ್ತಾಪಿಸುತ್ತೇನೆ. ಚರಖಾಕ್ಕೂ ಖಾದೀಗೂ ನಾನು ಅಗ್ರಸ್ಥಾನವನ್ನು ಕೊಡುತ್ತೇನೆ. ಬುದ್ಧಿವಂತರಾದ ಕಾಂಗ್ರೆಸ್ಸಿಗರು ನೂಲುವುದನ್ನು ತೀರ ಬಿಟ್ಟಿರುವರೆಂದೇ ಹೇಳಬೇಕು. ಅವರಲ್ಲಿ ಸಾಮಾನ್ಯವಾಗಿ ಇದರಲ್ಲಿ ನಂಬಿಕೆ ಇಲ್ಲ. ಆದರೆ ನನ್ನ ಮಟ್ಟಿಗೆ ಹೇಳುವುದಾದರೆ, ಈಗಿನ ನಾಲ್ಕಾಣೆ ಚಂದಾ ಹಣಕ್ಕೆ ಬದಲಾಗಿ, ಅವರನ್ನು ಒಲಿಸಬಲ್ಲವನಾದರೆ, ನಿತ್ಯ ಸ್ವಂತವಾಗಿ ನೂಲುವುದನ್ನು ವಿಧಿಸಲು ನಾನು ಬಯಸುವೆನು. ಕಾಂಗ್ರೆಸ್ಸಿನ ಸಂವಿಧಾನದಲ್ಲಿ ಈ ಖಾದಿಯ ಬಗೆಗಿರುವ ನಿಬಂಧನೆ ಮೊದಲಿಂದಲೂ ಜಾರಿಯಲ್ಲಿಲ್ಲ. ಹೀಗಾಗಿರುವುದಕ್ಕೆ, ಈ ಮಿಥ್ಯಾ ವ್ಯವಹಾರಕ್ಕೆ ನಾನೇ ಜವಾಬುದಾರನೆಂದು ಅನೇಕರು ನನಗೆ ನೆನಪು ಕೊಡದೆ ಇಲ್ಲ. ಈ ನಿಬಂಧನೆ, ಕಾಂಗ್ರೆಸ್ಸಿಗರಿಗೆ ಇದರಲ್ಲಿ ದೃಢವಾದ ನಂಬಿಕೆ ಇದ್ದದ್ದರಿಂದ ಅಂಗೀಕಾರವಾದದ್ದಲ್ಲ; ಕೇವಲ ವೈಯಕ್ತಿಕವಾಗಿ ನನ್ನ ವಿಷಯದಲ್ಲಿ ನಿಷ್ಠೆ ಇದ್ದದ್ದರಿಂದ ಆಯಿತು. ಇದನ್ನು ನಾನು ಮನಗಂಡಿರಬೇಕಾಗಿತ್ತು. ಈ ವಾದದಲ್ಲಿ ಪ್ರಬಲವಾದ ಸತ್ತ್ವವಿದೆಯೆಂದು ನಾನು ಒಪ್ಪಿಕೊಳ್ಳಬೇಕು. ಆದರೆ ನನ್ನ ಅಭಿಮತ ದಿನೇ ದಿನೇ ಈ ರೀತಿಯಲ್ಲಿ ದೃಢಗೊಳ್ಳುತ್ತಿದೆ: ಭಾರತವು ದುಡಿಯುವ ಕೋಟ್ಯಂತರ ಮಂದಿಯ ಹಿತರಕ್ಷಣೆಗಾಗಿ ಪೂರ್ಣ ಸ್ವರಾಜ್ಯವನ್ನು ಗಳಿಸಬೇಕಾದರೆ, ಇದು ಶುದ್ಧ ಅಹಿಂಸಾಮಾರ್ಗದಿಂದ ಸಿದ್ಧಿಸಬೇಕಾದರೆ, ಚರಖವೂ ಖಾದಿಯೂ, ಅರ್ಧ ನಿರುದ್ಯೋಗಿಗಳಿಗೆ ಎಷ್ಟು ಸ್ವಾಭಾವಿಕವಾಗಬೇಕೊ ಅಷ್ಟೇ ಅಲ್ಪಸಂಖ್ಯಾತರಾದ ಸುಶಿಕ್ಷಿತರಿಗೂ ಆಗಬೇಕು. ಈ ನಿರುದ್ಯೋಗಿ

ಗಳು ಅರೆಹೊಟ್ಟೆ ತಿಂದು ಬದುಕುತ್ತಿದ್ದಾರೆ. ದೇವರು ಕೊಟ್ಟಿರುವ ಕೈಗಳನ್ನು ಅವರು ಉಪಯೋಗಿಸದೆ ದನಗಳಂತೆ ಆಗಿದ್ದಾರೆ. ಮಾನವ ಗೌರವ ಮತ್ತು ಸಮಾನತೆಗೆ ಚರಖಾ ಒಂದು ಅತ್ಯುತ್ತಮ ಪ್ರತೀಕ. ಅದು ವ್ಯವಸಾಯಕ್ಕೆ ಬಾಳಿನ ಸಖಿಯಂತಿದೆ. ರಾಷ್ಟ್ರದ ಎರಡನೆ ಶ್ವಾಸ ಕೋಶವದು. ನಮ್ಮ ಒಂದೇ ಶ್ವಾಸಕೋಶ ಕೆಲಸ ಮಾಡುತ್ತಿದೆ. ಆದ್ದ ರಿಂದ ನಾವು ಸಾಯುತ್ತಿದ್ದೇವೆ. ಹೀಗಿದ್ದರೂ ರಾಷ್ಟ್ರಾದ್ಯಂತಕ್ಕೂ ಚರಖಾ ಎಷ್ಟು ಶಕ್ತಿದಾಯಕವೆಂಬ ವಿಷಯದಲ್ಲಿ ಕೆಲವೇ ಕಾಂಗ್ರೆಸ್ಸಿಗರಿಗೆ ನಿಜ ವಾದ ಶ್ರದ್ಧೆ ಇದೆ. ಕಾಂಗ್ರೆಸ್ಸಿನ ನಿಯಮಾವಳಿಯಿಂದ ಈ ಖಾದೀ ನಿಬಂಧನೆಯನ್ನು ತೆಗೆದು ಹಾಕಿದರೆ ಕಾಂಗ್ರೆಸ್ಸು ಯಾವ ಕೋಟ್ಯಂತರ ಜನಸಾಮಾನ್ಯರ ಪ್ರತಿನಿಧಿಯಾಗಿರಲು ಆರಿಸಿತೊ ಆ ಜನಸಾಮಾನ್ಯರಿಗೂ ಅದಕ್ಕೂ ಇರುವ ಸಜೀವ ಸಂಬಂಧವನ್ನು ಕಡಿದುಹಾಕಿದಂತಾಗುವುದು. ಆದರೆ ಈ ನಿಬಂಧನೆ ಇರುವ ಪಕ್ಷಕ್ಕೆ ಅದನ್ನು ಚಾಚೂ ತಪ್ಪದೆ ಪಾಲಿಸ ಬೇಕು. ಆದರೆ ಕಾಂಗ್ರೆಸ್ಸಿಗರಲ್ಲಿ ಬಹುಸಂಖ್ಯಾತರಿಗೆ ಇದರಲ್ಲಿ ಜೀವಂತ ಶ್ರದ್ಧೆ ಇಲ್ಲದಿದ್ದರೆ ಇದು ಸಾಧ್ಯವಿಲ್ಲ.

ಇನ್ನು ಪಾರ್ಲಿಮೆಂಟರಿ ಬೋರ್ಡಿನ ವಿಷಯ ನಾನು ಅಸಹಕಾರ ಆಂದೋಲನದ ಕರ್ತನಾಗಿದ್ದರೂ ದೇಶದ ಈಗಿನ ಪರಿಸ್ಥಿತಿಯಲ್ಲಿ, ಶಾಸನ ಗಳ ಶಾಂತಿಯುತ ಪ್ರತಿಭಟನೆಯ ಕಾರ್ಯಕ್ರಮ ನಮ್ಮ ಮುಂದಿಲ್ಲದಿರು ವಾಗ, ಈಗ ಕಾಂಗ್ರೆಸ್ ಕೈಗೊಳ್ಳಬೇಕಾದ ಯಾವ ಕಾರ್ಯಕ್ರಮದಲ್ಲೇ ಆಗಲಿ ಕಾಂಗ್ರೆಸ್ಸಿಗೆ ಸೇರಿದಂತೆಯೇ ಒಂದು ಪಾರ್ಲಿಮೆಂಟರಿ ಪಕ್ಷ ಅವಶ್ಯವಾದ ಭಾಗವೆಂದು ನನ್ನ ಖಚಿತವಾದ ಅಭಿಮತ. ಈ ವಿಷಯದಲ್ಲಿ ತೀವ್ರವಾದ ಭಿನ್ನಾಭಿಪ್ರಾಯಗಳಿವೆ. ಪಾಟ್ನಾದಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯಲ್ಲಿ ಈ ವಿಷಯವನ್ನು ಮಂಡಿಸುವಾಗ ನಾನು ಬಲವತ್ತರವಾದ ರೀತಿಯಲ್ಲಿ ಒತ್ತಾಯಪಡಿಸಿದುದು, ನಮ್ಮ ಅನೇಕ ಉತ್ತಮ ಸಹೋದ್ಯೋಗಿಗಳಿಗೆ ಖೇದವನ್ನುಂಟುಮಾಡಿತು : ಆದರೆ ತಮ್ಮ ಅಭಿಮತಕ್ಕನುಸಾರವಾಗಿ ನಡೆದುಕೊಳ್ಳಲು ಅವರು ಹಿಂದು ಮುಂದು ನೋಡಿದರು. ಒಂದು ಸಂಸ್ಥೆ ಆರೋಗ್ಯವಾಗಿ ಬೆಳೆಯಲು ನಮ್ಮ ಅಭಿ ಪ್ರಾಯಗಳನ್ನು ಬದಿಗಿಟ್ಟು ನಮಗಿಂತಲೂ ವಿವೇಕಿಗಳೂ ಅನುಭವಿಗಳೂ

ಎಂದು ನಾವೆಣಿಸುವವರ ಅಭಿಪ್ರಾಯಗಳಿಗೆ ತಲೆಬಾಗುವುದು ಒಳ್ಳೆಯದೇ, ಅಲಿಸತಕ್ಕದ್ದೇ: ಆದರೆ ಇದಕ್ಕೂ ಒಂದು ಮಿತಿ ಇದೆ. ದಿನವೂ ಇದು ನಡೆಯುತ್ತ ಹೋಗಬೇಕೆಂದರೆ ಇದೊಂದು ಭಯಂಕರವಾದ ದಬ್ಬಾಳಿಕೆಯೇ ಆದೀತು. ನಾನು ಈ ರೀತಿಯ ದುಷ್ಪರಿಣಾಮವನ್ನು ಇಚ್ಛಿಸದಿದ್ದರೂ, ನನ್ನ ಅನುಭವದಲ್ಲಿ ಈ ಪರಿಣಾಮ ಆಗಿದೆಯೆಂಬ ವಿಷಾದಾಂತವನ್ನು ನನ್ನಿಂದಲೂ ಸಾರ್ವಜನಿಕರಿಂದಲೂ ಮುಚ್ಚಿಡಲು ಸಾಧ್ಯವಿಲ್ಲ. ಅನೇಕ ಕಾಂಗ್ರೆಸ್ಸಿಗರು ನನ್ನನ್ನು ಪ್ರತಿಭಟಿಸುವ ಪ್ರಯತ್ನವನ್ನು ನಿರಾಶೆಯಿಂದ ಕೈಬಿಟ್ಟಿದ್ದಾರೆ. ಪ್ರಜಾಸತ್ತೆಯ ಮನೋಧರ್ಮವನ್ನು ಹುಟ್ಟುಗುಣವಾಗಿ ಪಡೆದಿರುವ ನನಗೆ ಇದೊಂದು ಬಹಳ ಅಪಮಾನವೆನಿಸುವ ಮನವರಿಕೆಯಾಗಿದೆ. ಮಾನವಕುಲದ ದರಿದ್ರತಮರೊಂದಿಗೆ ತಾದಾತ್ಮ್ಯವನ್ನು ಹೊಂದಲು ನಾನು ಪ್ರಯತ್ನಿಸಿದ್ದೇನೆ: ಅವರಿಗಿಂತಲೂ ಉನ್ನತ ಜೀವನ ಮಟ್ಟವನ್ನು ಬಯಸಬಾರದೆಂದು ಉತ್ಕಟ ಆಕಾಂಕ್ಷೆ ನನ್ನಲ್ಲಿದೆ: ನನ್ನಿಂದ ಸಾಧ್ಯವಾದ ಮಟ್ಟಿಗೆ ಪ್ರಯತ್ನ ಪೂರ್ವಕ ಇದನ್ನು ಸಾಧಿಸುತ್ತ ಬಂದಿದ್ದೇನೆ: ಆದಕಾರಣ ಈ ಮಾತನ್ನು ಹೇಳಲು ನನಗಧಿಕಾರವಿದೆಯೆಂದು ನಾನೆಣಿಸುತ್ತೇನೆ.

ಸಮಾಜವಾದಿ (socialist) ಗುಂಪೊಂದು ರೂಪುಗೊಂಡಿದೆ. ಅದನ್ನು ನಾನು ಸ್ವಾಗತಿಸಿದ್ದೇನೆ. ಅವರಲ್ಲಿ ಅನೇಕರು ನಮ್ಮ ಗೌರವಕ್ಕೆ ಪಾತ್ರರಾದ ತ್ಯಾಗಶೀಲರಾದ ಸಹೋದ್ಯೋಗಿಗಳು. ಹೀಗಿದ್ದರೂ ಅವರು ಹೊರಡಿಸಿರುವ ಹೊತ್ತಗೆಯಲ್ಲಿ ಅವರು ಪ್ರಕಟಿಸಿರುವ ಕಾರ್ಯಕ್ರಮದ ವಿಷಯದಲ್ಲಿ ನನಗೆ ಮೂಲಭೂತವಾದ ಮತಭೇದವಿದೆ. ಆದರೆ ಅವರ ಪ್ರಕಟನೆಗಳ ಮೂಲಕ ಅವರ ವಿಚಾರಗಳ ಪ್ರಚಾರವನ್ನು ಅದುಮಿಡಲು ನೈತಿಕ ಬಲದಿಂದ ನಾನು ಹೀಗೆ ಮಾಡಬಹುದಾದರೂ ನಾನು ಅದನ್ನು ಬಯಸುವುದಿಲ್ಲ. ಈ ಅಭಿಪ್ರಾಯಗಳು ಎಷ್ಟೇ ನನಗೆ ರುಚಿಸದಿದ್ದರೂ, ಅವುಗಳನ್ನು ನಿರಾತಂಕವಾಗಿ ವ್ಯಕ್ತಪಡಿಸಲು ನಾನು ಅಡ್ಡಿ ಮಾಡಲಾರೆ. ಕಾಂಗ್ರೆಸ್ಸಿನಲ್ಲಿ ಅವರದು ಮೇಲುಗೈ ಆದರೆ, ಇದೂ ಸಂಭವನೀಯವೇ, ನಾನು ಕಾಂಗ್ರೆಸ್ಸಿನಲ್ಲಿ ಉಳಿಯಲು ಸಾಧ್ಯವಿಲ್ಲ. ಏಕೆಂದರೆ ನಾನು ವಿರೋಧ ಪಕ್ಷದಲ್ಲಿರುವುದೆಂದರೆ ಅದು ನನ್ನ ವಿಚಾರಕ್ಕೆ ಮೀರಿದ ವಿಷಯ.

ನನ್ನ ದೀರ್ಘವಾದ ಸಾರ್ವಜನಿಕ ಜೀವನದಲ್ಲಿ ಅನೇಕ ಸಂಸ್ಥೆಗಳೊಂದಿಗೆ ಆತ್ಮೀಯತೆಯನ್ನು ತಾಳಿದ್ದೇನೆ; ಎಂದೂ ವಿರೋಧ ಪಕ್ಷದಲ್ಲಿರಲಿಲ್ಲ.

ಮತ್ತು ದೇಶೀಯ ಸಂಸ್ಥಾನಗಳ ವಿಷಯದಲ್ಲಿ ನಾನು ಮಾಡಿರುವ ಸಲಹೆಗೆ ತೀರ ಭಿನ್ನವಾಗಿ ಕೆಲವರು ಬೇರೊಂದು ಧೋರಣೆಯನ್ನನುಸರಿಸ ಬೇಕೆಂದು ವಾದಿಸುತ್ತಿರುವರು. ನಾನು ಈ ವಿಷಯವನ್ನು ದೀರ್ಘಕಾಲ ಪರ್ಯಾಲೋಚಿಸಿದ್ದೇನೆ: ಆದರೆ ನನ್ನ ಅಭಿಪ್ರಾಯವನ್ನು ಬದಲಾಯಿಸಲು ನನಗೆ ಸಾಧ್ಯವಾಗಿಲ್ಲ.

ಅಸ್ಪೃಶ್ಯತೆಯ ವಿಚಾರದಲ್ಲಿಯೂ ಬಹು ಸಂಖ್ಯಾತರಲ್ಲದಿದ್ದರೂ ಅನೇಕರ ವಿಧಾನಕ್ಕೂ ನನ್ನ ವಿಧಾನಕ್ಕೂ ಪ್ರಾಯಶಃ ಭೇದವಿದೆ. ನನ ಗಾದರೂ ಇದೊಂದು ಗಹನವಾದ ಧಾರ್ಮಿಕ ಹಾಗೂ ನೈತಿಕ ಪ್ರಶ್ನೆ. ಅನೇಕರು ನಮ್ಮ ಶಾಸನೋಲ್ಲಂಘನ ಹೋರಾಟದ ಮಧ್ಯೆ ಈ ಪ್ರಶ್ನೆಯನ್ನು —ನಾನು ಮಾಡಿದ ರೀತಿಯಲ್ಲಿ — ಸಮಯದಲ್ಲಿ — ತಂದೊಡ್ಡಿರುವುದು ದೊಡ್ಡ ಅಚಾತುರ್ಯವಾಯಿತೆಂದು ಅಭಿಪ್ರಾಯಪಡುತ್ತಾರೆ. ಈ ರೀತಿ ನಾನು ಮಾಡದೆ ಇದ್ದಿದ್ದರೆ ನಾನು ಪ್ರಾಮಾಣಿಕವಾಗಿ ವರ್ತಿಸುತ್ತಿರಲಿಲ್ಲವೆಂದೇ ನನಗನಿಸುತ್ತದೆ.

ಕೊನೆಯದಾಗಿ ಅಹಿಂಸೆಯ ವಿಷಯ. ಈ ಹದಿನಾಲ್ಕು ವರ್ಷ ಗಳಿಂದ ಅದರ ಪ್ರಯೋಗದ ಪ್ರಯತ್ನ ನಡೆದಿದ್ದರೂ, ಕಾಂಗ್ರೆಸ್ಸಿಗರಲ್ಲಿ ಬಹು ಸಂಖ್ಯಾತರಿಗೆ ಅದೊಂದು ವ್ಯಾವಹಾರಿಕ ತಂತ್ರ ಮಾತ್ರ. ನನ ಗಾದರೊ ಅದು ಮೂಲಭೂತವಾದ ನಂಬಿಕೆ. ಕಾಂಗ್ರೆಸ್ಸಿಗರು ಹೀಗೆ ಭಾವಿಸದೆ ಇರುವುದು ಅವರ ತಪ್ಪಲ್ಲ. ನಾನು ಪ್ರತಿಪಾದಿಸುವ ರೀತಿಯಲ್ಲಿ ನಿಸ್ಸಂದೇಹವಾಗಿ ದೋಷವಿರಬೇಕು. ಅದಕ್ಕೂ ಹೆಚ್ಚಾಗಿ ಅದರ ಆಚರಣೆ ಯಲ್ಲಿ ದೋಷವಿರಬೇಕು. ಈ ಕಾರಣಗಳಿಂದ ಅಹಿಂಸೆಗೆ ಯಶಸ್ಸು ದೊರೆಯದಂತಾಗಿದೆ. ನನ್ನ ಪ್ರತಿಪಾದನೆಯಲ್ಲಾಗಲಿ, ಅದರ ಆಚರಣೆ ಯಲ್ಲಾಗಲಿ ಏನು ದೋಷವಿದೆಯೋ ಅದು ನನಗೆ ಗೋಚರವಾಗಲಿಲ್ಲ. ಆದರೆ ಕಾಂಗ್ರೆಸ್ಸಿಗರ ಜೀವನದಲ್ಲಿ ಅದು ಹಾಸು ಹೊಕ್ಕಾಗಿಲ್ಲವೆಂದರೆ, ನಾನು ಈ ಬಗೆಯ ಅನುಮಾನವನ್ನೇ ತಾಳಬೇಕಾಗಿದೆ.

ಅಹಿಂಸೆಯ ವಿಷಯದಲ್ಲಿ ಈ ಸಂದಿಗ್ಧತೆ ಇರಬೇಕಾದರೆ, ಸರಕಾರಿ ಕಾನೂನುಗಳ ಶಾಂತಿಯುತವಾದ ಪ್ರತಿಭಟನೆಯಲ್ಲಿ ಇನ್ನೂ ಹೆಚ್ಚು ಸಂದಿಗ್ಧತೆ ಇರಬೇಕು. ನಾನು ಇಪ್ಪತ್ತೇಳು ವರ್ಷಗಳಿಂದ ಈ ತತ್ತ್ವದ ಅಧ್ಯಯನವನ್ನೂ ಪ್ರಯೋಗವನ್ನೂ ಮಾಡುತ್ತಿದ್ದರೂ ಅದರ ಪೂರ್ಣ ಸ್ವರೂಪವನ್ನು ನಾನು ಅರಿತವನೆಂದು ಹೇಳುವಂತಿಲ್ಲ. ಈ ವಿಷಯದಲ್ಲಿ ಸಂಶೋಧನಾ ಕ್ಷೇತ್ರ ಸೀಮಿತವಾಗಿರಲೇ ಬೇಕಾಗುತ್ತದೆ—ಏಕೆಂದರೆ ಒಬ್ಬ ಮನುಷ್ಯನ ಜೀವಮಾನದಲ್ಲಿ ಈ ಬಗೆಯ ಪ್ರತಿಭಟನೆಗೆ ಅವಕಾಶಗಳು ಹೆಚ್ಚಾಗಿ ಇರಬಾರದು. ಯಾರು ಸ್ವಪ್ರೇರಣೆಯಿಂದ ಅಧಿಕಾರಕ್ಕೆ ವಿಧೇಯರಾಗಿರುವವರೋ—ಆ ಅಧಿಕಾರ ತಂದೆತಾಯಿಗಳದಿರಬಹುದು, ಅಧ್ಯಾಪಕರದಿರಬಹುದು, ಇತರ ಹಿರಿಯರದಿರಬಹುದು—ಧಾರ್ಮಿಕ ಅಧಿಕಾರವಾಗಿರಬಹುದು, ಲೌಕಿಕ ಅಧಿಕಾರವಾಗಿರಬಹುದು—ಅವರು ಇಂತಹ ಪ್ರತಿಭಟನೆಯನ್ನು ಮಾಡಲು ಅರ್ಹರು. ಎಷ್ಟೇ ಅಸಂಪೂರ್ಣನಾದರೂ ನಮ್ಮಲ್ಲಿ ನಾನೊಬ್ಬನೇ ಇದರಲ್ಲಿ ತಜ್ಞನಾಗಿರುವುದರಿಂದ, ಇನ್ನು ಸ್ವಲ್ಪ ಕಾಲ ಪರ್ಯಂತ ಈ ಪ್ರಯೋಗವನ್ನು ನಾನೊಬ್ಬನೇ ಮಾಡಬೇಕೆಂಬ ನಿರ್ಧಾರಕ್ಕೆ ಬಂದಿದ್ದೇನೆ. ಇದಕ್ಕೆ ಅಚ್ಚರಿಗೊಳ್ಳಲು ಅವಶ್ಯಕತೆಯಿಲ್ಲ. ಈ ಪ್ರಯೋಗದಲ್ಲಿ ಆಗಬಹುದಾದ ದೋಷಗಳನ್ನೂ ಅಚಾತುರ್ಯಗಳನ್ನೂ ಆದಷ್ಟು ಕಡಿಮೆಮಾಡುವುದು ಅವಶ್ಯವಾಗಿರುವುದರಿಂದಲೂ, ಮತ್ತು ಇದರಲ್ಲಿ ನಮಗೆ ಈಗ ಗೋಚರವಾಗದಿರುವ ಗುಪ್ತವಾದ ಶಕ್ತಿವಿಶೇಷಗಳನ್ನು ಕಂಡುಕೊಳ್ಳುವುದಕ್ಕೂ ಹೀಗೆ ಮಾಡಬೇಕಾಯಿತು. ಕಾಂಗ್ರೆಸ್ಸಿಗರ ದೋಷಗಳ ಮಾತು ಇದರಲ್ಲಿ ಹುಟ್ಟುವುದಿಲ್ಲವೆಂದು ಮತ್ತೆ ಹೇಳಬೇಕು. ಇತ್ತೀಚಿಗೆ ಈ ವಿಷಯದ ಬಗೆಗೆ ನಾವು ಮಾಡಿದ ನಿರ್ಣಯಗಳಲ್ಲಾ, ಕಾಂಗ್ರೆಸ್ಸಿಗರ ವಿಚಾರಪೂರ್ವಕ ಸಮ್ಮತಿಯನ್ನು ಪಡೆಯುವುದರಲ್ಲಿ ನಾನನುಭವಿಸಿದ ಕಷ್ಟ ಕ್ರಮೇಣ ಹೆಚ್ಚುತ್ತಲಿದೆ: ಆದರೆ ಅವರು ಉದಾರಭಾವದಿಂದ ನನಗೆ ಅವರ ಅಭಿಮತವನ್ನು ಕೊಟ್ಟಿದ್ದಾರೆ.

ಆದರೆ ಅವರು ಮತವನ್ನುಕೊಟ್ಟಾಗ, ಈ ನಿರ್ಣಯಗಳಲ್ಲಿ ಅವರಿಗೆ ಬುದ್ಧಿಪೂರ್ವಕವಾದ ನಂಬಿಕೆ ಇಲ್ಲದ್ದರಿಂದ ಅವರು ಮನೋವ್ಯಥೆಗೆ ಒಳಗಾಗಿರಬೇಕು. ಇದರ ನೆನಪು ಅವರಿಗೆ ಉಂಟಾದ ವ್ಯಥೆಗಿಂತಲೂ ನನಗೆ

ಹೆಚ್ಚಿನ ಮನೋವ್ಯಥೆಯನ್ನುಂಟುಮಾಡಿದೆ. ಅವರೂ ನಾನೂ ಈ ವ್ಯಥೆಯಿಂದ ಮುಕ್ತರಾಗಬೇಕು: ಹೀಗೆ ಮುಕ್ತರಾದರೇನೇ ನಮ್ಮ ಶಕ್ತಿಯನ್ನು ವರ್ಧಿಸಿಕೊಂಡು ನಾವಿಬ್ಬರೂ ನಂಬುವ ಗುರಿಯನ್ನು ಮುಟ್ಟಲು ಸಾಧ್ಯ. ಆದ್ದರಿಂದ ಇದಕ್ಕೆ ಸಂಬಂಧಿಸಿದವರೆಲ್ಲರೂ ತಮ್ಮ ತಮ್ಮ ಖಚಿತವಾದ ಅಭಿಪ್ರಾಯಕ್ಕನುಸಾರವಾಗಿ ಸ್ವಾತಂತ್ರ್ಯದಿಂದಲೂ ಧೈರ್ಯದಿಂದಲೂ ವರ್ತಿಸುವುದು ಆವಶ್ಯಕ.

ನಾನು ಪಾಟ್ನಾದಿಂದ ಶಾಂತಿಯುತ ಪ್ರತಿಭಟನೆಯನ್ನು ಸದ್ಯಕ್ಕೆ ನಿಲ್ಲಿಸಬೇಕೆಂದು ಸಲಹೆಮಾಡಿ ಕೊಟ್ಟ ಹೇಳಿಕೆಯಲ್ಲಿ, ಈ ಉದ್ಯಮವು ತಿಳಿದ ಹಾಗೆ ಎರಡು ಫಲಗಳನ್ನು ಕೊಡಲು ಅಸಮರ್ಥವಾಯಿತೆಂದು ತೋರಿಸಿದ್ದೇನೆ. ನಮ್ಮಲ್ಲಿ ಪೂರ್ತಿಯಾಗಿ ಅಹಿಂಸಾಭಾವ ಇದ್ದಿದ್ದರೆ, ಅದು ತನ್ನಷ್ಟಕ್ಕೆ ತಾನೇ ವೇದ್ಯವಾಗುತ್ತಿತ್ತು; ಸರಕಾರದ ಗಮನವನ್ನು ತಪ್ಪಿಸಿಕೊಳ್ಳುತ್ತಿರಲಿಲ್ಲ. ಸರಕಾರ ಹೊರಡಿಸಿದ ವಿಶೇಷ ಆಜ್ಞೆಗಳು (Ordinances) ಖಂಡಿತವಾಗಿಯೂ ನಮ್ಮಿಂದಾದ ಅಥವಾ ಆರೋಪಿತವಾದ ಅತ್ಯಾಚಾರಗಳಿಂದ ಪ್ರೇರಿತವಾದವುಗಳಲ್ಲ. ಹೇಗಾದರೂ ಮಾಡಿ ನಮ್ಮ ಬೆನ್ನು ಮುರಿದು ನಮ್ಮ ಮನಸ್ಥೈರ್ಯವನ್ನು ಕುಂಠಿತಮಾಡಬೇಕೆಂಬುದೇ ಅವುಗಳ ಉದ್ದೇಶ. ಆದರೆ ಶಾಂತಿಯುತ ಪ್ರತಿಭಟನೆಯನ್ನು ಆಚರಿಸಿದವರೂ ನಿರ್ದೋಷಿಗಳೆಂದು ನಾವು ವಾದಿಸಿದರೆ ಅದು ತಪ್ಪಾದೀತು. ನಾವು ಸಂಪೂರ್ಣವಾಗಿ ಪ್ರತಿಕ್ಷಣದಲ್ಲಿಯೂ ಅಹಿಂಸಾ ಪಾಲಕರಾಗಿ ಇದ್ದಿದ್ದರೆ ಅದು ಸ್ವಯಂ ಪ್ರಕಾಶವಾಗುತ್ತಿತ್ತು. ಹಿಂಸಾವಾದಿಗಳು ತಮ್ಮ ಮಾರ್ಗದಲ್ಲಿ ಎಷ್ಟು ಶ್ರದ್ಧೆಯುಳ್ಳವರಾಗಿದ್ದರೊ ಅಷ್ಟೇ ಅಹಿಂಸಾಮಾರ್ಗದಲ್ಲಿ ನಾವು ಶ್ರದ್ಧೆಯುಳ್ಳವರಾಗಿದ್ದೇವೆಂದು ತೋರಿಸಲು ಉದ್ಯುಕ್ತರಾಗಲಿಲ್ಲ. ಇದಕ್ಕೆ ಬದಲಾಗಿ ಹಿಂಸೆಯ ಬಗೆಗೆ ಅವರಲ್ಲಿರುವಷ್ಟೇ ನಂಬಿಕೆಯನ್ನು ನಮ್ಮ ಹೃದಯದಲ್ಲಿ ತಾಳಿರುವೆವೆಂದು ಅವರು ಭಾವಿಸುವಂತೆ ನಮ್ಮಲ್ಲಿ ಅನೇಕರು ಮಾಡಿದ್ದೇವೆ. ಆದರೆ ಹಿಂಸಾ ಕೃತ್ಯಗಳಲ್ಲಿ ನಂಬಿಕೆಯುಳ್ಳವರಾಗಲಿಲ್ಲ, ಅಷ್ಟೆ. ಹಿಂಸಾಭಾವನೆ ನಮ್ಮಿಬ್ಬರಲ್ಲಿ ಸಮಾನ ಗುಣವಾದ ಮೇಲೆ, ಹಿಂಸಾಕೃತ್ಯಗಳನ್ನು ಎಸಗುವ ಅಥವಾ ಬಿಡುವ ಧೋರಣೆ—ಕೇವಲ ಅಭಿಪ್ರಾಯದ ಪ್ರಶ್ನೆಯೆಂದು ಹಿಂಸಾಮಾರ್ಗದವರು ವಾದಿಸು

ವುದು ನ್ಯಾಯ ಸಮ್ಮತವಾಗಿಯೇ ಇದೆ. ನಮ್ಮ ದೇಶ ಅದ್ಭುತವಾದ ಧೈರ್ಯ ವನ್ನೂ ತ್ಯಾಗವನ್ನೂ ತೋರಿಸಿದೆಯೆಂದು ನಾನು ಮೊದಲೇ ಹೇಳಿರುವ ಮಾತನ್ನು ಪುನಃ ಹೇಳುವುದು ಅನಾವಶ್ಯಕ. ಆದರೆ ಇದನ್ನು ಮಾತ್ರ ಹೇಳ ಬಯಸುತ್ತೇನೆ: ನಮ್ಮ ಅಹಿಂಸೆ, ಕಾಯಾ, ವಾಚಾ, ಮನಸಾ, ಶುದ್ಧ ಮತ್ತು ಬೆರಕೆಯಿಲ್ಲದ ಅಹಿಂಸೆಯಾಗಿರಲಿಲ್ಲ. ಈಗ ಸರಕಾರಕ್ಕೂ ಹಿಂಸಾ ವಾದಿಗಳಿಗೂ, ನಮ್ಮ ಗುರಿಯನ್ನು ಮುಟ್ಟಲು ಹಾಗೂ ವ್ಯಾಪಕಾರ್ಥದಲ್ಲಿ ಎಲ್ಲ ಬಗೆಯ ಸ್ವಾತಂತ್ರ್ಯವನ್ನು ಪಡೆಯಲೂ ಅಹಿಂಸಾ ಮಾರ್ಗ ಶಕ್ತಿ ಯುತ ಸಾಧನವೆಂದು ಪ್ರಯೋಗಗಳ ಮೂಲಕ ತೋರಿಸಲು ಸಾಧನೋ ಪಾಯಗಳನ್ನು ಹುಡುಕುವುದು ನನ್ನ ಗುರುತರವಾದ ಕರ್ತವ್ಯವಾಗಿದೆ.

ನನ್ನ ಜೀವನವೇ ಮುಡುಪಾಗಿರುವ ಈ ಪ್ರಯೋಗಕ್ಕೆ ನಾನು ಪೂರ್ಣ ನಿರ್ಲಿಪ್ತನಾಗಿರಬೇಕು; ಕಾರ್ಯಮಾಡಲು ಸಂಪೂರ್ಣ ಸ್ವಾತಂತ್ರ್ಯ ವನ್ನು ಪಡೆದಿರಬೇಕು. ಸತ್ಯಾಗ್ರಹ (ಅದರಲ್ಲಿ ಕಾನೂನುಭಂಗ ಒಂದು ಭಾಗ ಮಾತ್ರ) ನನ್ನ ಮಟ್ಟಿಗೆ ಸರ್ವವ್ಯಾಪಿಯಾದ ಜೀವನದ ನಿಯಮ. ಸತ್ಯವೇ ನನ್ನ ದೇವರು, ಆತನನ್ನು ನಾನು ಅರಸುವುದು ಅಹಿಂಸಾ ಮಾರ್ಗದಿಂದಲ್ಲದೆ ಬೇರೆ ಮಾರ್ಗದಿಂದಲ್ಲ. ನನ್ನ ದೇಶದ ಸ್ವಾತಂತ್ರ್ಯ, ಇಡಿಯ ಜಗತ್ತಿನ ಸ್ವಾತಂತ್ರ್ಯವೂ ಸಹ, ಸತ್ಯದ ಅನ್ವೇಷಣೆಯಲ್ಲಿ ಖಂಡಿತವಾಗಿಯೂ ಅಡಕವಾಗಿದೆ. ಯಾವ ಕಾರಣದಿಂದಲಾಗಲಿ-ಐಹಿಕ, ಆಮುಷ್ಮಿಕ ಸಿದ್ಧಿಗಾಗಲಿ - ಈ ಅನ್ವೇಷಣವನ್ನು ಬಿಡುವುದು ನನಗೆ ಸಾಧ್ಯ ವಿಲ್ಲ. ಇದಕ್ಕಾಗಿಯೇ ನಾನು ರಾಜಕೀಯ ರಂಗವನ್ನು ಪ್ರವೇಶಿಸಿದ್ದು: ಈ ಸತ್ಯಾನ್ವೇಷಣದಲ್ಲಿ ದೇಶದ ಸ್ವಾತಂತ್ರ್ಯ ಮತ್ತು ಸತ್ಯದ ಅಂಶಗಳಾದ ಇನ್ನೂ ಅನೇಕ ವಿಷಯಗಳು ಅಡಕವಾಗಿದೆಯೆಂದು ನಾನು ಹೇಳುವ ಮಾತು ಸುಶಿಕ್ಷಿತರಾದ ಕಾಂಗ್ರೆಸ್ಸಿಗರ ವಿಚಾರಪರತೆಯನ್ನೂ ಹೃದಯ ವನ್ನೂ ಒಲಿಸದಿದ್ದ ಪಕ್ಷಕ್ಕೆ ನಾನು ಏಕಾಂಗಿಯಾಗಿ ನನ್ನ ಕಾರ್ಯವನ್ನು ಮಾಡುತ್ತಾ ಹೋಗಬೇಕೆಂಬುದು ಇದೆ. ಇದು ಈ ಹೊತ್ತು ನನ್ನ ದೇಶ ಬಾಂಧವರಿಗೆ ಸ್ಪಷ್ಟವಾಗಿಲ್ಲದಿದ್ದರೂ, ಮುಂದೆ ಎಂದಾದರು ಇಂತಹ ಅತಿ ಮುಖ್ಯವಾದ ಸಂದರ್ಭಗಳಲ್ಲಿ ಭಗವಂತನು ನನ್ನ ಬಾಯಿಂದ ನುಡಿಸುವ ಸೂಕ್ತವಾದ ಮಾತಿನ ದೆಸೆಯಿಂದಲೊ, ಸೂಕ್ತವಾದ ಕಾರ್ಯಕ್ಕೆ ನನ್ನನ್ನು

ಪ್ರೇರಣೆಮಾಡುವುದರಿಂದಲೊ ನಮ್ಮ ಜನರಿಗೆ ಸ್ಪಷ್ಟವಾದೀತೆಂಬ ಭರವಸೆಯಿಂದ ನಾನು ಕಾರ್ಯ ಮಾಡುವೆನು. ಯಂತ್ರಗಳಂತೆ ಅಭಿಮತವನ್ನು ಕೊಡುವುದು ಅಥವಾ ಅರೆ ಮನಸ್ಸಿನಿಂದ ಒಪ್ಪಿಗೆಯನ್ನು ಸೂಚಿಸುವುದು, ನಮ್ಮ ಈ ಉದ್ಯಮದಲ್ಲಿ ಹಾನಿಕರವಲ್ಲದಿದ್ದರೂ, ಏನೇನೂ ಸಾಲದು.

ನಮ್ಮ ಸಾಮಾನ್ಯ ಗುರಿಯ ವಿಷಯವನ್ನು ನಾನು ಪ್ರಸ್ತಾಪಿಸಿದ್ದೇನೆ. ಆದರೆ “ಪೂರ್ಣ ಸ್ವರಾಜ್ಯ” ಎಂಬ ಮಾತಿಗೆ ಎಲ್ಲ ಕಾಂಗ್ರೆಸ್ಸಿಗರೂ ಒಂದೇ ಅರ್ಥವನ್ನು ಕಲ್ಪಿಸುತ್ತಾರೆಯೇ ಎಂಬ ವಿಷಯದಲ್ಲಿ ನನಗೆ ಸಂಶಯವುಂಟಾಗಿದೆ. ಪೂರ್ಣ ಸ್ವರಾಜ್ಯ ಅಂದರೆ ಇಂಗ್ಲಿಷ್ ಭಾಷೆಯಲ್ಲಿ ‘ಕಂಪ್ಲೀಟ್ ಇಂಡಿಪೆಂಡನ್ಸ್’ ಎಂಬ ಪದಕ್ಕೆ ನಾನು ಆ ಇಂಗ್ಲಿಷ್ ಭಾಷಾ ಶಬ್ದಗಳ ಸಂಪೂರ್ಣ ಇಂಗ್ಲಿಷ್ ಅರ್ಥವನ್ನು ಕಲ್ಪಿಸಿದ್ದೇನೆ. ಅದನ್ನೇ ನಾನು ಬಯಸುತ್ತೇನೆ, ನನ್ನ ಪೂರ್ತಿಗೆ ‘ಕಂಪ್ಲೀಟ್ ಇಂಡಿಪೆಂಡನ್ಸ್’ ಗಿಂತಲೂ “ಪೂರ್ಣ ಸ್ವರಾಜ್ಯ” ವೆಂಬುದು ಅಪಾರ ಅರ್ಥಗರ್ಭಿತವಾಗಿದೆ. ಆದರೆ “ಪೂರ್ಣ ಸ್ವರಾಜ್ಯ” ವೆಂಬ ಮಾತಿನ ಅರ್ಥವೂ ಸಹ ಸ್ವಯಂ ಸ್ಪಷ್ಟವಾಗಿಲ್ಲ. ಒಂದು ಶಬ್ದವಾಗಲಿ ಶಬ್ದಗುಚ್ಛವಾಗಲಿ ಎಲ್ಲರೂ ಗ್ರಹಿಸಬಲ್ಲ ಅರ್ಥವನ್ನು ಕೊಡಲಾರದು. ಅದ್ದರಿಂದ ಅನೇಕ ಸಂದರ್ಭಗಳಲ್ಲಿ ‘ಸ್ವರಾಜ್ಯ’ ಶಬ್ದಕ್ಕೆ ಅನೇಕ ವಿವರಣೆಗಳನ್ನು ನಾನು ಕೊಟ್ಟದ್ದೇನೆ, ಇವೆಲ್ಲವನ್ನೂ ಕೂಡಿಸಿದರೂ ಅದೂ ತೀರ ಅಪೂರ್ಣವೆಂದು ನನ್ನ ಭಾವನೆ. ಆದರೆ ಈ ವಿಚಾರವನ್ನು ಬೆಳೆಸಲು ನನಗೆ ಇಚ್ಛೆ ಇಲ್ಲ.

‘ಸ್ವರಾಜ್ಯ’ ಶಬ್ದಕ್ಕೆ ಸಮರ್ಪಕವಾದ ವಿವರಣೆಯನ್ನು ಕೊಡುವುದು ಅಸಾಧ್ಯವಲ್ಲದಿದ್ದರೂ ಬಹಳ ಕಷ್ಟವೆಂಬ ವಿಚಾರದಿಂದ ಹೊರಡುವ ಒಂದು ವಿಷಯವೇನೆಂದರೆ ಅನೇಕ ಕಾಂಗ್ರೆಸ್ಸಿಗರಿಗೂ ನನಗೂ ಇರುವ ದೊಡ್ಡ ಮತಭೇದಗಳಲ್ಲಿ ಇದೂ ಒಂದು ಮುಖ್ಯವಾಗಿದೆ. ಸಾಧನೆಗಳೂ ಸಿದ್ಧಿಯೂ ಒಂದೇ—ಆದ್ದರಿಂದ ಸಾಧನೆಗಳು ವಿವಿಧವಾದರೆ, ಪರಸ್ಪರ ವಿರುದ್ಧವಾದರೆ, ಅಂತಿಮ ಸಿದ್ಧಿಯಲ್ಲಿ ವ್ಯತ್ಯಾಸವಾಗಬೇಕು ಅಥವಾ ವಿಪರೀತವೇ ಆಗಬೇಕು. ಈ ಮಾತನ್ನು ನಾನು ೧೯೦೪ರಿಂದ ಹೇಳುತ್ತ ಬಂದಿದ್ದೇನೆ, ಸಾಧನೆಗಳು ಯಾವಾಗಲೂ ನಮ್ಮ ಸ್ವಾಧೀನ—ಅಂತಿಮ ಸಿದ್ಧಿ ಹಾಗಲ್ಲ. ಆದರೆ ನಾವೆಲ್ಲರೂ ಒಂದೇ ಅರ್ಥವುಳ್ಳ ಒಂದೇ ಬಗೆಯ ಸಾಧನೆ

ಗಳನ್ನು ಕೈಗೊಂಡರೆ, ಅಂತಿಮ ಗುರಿ ಅದರ ಲಕ್ಷಣ—ಇದನ್ನು ಕುರಿತು ಚಿಂತಿಸಬೇಕಾಗಿಲ್ಲ. ಇದು ನನಗೆ ಸ್ವಯಂವೇದ್ಯ ಸತ್ಯವಾಗಿದೆ. ಆದರೆ ಅನೇಕ ಕಾಂಗ್ರೆಸ್ಸಿಗರು ಈ ಮಾತನ್ನು ಒಪ್ಪುವುದಿಲ್ಲವೆಂದು ಹೇಳಲೇ ಬೇಕು. ಅಂತಿಮ ಸಿದ್ಧಿ ಉತ್ಕೃಷ್ಟವಾದರೆ ಸಾಧನೆಗಳು ಎಂತಹದಾದರೂ ಆಗಬಹುದೆಂದು ಅವರ ನಂಬಿಕೆ.

ಈ ಮತಭೇದಗಳ ಒಟ್ಟು ಮೊತ್ತವೇ ಈಗಿನ ಕಾಂಗ್ರೆಸ್ ಕಾರ್ಯ ಕ್ರಮವನ್ನು ಸತ್ತ್ವಹೀನವನ್ನಾಗಿ ಮಾಡಿದೆ. ಏಕೆಂದರೆ ಕಾಂಗ್ರೆಸ್ಸಿಗರು ಅದಕ್ಕೆ ಮಾತುಗಳಲ್ಲಿ ಒಪ್ಪಿಗೆಯನ್ನಿತ್ತರೂ ಕಾರ್ಯತಃ ಅದರ ಅನುಷ್ಠಾನ ಮಾಡಲಿಲ್ಲ. ಹೀಗಿದ್ದರೂ ಈಗಿನ ಕಾಂಗ್ರೆಸ್ ಕಾರ್ಯಕ್ರಮವನ್ನು ಬಿಟ್ಟರೆ ಬೇರೇನನ್ನೂ ದೇಶಕ್ಕೆ ನಾನು ಸೂಚಿಸಲಾರೆ: ಈ ಕಾರ್ಯಕ್ರಮ ಈ ರೀತಿ ಇದೆ. ಅಸ್ಪೃಶ್ಯತಾ ನಿವಾರಣೆ, ಹಿಂದೂ-ಮುಸ್ಲಿಮರ ಐಕ್ಯ, ಮದ್ಯ ಪಾನ ನಿಷೇಧ, ಕೈಯಿಂದ ನೂಲುವುದು, ಖಾದಿ, ಪೂರ್ಣ ಸ್ವದೇಶೀ— ಇವುಗಳ ಮೂಲಕ ನಮ್ಮ ಗ್ರಾಮ ಕೈಗಾರಿಕೆಗಳ ಪುನರುಜ್ಜೀವನ, ಏಳು ಲಕ್ಷ ಹಳ್ಳಿಗಳ ಪುನರ್ವ್ಯವಸ್ಥೆ, ಈ ಕಾರ್ಯಕ್ರಮ ಒಬ್ಬನ ದೇಶಭಕ್ತಿಗೆ ಪೂರ್ಣ ತೃಪ್ತಿಯನ್ನು ಒದಗಿಸಬಲ್ಲದು. ನನ್ನ ಮಟ್ಟಿಗೆ ಹೇಳುವು ದಾದರೆ, ಭಾರತದ ಒಂದು ಹಳ್ಳಿಯಲ್ಲಿ—ಅದರಲ್ಲಿಯೂ ನನ್ನ ಅಪೇಕ್ಷೆ ಗಡಿನಾಡಿನ ಹಳ್ಳಿಯ ಜೀವನದಲ್ಲಿ ಮುಳುಗಿರಲು ನನ್ನ ಹಂಬಲವಿದೆ. ಖುದಾಯಿ—ಖಿದ್‌ಮತ್‌ಗಾರರು ಗಡಿನಾಡಿನಲ್ಲಿ ಅಬ್ದುಲ್ ಗಫಾರ್‌ಖಾನ್ ಅವರು ವ್ಯವಸ್ಥೆಗೊಳಿಸಿದ ಸ್ವಯಂಸೇವಕರ ದಳ ನಿಜವಾಗಿಯೂ ಕಾಯಾ ವಾಚಾ, ಮನಸಾ, ಅಹಿಂಸೆಯನ್ನು ಸಾಧಿಸಿದ ಪಕ್ಷಕ್ಕೆ, ಅವರು ಹಿಂದೂ- ಮುಸ್ಲಿಂ ಐಕ್ಯಕ್ಕೆ ನಿಜವಾದ ಪ್ರೇಮಿಗಳಾದರೆ, ಖಂಡಿತವಾಗಿಯೂ ಅವರ ಮೂಲಕ ನಮಗೆ ಅತ್ಯವಶ್ಯಕವಾದ ಎರಡು ವಿಷಯಗಳನ್ನು ಸಾಧಿಸಿ ದಂತಾಗುವುದು. ಆಫ್ಘನರಿಂದ ಭೀತಿ ಎಂದು ಕರೆಯಲಾಗಿರುವ ನಮ್ಮನ್ನು ಹೆದರಿಸುತ್ತಿರುವ ದೊಡ್ಡ ಅಪಾಯದ ಪರಿಸ್ಥಿತಿ ಕೊನೆಗಾಣು ವುದು. ಆದ್ದರಿಂದ ಈ ಗಡಿನಾಡಿನ ಸ್ವಯಂಸೇವಕರು ಅಹಿಂಸಾ ತತ್ತ್ವ ವನ್ನು ನಿಜವಾಗಿ ಮೈಗೂಡಿಸಿಕೊಂಡಿದ್ದಾರೆಯೇ, ತಮ್ಮ ಹೃದಯಾಂತ ರಾಳದಿಂದ ಹಿಂದೂ-ಮುಸಲ್ಮಾನ್ ಮುಂತಾದವರ ಐಕ್ಯದಲ್ಲಿ ಶ್ರದ್ಧೆ

ಯುಳ್ಳವರಾಗಿದ್ದಾರೆಯೇ ಎಂದು ಸ್ವತಃ ಪರೀಕ್ಷಿಸಲು ನಾನು ಕಾತರನಾಗಿದ್ದೇನೆ. ಅಷ್ಟೇ ಅಲ್ಲದೆ ನಾನೇ ಅವರಿಗೆ ಚರಖಾದ—ಹಾಗೂ ಈ ಬಗೆಯ ಸಂದೇಶಗಳನ್ನು ಮುಟ್ಟಿಸಬೇಕೆಂದು ಆಶೆಯುಳ್ಳವನಾಗಿದ್ದೇನೆ. ನಾನು ಕಾಂಗ್ರೆಸ್ಸಿನಲ್ಲಿರಲಿ ಹೊರಗಿರಲಿ ಕಾಂಗ್ರೆಸ್ಸಿಗೆ ನನ್ನ ನಮ್ರವಾದ ಸೇವೆಯನ್ನು ಸಲ್ಲಿಸಲು ಬಯಸುತ್ತೇನೆ.

ಕೊನೆಯ ಮಾತಾಗಿ ನಮ್ಮ ಕಾರ್ಯಕರ್ತರಲ್ಲಿ ದಿನೇ ದಿನೇ ಹೆಚ್ಚುತ್ತಿರುವ ಭ್ರಷ್ಟಾಚಾರದ ಪ್ರಸ್ತಾಪವನ್ನು ಉಳಿಸಿಕೊಂಡಿದ್ದೇನೆ. ಈ ವಿಷಯವನ್ನು ಕುರಿತು ಈಗಾಗಲೇ ಸಾಕಷ್ಟು ಬಹಿರಂಗವಾಗಿ ಮಾತಾಡಿದ್ದೇನೆ. ನಾನೇ ಈ ಬಗೆಗೆ ಏನೇ ಹೇಳಿದ್ದರೂ, ನನ್ನ ಎಣಿಕೆಯಲ್ಲಿ ಈಗಲೂ ಕಾಂಗ್ರೆಸ್ಸಿನಷ್ಟು ಬಲಿಷ್ಠವಾದ ದೇಶವನ್ನು ಪ್ರತಿನಿಧಿಸುವ ಸಂಸ್ಥೆ ಬೇರೊಂದಿಲ್ಲ. ಅದರ ಹಿಂದೆ ಅವಿಚ್ಛಿನ್ನವಾದ ಉತ್ತಮ ಸೇವೆ ಮತ್ತು ತ್ಯಾಗಗಳಿಂದ ಶೋಭಿಸುವ ಇತಿಹಾಸವಿದೆ. ಆರಂಭದೆಸೆಯಿಂದಲೂ ಅದು ಚಂಡಮಾರುತಗಳಂತಹ ಕಷ್ಟಗಳನ್ನು ಎದುರಿಸಿ ಗೆದ್ದು ಮುಂದೆ ಸಾಗಿದೆ. ಈ ಕೀರ್ತಿ ಬೇರೆ ಯಾವ ಸಂಸ್ಥೆಗೂ ಇಲ್ಲ. ಅದರ ಕರೆಗೆ ಓಗೊಟ್ಟು ಅನೇಕರು ಅಪಾರ ತ್ಯಾಗವನ್ನು ಮಾಡಿದ್ದಾರೆ. ಯಾವ ದೇಶಕ್ಕೇ ಆಗಲಿ ಈ ತ್ಯಾಗ ಹೆಮ್ಮೆಯನ್ನುಂಟುಮಾಡುವಂತಹುದು. ನಿರ್ದೋಷ ಚಾರಿತ್ರ್ಯವುಳ್ಳ ದೀಕ್ಷಾಬದ್ಧರಾದ ಸ್ತ್ರೀಪುರುಷರು—ಬೇರೆ ಯಾವ ಸಂಸ್ಥೆಯಲ್ಲಿಲ್ಲದಷ್ಟು ಸಂಖ್ಯೆಯಲ್ಲಿ—ಇದರಲ್ಲಿದ್ದಾರೆ. ಇಂತಹ ಸಂಸ್ಥೆಯನ್ನು ನಾನು ಬಿಡಬೇಕಾದರೆ, ನನಗೆ ಬಹಳ ವ್ಯಾಕುಲವಿಲ್ಲದೆ ಸಾಧ್ಯವಿಲ್ಲ. ಹಾಗೆ ಬಿಡಲೇ ಬೇಕಾದರೆ, ಹೊರಗಿದ್ದು ಅದರ ಸೇವೆಯನ್ನು—ಅಂದರೆ ದೇಶದ ಸೇವೆಯನ್ನು—ಒಳಗಿದ್ದು ಮಾಡಿದ್ದಕ್ಕಿಂತಲೂ ಉತ್ತಮ ರೀತಿಯಲ್ಲಿ ಮಾಡಬಹುದೆಂದು ನನಗೆ ಚೆನ್ನಾಗಿ ಮನದಟ್ಟಾಗಿರುವುದರಿಂದಲೇ ಹಾಗೆ ಮಾಡುವೆನು.

ನಾನು ಈವರೆಗೂ ಮಾಡಿದ ವಿಚಾರಗಳು ಕಾಂಗ್ರೆಸ್ಸಿಗರಿಗೆ ಒಪ್ಪಿಗೆಯಾಗಿವೆ ಎಂದು ಪರೀಕ್ಷಿಸಲು, ವಿಷಯ ನಿರ್ಧಾಯಕ ಸಮಿತಿಯ ಮುಂದೆ ಈ ವಿಚಾರಗಳನ್ನು ಸಮರ್ಥಿಸುವ ಕೆಲವು ನಿರ್ಣಯಗಳನ್ನು ಮಂಡಿಸಬೇಕೆಂದಿದ್ದೇನೆ. ನಾನು ಸೂಚಿಸಬೇಕೆಂದಿರುವ ತಿದ್ದುಪಡಿಗಳಲ್ಲಿ ಮೊದಲನೆ

ಯದು, ಕಾಂಗ್ರೆಸ್ ಸಂವಿಧಾನದಲ್ಲಿರುವ ನ್ಯಾಯಬದ್ಧ (legitimate) ಮತ್ತು "ಶಾಂತಿಯುತ" (peaceful) ಎಂಬ ಪದಗಳಿಗೆ ಬದಲಾಗಿ "ಸತ್ಯ" (truthful) ಮತ್ತು ಅಹಿಂಸೆ(non violent)ಯಿಂದ ಕೂಡಿದ ಎಂಬುದನ್ನಿಟ್ಟುಕೊಳ್ಳಬೇಕೆಂದು ತಿಳಿಸುತ್ತದೆ. ನಾನು ಈ ಶಬ್ದಗಳನ್ನು ಅತ್ಯಂತ ಋಜುಸ್ವಭಾವದಿಂದಲೇ "ನ್ಯಾಯಬದ್ಧವಾದ ಮತ್ತು ಶಾಂತಿಯುತವಾದ" (legitimate and peaceful) ಎಂಬುದಕ್ಕೆ ಬದಲಾಗಿ ಉಪಯೋಗಿಸಿದಾಗ ಸಭೆಯಲ್ಲಿ ಅದಕ್ಕೆ ವಿರುದ್ಧವಾಗಿ ಗುಲ್ಲೆಬ್ಬಿಸಿದರು. ಕಾಂಗ್ರೆಸ್ಸಿಗರು ಸತ್ಯ ಮತ್ತು ಅಹಿಂಸಾತ್ಮಕ ಕೂಡಿದ ಮಾರ್ಗದಲ್ಲಿ ನಮ್ಮ ಗುರಿಯನ್ನು ಮುಟ್ಟುವುದು ಅವಶ್ಯವೆಂದು ನಿಜವಾಗಿಯೂ ನಂಬಿದರೆ ದ್ವಂದ್ವಾರ್ಥವಿಲ್ಲದಿರುವ ಈ ವಿಶೇಷಣಗಳನ್ನು ನಾವು ನಮ್ಮ ನಿಯಮಾವಳಿಯಲ್ಲಿ ಸೇರಿಸಲು ಯಾವ ಅಡ್ಡಿಯೂ ಇರಬಾರದು.

ಎರಡನೆಯ ತಿದ್ದುಪಡಿ ಈಗಿರುವ ನಾಲ್ಕಾಣೆ ಚಂದಾಕ್ಕೆ ಬದಲಾಗಿ, ಪ್ರತಿಯೊಬ್ಬ ಕಾಂಗ್ರೆಸ್ ಸದಸ್ಯನೂ, ಕಾಂಗ್ರೆಸ್ ಕಛೇರಿಗೆ ತಾನೇ ನೂತ ಒಳ್ಳೆ ಹುರಿಯುಳ್ಳ ಸಮನಾದ ೧೫ ನಂಬರಿಗೆ ಕಡಮೆಯಿಲ್ಲದ ೨೦೦೦ ಸುತ್ತು (ಒಂದು ಸುತ್ತಿಗೆ ನಾಲ್ಕು ಅಡಿ ಆಗುವುದು) ದಾರವನ್ನು ಕೊಡುವುದು. ಈ ತಿದ್ದುಪಡಿಗೆ ಪೂರ್ವಾಪರ ವಾದಗಳನ್ನು ನಿಮ್ಮ ಮುಂದಿಡುವುದು ಅನವಶ್ಯ. ನಾವು ನಿಜವಾಗಿಯೂ ಬಹಳ ಕಡಮೆ ವರಮಾನಕ್ಕೆ ದುಡಿಯುವ ಕಾರ್ಮಿಕರನ್ನು ಪ್ರತಿನಿಧಿಸುವ ಪ್ರಜಾಸತ್ತೆಯುಳ್ಳ ಸಂಸ್ಥೆಯವರಾಗಬೇಕಾದರೆ ಚಂದಾರೂಪದಲ್ಲಿ ಈ ಬಗೆಯ ಸುಲಭ ರೂಪವಾದ ದುಡಿಮೆಯನ್ನು ವಿಧಿಸುವುದಕ್ಕಿಂತಲೂ ಉತ್ತಮ ಮಾರ್ಗವಿಲ್ಲ. ಕೈಯಿಂದ ನೂಲುವುದು ಅತ್ಯಲ್ಪ ವರಮಾನದಾಯಕವೂ ಆದರೆ ಅತ್ಯಂತ ಗೌರವಯುತವೂ ಆದ ದುಡಿಮೆ ಎಂದು ಎಲ್ಲರೂ ಒಪ್ಪಿಕೊಳ್ಳಲೇ ಬೇಕು. ದೇಶಕ್ಕಾಗಿ ಪ್ರತಿನಿತ್ಯ ಅರ್ಧ ಗಂಟೆಯ ದುಡಿಮೆಯನ್ನು ಸಲ್ಲಿಸಲಿಚ್ಛಿಸುವವರಿಗೆಲ್ಲ ಅವಕಾಶವನ್ನೊದಗಿಸುವ ಎಲ್ಲಾ ಪ್ರಾಪ್ತ ವಯಸ್ಕರಿಗೂ ಮತದಾನದ ಅಧಿಕಾರವನ್ನು ಕೊಡುವ ಏರ್ಪಾಡಿಗೆ ಇದು ಬಹಳ ಮಟ್ಟಿಗೆ ಹೋಲುತ್ತದೆ. ಈ ದುಡಿಮೆಯಿಂದ ಬರುವ ವರಮಾನವು ಎಷ್ಟೇ ಅಲ್ಪವಾದರೂ, ದುಡಿಮೆ ಗೌರವಯುತವಾದುದೆಂಬ ಭಾವನೆಯಿಂದ ಸುಶಿಕ್ಷಿತರೂ,

ಶ್ರೀಮಂತರೂ ಇದನ್ನು ಅನುಸರಿಸಬೇಕೆಂದು ನಾವು ನಿರೀಕ್ಷಿಸುವುದು ಹೆಚ್ಚಾದೀತೆ? ವಿದ್ಯೆಯಂತೆ ದುಡಿಮೆಯೂ ಸ್ವಯಂ ಫಲದಾಯಕ— ಬೇರೆ ಪ್ರತಿಫಲ ಅದಕ್ಕೆ ಬೇಕಾಗಿಲ್ಲ. ನಾವು ಸಾಮಾನ್ಯ ಜನರ ನಿಜವಾದ ಸೇವಕರಾದರೆ ಅವರಿಗಾಗಿ ನೂಲಿನ ಕೆಲಸವನ್ನು ಮಾಡಲು ನಮಗೆ ಹೆಮ್ಮೆ ಯಾದೀತು. ಅನೇಕ ವೇದಿಕೆಗಳಿಂದ ದಿವಂಗತ ಮೌಲಾನಾ ಮಹಮದ್ ಆಲೀ ಅವರು ಆಗಾಗ್ಗೆ ಹೇಳುತ್ತಿದ್ದ ಮಾತು ನನಗೆ ನೆನಪಾಗುತ್ತದೆ. ಖಡ್ಗವು ಪಾಶವೀ ಶಕ್ತಿಗೂ ಬಲಕ್ಕೂ ಪ್ರತೀಕವಾಗಿರುವಂತೆ, ಚರಖವೂ ತಕಲಿಯೂ ಅಹಿಂಸೆಗೂ ನಮ್ರತೆಗೂ ಸೇವಾಬುದ್ಧಿಗೂ ಪ್ರತೀಕವೆಂದು ಅವರು ಹೇಳುತ್ತಿದ್ದರು. ನಮ್ಮ ರಾಷ್ಟ್ರೀಯ ಧ್ವಜದಲ್ಲಿ ಅದಕ್ಕೆ ಸ್ಥಾನ ಕೊಟ್ಟಮೇಲೆ, ಪ್ರತಿಯೊಂದು ಮನೆಯಲ್ಲಿಯೂ ಅದು ತಿರುಗುತ್ತಿರಬೇ ಕೆಂದು ನಿಜವಾದ ಅದರ ಅರ್ಥವೆಂದು ಭಾವಿಸಲಾಗಿತ್ತು. ಕಾಂಗ್ರೆಸ್ಸಿಗರಿಗೆ ರಾಟೆಯಲ್ಲಿ ನಂಬಿಕೆ ಇಲ್ಲದಿದ್ದರೆ ಅದನ್ನು ಧ್ವಜದಿಂದ ತೆಗೆದುಹಾಕಬೇಕು: ನಮ್ಮ ನಿಯಮಾವಳಿಯಿಂದ ಖಾದಿಯನ್ನು ತೆಗೆದುಹಾಕಬೇಕು. ಖಾದೀ ನಿಯಮವನ್ನು ಪಾಲಿಸುವುದರಲ್ಲಿ ನಾಚಿಕೆಯಿಲ್ಲದೆ ಮೋಸ ಮಾಡುತ್ತಿರು ವುದು ಅಸಹನೀಯವಾದ ವಿಷಯ.

ನಾನು ಮಂಡಿಸಬೇಕೆಂಬ ಮೂರನೆಯ ತಿದ್ದುಪಡಿ ಕಾಂಗ್ರೆಸ್ಸಿನ ಚುನಾವಣೆಯಲ್ಲಿ ಯಾರ ಹೆಸರು ಚುನಾವಣೆಗೆ ಪೂರ್ವದಲ್ಲಿ ನಿರಂತರವಾಗಿ ಆರು ತಿಂಗಳು ಕಾಂಗ್ರೆಸ್ ಪಟ್ಟಿಯಲ್ಲಿ ದಾಖಲೆ ಇಲ್ಲವೊ—ಈ ಅವಧಿಯಲ್ಲಿ ಸತತವಾಗಿ ಖಾದೀಧಾರಿಗಳಾಗಿರಲಿಲ್ಲವೊ ಅಂಥವರಿಗೆ ಮತದಾನ ಮಾಡುವ ಅಧಿಕಾರವಿರಬಾರದೆಂದು, ಈ ಖಾದೀ ನಿಯಮವನ್ನು ಜಾರಿಗೆ ತರು ವುದರಲ್ಲಿ ಒಂದು ದೊಡ್ಡ ತೊಡಕುಂಟಾಗಿದೆ. ಒಬ್ಬ ಮತದಾರನು ನಿಯಮಾವಳಿಗನುಸಾರವಾಗಿ ಕೇವಲ ಖಾದೀಧಾರಿಯಾಗಿದ್ದನೇ ಇಲ್ಲವೇ ಎಂಬ ಪ್ರಶ್ನೆಯನ್ನು ನಿರ್ಧರಿಸಲು, ಕಮಿಟಿಗಳ ಅಧ್ಯಕ್ಷರಿಗೆ ಅಧಿಕಾರವನ್ನು ವಹಿಸಿ—ಕಾಂಗ್ರೆಸ್ಸಿನ ಅಧ್ಯಕ್ಷರಿಗೆ ಪುನರ್ವಿಮರ್ಶೆ ಮಾಡುವ ಅಧಿಕಾರ ವನ್ನು ಹೆಚ್ಚು ಏರ್ಪಾಡು ಮಾಡುವುದರಿಂದ ಈ ತೊಡಕನ್ನು ಸುಲಭವಾಗಿ ಪರಿಹರಿಸಬಹುದು. ಮತದಾನಮಾಡುವ ಸಮಯದಲ್ಲಿ ಯಾರು ಪೂರ್ಣ ಖಾದೀಧಾರಿಯಾಗಿಲ್ಲವೊ ಅಂಥವರು ಸತತ ಖಾದೀಧಾರಿಗಳೆಂದು ಪರಿಗಣಿಸ

ಲಾಗದು. ಆದರೆ ಯಾವ ನಿಯಮವೇ ಆಗಲಿ—ಬಹು ಜನರು ತಮ್ಮ ಸ್ವಂತ ಇಚ್ಛೆಯಿಂದ ಅದರ ಅನುಷ್ಠಾನ ಮಾಡದಿದ್ದರೆ ಆ ನಿಯಮ ಎಷ್ಟೇ ಜಾಗರೂಕತೆಯಿಂದಲೂ, ಖಚಿತವಾದ ಪದಪ್ರಯೋಗದಿಂದ ರಚನೆಯಾಗಿದ್ದರೂ ತೃಪ್ತಿಕರವಾಗಿ ಫಲಪ್ರದವಾಗಲಾರದು.

೬೦೦೦ ಪ್ರತಿನಿಧಿಗಳೇ ಇದ್ದರೂ, ಕಾಂಗ್ರೆಸ್ ಸಂಸ್ಥೆ ಸುಲಭವಾಗಿ ನಿರ್ವಾಹ ಮಾಡಲಾಗದ (unwieldy) ಅತಿ ದೊಡ್ಡ ಆಕಾರವನ್ನು ತಾಳಿದೆ ಎಂದು ನಮ್ಮ ಅನುಭವಕ್ಕೆ ಬಂದಿದೆ. ವಸ್ತುತಃ ಕಾಂಗ್ರೆಸ್ ಅಧಿವೇಶನಕ್ಕೆ ಪ್ರತಿನಿಧಿಗಳು ಪೂರ್ಣ ಸಂಖ್ಯೆಯಲ್ಲಿ ಬಂದಿರುವುದಿಲ್ಲ—ಕಾಂಗ್ರೆಸ್ ಪುಸ್ತಕಗಳಲ್ಲಿ ಪ್ರತಿನಿಧಿಗಳ ಹೆಸರುಗಳ ದಾಖಲೆ ಎಲ್ಲಿಯೂ ಇಲ್ಲದಿರುವುದರಿಂದ, ಬರುವವರೆಲ್ಲರೂ ಸರಿಯಾದ ಪ್ರತಿನಿಧಿಗಳೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಪ್ರತಿನಿಧಿಗಳ ಸಂಖ್ಯೆಯನ್ನು ಒಂದು ಸಾವಿರ ಮತದಾರರಿಗೆ ಒಬ್ಬ ಪ್ರತಿನಿಧಿಯಂತೆ, ಒಂದು ಸಾವಿರಕ್ಕೆ ಇಳಿಸಲು ಒಂದು ತಿದ್ದುಪಡಿಯನ್ನು ತರಲಿಚ್ಛಿಸುವೆನು. ಆಗ ಪ್ರತಿನಿಧಿಗಳೆಲ್ಲರೂ ಪೂರ್ಣ ಸಂಖ್ಯೆಯಲ್ಲಿ ಬಂದರೆ, ಸಂಖ್ಯಾ ಬಲ ಕಡಿಮೆಯಾದರೂ ಗುಣ ಬಲ ಹೆಚ್ಚುವುದು. ಅಧಿವೇಶನವು ಹೊರ ನೋಟಕ್ಕೆ ವೈಭವದಿಂದಲೂ ಆಕರ್ಷಣೆಯಿಂದಲೂ ಕೂಡಿರಲು, ಅಲ್ಲಿ ನೆರೆಯುವ ಪ್ರೇಕ್ಷಕರಿಗಾಗಿ ಏರ್ಪಾಡುಗಳನ್ನು ಮಾಡಬಹುದು; ಆದರೆ ಸ್ವಾಗತ ಸಮಿತಿಗೆ ದೊಡ್ಡ ಸಂಖ್ಯೆಯಲ್ಲಿ ಬರುವ ಪ್ರತಿನಿಧಿಗಳಿಗೆ ವಸತಿಯ ವ್ಯವಸ್ಥೆಯನ್ನು ಮಾಡುವ ಚಿಂತೆ ತಪ್ಪುವುದು. ಒಂದು ವಿಷಯವನ್ನು ನಾವು ಗಮನದಲ್ಲಿಡಬೇಕು. ಕಾಂಗ್ರೆಸ್ಸಿನ ವಾರ್ಷಿಕ ಅಧಿವೇಶನಗಳಿಗೆ ಅಪಾರ ಸಂಖ್ಯೆಯಲ್ಲಿ ಪ್ರತಿನಿಧಿಗಳೂ ಪ್ರೇಕ್ಷಕರೂ ಬರುತ್ತಿದ್ದಾರೆಂದು ಅದರ ಪ್ರತಿಷ್ಠೆ ಹೆಚ್ಚಿಲ್ಲ; ಆದರೆ ಈ ಪ್ರತಿಷ್ಠೆಗೆ ಕಾರಣ ಕಾಂಗ್ರೆಸ್ ಪ್ರಜಾಸತ್ತೆಯ ಸಂಸ್ಥೆಯೆಂದು; ಇದೇ ಅದರ ಪ್ರಭಾವಕ್ಕೂ ಕಾರಣ. ದಿನೇ ದಿನೇ ಹೆಚ್ಚಾಗುತ್ತ ಹೋಗುವ ಅದರ ಸೇವೆಯಿಂದಲೇ ಈ ಪ್ರತಿಷ್ಠೆ ದೊರೆತಿದೆ. ಪಾಶ್ಚಾತ್ಯ ದೇಶಗಳಲ್ಲಿ ಪ್ರಜಾಸತ್ತಾತ್ಮಕ ವಿಧಾನ ಒಂದು ಪರೀಕ್ಷೆಗೆ ಗುರಿಯಾಗಿದೆ. ಅಲ್ಲಿ ಪ್ರಾಯಶಃ ಅದು ಯಶಸ್ಸನ್ನು ಕಳೆದುಕೊಂಡಿರುವ ಪಕ್ಷಕ್ಕೆ ಇದನ್ನು ನಿಜವಾದ ಶಾಸ್ತ್ರೀಯ ರೀತಿಯಲ್ಲಿ ಬೆಳೆಸಿ, ಅದರ ಆಧಾರ ಸುಭದ್ರವಾಗಿದೆ ಎಂದು ಪ್ರತ್ಯಕ್ಷ ಪ್ರಯೋಗದಿಂದ

ತೋರಿಸಬಲ್ಲ ಭಾಗ್ಯ ಭಾರತಕ್ಕೆ ಮೀಸಲಾಗಿರಲಿ. ಭ್ರಷ್ಟಾಚರಣೆ, ಕಪಟ ವರ್ತನೆ ನಿಸ್ಸಂದೇಹವಾಗಿ ಈಗ ನಮ್ಮಲ್ಲಿ ಕಾಣುತ್ತಿವೆ; ಇವು ಪ್ರಜಾಸತ್ತೆಯ ಅನಿವಾರ್ಯ ಪರಿಣಾಮಗಳಲ್ಲ. ಹಾಗೂ ಬೃಹದಾಕಾರ, ಪ್ರಜಾಸತ್ತೆಯ ಲಕ್ಷಣವೂ ಅಲ್ಲ. ಕೆಲವೇ ಜನರು ಅದರ ಸತ್ತ್ವವನ್ನು ಗ್ರಹಿಸಿ ಯಾರನ್ನು ಅವರು ಪ್ರತಿನಿಧಿಸುವರೊ ಅವರ ಆಶೆ ಆಕಾಂಕ್ಷೆಗಳನ್ನು ಪ್ರತಿನಿಧಿಸುವುದು ನಿಜವಾದ ಪ್ರಜಾಸತ್ತೆಯ ತತ್ತ್ವಕ್ಕೆ ಅಸಂಗತವಲ್ಲ. ಬಲಾತ್ಕಾರವಾದ ವಿಧಾನಗಳಿಂದ ಪ್ರಜಾಸತ್ತೆಯನ್ನು ವಿಕಾಸಗೊಳಿಸಲಾಗದೆಂದು ನನ್ನ ಮತ. ಪ್ರಜಾಸತ್ತೆಯ ಬುದ್ಧಿಯನ್ನು ಹೊರಗಿನಿಂದ ತಂದು ಹೇರುವುದು ಸಾಧ್ಯವಿಲ್ಲ. ಒಳಗಿನಿಂದಲೇ ಅದು ಬೆಳೆಯಬೇಕು.

ನಮ್ಮ ನಿಯಮಾವಳಿಗಳಿಗೆ ನಾನು ಸೂಚಿಸಬೇಕೆಂದಿರುವ ತಿದ್ದುಪಡಿಗಳಲ್ಲಿ ಮುಖ್ಯವಾದ ಕೆಲವನ್ನು ಮಾತ್ರ ನಾನು ಪ್ರಸ್ತಾಪಿಸಿದ್ದೇನೆ. ನಾನು ಈವರೆಗೂ ಹೇಳಿದ ವಿಷಯಗಳನ್ನು ಸ್ಪಷ್ಟಗೊಳಿಸುವ ಇತರ ನಿರ್ಣಯಗಳೂ ಇರುವವು. ಈ ಹೇಳಿಕೆಯಲ್ಲಿ ಅವುಗಳನ್ನೂ ಪ್ರಸ್ತಾಪಿಸಿ ಇದನ್ನು ಮತ್ತಷ್ಟು ದೀರ್ಘವಾಗಿ ಮಾಡುವ ಆವಶ್ಯಕತೆ ಇಲ್ಲ.

ನನ್ನ ಭಯವೇನೆಂದರೆ ಕಾಂಗ್ರೆಸ್ ಅಧಿವೇಶನಕ್ಕೆ ದೊಡ್ಡ ಸಂಖ್ಯೆಯಲ್ಲಿ ಬರುವ ಕಾಂಗ್ರೆಸ್ಸಿಗರಿಗೆ ನಾನು ಸೂಚಿಸುವ ತಿದ್ದುಪಡಿಗಳೂ ಸಹ ರುಚಿಸಲಾರವು. ನಮ್ಮ ಗುರಿಯನ್ನು ಆದಷ್ಟು ಬೇಗ ನಾವು ಸಾಧಿಸಲು ನಾನು ಸೂಚಿಸುವ ತಿದ್ದುಪಡಿಗಳೂ, ನಿರ್ಣಯಗಳೂ ಬಹಳ ಮುಖ್ಯವೆಂದು ಎಣಿಸುತ್ತೇನೆ. ಯಾವ ಖಾಸಗಿ ಸಂಸ್ಥೆಯೂ ಅದು ಮಾಡುವ ನಿರ್ಣಯಗಳನ್ನೂ ಧೋರಣೆಗಳನ್ನೂ ಅದರ ಸದಸ್ಯರು ಮನಃಪೂರ್ವಕವಾಗಿ ಆಚರಣೆಗೆ ತರದ ಹೊರತು ಜಯಗಳಿಸಲಾರದು. ಯಾವ ನಾಯಕನೇ ಆಗಲಿ ಅವನು ಕೊಂಡೊಯ್ಯುವ ದಾರಿಯಲ್ಲಿ ನಿಷ್ಠೆಯಿಂದಲೂ, ಪೂರ್ಣ ಮನಸ್ಸಿನಿಂದಲೂ, ತಿಳುವಳಿಕೆಯಿಂದಲೂ ಇತರರು ಹಿಂಬಾಲಿಸಿದ ಹೊರತು ತನ್ನ ನಾಯಕತ್ವವನ್ನು ಸಾರ್ಥಕಗೊಳಿಸಿಕೊಳ್ಳಲಾರನು. ಸತ್ಯದ ಬಲವಲ್ಲದೆ ಬೇರೆ ಯಾವ ಸಾಧನಸಂಪತ್ತಿಗಳೂ ಇಲ್ಲದ ನಾಯಕನಿಗೆ ಇದು ಪೂರ್ತಿ ನಿಜವಾಗಿ ಅನ್ವಯಿಸುವ ಮಾತು. ನಾನು ಸೂಚಿಸಿರುವ ವಿಷಯಗಳಲ್ಲಿ ಮೂಲತತ್ತ್ವಕ್ಕೂ ಭಂಗ ತರುವ ಅವಕಾಶವಿಲ್ಲ. ಆದ್ದರಿಂದ

ಈ ವಿಷಯಗಳನ್ನು ಕಾಂಗ್ರೆಸ್ಸಿಗರು ನಿಸ್ಪೃಹತೆಯಿಂದ ಪರೀಕ್ಷಿಸಲಿ; ಅವುಗಳ ಗುಣಗಳ ಕಡೆ ಅವರ ಗಮನವಿರಲಿ. ನನ್ನ ವ್ಯಕ್ತಿತ್ವವನ್ನು ಅವರು ಮರೆಯಲಿ; ಅವರ ಸ್ವಂತ ವಿಚಾರಪರತೆಯಿಂದ ನಿರ್ಣಯವನ್ನು ಮಾಡಲಿ.೧೨

## ೧೩. ಗಾಂಧೀ ಸೇವಾಸಂಘದಲ್ಲಿ ಮಾಡಿದ ಭಾಷಣ

[೧೯೩೪ ನವೆಂಬರ್ ಕೊನೆಯ ವಾರದಲ್ಲಿ ಗಾಂಧೀ ಸೇವಾಸಂಘದ ವಾರ್ಷಿಕ ಅಧಿವೇಶನ ವರ್ಧಾದಲ್ಲಿ ನಡೆಯಿತು. ಅಲ್ಲಿ ನೆರೆದಿದ್ದ ರಚನಾತ್ಮಕ ಕಾರ್ಯಕರ್ತರನ್ನುದ್ದೇಶಿಸಿ ಗಾಂಧೀಜೀ ಈ ರೀತಿ ನುಡಿದರು :]

ಗ್ರಾಮೋದ್ಯೋಗ ಸಂಘ ಹೇಗೆ ರೂಪ ತಾಳಿತೆಂಬ ವಿಷಯ ಪ್ರಾಯಶಃ ನಿಮ್ಮಲ್ಲಿ ಕೆಲವರಿಗೆ ಗೊತ್ತಿದೆ. ಹೋದ ವರ್ಷ ನಾನು ಕೈಗೊಂಡ ದೀರ್ಘವಾದ ಹರಿಜನ ಪ್ರವಾಸದಲ್ಲಿ ನಾವು ಖಾದೀ ಕೆಲಸ ವನ್ನು ಮಾಡುತ್ತಿರುವ ರೀತಿಯಿಂದ ಖಾದಿಯ ಸಾರ್ವತ್ರಿಕ ಪ್ರಸರಣ ಕ್ಕಾಗಲಿ ಗ್ರಾಮಗಳ ಪುನರುಜ್ಜೀವನಕ್ಕಾಗಲಿ ಸಾಕಷ್ಟು ಸಹಕಾರಿಯಾಗು ತ್ತಿಲ್ಲವೆಂದೇ ನನಗೆ ಸ್ಪಷ್ಟವಾಗಿ ಮನವರಿಕೆ ಆಯಿತು. ಇದು ಕೆಲವೇ ಜನರಿಗೆ ಸಂಬಂಧಿಸಿದ್ದಾಗಿತ್ತು. ಖಾದಿಯನ್ನೇ ಧರಿಸುವವರೂ ಸಹ ಬೇರೇನನ್ನೂ ಮಾಡಬೇಕಾಗಿಲ್ಲವೆಂದೂ, ಇತರ ಪದಾರ್ಥಗಳನ್ನು ಉಪ ಯೋಗಿಸುವುದರಲ್ಲಿ ಅವು ಎಲ್ಲಿಯೇ ಉತ್ಪತ್ತಿಯಾಗಿರಲಿ ಅದರ ಯೋಚನೆ ಬೇಡವೆಂದೂ ಆವರೆಣಿಸಿದಂತೆ ನನಗೆ ತೋರಿತು. ಅಂದರೆ ಖಾದಿ ಒಂದು ನಿರ್ಜೀವ ಪ್ರತೀಕವಾಗಿ ಉಳಿದಂತಾಯಿತು. ಈ ಪರಿಸ್ಥಿತಿ ಮುಂದು ವರಿದರೆ ಖಾದಿಯೂ ಕೃಶವಾಗಿ ಮಾಯವಾಗುವುದೆಂದು ನನಗನಿಸಿತು. ಏಕಾಗ್ರತೆಯಿಂದಲೂ ತೀವ್ರತೆಯಿಂದಲೂ ಖಾದಿಯ ಕೆಲಸ ಮಾಡಿದರೆ ಅದರಿಂದ ಜಯವಿಲ್ಲವೆಂಬ ಅರ್ಥವಲ್ಲ. ಆದರೆ ಈ ಏಕಾಗ್ರತೆಯಾಗಲಿ ತೀವ್ರತೆಯಾಗಲಿ ಇರಲಿಲ್ಲ. ಎಲ್ಲರೂ ತಮ್ಮ ಬಿಡುವು ಕಾಲವೆಲ್ಲವನ್ನೂ ಚರಖಾಕ್ಕೂ ತಕಲಿಗೂ ವಿನಿಯೋಗಿಸುತ್ತಿರಲಿಲ್ಲ; ಪೂರ್ಣವಾಗಿ ಖಾದಿ

ಯನ್ನೇ ಉಪಯೋಗಿಸುತ್ತಿರಲಿಲ್ಲ–ನೂಲುವವರ ಸಂಖ್ಯೆಗಿಂತಲೂ ಇವರ ಸಂಖ್ಯೆ ಹೆಚ್ಚಾಗಿತ್ತು. ಇತರರು ಕೆಲಸವಿಲ್ಲದೆ ಸುಮ್ಮನಿದ್ದರು. ಅನೇಕರು ಬೇಕಾದಷ್ಟು ಬಿಡುವನ್ನು ಬಲಾತ್ಕಾರವಾಗಿ ಪಡೆದು ಯಾವ ಕೆಲಸವನ್ನೂ ಮಾಡದೆ ಇದ್ದರು. ಈ ಪರಿಸ್ಥಿತಿಯಿಂದ ನಮ್ಮ ನಾಶವೇ ಉಂಟಾದೀತೆಂದು ನನಗೆ ತೋರಿತು. ನನಗೆ ನಾನೇ ಹೀಗೆಂದುಕೊಂಡೆ: “ಈ ಜನರು ಸ್ವರಾಜ್ಯವನ್ನು ಪಡೆಯಲು ಶಕ್ತರಲ್ಲ. ಏಕೆಂದರೆ ತಾವಾಗಿಯೋ ಬಲಾತ್ಕಾರದಿಂದಲೊ ಹೀಗೆ ಸೋಮಾರಿಗಳಾಗಿರುವವರು, ಸ್ವದೇಶೀಯರ ಮತ್ತು ಪರದೇಶೀಯರ ಶೋಷಣೆಗೆ ನಿರಂತರ ತುತ್ತಾಗುವರು. ಈ ಶೋಷಣೆ ಮಾಡುವವರು ಹೊರಗಿಂದ ಬಂದವರಾಗಲಿ ನಮ್ಮ ನಗರಗಳಿಂದ ಬಂದವರೇ ಆಗಲಿ, ಇವರ ಪರಿಸ್ಥಿತಿ ಹೀಗೆಯೇ ಉಳಿಯುವುದು. ಇವರಿಗೆ ಸ್ವರಾಜ್ಯ ದೊರೆಯಲಾರದು.” ಆದ್ದರಿಂದ ನಾನು ಮುಂದುವರಿಸಿ ಹೀಗೆಂದುಕೊಂಡೆ: “ಈ ಜನರು ಬೇರೇನನ್ನಾದರೂ ಮಾಡಬೇಕೆಂದು ಹೇಳೋಣ; ಅವರಿಗೆ ಖಾದಿಯಲ್ಲಿ ಆಸಕ್ತಿ ಇಲ್ಲದಿದ್ದರೆ, ಅವರ ಪೂರ್ವಿಕರು ಮಾಡುತ್ತಿದ್ದ — ಈಗ ಕಣ್ಮರೆಯಾಗಿರುವ — ಯಾವ ಕೆಲಸವನ್ನಾದರೂ ಅವರು ಮಾಡಲಿ.” ನಗರ ನಿವಾಸಿಗಳು ನಿತ್ಯ ಉಪಯೋಗಿಸುವ ಅನೇಕ ಪದಾರ್ಥಗಳನ್ನು ಹಳ್ಳಿಯವರು ಒದಗಿಸುತ್ತಿದ್ದರು—ಹಳ್ಳಿಯವರ ಮೇಲೆ ಈ ಅವಲಂಬನೆ ಇತ್ತು. ಈಗಲಾದರೊ ಹಳ್ಳಿಯವರೇ ತಮಗೆ ಬೇಕಾದ ಪದಾರ್ಥಗಳನ್ನು ನಗರಗಳಿಂದ ತರಿಸಿಕೊಳ್ಳುತ್ತಾರೆ. ಹಳ್ಳಿಯವರು ತಮಗಿರುವ ವಿರಾಮ ಕಾಲವನ್ನೆಲ್ಲ ಯಾವುದಾದರೂ ಉಪಯುಕ್ತ ಪದಾರ್ಥಗಳನ್ನು ಮಾಡಲು ನಿಶ್ಚಯಿಸಿದ ಕೂಡಲೆ ಮತ್ತು ನಾಗರಿಕರೂ ಈ ಹಳ್ಳಿಯಲ್ಲಿ ತಯಾರಾಗುವ ಪದಾರ್ಥಗಳನ್ನುಪಯೋಗಿಸುವ ನಿಶ್ಚಯ ಮಾಡಿದ ಕೂಡಲೆ ಹಳ್ಳಿಗಳಿಗೂ ನಗರಗಳಿಗೂ ಈಗ ಕಡಿದು ಬಿದ್ದಿರುವ ಸಂಬಂಧ ಮತ್ತೆ ಜೋಡಿಸಿದಂತಾಗುವುದು. ಯಾವ ಯಾವ ಗ್ರಾಮ ಕೈಗಾರಿಕೆಗಳು ನಿಂತು ಹೋಗಿವೆ ಅಥವಾ ಕ್ಷೀಣವಾಗಿವೆ—ಇವುಗಳನ್ನು ಪುನರುಜ್ಜೀವನಗೊಳಿಸಲಾದೀತೆ ಎಂಬ ವಿಷಯವನ್ನು ನಿರ್ಧರಿಸುವುದಕ್ಕೆ ಪೂರ್ವದಲ್ಲಿ ನಾವು ಹಳ್ಳಿಗಳಲ್ಲಿಯೇ ಕುಳಿತು, ಇದರ ತನಿಖೆಯನ್ನು ನಡೆಯಿಸಿ, ಅಂಕಿ ಅಂಶಗಳನ್ನು ಸಂಗ್ರಹಿಸಿ, ವಿವರಗಳನ್ನು ಸರಿಯಾದ

...ೀಕರಿಸಿ, ಪರೀಕ್ಷಿಸಬೇಕು. ಆದರೆ ನಾನು ಅತಿ ಮುಖ್ಯವಾದ ...ಗೆಯ ಪದಾರ್ಥಗಳನ್ನು ಆರಿಸಿಕೊಂಡೆ; ಅವು ಆಹಾರ ಪದಾರ್ಥ ...ಡಿಗೆ ತೊಡಿಗೆಯ ಪದಾರ್ಥಗಳು. ಖಾದಿಯಂತೂ ಮೊದಲೇ ಇತ್ತು. ಆಹಾರಪದಾರ್ಥಗಳ ವಿಷಯದಲ್ಲಿ ನಾವು ಸ್ವಯಂಪೂರ್ಣತೆಯನ್ನು ಬಹು ವೇಗವಾಗಿ ಕಳೆದುಕೊಳ್ಳುತ್ತಿದ್ದೆವು. ಕೆಲವೇ ವರ್ಷಗಳ ಹಿಂದೆ, ನಮ್ಮ ಅಕ್ಕಿಯನ್ನು ನಾವೇ ಕುಟ್ಟಿಕೊಳ್ಳುತ್ತಿದ್ದೆವು. ನಮ್ಮ ಹಿಟ್ಟನ್ನು ಬೀಸಿಕೊಳ್ಳುತ್ತಿದ್ದೆವು. ಸದ್ಯಕ್ಕೆ ಆರೋಗ್ಯದ ಮಾತನ್ನು ಬದಿಗಿಡೋಣ. ಬೀಸುವ ಯಂತ್ರಗಳೂ ಅಕ್ಕಿಯ ಗಿರಣಿಗಳೂ ಲಕ್ಷಾಂತರ ಸ್ತ್ರೀಯರನ್ನು ನಿರುದ್ಯೋಗಕ್ಕೆ ಅಟ್ಟಿ ಅವರಿಗಿದ್ದ ಸಂಪಾದನೆಯ ಅವಕಾಶವನ್ನು ಕಸಿದು ಕೊಂಡಿವೆಯೆಂಬುದು ನಿರ್ವಿವಾದದ ಮಾತು. ಬೆಲ್ಲದ ಸ್ಥಾನವನ್ನು ಸಕ್ಕರೆ ವೇಗವಾಗಿ ಆಕ್ರಮಿಸುತ್ತಲಿದೆ. ಬಿಸ್ಕತ್ತು, ಮಿಠಾಯಿ, ಪೆಪ್ಪರ ಮೆಂಟು ಮುಂತಾದ ತಯಾರಾದ ಖಾದ್ಯವಸ್ತುಗಳನ್ನು ಹಳ್ಳಿಗಳಲ್ಲಿ ನಿರಾತಂಕವಾಗಿ ಆಮದು ಮಾಡುತ್ತಿದ್ದಾರೆ. ಇದರ ಅರ್ಥವೇನೆಂದರೆ ಕ್ರಮೇಣ ಗ್ರಾಮ ಕೈಗಾರಿಕೆಗಳೆಲ್ಲ ಹಳ್ಳಿಯವರ ಕೈಗಳಿಂದ ಜಾರಿ ಹೋಗುತ್ತವೆ: ಹಳ್ಳಿಯವನು ಶೋಷಣೆಗಾರರಿಗಾಗಿ ಕಚ್ಚಾ ಪದಾರ್ಥ ಗಳನ್ನು ಒದಗಿಸುವವನಾಗಿದ್ದಾನೆ. ನಿರಂತರವೂ ಅವನು ಕೊಡುತ್ತಲೇ ಇರುತ್ತಾನೆ: ಪ್ರತಿಯಾಗಿ ಅವನಿಗೆ ಯಾವುದೂ ಸಿಗುತ್ತಿಲ್ಲ. ಕಚ್ಚಾ ಮಾಲುಗಳಿಗೆ ಬದಲು ಸಂಪಾದಿಸುವ ಸ್ವಲ್ಪವನ್ನೂ ಸಕ್ಕರೆ ವ್ಯಾಪಾರಿಗೂ, ಬಟ್ಟೆ ವ್ಯಾಪಾರಿಗೂ ಅವನು ಮತ್ತೆ ಕೊಡುತ್ತಾನೆ. ಅವನು ತನ್ನ ಜೊತೆಗೆ ಯಾವಾಗಲೂ ಇರುವ ದನಗಳಂತೆ ಆಗಿಬಿಟ್ಟಿದಾನೆ. ಅವನ ಮನಸ್ಸೂ ದೇಹವೂ ಬಹು ಮಟ್ಟಿಗೆ ಹಾಗೇ ಆಗಿಬಿಟ್ಟಿವೆ. ಇದನ್ನು ನಾವು ಪರ್ಯಾಲೋಚಿಸಿದರೆ ಈಗಿನ ಹಳ್ಳಿಯವನು ಐವತ್ತು ವರ್ಷಗಳ ಹಿಂದಿದ್ದ ಹಳ್ಳಿಯವನಿಗೆ ಅರ್ಧದಷ್ಟು ಬುದ್ಧಿವಂತನಾಗಿಯಾಗಲಿ ಉಪಾಯಗಳನ್ನು ಹುಡುಕುವುದರಲ್ಲಿ ಪಟುವಾಗಿಯಾಗಲಿ ಇಲ್ಲ. ಈಗಿನ ಹಳ್ಳಿಯವನು ಬಹಳ ಕಷ್ಟ ಕಾರ್ಪಣ್ಯದ ಪರಾವಲಂಬನೆ ಮತ್ತು ಸೋಮಾರಿತನದಿಂದ ಕೂಡಿದ ಹೀನಸ್ಥಿತಿಗೆ ಇಳಿದಿದ್ದಾನೆ. ಐವತ್ತು ವರ್ಷಗಳ ಹಿಂದೆಯಾದರೊ ಹಳ್ಳಿಯವನು ತನಗೆ ಬೇಕಾದುದೆಲ್ಲವನ್ನೂ

ತಾನೇ ಮಾಡಿಕೊಳ್ಳಲು ತನ್ನ ಬುದ್ಧಿಶಕ್ತಿಯನ್ನೂ ದೇಹಶಕ್ತಿಯನ್ನೂ ವಿನಿಯೋಗಿಸುತ್ತಿದ್ದನು. ಹಳ್ಳಿಯಲ್ಲಿ ಈಗಿರುವ ಕೈಕೆಲಸಗಾರರಿಗೂ ಸಹ; ಇತರ ಹಳ್ಳಿಯವರಿಗೆ ಆಗಿರುವ ದುಃಸ್ಥಿತಿಯೂ ನಿರುಪಾಯ ಸ್ಥಿತಿಯೂ ಆವರಿಸಿಕೊಂಡಿವೆ. ಹಳ್ಳಿಯ ಬಡಗಿಯ ಬಳಿ ಹೋಗಿ ನಿಮಗೊಂದು ಚರಖಾವನ್ನು ಮಾಡಿಕೊಡಬೇಕೆಂದು ಕೇಳಿ. ಹಳ್ಳಿಯ ಕಮ್ಮಾರನ ಬಳಿಗೆ ಹೋಗಿ ನಿಮಗೊಂದು ಕದಿರನ್ನು ಸಿದ್ಧಮಾಡುವಂತೆ ಕೇಳಿ. ನಿಮಗೆ ನಿರಾಶೆಯಾಗುವುದು. ಇದು ಬಹು ಶೋಚನೀಯವಾದ ಪರಿಸ್ಥಿತಿ. ಇದರ ನಿವಾರಣೆಗಾಗಿಯೇ ಗ್ರಾಮೋದ್ಯೋಗ ಸಂಘವನ್ನು ಏರ್ಪಾಡು ಮಾಡಬೇಕೆಂಬ ಕಲ್ಪನೆಯಾದದ್ದು.

"ಮತ್ತೆ ಹಳ್ಳಿಗಳಿಗೆ ವಾಪಸ್ಸು ಹೋಗಿ" ಎನ್ನುವ ಕೂಗು, ನಮ್ಮ ಪ್ರಗತಿಯನ್ನು ನಿಲ್ಲಿಸಿ ನಾವು ಹಿಮ್ಮೆಟ್ಟುವಂತೆ ಆಗುವುದೆಂದು ಕೆಲ ವಿಮರ್ಶಕರ ಅಭಿಪ್ರಾಯ. ಆದರೆ ನಿಜವಾಗಿಯೂ ಹೀಗಾಗುವುದೇ? ಇದು ಹಳ್ಳಿಗಳಿಗೆ ವಾಪಸ್ಸು ಹೋಗೆಂದೂ ಅಥವಾ ಹಳ್ಳಿಯವರ ಸೊತ್ತನ್ನು ಅವರಿಗೆ ಸೇರಿಸು ಎಂದೊ? ನಗರ ನಿವಾಸಿಗಳು ಹಳ್ಳಿಗಳಿಗೆ ಹೋಗಿ ಅಲ್ಲಿ ನೆಲೆಸಬೇಕೆಂದು ನಾನು ಹೇಳುತ್ತಿಲ್ಲ. ಆದರೆ ಹಳ್ಳಿಯವರಿಗೆ ಸಲ್ಲಬೇಕಾದುದನ್ನು ಅವರಿಗೆ ಸಲ್ಲಿಸಬೇಕೆಂದು ಹೇಳುತ್ತಿದ್ದೇನೆ. ಹಳ್ಳಿಯವನಿಂದಲ್ಲದೆ ಒಂದು ಕಚ್ಚಾ ಸೂಲಾದರೂ ನಗರ ನಿವಾಸಿಗೆ ಬೇರೆಲ್ಲಿಂದಲಾದರೂ ಸಿಗುವುದೆ? ಹಳ್ಳಿಯವರು ಈಗ ಅಶಕ್ತರಾಗಿದ್ದರೆ ಈ ಮಾಲನ್ನು ಅವರೇ ಉಪಯೋಗಿಸಿ ವಸ್ತುಗಳನ್ನು ಸಿದ್ಧಮಾಡಲು ಅವರಿಗೇಕೆ ಕಲಿಸಬಾರದು? ಹೀಗೆಯೇ ಹಿಂದೆ ಅವರು ಮಾಡುತ್ತಿದ್ದುದು; ಈಗಲೂ ನಮ್ಮ ಶೋಷಣೆಯ ದಾಳಿಗಳು ಅವರ ಮೇಲೆ ಇಲ್ಲದಿದ್ದರೆ ಇಂದಿಗೂ ಅವರು ಮಾಡಬಲ್ಲರು.

ಆದರೆ ಈ ಬಗೆಯಲ್ಲಿ ಹಳ್ಳಿಯವನನ್ನು ತನ್ನ ಪೂರ್ವ ಸ್ಥಿತಿಯಲ್ಲಿ ಮತ್ತೆ ಸ್ಥಾಪಿಸುವುದು ಸುಲಭವಾದ ಕಾರ್ಯವಲ್ಲ. ಆದಕ್ಕೊಂದು ನಿಯಮಾವಳಿಯನ್ನು ಸಿದ್ಧಪಡಿಸಿ, ಸಂಘದ ಕೆಲಸ ಕಾರ್ಯಗಳು ಮುಂದೆ ಸಾಗುವಂತೆ ಶ್ರೀ ಕುಮಾರಪ್ಪನವರ ಸಹಾಯದಿಂದ ಕ್ಷಿಪ್ರದಲ್ಲೇ ಮಾಡಬಹುದೆಂದು ಯೋಚಿಸಿದ್ದೆನು. ಆದರೆ ಈ ವಿಷಯದಲ್ಲಿ ಮುಳುಗಿದಂತೆಲ್ಲ,

ಆದರ ತಳವೇ ನನಗೆ ಸಿಗದಂತೆ ಆಗಿದೆ. ಒಂದು ದೃಷ್ಟಿಯಿಂದ ಖಾದೀ ಕೆಲಸಕ್ಕಿಂತಲೂ ಇದು ಕಷ್ಟವಾದದ್ದು. ಖಾದೀ ಕೆಲಸದಲ್ಲಿ ಅಂತಹ ಸಿಕ್ಕುಗಳೇನೂ ಇಲ್ಲ. ಎಲ್ಲ ಪರದೇಶೀ ಮತ್ತು ಯಂತ್ರದಿಂದ ತಯಾರಾದ ವಸ್ತ್ರವನ್ನು ದೂರ ಮಾಡಬೇಕು ಅಷ್ಟೆ; ಖಾದೀ ಸುಭದ್ರವಾದ ತಳ ಹದಿಯ ಮೇಲೆ ಸ್ಥಾಪನೆಯಾಗುತ್ತದೆ. ಆದರೆ ಗ್ರಾಮೋದ್ಯೋಗಗಳ ಕ್ಷೇತ್ರ ವಿಶಾಲವಾದದ್ದು. ಗಣನೆಗೆ ತೆಗೆದುಕೊಂಡು ವ್ಯವಸ್ಥೆಗೊಳಿಸಬೇಕಾಗುವ ಕೈಗಾರಿಕೆಗಳು ಅಪಾರ ವೈವಿಧ್ಯತೆಯಿಂದ ಕೂಡಿವೆ. ಇವನ್ನು ವ್ಯವಸ್ಥೆ ಮಾಡಬೇಕಾದರೆ ನಮ್ಮಲ್ಲಿರುವ ಎಲ್ಲ ವ್ಯವಹಾರ ಕೌಶಲ್ಯ, ಜ್ಞಾನಪರಿಣತೆ, ವೈಜ್ಞಾನಿಕ ತರಪೇತು — ಇಷ್ಟೂ ವಿನಿಯೋಗವಾಗಬೇಕು. ಬಹಳ ಪರಿಶ್ರಮ, ಸತತ ಪ್ರಯತ್ನ ನಮ್ಮ ವ್ಯವಹಾರಿಕ ಮತ್ತು ವೈಜ್ಞಾನಿಕ ಜ್ಞಾನಶಕ್ತಿಗಳ ಪ್ರಯೋಗ ಇವುಗಳಿಲ್ಲದೆ ನಾವು ಈ ಮಹತ್ಕಾರ್ಯ ಸಾಧನೆಯಲ್ಲಿ ಯಶಸ್ಸು ಪಡೆಯುವಂತಿಲ್ಲ. ಈ ಸಂಬಂಧದಲ್ಲಿ ನಾನು ನಮ್ಮ ಪ್ರಸಿದ್ಧ ವೈದ್ಯರಿಗೂ ರಸಾಯನ ಶಾಸ್ತ್ರಜ್ಞರಿಗೂ ಒಂದು ಪ್ರಶ್ನಾವಳಿಯನ್ನು ಕಳುಹಿಸಿದೆ. ತೊಳಸಿದ ಅಕ್ಕಿ—ತೊಳಸದ ಅಕ್ಕಿ, ಬೆಲ್ಲ, ಸಕ್ಕರೆ ಮುಂತಾದ ವಸ್ತುಗಳ ರಾಸಾಯನಿಕ ಅಂಶಗಳನ್ನು ವಿಶ್ಲೇಷಣೆ ಮಾಡಿ, ಅದರ ಬಗ್ಗೆಯೂ ಅವುಗಳಲ್ಲಿರುವ ಪೌಷ್ಟಿಕ ಮೌಲ್ಯದ ವಿಷಯವಾಗಿಯೂ ನನಗೆ ವಿವರಗಳನ್ನೊದಗಿಸಬೇಕೆಂದು ಕೋರಿದೆ. ಅನೇಕ ಮಿತ್ರರು ತತ್‌ಕ್ಷಣವೇ ಉತ್ತರ ಕೊಟ್ಟರು—ಇದಕ್ಕಾಗಿ ನಾನು ಕೃತಜ್ಞ; ಆದರೆ ನಾನು ಕೇಳಿದ ಕೆಲವು ಅಂಶಗಳ ವಿಷಯದಲ್ಲಿ ಸಂಶೋಧನೆಯಾಗಿಲ್ಲವೆಂದು ಒಪ್ಪಿಕೊಂಡರು. ಬೆಲ್ಲದಂತಹ ಸಾಮಾನ್ಯ ವಸ್ತುವಿನ ರಾಸಾಯನಿಕ ಭಾಗಗಳ ವಿಶ್ಲೇಷಣೆಯನ್ನು ಯಾವ ವಿಜ್ಞಾನಿಯೂ ಕೊಡಲಾರದವನಾಗಿದ್ದುದು ಬಹಳ ವಿಷಾದಕರವಲ್ಲವೆ? ಇದಕ್ಕೆ ಕಾರಣವೇನೆಂದರೆ ನಾವು ಹಳ್ಳಿಯವನ ವಿಷಯವನ್ನು ಮನಸ್ಸಿಗೆ ಹಚ್ಚಿಕೊಂಡಿಲ್ಲ. ಜೇನುತುಪ್ಪದ ವಿಷಯವನ್ನು ತೆಗೆದುಕೊಳ್ಳಿ. ಪಾಶ್ಚಾತ್ಯ ದೇಶಗಳಲ್ಲಿ ಅದನ್ನು ಸಾವಧಾನದಿಂದ ವಿಶ್ಲೇಷಣಗೊಳಿಸಿ, ಒಂದು ನಿರ್ದಿಷ್ಟ ಮಟ್ಟಕ್ಕೆ ಬಾರದಿರುವುದನ್ನು ಸೀಸೆಗಳಲ್ಲಿ ತುಂಬಿ ಮಾರಾಟಕ್ಕಿಡಲು ಅನುಮತಿ ಕೊಡುವುದಿಲ್ಲವೆಂದು ನಾನು ಕೇಳಿದ್ದೇನೆ. ಭಾರತ ದೇಶದಲ್ಲಿ ಬೇಕಾದಷ್ಟು ಉತ್ಕೃಷ್ಟವಾದ

ಜೇನು ತುಪ್ಪವನ್ನು ಉತ್ಪತ್ತಿ ಮಾಡಲು ನಮಗೆ ಸಾಧನಸಂಪತ್ತಿಗಳಿವೆ. ಆದರೆ ಈ ವಿಷಯದಲ್ಲಿ ಪರಿಣತ ಜ್ಞಾನ ಸಾಕಷ್ಟಿಲ್ಲ. ಒಬ್ಬ ಮಾನ್ಯ ವೈದ್ಯರು ತಮ್ಮ ಆಸ್ಪತ್ರೆಯಲ್ಲಂತೂ ತೊಳಸಿದ ಅಕ್ಕಿಗೆ ಪ್ರವೇಶವಿಲ್ಲ ವೆಂದೂ ಮತ್ತು ಇಲಿಗಳು ಮುಂತಾದ ಜೀವರಾಶಿಗಳ ಮೇಲೆ ಪ್ರಯೋಗ ಗಳನ್ನು ನಡೆಯಿಸಿ ತೊಳಸಿದ ಅಕ್ಕಿ ಹಾನಿಕರವೆಂದು ಸಿದ್ಧಪಡಿಸಲಾಗಿದೆ ಎಂದೂ ನನಗೆ ಬರೆಯುತ್ತಾರೆ. ಆದರೆ ಎಲ್ಲ ವೈದ್ಯರೂ ತಮ್ಮ ಸಂಶೋಧನೆ ಗಳನ್ನೂ ಪ್ರಯೋಗಗಳನ್ನೂ ಪ್ರಕಟಿಸಿ, ತೊಳಸಿದ ಅಕ್ಕಿ ಹಾನಿಕರವೆಂದು ಎಲ್ಲರೂ ಕೂಡಿ ಏಕೆ ಘೋಷಿಸಲಿಲ್ಲ?

ನಾನೆದುರಿಸಬೇಕಾಗಿರುವ ಕಷ್ಟವೇನೆಂಬುದಕ್ಕೆ ಒಂದೆರಡು ನಿದರ್ಶನ ಗಳನ್ನು ಮಾತ್ರ ಕೊಟ್ಟಿದ್ದೇನೆ. ಯಾವ ಬಗೆಯ ಸಂಸ್ಥೆಯನ್ನು ಸ್ಥಾಪಿಸ ಬೇಕು? ಯಾವ ರೀತಿಯ ಸಂಶೋಧನೆಯಲ್ಲಿ ನಾವು ತೊಡಗಬೇಕು? ನಮಗೆ ತಮ್ಮ ವೈಜ್ಞಾನಿಕ ಅನುಭವವನ್ನೂ ಜ್ಞಾನವನ್ನೂ ಒದಗಿಸುವು ದಲ್ಲದೆ ಪ್ರಯೋಗಶಾಲೆಗಳಲ್ಲಿ ಘಂಟೆಗಟ್ಟಲೆ ಕುಳಿತು, ಯಾವ ಪ್ರತಿಫಲ ವನ್ನೂ ಅಪೇಕ್ಷಿಸದೆ, ನಾನು ಸೂಚಿಸಿರುವ ಸಂಶೋಧನೆಗಳನ್ನು ಮಾಡಬಲ್ಲ ಅನೇಕ ವಿಜ್ಞಾನಿಗಳೂ ರಾಸಾಯನಿಕ ಶಾಸ್ತ್ರವೇತ್ತರೂ ಅವಶ್ಯಕ. ಈ ಸಂಶೋಧನೆಗಳ ಫಲಗಳನ್ನು ಆಗಾಗ್ಗೆ ಪ್ರಕಟಿಸುವುದು ಮಾತ್ರವಲ್ಲದೆ ಉತ್ಪಾದನೆಯಾದ ಅನೇಕ ಪದಾರ್ಥಗಳನ್ನು ಪರೀಕ್ಷಿಸಿ ಅವುಗಳಿಗೆ ಪ್ರಶಸ್ತಿ ಪತ್ರಿಕೆಗಳನ್ನು ಕೊಡಬೇಕಾಗುವುದು. ಅಷ್ಟೇ ಅಲ್ಲದೆ ಇವುಗಳನ್ನು, ಆಹಾರ ಪದಾರ್ಥಗಳನ್ನು ಉತ್ಪಾದನೆ ಮಾಡುವ ಹಳ್ಳಿಯವನು ಕೇವಲ ಅವುಗಳನ್ನು ರಫ್ತು ಮಾಡುವುದರಿಂದಲೇ ತೃಪ್ತಿಗೊಂಡು ತನ್ನ ಪೂರ್ತಿಗೆ ಅವಕ್ಕೆ ಬದಲಾಗಿ ಹೊರಗಿನಿಂದ ತರಿಸಿದ ಅಗ್ಗವಾದ ವಸ್ತುಗಳನ್ನು ಉಪಯೋಗಿಸುತ್ತಾನೆಯೇ ಎಂಬುದನ್ನು ನಾವು ಪರೀಕ್ಷಿಸಬೇಕು. ಮೊದಲು ಹಳ್ಳಿಯವರು ಸ್ವಯಂಪೂರ್ಣವಾಗಿ ಅನಂತರ ನಗರನಿವಾಸಿಗಳ ಅವಶ್ಯಕತೆಗಳನ್ನು ಪೂರೈಸುವಂತೆ ನಾವು ನೋಡಿಕೊಳ್ಳಬೇಕು.

ಇವೆಲ್ಲವೂ ಆಗುವಂತೆ ಜಿಲ್ಲಾ ಸಂಸ್ಥೆಗಳನ್ನೂ ನಾವು ವ್ಯವಸ್ಥೆ ಮಾಡಬೇಕು. ಒಂದು ಜಿಲ್ಲೆ ಬಹಳ ದೊಡ್ಡ ಕ್ಷೇತ್ರವೆಂದು ಕಂಡರೆ ಅದನ್ನು ಸಣ್ಣ ಭಾಗಗಳಾಗಿ ವಿಭಜಿಸಬೇಕಾಗಬಹುದು. ಈ ಪ್ರತಿಯೊಂದು

ಜಿಲ್ಲೆಗೂ, ಅಥವಾ ಭಾಗಕ್ಕೂ—ಇಂಥವು ೨೫೦ ಆಗಬಹುದು—ಒಬ್ಬ ಕಾರ್ಯಕರ್ತನಿರಬೇಕು. ಆತನು ಆ ಭಾಗದ ಸಮೀಕ್ಷೆಯನ್ನು ನಡೆಯಿಸಿ, ಆತನಿಗೆ ಕೇಂದ್ರ ಕಾರ್ಯಾಲಯ ವಿಧಿಸಿರುವ ಆದೇಶಾನುಸಾರ ವರದಿಯನ್ನೊಪ್ಪಿಸಬೇಕು. ಈ ಕಾರ್ಯಕರ್ತರೆಲ್ಲ ತಮ್ಮ ಕಾರ್ಯಕ್ಕೆ ಪೂರ್ಣ ಕಾಲ ಕೊಡುವವರೂ — ಇದರಲ್ಲಿ ಸಂಪೂರ್ಣ ಶ್ರದ್ಧೆಯುಳ್ಳವರೂ ಆಗಬೇಕು. ತಮ್ಮ ನಿತ್ಯ ಜೀವನದಲ್ಲಿ ಆವಶ್ಯಕವಿದ್ದ ಬದಲಾವಣೆಗಳನ್ನು ಮಾಡಿಕೊಳ್ಳುವವರಾಗಬೇಕು. ಈ ಕೆಲಸಕ್ಕೆ ಖಂಡಿತವಾಗಿಯೂ ಹಣದ ಆವಶ್ಯಕತೆ ಇದೆ. ಆದರೆ ಹಣಕ್ಕಿಂತಲೂ ಹೆಚ್ಚಾಗಿ ಗಾಢವಾದ ಶ್ರದ್ಧೆಯುಳ್ಳವರೂ ಮನಃಪೂರ್ತಿಯಾಗಿ ಕೆಲಸ ಮಾಡುವವರೂ ಬೇಕಾಗಿದೆ.೧೩

## ೧೪. ಗ್ರಾಮೋದ್ಯೋಗಗಳ ಪ್ರಾಧಾನ್ಯತೆಯ ವಿಷಯದಲ್ಲಿ ಇಂದೂರಿನಲ್ಲಿ ಗಾಂಧೀಜೀ ಮಾಡಿದ ಭಾಷಣ.

[ಏಪ್ರಿಲ್ ೨೩ನೇ ತಾರೀಖು ಇಂದೂರಿನಲ್ಲಿ ನೆರೆದ ಸಭೆಯನ್ನುದ್ದೇಶಿಸಿ ಗಾಂಧೀಜೀಯವರು ಈ ರೀತಿ ನುಡಿದರು :]

ನಮಗೆ ಇದು ಗೊತ್ತಿಲ್ಲದೆ ಇರಬಹುದು ; ಆದರೆ ನಾವು ವೈಯಕ್ತಿಕವಾಗಿಯೂ, ಜನಾಂಗವಾಗಿಯೂ ನಾಶಕ್ಕೆ ಗುರಿಯಾಗುತ್ತಿದ್ದೇವೆ ಎಂಬುದು ನಿಶ್ಚಯವಾದ ಮಾತು. ಇತರರ ಮೇಲೆ ಅಂದರೆ ಸರಕಾರದ ಮೇಲೆ, ರಾಜ್ಯದ ಮೇಲೆ, ಜಮೀನುದಾರರ ಮೇಲೆ ಈ ಹೊಣೆಯನ್ನು ಹೊರಿಸುವುದರಿಂದ ಪ್ರಯೋಜನವಿಲ್ಲ. ಅವರೇನೊ ನಮ್ಮ ದುಃಸ್ಥಿತಿಗೆ ನಿಶ್ಚಯವಾಗಿಯೂ ಕಾರಣವೇ ಹೌದು: ಆದರೆ ಇದರಲ್ಲಿ ನಮ್ಮ ಜವಾಬುದಾರಿಏನೂ ಕಡಮೆಯಾದದ್ದಲ್ಲ. ನಮ್ಮ ಹೊಣೆಗಾರಿಕೆಯನ್ನು ಕುರಿತು ನಾವು ಪರ್ಯಾಲೋಚಿಸೋಣ.

ನಮ್ಮ ಸರಾಸರಿ ಆಯುಃ ಪ್ರಮಾಣ ಶೋಚನೀಯವಾದ ರೀತಿಯಲ್ಲಿ ಕಡಮೆಯಾಗಿರುವುದಕ್ಕೂ, ನಾವು ಕ್ರಮೇಣ ದರಿದ್ರರಾಗುತ್ತಿರುವುದಕ್ಕೂ ಕಾರಣ ನಮ್ಮ ಏಳುಲಕ್ಷ ಹಳ್ಳಿಗಳನ್ನು ನಿರ್ಲಕ್ಷಮಾಡಿರುವುದು.

ಅವರ ಚಿಂತೆಯೇನೊ ನಮಗುಂಟು—ಆದರೆ ಅದು ಅವರನ್ನು ಶೋಷಣೆ ಮಾಡುವ ಚಿಂತೆ ಮಾತ್ರವೆ. ನಾವು ಹಿಂದಿನ ಕಾಲದಲ್ಲಿದ್ದ ವೈಭವದಿಂದ ಕೂಡಿದ ಹಿಂದುಸ್ಥಾನದ ರೋಮಾಂಚಕಾರಿಯಾದ ವರ್ಣನೆಗಳನ್ನೋದುತ್ತೇವೆ. ಹಾಲು ಜೇನುತುಪ್ಪ ಹರಿಯುತ್ತಿದ್ದ ದೇಶವೆಂದು ವರ್ಣನೆಗಳಿವೆ. ಆದರೆ ಇಂದು ಈ ದೇಶ ಹೊಟ್ಟೆಗಿಲ್ಲದೆ ಕಂಗಾಲರಾದ ಲಕ್ಷಾಂತರ ಜನರಿರುವ ದೇಶವಾಗಿದೆ. ನಾವು ಈ ಸೊಗಸಾದ ಚಪ್ಪರದಲ್ಲಿ, ಪ್ರಜ್ವಲಿಸುತ್ತಿರುವ ನೂರಾರು ವಿದ್ಯುದ್ದೀಪಗಳ ಬೆಳಕಿನಲ್ಲಿ ಕುಳಿತಿದ್ದೇವೆ. ಆದರೆ ಈ ದೀಪಗಳೆಲ್ಲವೂ ಬಡವರ ಕಷ್ಟದ ಫಲವಾಗಿ ಪ್ರಜ್ವಲಿಸುತ್ತಿವೆಯೆಂದು ನಾವು ಅರಿಯೆವು. ಅವರಿಗೆ ಸಲ್ಲಬೇಕಾದುದೇನೆನ್ನುವುದನ್ನು ನಾವು ಮರೆತರೆ ಈ ದೀಪಗಳನ್ನು ಉರಿಸಲು ನಮಗೆ ಅಧಿಕಾರವಿಲ್ಲ.

ಪೌರ್ವಾತ್ಯ ನಾಗರಿಕತೆಗೂ—ಭಾರತದ ನಾಗರಿಕತೆ—ಪಾಶ್ಚಾತ್ಯ ನಾಗರಿಕತೆಗೂ ಒಂದು ವ್ಯತ್ಯಾಸವಿದೆ. ಈ ವ್ಯತ್ಯಾಸವೇನೆಂಬುದನ್ನು ಸಾಮಾನ್ಯವಾಗಿ ಜನರು ಮನಗಾಣುವುದಿಲ್ಲ. ನಮ್ಮ ಭೂಗೋಳವೇ ಬೇರೆ, ನಮ್ಮ ಇತಿಹಾಸವೇ ಬೇರೆ, ನಮ್ಮ ಜೀವನದ ರೀತಿಯೇ ಬೇರೆ. ನಮ್ಮ ಖಂಡದಷ್ಟಿರುವ ದೇಶ—ವಿಶಾಲವೇ ಆಗಿದ್ದರೂ—ಭೂಮಂಡಲದಲ್ಲಿ ಅದು ಒಂದು ಚುಕ್ಕೆ ಮಾತ್ರ. ಚೀನಾವನ್ನು ಬಿಟ್ಟರೆ ನಮ್ಮದು ಬಹಳ ಜನಸಾಂದ್ರತೆಯಿಂದ ಕೂಡಿದ ದೇಶ. ಬಹಳ ಸಾಂದ್ರತೆಯಿರುವ ದೇಶದ ಅರ್ಥಶಾಸ್ತ್ರವೂ ನಾಗರಿಕತೆಯೂ ಜನಸಾಂದ್ರತೆ ಬಹಳ ಕಡಮೆ ಇರುವ ದೇಶದ ಅರ್ಥಶಾಸ್ತ್ರಕ್ಕೂ ನಾಗರಿಕತೆಗೂ ಬಹಳ ಭೇದ ಉಂಟು; ಇರಲೇಬೇಕು. ಜನಸಾಂದ್ರತೆ ಇಲ್ಲದ ಅಮೆರಿಕಾ ದೇಶಕ್ಕೆ ಯಂತ್ರೋಪಕರಣಗಳ ಆವಶ್ಯಕತೆ ಇದ್ದೀತು. ಹಿಂದೂಸ್ಥಾನಕ್ಕೆ ಇದರ ಆವಶ್ಯಕತೆ ಇಲ್ಲದೆಯೇ ಇರಬಹುದು. ಲಕ್ಷೋಪಲಕ್ಷ ಜನ ಕೆಲಸವಿಲ್ಲದೆ ಇರುವಾಗ, ಕಾರ್ಮಿಕರ ಸಂಖ್ಯೆಯನ್ನು ಕಡಮೆಮಾಡುವ ಉಪಾಯಗಳನ್ನು ಕುರಿತು ಚಿಂತಿಸುವುದು ಅರ್ಥವಿಲ್ಲದ ಮಾತು. ಯಾರಾದರೂ ಕೈಯಿಂದ ಊಟಮಾಡುವ ಶ್ರಮವನ್ನು ತಪ್ಪಿಸುವ ಒಂದು ಯಂತ್ರವನ್ನು ಕಂಡು ಹಿಡಿದರೆ; ಊಟ ಮಾಡುವ ಸಂತೋಷವೇ ಮಾಯವಾಗಿ ಅದೊಂದು ಚಿತ್ರಹಿಂಸೆಯಾದೀತು. ನಮ್ಮ ಕೈಗಾರಿಕೆಗಳ ನಾಶ ಅದರ ಪರಿಣಾಮವಾಗಿ ನಮ್ಮ ನಿರುದ್ಯೋಗದ

ಸ್ಥಿತಿ—ಇವೇ ನಮ್ಮ ಬಡತನಕ್ಕೆ ಕಾರಣ. ಕೆಲವು ವರ್ಷಗಳ ಹಿಂದೆ ಹಿಂದೂಸ್ಥಾನದಲ್ಲಿ ಕೃಷಿ ಜೀವನ ನಡೆಸುವವರ ಸಂಖ್ಯೆ ನೂರಕ್ಕೆ ಎಪ್ಪತ್ತೆಂದು ಹೇಳುತ್ತಾರೆ. ಈಗ ಅದು ತೊಂಬತ್ತಾಗಿದೆಯೆನ್ನುವರು. ಈ ತೊಂಬತ್ತು ಜನರೂ ಕೃಷಿಯಿಂದ ಜೀವನಮಾಡುತ್ತಾರೆಂದು ಅರ್ಥವಲ್ಲ; ಎಪ್ಪತ್ತು ಜನ ಕೃಷಿ ಜೀವನವನ್ನವಲಂಬಿಸುವುದಕ್ಕೆ ಬದಲಾಗಿ ಇಂದು ತೊಂಬತ್ತು ಜನ ಅದರ ಅವಲಂಬಿಗಳಾಗಿರುವಂತೆ ದೂಡಲ್ಪಟ್ಟಿದ್ದಾರೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಹಿಂದೆ ನೂರರಲ್ಲಿ ಇಪ್ಪತ್ತು ಜನರು ಕೈಗಾರಿಕೆಗಳಿಂದಲೂ ಕೈಕಸಬುಗಳಿಂದಲೂ ತಮ್ಮ ಜೀವನವನ್ನು ನಡೆಸಿಕೊಳ್ಳುತ್ತಿದ್ದರು—ಇವು ಮಾಯವಾದ ಮೇಲೆ ಅವರೆಲ್ಲರೂ ವ್ಯವಸಾಯವನ್ನೇ ಅವಲಂಬಿಸಬೇಕಾಗಿದೆ. ಅದ್ದರಿಂದ ತಮ್ಮ ಜೀವನಕ್ಕಾಗಿ ಇತರರ ಕಸಬನ್ನು ಅಪಹರಿಸುತ್ತಿದ್ದಾರೆ. ಕದಿಯುವ ಉದ್ದೇಶವಲ್ಲ—ಆದರೆ ಹೆಚ್ಚು ಜಮೀನು ಇಲ್ಲದ ಕಾರಣ ಹೀಗಾಗಿದೆ.

ನಮ್ಮ ಮೂವತ್ತೈದು ಕೋಟಿ ಜನರಿಗೆ ಆಹಾರವನ್ನು ನೀಡಲು ಸಾಕಷ್ಟು ಜಮೀನು ಇಲ್ಲವೆಂದಲ್ಲ. ಹಿಂದೂಸ್ಥಾನದಲ್ಲಿ ಜನಸಂಖ್ಯೆ ಅತಿ ಹೆಚ್ಚಾಗಿದೆಯೆಂದೂ, ಹೆಚ್ಚಿನ ಜನ ಸಾಯಬೇಕೆಂದೂ ಹೇಳುವುದು ಶುದ್ಧ ಅಸಂಗತವಾದ ಮಾತು. ಇರುವ ಜಮೀನೆಲ್ಲವನ್ನೂ ಉಪಯೋಗಿಸಿ ಅದರಿಂದ ಪೂರ್ತಿ ಉತ್ಪತ್ತಿಯಾಗುವುದಾದರೆ ನಮ್ಮ ಜನರಿಗೆಲ್ಲ ಆಹಾರವನ್ನು ಅದು ಒದಗಿಸಬಲ್ಲದೆಂಬುದು ನನ್ನ ದೃಢ ನಂಬಿಕೆ. ಆದರೆ ನಾವು ಕ್ರಿಯಾಶೀಲರಾಗಬೇಕು. ಒಂದು ಹುಲ್ಲುಕಡ್ಡಿ ಬೆಳೆಯುವ ಜಾಗದಲ್ಲಿ ಎರಡನ್ನು ಬೆಳೆಸಬೇಕು.

ಬಡವರಾದ ಹಳ್ಳಿ ಜನರೊಂದಿಗೆ ನಾವು ಆತ್ಮೀಯತೆಯನ್ನು ತಾಳಬೇಕು. ಜಮೀನಿನಿಂದ ಹುಲುಸಾದ ಬೆಳೆಯನ್ನು ತೆಗೆಯಲು ಅವನಿಗೆ ಸಹಾಯ ಮಾಡಬೇಕು. ನಮಗೆ ಬೇಕಾದ ಪದಾರ್ಥಗಳನ್ನು ಅವನು ಬೆಳೆಯುವಂತೆ ಅವನಿಗೆ ಸಹಾಯ ಮಾಡಬೇಕು. ಅವನಂತೆ ನಾವೂ ನಮ್ಮ ಜೀವನವನ್ನು ನಡೆಸಬೇಕು. ವಿವೇಚನೆಯಿಂದ ಕೂಡಿದ ಜೀವನವನ್ನೂ ಆಹಾರ ಸೇವನೆಯನ್ನೂ ಅವನು ಮಾಡುವಂತೆ ಅವನ ಮನಸ್ಸನ್ನು ಪರಿವರ್ತಿಸಬೇಕು; ಇವೇ ಉಪಾಯಗಳು.

ಈಗ ನಾವು ಯಂತ್ರದಲ್ಲಿ ಬೀಸಿದ ಹಿಟ್ಟನ್ನು ಉಪಯೋಗಿಸುತ್ತಿದ್ದೇವೆ: ಬಡ ಹಳ್ಳಿಯವನೂ ಸಹ ತಲೆಯಮೇಲೆ ಅರ್ಧಮಣ ಧಾನ್ಯವನ್ನು ಹೊತ್ತು ಹತ್ತಿರವಿರುವ ಗಿರಣಿಗೆ ಹೋಗಿ ಅದನ್ನು ಹಿಟ್ಟುಮಾಡಿ ತರುತ್ತಾನೆ. ನಾವು ಹೇರಳವಾಗಿ ಆಹಾರ ಪದಾರ್ಥಗಳನ್ನು ಬೆಳೆಸಿದರೂ, ಹೊರಗಿನಿಂದ ಗೋಧಿಯನ್ನು ಆಮದು ಮಾಡುತ್ತಿರುವೆವೆಂದೂ ಬಹಳ ಸಣ್ಣದಾಗಿ ಬೀಸಿದ ಹಿಟ್ಟನ್ನು ಆಸ್ಟ್ರೇಲಿಯದಿಂದ ನಾವು ತರಿಸುತ್ತಿರುವೆವೆಂದೂ ನಿಮಗೆ ಗೊತ್ತಿದೆಯಲ್ಲವೆ? ಕೈಯಿಂದ ಬೀಸಿದ ಹಿಟ್ಟನ್ನು ಸೇವಿಸಲು ನಾವು ಇಚ್ಛಿಸುವುದಿಲ್ಲ; ಬಡಪಾಯಿಯಾದ ಹಳ್ಳಿಯವನೂ ಮೂರ್ಖನಾಗಿ ನಮ್ಮನ್ನೇ ಅನುಕರಿಸುತ್ತಾನೆ. ನಾವು ರಸವನ್ನು ಕಸಮಾಡುತ್ತಿದ್ದೇವೆ; ಅಮೃತವನ್ನು ವಿಷವನ್ನಾಗಿ ಮಾಡುತ್ತಿದ್ದೇವೆ. ಧಾನ್ಯದ ಎಲ್ಲ ಪೌಷ್ಟಿಕ ಅಂಶಗಳಿಂದ ಕೂಡಿರುವುದೇ ಸರಿಯಾದ ಆಹಾರ. ಗಿರಣಿಯಲ್ಲಿ ಬೀಸಿದ ಹಿಟ್ಟಿನಲ್ಲಿ ಜೀವಸತ್ತ್ವ ಇರುವುದಿಲ್ಲ. ಇಂತಹ ಹಿಟ್ಟನ್ನು ಅನೇಕ ದಿನಗಳಿಟ್ಟರೆ ಜೀವಸತ್ತ್ವದ ಲೋಪ ಮಾತ್ರವೇ ಅಲ್ಲ—ಅದು ವಿಷವಾಗುವುದು. ಆದರೆ ನಿತ್ಯವೂ ಹೊಸದಾಗಿ ಬೇಕಾದ ಹಿಟ್ಟನ್ನು ಸಿದ್ಧಮಾಡಿಕೊಳ್ಳಲು ನಾವು ಶ್ರಮ ವಹಿಸಲಾರೆವು. ಪುಷ್ಟಿ ಇಲ್ಲದ ಪದಾರ್ಥಕ್ಕೆ ಹಣವನ್ನು ಸುರಿದು ಅದರ ಜೊತೆಗೆ ಅನಾರೋಗ್ಯವನ್ನೂ ಕೊಂಡುಕೊಳ್ಳುವೆವು. ಇದೇನೂ ಕ್ಲಿಷ್ಟವಾದ ಆರ್ಥಿಕ ತತ್ತ್ವವಲ್ಲ; ನಮ್ಮ ಕಣ್ಣೆದುರಿಗೆ ನಿತ್ಯವೂ ನಡೆಯುತ್ತಿರುವ ವ್ಯವಹಾರ. ಇದೇ ಮಾತೇ ಅಕ್ಕಿಗೂ ಬೆಲ್ಲಕ್ಕೂ ಎಣ್ಣೆಗೂ ಅನ್ವಯಿಸುತ್ತದೆ. ಅಕ್ಕಿಯನ್ನು ಗಿರಣಿಯಲ್ಲಿ ತೊಳೆದುಹಾಕಿ ಉಪಯೋಗಿಸುತ್ತೇವೆ. ಕಡಮೆ ಪೌಷ್ಟಿಕವಾದ ಸಕ್ಕರೆಯನ್ನು ಉಪಯೋಗಿಸುತ್ತೇವೆ. ಅದಕ್ಕೆ ಹೆಚ್ಚು ಹಣ ತೆರುತ್ತೇವೆ: ಹೆಚ್ಚು ಪೌಷ್ಟಿಕವಾದ ಬೆಲ್ಲವನ್ನು ಉಪಯೋಗಿಸುವುದಿಲ್ಲ. ಹಳ್ಳಿಯಲ್ಲಿ ಎಣ್ಣೆ ಗಾಣದವನನ್ನು ನಾಶಕ್ಕೆ ಗುರಿಪಡಿಸಿ, ಬೇರೆ ಎಣ್ಣೆಗಳನ್ನು ಸೇವಿಸುತ್ತೇವೆ. ಹಸುವನ್ನು ಪೂಜಿಸುತ್ತೇವೆ. ಆದರೆ ಅದನ್ನು ನಿಧಾನವಾಗಿ ಸಾಯಿಸುತ್ತಿದ್ದೇವೆ. ಜೇನುತುಪ್ಪವನ್ನು ಸೇವಿಸುತ್ತೇವೆ; ಆದರೆ ಜೇನು ಹುಳವನ್ನು ಸಾಯಿಸುತ್ತಿದ್ದೇವೆ. ಇದರ ಪರಿಣಾಮವೇನೆಂದರೆ ನನ್ನಂತಹ ಮಹಾತ್ಮನಿಗೆ ಹೊರತು ಬೇರೆ ಯಾರಿಗೂ ಜೇನುತುಪ್ಪ ಸಿಗು

ವುಸೇ ದುರ್ಲಭವಾಗಿದೆ; ಅಥವಾ ವೈದ್ಯರು ತಮ್ಮ ಔಷಧಿಯೊಂದಿಗೆ ಬೆರೆಸಿದರೆ ಅದು ಸಿಗಬೇಕು. ಶಾಸ್ತ್ರೀಯವಾಗಿ ಅಹಿಂಸಾತ್ಮಕ ರೀತಿಯಲ್ಲಿ ಜೇನುಹುಳವನ್ನು ಸಾಕುವುದನ್ನು ಕಲಿಯಲು ನಾವು ಶ್ರಮವಹಿಸಿದ್ದೇ ಆದರೆ ಜೇನುತುಪ್ಪ ನಮಗೆ ಅಗ್ಗವಾಗಿ ದೊರೆಯುವುದು, ನಮ್ಮ ಮಕ್ಕಳ ಬೆಳವಣಿಗೆಗೆ ಅವಶ್ಯಕವಾದ ಕಾರ್ಬೋಹೈಡ್ರೇಟ್ ಬೆಲ್ಲವೂ (ಶರ್ಕರಪಿಷ್ಟ) ಅವರಿಗೆ ಸಿಗುವುದು. ನಮ್ಮ ಆಹಾರ ಪದ್ಧತಿಗಳಲ್ಲಿ ನೆರಳನ್ನು ಅರಸುತ್ತ ತಿರುಳನ್ನು ಕೈಬಿಡುತ್ತಿದ್ದೇವೆ; ತಾಮ್ರವರ್ಣದ ಪೌಷ್ಟಿಕವಾದ ಬೆಲ್ಲವನ್ನು ಬಿಟ್ಟು ಎಲುಬಿನಂತೆ ಬೆಳ್ಳಗಿರುವ ಸಕ್ಕರೆಯನ್ನು ಸೇವಿಸುತ್ತೇವೆ, ತವುಡು ಸಹಿತ ಪುಷ್ಟಿದಾಯಕವಾದ ಕಂದು ಬಣ್ಣದ ರೊಟ್ಟಿಗೆ ಬದಲಾಗಿ ಬಿಳಿಚಿಕೊಂಡಿರುವ ರೊಟ್ಟಿಯನ್ನು ತಿನ್ನುತ್ತೇವೆ.

ನಾವು ನಿತ್ಯ ಸ್ನಾನಮಾಡುವ ಜನರಿರುವ ಜನಾಂಗವೆಂದು ಹೇಳಲಾಗಿದೆ. ಅದೇನೂ ನಿಜವೆ. ಆದರೆ ಅದರಿಂದ ನಾವೇನು ಉತ್ತಮರಾಗಿಲ್ಲ. ಏಕೆಂದರೆ ಕೊಳೆಯ ನೀರಿನಲ್ಲಿ ನಾವು ಸ್ನಾನಮಾಡುತ್ತೇವೆ, ನಮ್ಮ ಕೊಳಗಳನ್ನೂ, ನದಿಗಳನ್ನೂ ಹೇಸಿಗೆಯಿಂದ ತುಂಬುತ್ತೇವೆ, ಅದೇ ನೀರನ್ನೇ ಕುಡಿಯಲೂ, ಮೀಯಲೂ ಉಪಯೋಗಿಸುತ್ತೇವೆ. ಸ್ವಚ್ಛತೆಯ, ಮತ್ತು ಆರೋಗ್ಯದ ಸಾಮಾನ್ಯ ನಿಯಮಗಳನ್ನು ಸುಶಿಕ್ಷಿತರಾದ ನಾವು—ಲಾಯರುಗಳೂ, ಪದವೀಧರರೂ, ವೈದ್ಯರೂ—ಕಲಿಯಲೊಲ್ಲೆವು. ನಾವು ವಿಸರ್ಜಿಸುವ ಮಲಗಳನ್ನು ಉಳಿತಾಯದ ದೃಷ್ಟಿಯಿಂದ ಸದ್ವಿನಿಯೋಗ ಮಾಡುವ ಉಪಾಯಗಳನ್ನು ನಾವು ಇನ್ನೂ ಕಲಿತಿಲ್ಲ: ಆರೋಗ್ಯದಾಯಕವಾದ ಬಯಲು ಪ್ರದೇಶಗಳನ್ನೂ ರೋಗರುಜಿನಗಳ ಬೀಡಾಗಿ ಮಾಡಿಕೊಂಡಿದ್ದೇವೆ.

ನಿಮ್ಮ ಆಲಸ ಮತ್ತು ತಾಮಸದ ಗುಣವನ್ನು ಕಿತ್ತೊಗೆದು ಈ ಸಾಮಾನ್ಯ ವಿಷಯಗಳನ್ನು ಅಭ್ಯಾಸಮಾಡಿ. ವಿಚಾರ ಪರತೆಯ ಜೀವನವನ್ನು ನಡೆಯಿಸಿ, ಕಸವನ್ನು ಹೇಗೆ ರಸವನ್ನಾಗಿ ಮಾಡಬೇಕೆಂಬುದನ್ನು ಕಲಿಯಬೇಕೆಂದು ನಾನು ನಿಮ್ಮನ್ನು ಬೇಡಿಕೊಳ್ಳುತ್ತೇನೆ. ಶತಮಾನಗಳಿಂದ ಬಂದಿರುವ ಈ ತಾಮಸ ಮನೋವೃತ್ತಿಯನ್ನು ನಾವು ಬಿಸುಟುಹಾಕಿದ ಪಕ್ಷಕ್ಕೆ ನಾನು ಪ್ರಸ್ತಾಪಿಸಿರುವ ಸಾಮಾನ್ಯ ಸತ್ಯಗಳನ್ನು ಆಚರಿಸಬಹುದು.

ಆದರೆ ನಾವು ದೈಹಿಕ ಶ್ರಮವನ್ನು ಮಾಡದವರಾಗಿ ನಮ್ಮ ಮೆದುಳನ್ನು ಕೆಡಿಸಿಕೊಂಡಿದ್ದೇವೆ: ವಿಚಾರ ಶೂನ್ಯವಾದ ಆಹಾರ ಪದ್ಧತಿಗಳಿಗೂ, ಜೀವನ ಕ್ರಮಕ್ಕೂ ತೃಪ್ತರಾಗಿ ಕೂತಿದ್ದೇವೆ. ನಾವು ಎಚ್ಚರಗೊಂಡು ಚೇತರಿಸಿಕೊಳ್ಳೋಣ: ನಮ್ಮ ದೇಹವನ್ನೂ ಬುದ್ಧಿಯನ್ನೂ ಚುರುಕನ್ನಾಗಿ ಮಾಡುವ ದೃಢಸಂಕಲ್ಪವನ್ನು ಮಾಡೋಣ.[೧೪]

## ೧೫. ಶಿಕ್ಷಕರ ಶಾಲೆಯ ವಿದ್ಯಾರ್ಥಿಗಳನ್ನುದ್ದೇಶಿಸಿ ಮಾಡಿದ ಭಾಷಣ

[ವರ್ಧಾಕ್ಕೆ ಬಂದಿದ್ದಾಗ ಗಾಂಧೀಯವರು ಗ್ರಾಮಸೇವಕರ ಶಿಕ್ಷಣಕ್ಕಾಗಿ ಏರ್ಪಾಡಾಗಿದ್ದ ಶಾಲೆಯ ವಿದ್ಯಾರ್ಥಿಗಳನ್ನುದ್ದೇಶಿಸಿ ಭಾಷಣ ಮಾಡಿದರು. ಶಾಲೆ ಹೇಗೆ ಹುಟ್ಟಿತೆಂದು ಅವರಿಗೆ ಹೇಳಿ, ಅವರು ಯಾವ ಧ್ಯೇಯವನ್ನು ಮುಂದಿಟ್ಟುಕೊಂಡು ಕೆಲಸ ಮಾಡಬೇಕೆಂಬುದನ್ನು ವಿವರಿಸಿದರು. ಈ ರೀತಿ ನುಡಿದರು :]

ಈಗ ಉದ್ಯೋಗಾಕಾಂಕ್ಷೆಯಿಂದ ಜನರು ಶಿಕ್ಷಣ ಸಂಸ್ಥೆಗಳಿಗೆ ಹೇಗೆ ಬರುತ್ತಾರೊ ಆ ಬಗೆಯ ಆಕಾಂಕ್ಷೆಯಿಂದ ನೀವು ಇಲ್ಲಿ ಬಂದವರಲ್ಲ. ಈಗಿನ ಕಾಲದಲ್ಲಿ ಮನುಷ್ಯನ ಕೆಲಸಕ್ಕೆ ರೂಪಾಯಿ ಆಣೆ ಪೈಗಳಲ್ಲಿ ಬೆಲೆ ಕಟ್ಟುತ್ತಾರೆ. ಒಬ್ಬ ಮನುಷ್ಯನ ಶಿಕ್ಷಣ ತರಪೇತು ವಾಣಿಜ್ಯದ ವಿನಿಮಯ ವಸ್ತುವಾಗುತ್ತದೆ. ಆ ಅಳತೆಯ ಕೋಲನ್ನಿಟ್ಟುಕೊಂಡು ನೀವು ಇಲ್ಲಿಗೆ ಬಂದಿದ್ದರೆ ನಿಮಗೆ ನಿರಾಶೆಯಾಗುವುದು ಖಂಡಿತ. ನಿಮ್ಮ ಶಿಕ್ಷಣ ಮುಗಿದ ಮೇಲೆ ಹತ್ತು ರೂಪಾಯಿ ಸಂಭಾವನೆಯ ಮೇಲೆ ನಿಮ್ಮನ್ನು ನೇಮಿಸಬಹುದು. ಅಲ್ಲಿಗೇ ಅದು ನಿಲ್ಲಬಹುದು. ಒಂದು ದೊಡ್ಡ ಕಂಪೆನಿಯ ಮ್ಯಾನೇಜರಿಗಾಗಲಿ, ದೊಡ್ಡ ಅಧಿಕಾರಿಗಾಗಲಿ ಕೊಡುವ ವೇತನದೊಂದಿಗೆ ನೀವು ಅದನ್ನು ಹೋಲಿಸುವಂತಿಲ್ಲ. ಈಗಿರುವ ಉದ್ಯೋಗದರ್ಜೆಗಳ ಮೌಲ್ಯಗಳನ್ನು ನಾವು ಬದಲಾಯಿಸಬೇಕು. ವೃದ್ಧಿಯಾಗುತ್ತ ಹೋಗುವ ದೊಡ್ಡ ವೇತನಗಳನ್ನು ಕೊಡುತ್ತೇವೆಂದು ನಿಮಗೆ ನಾವು ಮಾತುಕೊಡುವ ಹಾಗಿಲ್ಲ. ಆ ಬಗೆಯ ಆಕಾಂಕ್ಷೆಗಳಿಂದ ನಿಮ್ಮ ಮನಸ್ಸನ್ನು ತಿರುಗಿಸುವುದೇ

ನಿಜವಾಗಿಯೂ ನಮ್ಮ ಇಚ್ಛೆ. ನಿಮ್ಮ ಊಟಕ್ಕಾಗಿ ನೀವು ತಿಂಗಳಿಗೆ ಆರು ರೂಪಾಯಿಗೆ ಮೀರದಂತೆ ಖರ್ಚುಮಾಡಿಕೊಳ್ಳಬೇಕು. ನಿಮ್ಮ ಯೋಗ್ಯತೆಯನ್ನು ರೂಪಾಯಿಗಳಿಂದ ನೀವು ಅಳೆಯುವವರಲ್ಲವೆಂದು ನನ್ನ ಗ್ರಹಿಕೆ. ದೇಶದ ಸೇವೆಯನ್ನು ಕೇವಲ ಅಲ್ಪ ಪ್ರತಿಫಲ ಪಡೆದು ಸಂತೋಷಚಿತ್ತರಾಗಿ ಸಲ್ಲಿಸುವಿರೆಂದು ಭಾವಿಸಿದ್ದೇನೆ. ಸ್ಟಾಕ್ ಎಕ್ಸ್‌ಛೇಂಜಿನಲ್ಲಿ (ಬಂಡವಾಳ ವ್ಯಾಪಾರ ಕಟ್ಟೆಯಲ್ಲಿ) ಒಬ್ಬ ಮನುಷ್ಯ ಸಾವಿರಾರು ರೂಪಾಯಿಗಳನ್ನು ಗಳಿಸಬಹುದು. ಆದರೆ ನಮ್ಮ ಉದ್ದೇಶ ಸಾಧನೆಗೆ ಆತನು ತೀರ ನಿಷ್ಪ್ರಯೋಜಕನಾಗಿರಬಹುದು. ನಮ್ಮ ಈ ದೀನವಾದ ವಾತಾವರಣದಲ್ಲಿ ಅವನಿಗೆ ಸುಖ ಸಿಗಲಾರದು: ಆತನಿರುವ ವಾತಾವರಣದಲ್ಲಿ ನಮಗೂ ಸುಖ ಸಿಗಲಾರದು. ದೇಶಕ್ಕಾಗಿ ದುಡಿಯುವ ಆದರ್ಶ ಪ್ರಾಯರಾದ ಶ್ರಮಜೀವಿಗಳು ನಮಗೆ ಬೇಕು. ಎಂತಹ ಊಟ ಸಿಗುತ್ತದೆ? ಅವರ ಸೇವೆಯನ್ನು ಪಡೆಯುತ್ತಿರುವ ಹಳ್ಳಿಯವರು ಅವರಿಗೇನು ಅನುಕೂಲಗಳನ್ನೊದಗಿಸಲು ನಿಶ್ಚಯಿಸಿದ್ದಾರೆ? ಇವುಗಳ ಬಗೆಗೆ ಅವರಿಗೆ ಚಿಂತೆ ಇರಲಾರದು. ಅವರ ಆವಶ್ಯಕತೆಗಳನ್ನು ಪೂರೈಸಲು ಭಗವಂತನನ್ನು ನಂಬಿರುವರು: ಕಷ್ಟಗಳನ್ನು ಹರ್ಷಚಿತ್ತರಾಗಿ ಎದುರಿಸುವರು. ನಮ್ಮ ದೇಶದಲ್ಲಿರುವ ಏಳುಲಕ್ಷ ಹಳ್ಳಿಗಳ ವಿಚಾರ ಮಾಡಿದಲ್ಲಿ ಇದು ಅನಿವಾರ್ಯ. ಸಂಬಳ ಸಾರಿಗೆಗಳನ್ನು ಕೊಟ್ಟು ಕಾರ್ಯಕರ್ತರನ್ನು ನಾವು ನೇಮಿಸಿಕೊಳ್ಳುವ ಸ್ಥಿತಿಯಲ್ಲಿಲ್ಲ. ಅಂತಹವರು ವೇತನದಲ್ಲಿ ಕ್ರಮವಾದ ಬಡ್ತಿ, ಪ್ರಾವಿಡೆಂಟ್ ಫಂಡ್ ಮತ್ತು ವಿಶ್ರಾಂತಿ ವೇತನ ಅಪೇಕ್ಷಿಸುವವರಾಗಿರುತ್ತಾರೆ. ಗ್ರಾಮಸೇವೆಯಲ್ಲಿ ಶ್ರದ್ಧೆಯಿಂದ ಮಾಡಿದ ಸೇವೆಯೇ ತೃಪ್ತಿಯನ್ನು ಒದಗಿಸಬೇಕು, ಬೇರೆ ಪ್ರತಿಫಲವಿಲ್ಲ.

ಹಳ್ಳಿಯವರಿಗೂ ಇದೇ ದರ್ಜೆಯ ಜೀವನವನ್ನೇ ಗುರಿಯಾಗಿಟ್ಟುಕೊಳ್ಳಬೇಕೆ? ಈ ಪ್ರಶ್ನೆಯನ್ನು ಕೇಳಲು ನೀವು ಇಚ್ಛಿಸಬಹುದು. ಎಂದಿಗೂ ಇಲ್ಲ. ಈ ಕಷ್ಟಕಾರ್ಪಣ್ಯಗಳೆಲ್ಲವೂ ನಮಗೆ—ಸೇವಕರಿಗೆ—ನಮ್ಮ ಧಣಿಗಳಾದ ಹಳ್ಳಿಯವರಿಗಲ್ಲ. ಇಷ್ಟು ವರ್ಷಗಳಿಂದ ನಾವು ಅವರ ಬೆನ್ನಿನ ಮೇಲೆ ಕೂತಿದ್ದೇವೆ. ಈ ನಮ್ಮ ಧಣಿಗಳ ಸ್ಥಿತಿ ಈಗಿರುವುದಕ್ಕಿಂತಲೂ ಉತ್ತಮಗೊಳ್ಳಲೆಂದು ನಮ್ಮ ಸ್ವಂತ ಇಚ್ಛೆಯಿಂದ

ಹೆಚ್ಚುಹೆಚ್ಚಾಗಿ ಬಡತನವನ್ನು ನಾವು ಅವಲಂಬಿಸಬೇಕು. ಅವರಿಗೆ ಈಗಿರುವ ಸಂಪಾದನೆ ಬಹಳ ಮಟ್ಟಿಗೆ ಹೆಚ್ಚಾಗುವಂತೆ ಅವರಿಗೆ ಅವಕಾಶ ಗಳನ್ನೊದಗಿಸಬೇಕು. ಅದೇ ಗ್ರಾಮೋದ್ಯೋಗ ಸಂಘದ ಗುರಿ. ನಾನು ವರ್ಣಿಸಿರುವಂತಹ ಸೇವಕರು ದಿನೇದಿನೇ ಹೆಚ್ಚುತ್ತ ಹೋಗುವ ಸಂಖ್ಯೆ ಯಲ್ಲಿ ಒದಗದಿದ್ದರೆ ಸಂಘ ಉತ್ತಮ ಕಾರ್ಯವನ್ನು ಸಾಧಿಸಲಾರದು. ಅಂತಹ ಸೇವಕರು ನೀವಾಗಬೇಕೆಂದು ಹಾರೈಸುವೆನು.[೧೫]

## ೧೬. ಬೆಂಗಳೂರಿನ ಹಿಂದೀ ಪ್ರಚಾರ ಮಂಡಲದ ಪದವೀದಾನ ಸಮಾರಂಭದಲ್ಲಿ ಮಾಡಿದ ಭಾಷಣ

[ಬೆಂಗಳೂರಿನಿಂದ ತೆರಳುವ ದಿನದ ಹಿಂದಿನ ಸಂಜೆ ಹಿಂದೀ ಪ್ರಚಾರ ಮಂಡಲದ ಪದವೀದಾನ ಸಮಾರಂಭದಲ್ಲಿ ವಿದ್ಯಾರ್ಥಿಗಳನ್ನುದ್ದೇಶಿಸಿ ಗಾಂಧೀ ಯವರು ಮಾತಾಡಿದರು. ಅವರು ಈ ರೀತಿ ನುಡಿದರು.]

ಈ ಸಂದರ್ಭದಲ್ಲಿ ಹಿಂದೀ, ಹಿಂದೂಸ್ತಾನಿ ಭಾಷೆಯೇ ರಾಷ್ಟ್ರಭಾಷೆ ಯಾಗಬಲ್ಲದೆನ್ನುವುದಕ್ಕೆ ಸ್ವಯಂವೇದ್ಯವಾದ ಕೆಲವು ಕಾರಣಗಳನ್ನು ನಿಮಗೆ ಹೇಳುತ್ತೇನೆ.

ನೀವು ಕರ್ಣಾಟಕದಲ್ಲಿಯೇ ವಾಸಮಾಡಿ ಅದರ ಆಚೆ ನಿಮ್ಮ ದೃಷ್ಟಿ ಹೋಗದೆ ಇರುವವರಿಗೂ ಕನ್ನಡದ ಜ್ಞಾನ ನಿಮಗಿದ್ದರೆ ಸಾಕು. ಆದರೆ ಯಾವುದಾದರೊಂದು ನಿಮ್ಮ ಹಳ್ಳಿಯ ಕಡೆ ನೀವು ನೋಡಿದರೆ ನಿಮ್ಮ ದೃಷ್ಟಿ ಮತ್ತು ನಿಮ್ಮ ಕ್ಷಿತಿಜ ವಿಶಾಲವಾಗಿದೆ ಎಂದು ನೀವು ಅರಿಯುವಿರಿ; ಕೇವಲ ಕರ್ಣಾಟಕ ಒಂದೇ ನಿಮ್ಮ ದೃಷ್ಟಿಯಲ್ಲಿಲ್ಲ. ಇಡೀ ಭಾರತವೇ ಇರುವುದು. ಆದರೆ ಒಂದು ಸಾಮಾನ್ಯ ಭಾಷೆ ಇಲ್ಲದೆ ಈ ಆಸಕ್ತಿ ಬಹಳ ದೂರ ಹೋಗಲಾರದು. ಕನ್ನಡಿಗನು ಸಿಂಧ್ ಅಥವಾ ಉತ್ತರ ಪ್ರದೇಶದವ ನೊಂದಿಗೆ ಸಂಪರ್ಕವನ್ನಿಟ್ಟುಕೊಂಡು ಅದನ್ನು ಬೆಳೆಸುವುದು ಹೀಗೆ? ಇದಕ್ಕೆ ಇಂಗ್ಲಿಷ್ ಭಾಷೆಯೇ ಸಾಕೆಂದು ನಮ್ಮಲ್ಲಿ ಕೆಲವರು ಹೇಳಿರುವರು, ಈಗಲೂ ಹೇಳುತ್ತಿದ್ದಾರೆ. ಆದರೆ ಇದರಿಂದ ನೀವು ತೃಪ್ತಿ ಹೊಂದಲಾರಿ

ರೆಂದು ನನಗೆ ನಿಶ್ಚಯವಾಗಿ ತೋರುತ್ತದೆ. ನೀವೂ ನಾನೂ ಲಕ್ಷಾಂತರ ಜನರೂ ಅಂತರ ಪ್ರಾಂತೀಯ ಸಂಪರ್ಕಗಳನ್ನು ಬೆಳೆಸಬೇಕೆಂದು ಇಚ್ಛಿಸುತ್ತೇವೆ. ಆದರೆ ಇದು ಇಂಗ್ಲಿಷಿನ ಮೂಲಕ ಅನೇಕ ತಲೆಮಾರುಗಳ ಆನಂತರ, ಪ್ರಾಯಶಃ ಎಂದಿಗೂ ಸಾಧ್ಯವಿಲ್ಲವೆಂಬುದು ಸ್ವಯಂ ವೇದ್ಯವಾಗಿದೆ. ಇಷ್ಟು ಜನರೂ ಇಂಗ್ಲಿಷ್ ಕಲಿಯಲು ಯಾವ ಕಾರಣವೂ ಇಲ್ಲ. ಜೀವನೋಪಾಯಕ್ಕೆ ಹೀಗೆ ಕಲಿಯಬೇಕೆಂಬ ಅಗತ್ಯವೇನೂ ಇಲ್ಲ. ಜೀವನೋಪಾಯಕ್ಕೆಂದೇ ಇಂಗ್ಲಿಷನ್ನು ಕಲಿಯುವವರ ಸಂಖ್ಯೆ ಹೆಚ್ಚಾದಂತೆಲ್ಲ ಈ ಉದ್ದೇಶ ಸಾಧನೆಗೆ ಆದರ ಬೆಲೆ ಕಡಮೆಯಾಗುತ್ತ ಹೋಗುವುದು. ಹಿಂದೀ–ಹಿಂದೂಸ್ತಾನಿಯನ್ನು ಕಲಿಯುವುದು ಇಂಗ್ಲಿಷನ್ನು ಕಲಿಯುವಷ್ಟು ಕಷ್ಟವಲ್ಲ. ಇಂಗ್ಲಿಷನ್ನು ಕಲಿಯುವಷ್ಟು ಸಮಯವನ್ನು ಅದಕ್ಕೆ ಕೊಡಬೇಕಾದ್ದಿಲ್ಲ. ಹಿಂದೀ ಹಿಂದೂಸ್ತಾನಿ ಭಾಷೆಯನ್ನು ಮಾತಾಡುವ ಹಿಂದೂ–ಮುಸಲ್ಮಾನರ ಸಂಖ್ಯೆ ಇಪ್ಪತ್ತು ಕೋಟಿಗಿಂತಲೂ ಮಿಗಿಲಾದುದೆಂದು ಅಂದಾಜು ಮಾಡಲಾಗಿದೆ. ಇಪ್ಪತ್ತು ಕೋಟಿ ತಮ್ಮ ಸೋದರ ಸೋದರಿಯರು ಮಾತಾಡುವ ಭಾಷೆಯನ್ನು ಕರ್ಣಾಟಕದ ೧೧೦ ಲಕ್ಷ ಸ್ತ್ರೀ ಪುರುಷರು ಕಲಿಯಲಿಚ್ಛಿಸಲಾರರೆ? ಇದನ್ನು ಅವರು ಸುಲಭವಾಗಿ ಕಲಿಯಲು ಸಾಧ್ಯವಲ್ಲವೆ? ಲೇಡಿ ರಾಮನ್ ಅವರು ಮಾಡಿದ ಹಿಂದೀ ಭಾಷಣದ ಕನ್ನಡ ಅನುವಾದವನ್ನು ನೀವೆಲ್ಲ ಕೇಳಿದಿರಿ. ಪ್ರೇಮ, ಪ್ರೇಮಿ, ಸಂಘ, ಅಧ್ಯಕ್ಷ, ಪದ, ಅನಂತ, ಭಕ್ತಿ, ಸ್ವಾಗತ, ಅಧ್ಯಕ್ಷತಾ, ಸಮ್ಮೇಳನ—ಈ ಪದಗಳೆಲ್ಲವೂ ಹಿಂದೀಯಲ್ಲಿಯೂ ಕನ್ನಡದಲ್ಲಿಯೂ ಒಂದೇ ರೂಪದಲ್ಲಿವೆ. ಈಗ ಯಾರಾದರೂ ಲೇಡಿ ರಾಮನ್ ಅವರ ಹಿಂದೀ ಭಾಷಣವನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿದರೆ ಈ ಪದಗಳನ್ನೇ ಬಳಸಲು ಸಾಧ್ಯವಾಗುತ್ತಿತ್ತೆ? ಎಂದಿಗೂ ಇಲ್ಲ. ಈ ಶಬ್ದಗಳ ಇಂಗ್ಲಿಷ್ ಭಾಷಾಂತರವೆಲ್ಲ ಶ್ರೋತೃಗಳಿಗೂ ಹೊಸದಾಗಿರುವುದು. ಆದ್ದರಿಂದ ನಮ್ಮ ಕನ್ನಡ ಮಿತ್ರರು ಹಿಂದೀ ಭಾಷೆ ಅವರಿಗೆ ಕಠಿಣವೆಂದು ಹೇಳಿದಾಗ ನನಗೆ ತಾಳ್ಮೆ ತಪ್ಪಿ ಕೋಪವೂ ಬರುತ್ತದೆ. ಅದಕ್ಕೆ ಕಡಮೆ ಇಲ್ಲದಷ್ಟು ನಗೆಯೂ ಬರುತ್ತೆ. ಒಂದು ತಿಂಗಳು ಕಾಲ, ಕೆಲವು ಘಂಟೆಗಳನ್ನು ಇದಕ್ಕಾಗಿ ವಿನಿಯೋಗಿಸಿದರೆ ಇದು ಸಾಧ್ಯವೆಂದು ನಾನು ಖಂಡಿತ

ವಾಗಿ ಹೇಳಬಲ್ಲೆ. ನನಗೆ ಅರವತ್ತೇಳು ವರ್ಷವಾಯಿತು. ಇನ್ನು ಬಹಳ ವರ್ಷಗಳು ಉಳಿಯಲಾರೆ. ಆದರೂ ಕನ್ನಡ ಭಾಷಾಂತರ ಕೇಳುವಾಗ ಕನ್ನಡವನ್ನು ಕಲಿಯಲು ಪ್ರತಿದಿನವೂ ಕೆಲವು ಘಂಟೆಗಳು ಮೀಸಲಾಗಿಟ್ಟೆನೆಂದರೆ ಎಂಟು ದಿನಗಳಲ್ಲಿ ನಾನು ಕಲಿಯಬಹುದೆಂದು ನನಗನಿಸಿತು. ಶ್ರೀನಿವಾಸಶಾಸ್ತ್ರಿ, ನಾನು, ನಮ್ಮಂತಹ ಐದಾರು ಜನರನ್ನು ಳಿದು ನೀವೆಲ್ಲರೂ ಯುವಕರು. ಕೇವಲ ಒಂದು ತಿಂಗಳು ಕಾಲ ಪ್ರತಿದಿನ ನಾಲ್ಕು ಘಂಟೆಗಳು ಹಿಂದೀ ಭಾಷೆಯ ಅಧ್ಯಯನಕ್ಕೆ ವಿನಿಯೋಗಿಸಲು ನಿಮ್ಮಲ್ಲಿ ಶಕ್ತಿ ಇಲ್ಲವೆ? ಇಪ್ಪತ್ತು ಕೋಟಿ ದೇಶಬಾಂಧವರೊಂದಿಗೆ ಸಂಪರ್ಕ ಬೆಳೆಸಲು ಇಷ್ಟು ಸಮಯವನ್ನು ನೀವು ಮೀಸಲಾಗಿಡುವುದು ಹೆಚ್ಚಾದೀತೆ? ನಿಮ್ಮಲ್ಲಿ ಇಂಗ್ಲಿಷ್ ಅರಿಯದವರು ಆ ಭಾಷೆಯನ್ನು ಕಲಿಯಲು ನಿಶ್ಚಯಿಸಿದಿರೆಂದು ಭಾವಿಸೋಣ. ಅದನ್ನು ಕಲಿಯಲು ದಿನವೂ ನಾಲ್ಕು ಘಂಟೆಗಳಂತೆ ಒಂದು ತಿಂಗಳು ಕಾಲದಲ್ಲಿ ನೀವು ಯಾರಾದರು ಕಲಿಯಬಲ್ಲಿರೆಂದು ತಿಳಿದಿರುವಿರೇನು? ಸಾಧ್ಯವೇ ಇಲ್ಲ. ಹಿಂದೀಯನ್ನು ಕಲಿಯುವುದು ಅಷ್ಟು ಹಾಸ್ಯಾಸ್ಪದವಾದಷ್ಟು ಸುಲಭವಾಗಿರುವುದಕ್ಕೆ ಕಾರಣ ನಮ್ಮ ಭಾಷೆಗಳಲ್ಲಿ ಹಿಂದೂಗಳಾಡುವ ದಕ್ಷಿಣದ ನಾಲ್ಕು ಭಾಷೆಗಳಲ್ಲಿಯೂ ಸಹ ಅನೇಕ ಸಂಸ್ಕೃತ ಶಬ್ದಗಳಿವೆ. ಪೂರ್ವಕಾಲದಲ್ಲಿ ದಕ್ಷಿಣಕ್ಕೂ ಉತ್ತರಕ್ಕೂ ಸಂಪರ್ಕವಿದ್ದುದು ಸಂಸ್ಕೃತ ಮೂಲಕವೆಂದು ನಮ್ಮ ಇತಿಹಾಸ ತಿಳಿಸುತ್ತದೆ. ಇಂದಿಗೂ ದಕ್ಷಿಣ ದೇಶದ ಶಾಸ್ತ್ರಿಗಳೂ ಉತ್ತರ ದೇಶದ ಶಾಸ್ತ್ರಿಗಳೂ ಸೇರಿದರೆ ತಮ್ಮ ವಾಕ್ಯಾರ್ಥಗಳನ್ನು ಸಂಸ್ಕೃತದ ಮೂಲಕ ಮಾಡುತ್ತಾರೆ. ದೇಶ ಭಾಷೆಗಳಲ್ಲಿರುವ ಭೇದ ಮುಖ್ಯವಾಗಿ ವ್ಯಾಕರಣಕ್ಕೆ ಸಂಬಂಧಿಸಿದುವು. ಉತ್ತರದ ಭಾಷೆಗಳಲ್ಲಿ ವ್ಯಾಕರಣದ ರೂಪವೂ ಒಂದೇ ಆಗಿದೆ. ದಕ್ಷಿಣದ ಭಾಷೆಗಳ ವ್ಯಾಕರಣವೇನೊ ತೀರ ಭಿನ್ನವಾಗಿದೆ; ಅವುಗಳ ಶಬ್ದಗಳೂ ಸಂಸ್ಕೃತದ ಪ್ರಭಾವಕ್ಕೆ ಒಳಗಾಗುವುದಕ್ಕೆ ಪೂರ್ವದಲ್ಲಿ ಭಿನ್ನವಾಗಿದ್ದುವು. ಆದರೆ ಈ ಭಾಷೆಗಳು ಈಗ ಅನೇಕ ಸಂಸ್ಕೃತ ಶಬ್ದಗಳನ್ನು ತಮ್ಮದನ್ನಾಗಿ ಮಾಡಿಕೊಂಡಿವೆ; ಇದರ ಫಲವಾಗಿ ನಾನು ದಕ್ಷಿಣಕ್ಕೆ ಬಂದಾಗಲೆಲ್ಲ ಈ ಭಾಷೆಗಳಲ್ಲಾಡುವ ಮಾತುಗಳ ಒಟ್ಟು ಸಾರಾಂಶವನ್ನು ಗ್ರಹಿಸಲು ನನಗೆ ಕಷ್ಟವಾಗುವುದಿಲ್ಲ.

ಈಗ ನಮ್ಮ ಮುಸಲ್ಮಾನ ಮಿತ್ರರ ವಿಷಯವನ್ನು ಪ್ರಸ್ತಾಪಿಸುತ್ತೇನೆ. ಅವರಿಗೆ ದೇಶಭಾಷೆಗಳ ಪರಿಚಯವಿದೆ—ಅದರ ಜೊತೆಗೆ ಉರ್ದು ಗೊತ್ತಿದೆ. ಹಿಂದೀ–ಉರ್ದು–ಹಿಂದೂಸ್ತಾನಿ–ಈ ಭಾಷೆಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಎಲ್ಲಕ್ಕೂ ಒಂದೇ ವ್ಯಾಕರಣ. ಲಿಪಿಯಲ್ಲಿ ಮಾತ್ರ ಭೇದ. ಇದನ್ನು ವಿಚಾರಮಾಡಿದಂತೆಲ್ಲ–ಹಿಂದೀ, ಹಿಂದೂಸ್ಥಾನಿ, ಉರ್ದು ಈ ಮೂರೂ ಒಂದೇ ಭಾಷೆಯ ಹೆಸರುಗಳೆಂದು ಗೋಚರವಾಗುತ್ತದೆ. ಈ ಭಾಷೆಗಳಲ್ಲಿನ ನಿಘಂಟುಗಳನ್ನು ನಾವು ನೋಡಿದರೆ ಬಹು ಮಟ್ಟಿಗೆ ಶಬ್ದಗಳೆಲ್ಲವೂ ಒಂದೇ ಆಗಿರುತ್ತವೆ. ಆದ್ದರಿಂದ ಮುಸಲ್ಮಾನರಿಗೆ—ಲಿಪಿಯ ಪ್ರಶ್ನೆಯನ್ನು ಬಿಟ್ಟರೆ, (ಈ ಪ್ರಶ್ನೆ ತನ್ನಷ್ಟಕ್ಕೆ ತಾನೇ ಸರಿ ಹೋಗುವುದು)—ಯಾವ ಕಷ್ಟವೂ ಇಲ್ಲ.

ನಾನು ಆರಂಭಮಾಡಿದ ವಿಷಯಕ್ಕೆ ಮರಳಿ ಬರುತ್ತೇನೆ. ನಿಮ್ಮ ದೃಷ್ಟಿ ಉತ್ತರದಲ್ಲಿ ಶ್ರೀನಗರದವರೆಗೂ, ದಕ್ಷಿಣದಲ್ಲಿ ಕನ್ಯಾಕುಮಾರಿ ವರೆಗೂ, ಪಶ್ಚಿಮದಲ್ಲಿ ಕರಾಚಿವರೆಗೂ, ಪೂರ್ವದಲ್ಲಿ ದಿಬ್ರುಘರ್‌ವರೆಗೂ, ವಿಸ್ತಾರಗೊಳ್ಳುವುದಾದರೆ—ಹೀಗೆಯೇ ಆಗಬೇಕಾದುದಲ್ಲವೆ?—ನೀವು ಹಿಂದೀಯನ್ನು ಕಲಿಯದೆ ಬೇರೆ ಉಪಾಯವಿಲ್ಲ. ಇಂಗ್ಲಿಷು ನಮ್ಮ ಸಾಮಾನ್ಯ ಭಾಷೆಯಾಗಲಾರದೆಂಬುದನ್ನು ನಿಮಗೆ ತೋರಿಸಿದ್ದೇನೆ. ನನಗೆ ಇಂಗ್ಲಿಷಿನ ವಿಷಯದಲ್ಲಿ ಯಾವ ಅವಿಶ್ವಾಸವೂ ಇಲ್ಲ. ಕೆಲವು ವಿದ್ವಾಂಸರಿಗೆ ಅದರ ಜ್ಞಾನ ಆವಶ್ಯಕ. ಅಂತರ ರಾಷ್ಟ್ರೀಯ ಸಂಪರ್ಕಗಳಿಗೆ ಅದು ಆವಶ್ಯಕ; ಪಾಶ್ಚಾತ್ಯ ವಿಜ್ಞಾನಶಾಸ್ತ್ರಗಳ ಅಧ್ಯಯನಕ್ಕೆ ಅದು ಆವಶ್ಯಕ. ಆದರೆ ಕೊಡಲಾಗದ ಸ್ಥಾನವನ್ನು ಅದಕ್ಕೆ ಕೊಡುವ ಪ್ರಯತ್ನಗಳಾದಾಗ ನನಗೆ ನೋವುಂಟಾಗುತ್ತದೆ. ಈ ಪ್ರಯತ್ನಗಳು ಖಂಡಿತವಾಗಿಯೂ ವಿಫಲವಾಗುವವೆಂಬುದರಲ್ಲಿ ನನಗೆ ಸಂಶಯವಿಲ್ಲ. ಎಲ್ಲವೂ ತನ್ನ ಯೋಗ್ಯಸ್ಥಾನದಲ್ಲಿದ್ದರೇನೇ ಸೂಕ್ತವಾಗಿ ಕಾಣುತ್ತದೆ.

ಒಂದು ಗಾಬರಿಯುಂಟಾಗಿದೆ. ಅದನ್ನು ನಿಮ್ಮ ಮನಸ್ಸಿನಿಂದ ದೂರ ಮಾಡಬೇಕು. ಕನ್ನಡ ಹಿಮ್ಮೆಟ್ಟುವಂತೆ ಹಿಂದೀಯನ್ನು ಕಲಿಸಬೇಕೆ? ಅದು ಕನ್ನಡವನ್ನು ಓಡಿಸಿಬಿಡುವ ಸಂಭವವುಂಟೆ? ಇದಕ್ಕೆ ಪ್ರತಿಯಾಗಿ ನನ್ನ ನಿಲುವು ಏನೆಂದರೆ ನಾವು ಹಿಂದೀ ಪ್ರಚಾರ ಮಾಡಿದಷ್ಟೂ ನಮ್ಮ

ದೇಶಭಾಷೆಗಳ ಅಧ್ಯಯನಕ್ಕೆ ಉತ್ತೇಜನವನ್ನು ಕೊಡುತ್ತೇವೆ. ಅವುಗಳ ಶಕ್ತಿ ಸಾಮರ್ಥ್ಯಗಳನ್ನು ವೃದ್ಧಿಯಾಗುವಂತೆ ಮಾಡುತ್ತೇವೆ. ವಿವಿಧ ಪ್ರಾಂತಗಳ ನನ್ನ ಅನುಭವದಿಂದ ಈ ಮಾತನ್ನು ನಾನು ಹೇಳುತ್ತಿದ್ದೇನೆ.

ಲಿಪಿಯ ವಿಚಾರದಲ್ಲಿ ಒಂದು ಮಾತು. ನಾನು ದಕ್ಷಿಣ ಆಫ್ರಿಕಾದಲ್ಲಿದ್ದಾಗಲೇ ಸಂಸ್ಕೃತದಿಂದ ಜನ್ಯವಾದ ಎಲ್ಲ ಭಾಷೆಗಳಿಗೂ ದೇವನಾಗರಿ ಲಿಪಿ ಇರಬೇಕೆಂದು ನನ್ನ ಅಭಿಪ್ರಾಯವಾಗಿತ್ತು. ದ್ರಾವಿಡ ಭಾಷೆಗಳನ್ನು ಸಹ ದೇವನಾಗರಿ ಲಿಪಿಯ ಮೂಲಕ ಸುಲಭವಾಗಿ ಕಲಿಯಬಹುದೆಂದು ನನ್ನ ದೃಢ ನಂಬಿಕೆ. ನಾನು ತಮಿಳನ್ನೂ ತೆಲುಗನ್ನೂ ಆಯಾ ಲಿಪಿಗಳ ಮೂಲಕ ಕಲಿಯುವ ಪ್ರಯತ್ನ ಮಾಡಿದ್ದೇನೆ. ಹಾಗೆಯೇ ಕೆಲವು ದಿನಗಳು ಕನ್ನಡ, ಮಲೆಯಾಳಂಗಳನ್ನೂ ಸಹ ಆಯಾ ಲಿಪಿಗಳ ಮೂಲಕವೇ ಕಲಿಯುವ ಪ್ರಯತ್ನವಾಯಿತು. ಈ ನಾಲ್ಕು ಲಿಪಿಗಳನ್ನೂ ಕಲಿಯುವ ಪ್ರಯತ್ನ ನನಗೆ ದಿಕ್ಕು ತೋರದಂತೆ ಮಾಡಿತು. ಎಲ್ಲಕ್ಕೂ ದೇವನಾಗರಿ ಲಿಪಿ ಒಂದೇ ಇದ್ದಿದ್ದರೆ ನಾನು ಬಹು ಬೇಗ ಕಲಿಯುತ್ತಿದ್ದೆನೆಂದು ನನಗನಿಸಿತು. ಈ ನಾಲ್ಕು ಭಾಷೆಗಳನ್ನು ಕಲಿಯಲಿಚ್ಛಿಸುವ ನನ್ನಂತಹವರಿಗೆ ಎಷ್ಟು ಅಪಾರ ಶ್ರಮ! ಈ ನಾಲ್ಕು ಭಾಷೆಗಳನ್ನು ಮಾತನಾಡುವವರಿಗೆ, ಈ ಎಲ್ಲ ಭಾಷೆಗಳಿಗೆ ದೇವನಾಗರಿ ಲಿಪಿಯೊಂದೇ ಇದ್ದ ಪಕ್ಷಕ್ಕೆ ಉಳಿದ ಮೂರು ಭಾಷೆಗಳನ್ನು ಕಲಿಯಲು ಎಷ್ಟು ಅನುಕೂಲವಾದೀತೆನ್ನುವುದನ್ನು ವಿವರಿಸಿ ಹೇಳಬೇಕೆ? ಹಿಂದೀ ರಾಷ್ಟ್ರಭಾಷೆ ಮಾಡಬೇಕೆಂಬ ಪ್ರಶ್ನೆಯೊಂದಿಗೆ ಈ ಲಿಪಿಯ ಪ್ರಶ್ನೆಯನ್ನು ಬೆರೆಸಬೇಕಾಗಿಲ್ಲ. ಆದರೆ ಎಲ್ಲ ಭಾರತೀಯ ಭಾಷೆಗಳನ್ನೂ ಕಲಿಯಲಿಚ್ಛಿಸುವವರಿಗೆ ಏನು ತೊಡಕಿದೆ ಎನ್ನುವುದನ್ನು ತೋರಿಸಲು ಇದರ ಪ್ರಸ್ತಾಪವನ್ನು ಮಾಡಿದೆ.೧೬

# ೧೭. ಫೈಜಪುರದ ಕಾಂಗ್ರೆಸ್ ಅಧಿವೇಶನದಲ್ಲಿ ಮಾಡಿದ ಭಾಷಣ

[ಕಾಂಗ್ರೆಸ್ ಅಧಿವೇಶನದಲ್ಲಿ ನಡೆದ ಚರ್ಚೆಗಳಲ್ಲಿ ಗಾಂಧೀಯವರು ಭಾಗವಹಿಸಲಿಲ್ಲ. ಆದರೆ ಪ್ರದರ್ಶನ ನಡೆದ ಸ್ಥಳದಲ್ಲಿ (೧೯೩೬, ಡಿಸೆಂಬರ್ ೨೭ರಂದು) ಅವರು ಮಾಡಿದ ಭಾಷಣ ಅರ್ಥಗರ್ಭಿತವಾಗಿತ್ತು. "ನಾನು ಎಂದಿನಂತೆ ಶಕ್ತಿಯುತನಾಗಿದ್ದೇನೆ" ಎಂದು ಅವರು ಹೇಳಿದರು. "ಸಮಯ ಬಂದಾಗ ಅದನ್ನು ನಾನು ಋಜುವಾತು ಪಡಿಸುವೆ" ಎಂದರು. ಅವರ ರಚನಾತ್ಮಕ ಕಾರ್ಯಕ್ರಮದ ವಿಚಾರ ಕುರಿತು ಅನೇಕ ಸಂಶಯಗಳಿಗೂ, ತೊಡಕುಗಳಿಗೂ, ಆಕ್ಷೇಪಣೆಗಳಿಗೂ ಅವರ ಭಾಷಣದಲ್ಲಿ ಉತ್ತರವಿತ್ತರು :]

ನಾನು ಹೊಸದೇನನ್ನೂ ಹೇಳಬಯಸುವುದಿಲ್ಲ. ಈ ಚರಖಾದ ತತ್ತ್ವ ಈಗ ಹದಿನೆಂಟು ವರ್ಷಗಳಿಂದ ನಮ್ಮ ಮುಂದೆ ಇದೆ. ೧೯೧೮ರಲ್ಲಿ ಚರಖಾದ ಮೂಲಕ ನಾವು ಸ್ವರಾಜ್ಯವನ್ನು ಗಳಿಸಬಲ್ಲವೆಂದು ನಾನು ಹೇಳಿದೆ. ಚರಖಾದ ಶಕ್ತಿಯಲ್ಲಿ ನನಗಿರುವ ಶ್ರದ್ಧೆ ನನಗೆ ೧೯೧೮ರಲ್ಲಿ ಇದ್ದಷ್ಟೇ ಜಾಜ್ವಲ್ಯಮಾನವಾಗಿದೆ. ಇಷ್ಟು ವರ್ಷಗಳ ಅನುಭವದಿಂದಲೂ ಪ್ರಯೋಗದಿಂದಲೂ ಆ ಶ್ರದ್ಧೆ ಮತ್ತಷ್ಟು ಪುಷ್ಟಿಗೊಂಡಿದೆ.

ಆದರೆ ಅದರಲ್ಲಿ, ಮತ್ತು ಅದರಿಂದ ಉತ್ಪತ್ತಿಯಾಗುವ ಖಾದಿಯಲ್ಲಿ, ಅಡಗಿರುವ ಮರ್ಮವೇನು? ಇದನ್ನು ನೀವು ಅರಿಯಬೇಕು. ಬೇರೆಲ್ಲ ವಿಷಯಗಳಲ್ಲಿಯೂ ವಿದೇಶಿಯಿಂದ ಆವೃತವಾಗಿ ವಿಶೇಷ ಸಮಾರಂಭಗಳಲ್ಲಿ ಖಾದೀ ಧರಿಸಿದರೆ ಸಾಲದು. ಬೇರೆ ಯಾವ ಬಟ್ಟೆಯನ್ನೂ ಉಪಯೋಗಿಸದೆ ಖಾದಿಯನ್ನೇ ಧರಿಸಿದರೂ ಸಾಲದು. ಖಾದೀ ಎಂದರೆ ಅತಿ ಪ್ರಾಮಾಣಿಕವಾದ ಸ್ವದೇಶೀ ಭಾವನೆ—ಹೊಟ್ಟೆಗಿಲ್ಲದ ಲಕ್ಷಾಂತರ ಜನರೊಂದಿಗೆ ತಾದಾತ್ಮ್ಯ ಹೊಂದುವುದು.

ಸ್ವರಾಜ್ಯದ ನನ್ನ ಕಲ್ಪನೆಯ ವಿಷಯದಲ್ಲಿ ಯಾವ ತಪ್ಪು ತಿಳುವಳಿಕೆಯೂ ಇಲ್ಲದಿರಲಿ. ಅದು ಪರಕೀಯರ ಎಲ್ಲ ಅಧಿಕಾರದಿಂದಲೂ ಪೂರ್ತಿ ಸ್ವತಂತ್ರರಾಗಿರುವುದು; ಆದುದರಿಂದ ಅದು ಒಂದು ಕಡೆ ರಾಜಕೀಯ ಸ್ವಾತಂತ್ರ್ಯ, ಮತ್ತೊಂದು ಕಡೆ ಆರ್ಥಿಕ ಸ್ವಾತಂತ್ರ್ಯ. ಅಲ್ಲದೆ ಮತ್ತೆ ಎರಡು ಗುರಿಗಳುಂಟು. ಅದರಲ್ಲೊಂದು

ಗುರಿ ನೈತಿಕ ಮತ್ತು ಸಾಮಾಜಿಕ. ಮತ್ತೊಂದು ಧರ್ಮ—ಅಂದರೆ ಉದಾತ್ತ ಅರ್ಥದಲ್ಲಿ ಮತ. ಅದರಲ್ಲಿ ಹಿಂದೂಧರ್ಮ, ಇಸ್ಲಾಂ ಮತ್ತು ಕ್ರೈಸ್ತಧರ್ಮ ಮುಂತಾದುವು ಅಡಕವಾಗಿವೆ. ಸತ್ಯವೂ ಅಡಕ ವಾಗಿದೆ. ಸಮಯೋಚಿತವಾದ ಪ್ರಾಮಾಣಿಕತನವಲ್ಲ—ಸಜೀವವಾದ ಸತ್ಯ—ಯಾವುದು ಎಲ್ಲದರಲ್ಲಿಯೂ ಪ್ರಾಪ್ತವಾಗಿದೆಯೊ, ಎಲ್ಲವೂ ನಾಶವಾದರೂ, ಬದಲಾಯಿಸಿದರೂ, ಅವಿನಾಶಿಯೂ ಅವಿಕಾರಿಯೂ ಆಗಿರುವ ಸತ್ಯ, ನೈತಿಕ ಮತ್ತು ಸಾಮಾಜಿಕ ಅಭ್ಯುದಯ ಆಗಿದೆಯೇ ಎಂಬುದನ್ನು ನಮಗೆ ಪರಿಚಿತವಾದ ಅಹಿಂಸಾ ತತ್ತ್ವದ ಒರೆಗಲ್ಲಿಗೆ ಹಚ್ಚಿ ನೋಡಬೇಕು. ಇದನ್ನು ನಾವು ಸ್ವರಾಜ್ಯದ ಚೌಕವೆನ್ನೋಣ. ಇದರಲ್ಲಿ ಯಾವೊಂದು ಕೋಣ ಸರಿಯಿಲ್ಲದಿದ್ದರೂ ಚೌಕದ ಆಕಾರ ಕೆಟ್ಟುಹೋಗು ವುದು. ಕಾಂಗ್ರೆಸ್ಸಿನ ಭಾಷೆಯಲ್ಲಿ ಹೇಳುವುದಾದರೆ ಸತ್ಯ ಮತ್ತು ಅಹಿಂಸೆಗಳಿಲ್ಲದೆ, ಅಂದರೆ ದೇವರಲ್ಲಿ ನಿಜವಾದ ನಂಬಿಕೆಯಿಲ್ಲದೆ—ಇವರ ಪರಿಣಾಮವಾಗಿ ನೈತಿಕ ಮತ್ತು ಸಾಮಾಜಿಕ ಉತ್ಥಾನವಾಗದೆ — ಈ ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯವನ್ನು ನಾವು ಪಡೆಯಲಾರೆವು.

ರಾಜಕೀಯ ಸ್ವಾತಂತ್ರ್ಯವೆಂದರೆ ಬ್ರಿಟಿಷರ ಹೌಸ್ ಆಫ್ ಕಾಮನ್ಸ್, ಅಥವಾ ರಷ್ಯದ ಸೋವಿಯಟ್ ಆಡಳಿತ, ಅಥವಾ ಇಟಲಿಯ ಫ್ಯಾಸಿಸ್ಟ್ ಆಡಳಿತ, ಅಥವಾ ಜರ್ಮನಿಯ ನಾಟ್ಸಿಯ ಆಡಳಿತ — ಇವುಗಳಲ್ಲಿ ಯಾವುದರ ಅನುಕರಣವೆಂದೂ ನನ್ನ ಅರ್ಥವಲ್ಲ. ಆಯಾ ಜನಾಂಗಗಳ ಸಹಜವಾದ ಗುಣಕ್ಕನುಸಾರವಾಗಿ ಅವರ ಆಡಳಿತ ಪದ್ಧತಿಗಳು ರೂಪು ಗೊಂಡಿವೆ. ಅಂತೆಯೇ ನಮ್ಮ ಗುಣ ವಿಶೇಷಗಳಿಗೆ ಅನುಸಾರವಾಗಿ ನಮ್ಮ ಪದ್ಧತಿ ಇರಬೇಕು. ಅದು ಎಂತಹುದಾಗಿರಬೇಕೆಂದು ಹೇಳುವುದು ನನ್ನ ಶಕ್ತಿಗೆ ಮೀರಿದ ಕೆಲಸ. ನಾನು ಅದನ್ನು ರಾಮರಾಜ್ಯವೆಂದು ಕರೆದಿದ್ದೇನೆ. ಅಂದರೆ ಕೇವಲ ನೈತಿಕ ಅಧಿಕಾರದ ಆಧಾರದ ಮೇಲೆ ನಿಂತಿರುವ ಜನರ ಸಾರ್ವಭೌಮತ್ವ. ನಾಗಪುರದಲ್ಲಿಯೂ ಬೊಂಬಾಯಿ ಯಲ್ಲಿಯೂ ರೂಪುಗೊಂಡ ಕಾಂಗ್ರೆಸ್ಸಿನ ಸಂವಿಧಾನ—ಇದಕ್ಕೆ ಬಹಳ ಮಟ್ಟಿಗೆ ನಾನೇ ಜವಾಬುದಾರನಾಗಿದ್ದೆ — ಈ ಬಗೆಯ ಸ್ವರಾಜ್ಯವನ್ನು ಸಾಧಿಸುವುದಕ್ಕೆ ಒಂದು ಪ್ರಯತ್ನ.

ಆರ್ಥಿಕ ಸ್ವಾತಂತ್ರ್ಯದ ವಿಷಯವನ್ನು ತೆಗೆದುಕೊಳ್ಳೋಣ. ಇದು ಆಧುನಿಕರ ಅಥವಾ ಪಾಶ್ಚಾತ್ಯರ ದೊಡ್ಡ ಕೈಗಾರಿಕೆಗಳ ಪದ್ಧತಿಯದಲ್ಲ. ಭಾರತದಲ್ಲಿ ಆರ್ಥಿಕ ಸ್ವಾತಂತ್ರ್ಯವೆಂದರೆ, ಪ್ರತಿಯೊಬ್ಬ ವ್ಯಕ್ತಿಯೂ, ಸ್ತ್ರೀಯಾಗಲಿ ಪುರುಷನಾಗಲಿ, ತನ್ನ ಸ್ವಂತ ಪ್ರಯತ್ನದಿಂದ ಆರ್ಥಿಕ ಅಭ್ಯುದಯವನ್ನು ಹೊಂದುವುದು. ಈ ಪದ್ಧತಿಯಲ್ಲಿ ಎಲ್ಲಾ ಸ್ತ್ರೀ ಪುರುಷರೂ ತಮಗೆ ಆವಶ್ಯಕವಿದ್ದಷ್ಟು ವಸ್ತ್ರವನ್ನು ಪಡೆದಿರುವರು. (ಕೇವಲ ಮೊಳಕಾಲಿನ ಮೇಲೆ ಉಳಿಯುವ ಬಟ್ಟೆಯಲ್ಲ) ಆದರೆ ಆವಶ್ಯವಿದ್ದಷ್ಟು ಉಡಿಗೆತೊಡಗೆಗಳು, ಅವಶ್ಯವಿರುವಷ್ಟು ಆಹಾರ, ಈಗ ಲಕ್ಷಾಂತರ ಜನರಿಗೆ ಸಿಗದೆ ಇರುವ ಹಾಲು, ಬೆಣ್ಣೆ ಇವನ್ನು ಎಲ್ಲರೂ ಅನುಭವಿಸುವವರಾಗಬೇಕು.

ಈ ಮಾತು ಸಾಮ್ಯವಾದದ ಕಡೆ ನನ್ನನ್ನು ಒಯ್ಯುತ್ತದೆ. "ಜಮೀನೆಲ್ಲವೂ ಗೋಪಾಲನದು; ಇದಕ್ಕೆ ಎಲ್ಲಿಯ ಗೆರೆಯನ್ನು ಎಲ್ಲಿ ಎಳೆಯಬೇಕು? ಮನುಷ್ಯನೇ ಗೆರೆಯನ್ನು ಹಾಕಿದ್ದು; ಮನುಷ್ಯನೇ ಅದನ್ನು ಅಳಿಸಬಲ್ಲ" ಎಂದು ಉಪದೇಶಿಸಿದ ಪೂರ್ವಜರಿಂದ ನಮಗೆ ಸಾಮ್ಯವಾದವು ಹಿಂದಿನ ಕಾಲದಿಂದ ಬಂದಿದೆ. ಗೋಪಾಲನೆಂದರೆ ಗೋವಳಿಗನೆಂದು ಪದದ ಅರ್ಥ. ದೇವರೆಂದೂ ಅದಕ್ಕೆ ಅರ್ಥ ಉಂಟು. ಆಧುನಿಕ ಭಾಷೆಯಲ್ಲಿ ಅದರ ಅರ್ಥ ರಾಜ್ಯ—ಅಂದರೆ ಪ್ರಜೆಗಳು. ಇಂದು ಜಮೀನು ಜನರ ಸ್ವತ್ತಾಗಿಲ್ಲವೆಂಬ ಮಾತು ನಂಬಲಾರದಷ್ಟು ಸತ್ಯವಾಗಿದೆ. ಆದರೆ ಇದರ ದೋಷ, ಪೂರ್ವ ಕಾಲದ ಉಪದೇಶದಿಂದ ಬಂದದ್ದಲ್ಲ. ತಪ್ಪು ನಮ್ಮಲ್ಲಿದೆ, ನಾವು ಅದನ್ನು ಅನುಷ್ಠಾನಕ್ಕೆ ತರಲಿಲ್ಲ.

ಸಾಮ್ಯವಾದಕ್ಕೆ ಅನುಗುಣವಾದ ಸಮಾಜದ ರಚನೆಯ ದಿಕ್ಕಿನಲ್ಲಿ ಯಾವ ದೇಶಕ್ಕೂ ಕಡಮೆಯಿಲ್ಲದ ರೀತಿಯಲ್ಲಿ—ರಷ್ಯವನ್ನೂ ಸಹ ಇದಕ್ಕೆ ಹೊರತನ್ನಾಗಿ ಮಾಡದೆ ನಾವೂ ಮುಂದರಿಯುವುದು ಸಾಧ್ಯ—ಮತ್ತು ಹೀಗೆ ಮಾಡುವುದರಲ್ಲಿ ಹಿಂಸೆಯನ್ನು ವರ್ಜಮಾಡುವುದೂ ಸಾಧ್ಯ. ಹಿಂಸೆಯಿಂದ ಮತ್ತೊಬ್ಬರದನ್ನು ಅಪಹಾರ ಮಾಡುವುದಕ್ಕೆ ಬದಲಾಗಿ ಚರಖಾ ಇದೆ. ಅದರ ಬಳಕೆಯಿಂದಾಗುವ ಎಲ್ಲ ಪರಿಣಾಮ

ಗಳೂ ಇವೆ. ಯಾರು ದುಡಿಯುವರೊ ಜಮೀನೂ ಮತ್ತು ಎಲ್ಲ ಸ್ವತ್ತೂ ಅಂತಹವರದಾಗಬೇಕು. ದುರ್ದೈವದಿಂದ ಈ ಸುಲಭವಾದ ಸತ್ಯ ಅವರಿಗೆ ತಿಳಿಯದಂತೆ ಶ್ರಮಜೀವಿಗಳನ್ನು ವಂಚಿಸಿದ್ದಾರೆ. ವಂಚಿಸುತ್ತಲೂ ಇದ್ದಾರೆ.

ಭಾರತವು ಹೇಗೆ ತೀರ ದರಿದ್ರ ಸ್ಥಿತಿಗೆ ಇಳಿಯಿತೆಂಬುದನ್ನು ನೋಡೋಣ. ಈಸ್ಟ್ ಇಂಡಿಯಾ ಕಂಪೆನಿಯವರು ಈ ದೇಶದ ಹತ್ತಿಯ ಕೈಗಾರಿಕೆಯನ್ನು ಅನೇಕ ಉಪಾಯಗಳಿಂದ ನಾಶಮಾಡಿ, ಮನುಷ್ಯನ ಆವಶ್ಯಕತೆಗಳಲ್ಲಿ ಎರಡನೆಯದಾದ ವಸ್ತ್ರಕ್ಕೆ ನಾವು ಲ್ಯಾಂಕಷೈರಿನ ಮೇಲೆ ಅವಲಂಬಿಸುವಂತೆ ಮಾಡಿದರೆಂದು ಇತಿಹಾಸ ನಮಗೆ ತಿಳಿಸುತ್ತದೆ. ಇಂದಿಗೂ ನಮ್ಮ ಆಮದುಗಳಲ್ಲಿ ಇದೇ ಎಲ್ಲಕ್ಕೂ ದೊಡ್ಡ ಪ್ರಮಾಣದ್ದು. ಇದರಿಂದ ಲಕ್ಷಾಂತರ ಪುರುಷರು ಅರ್ಧ ನಿರುದ್ಯೋಗಿಗಳಾದರು. ಅವರಿಗೆ ಅದಕ್ಕೆ ಬದಲಾಗಿ ಇತರ ಉದ್ಯೋಗಗಳನ್ನು ಒದಗಿಸಲಿಲ್ಲ. ಹತ್ತಿ ಕಾಳು ಬಿಡಿಸುವ ಕೆಲಸ, ಹಿಂಜುವ ಕೆಲಸ, ನೂಲುವುದು, ನೇಯ್ಗೆ—ಇವೆಲ್ಲವೂ ನಾಶವಾದ ಮೇಲೆ, ಇತರ ಹಳ್ಳಿಯ ಕೈಗಾರಿಕೆಗಳೂ ಸ್ವಲ್ಪ ಮಟ್ಟಿಗೆ ಕ್ಷೀಣವಾದುವು. ನಿರಂತರ ಕೆಲಸವಿಲ್ಲದೆ ಇರುವುದರಿಂದ ಜನರಲ್ಲಿ ಒಂದು ಬಗೆಯ ಸೋಮಾರಿತನ ಆವರಿಸಿತು. ಇದು ಅವರನ್ನು ವಿಷಣ್ಣರನ್ನಾಗಿ ಮಾಡಿತು. ಹೀಗೆ ನಮ್ಮ ಜನರು ದಿನೇದಿನೇ ದರಿದ್ರರಾಗುತ್ತಿರುವುದಕ್ಕೆ ನಿಸ್ಸಂದೇಹವಾಗಿ ಪರರ ಆಳ್ವಿಕೆ ಕಾರಣವಾದರೂ, ಈ ಸ್ಥಿತಿಗೆ ನಾವು ಇನ್ನೂ ಹೆಚ್ಚು ಜವಾಬುದಾರರು. ನಮ್ಮ ಮಧ್ಯಮ ವರ್ಗದವರು ತಮ್ಮ ಕರ್ತವ್ಯವನ್ನು ಮರೆತು, ಅವರನ್ನು ನಂಬಿದವರಿಗೆ ದ್ರೋಹಮಾಡಿ, ಭಾರತದ ಆರ್ಥಿಕ ಸ್ವಾತಂತ್ರ್ಯವನ್ನು, ತಮಗೆ ಕೊಟ್ಟ ಒಂದು ತುತ್ತು ಅನ್ನಕ್ಕೆ ಮಾರಿಕೊಂಡರು. ಈಗ ಇವರು ತಾವು ಮಾಡಿದ ತಪ್ಪನ್ನು ಮನಗಂಡು, ಚರಖಾದ ಸಂದೇಶವನ್ನು ಹಳ್ಳಿಯ ಜನರಿಗೆ ಮುಟ್ಟಿಸಿ, ಹಳ್ಳಿಯವರು ತಮ್ಮ ಸೋಮಾರಿತನವನ್ನು ಬಿಟ್ಟು, ನೂಲುವಂತೆ ಮಾಡು ವುದಾದರೆ ನಮ್ಮ ಜನರ ಸ್ಥಿತಿಯನ್ನು ಬಹು ಮಟ್ಟಿಗೆ ನಾವು ಸುಧಾರಿಸ ಬಲ್ಲೆವು. ಉದ್ಯೋಗಶೀಲತೆಗೆ ಬದಲಾಗಿ ಸೋಮಾರಿತನ, ಆಶೆಗೆ ಬದ ಲಾಗಿ ನಿರಾಶೆ ನೆಲೆಸುವುದಾದರೆ ಅದು ಭಯಾನಕ ಪರಿಸ್ಥಿತಿಯೇ ಹೌದು.

ಪಾರ್ಲಿಮೆಂಟರಿ ಕಾರ್ಯಕ್ರಮ ಈಗ ಎಲ್ಲರ ಮನಸ್ಸಿನಲ್ಲಿಯೂ ಇದೆ. ಅದು ನೆಲೆಸಿದೆ. ಹೀಗಾದುದೂ ಸರಿಯೆ. ಆದರೆ ಇದು ನಮಗೆ ಸ್ವಾತಂತ್ರ್ಯವನ್ನು ದೊರಕಿಸಲಾರದು. ಈ ಕಾರ್ಯಕ್ರಮ ಎಷ್ಟೇ ಅವಶ್ಯಕವಾದರೂ ಇದರ ಕಾರ್ಯಕ್ಷೇತ್ರ ಬಹಳ ಸೀಮಿತವಾದುದು. ಈ ಕಾರ್ಯಕ್ರಮ ಯಶಸ್ವಿಯಾದರೆ, ಸರಕಾರದವರು ಹೊರಡಿಸುವ ವಿಶೇಷಾಜ್ಞೆಗಳೂ, ನಮ್ಮ ಗುರಿ ಸಾಧನೆಗೆ ಅವರು ಕೈಗೊಳ್ಳುವ ಇತರ ಕ್ರಮಗಳೂ ಜನರ ಪ್ರತಿನಿಧಿಗಳ ಒಪ್ಪಿಗೆಯನ್ನು ಪಡೆದಿವೆಯೆಂದು ಹೇಳಿಕೊಳ್ಳಲು ಆಡ್ಡಿಯನ್ನು ಒಡ್ಡಿದಂತಾಗುವುದು. ಕಾಂಗ್ರೆಸ್ ಉಮೇದುವಾರರು ಜನಪ್ರಿಯವಲ್ಲದ ಕ್ರಮಗಳಿಗೆ ತಮ್ಮ ಮತವನ್ನು ಕೊಡುವಂತಿಲ್ಲ. ಹಾಗೆ ಕೊಟ್ಟರೆ ಅವರು ಕಾಂಗ್ರೆಸ್ಸಿನ ಶಿಸ್ತಿನ ಕ್ರಮಕ್ಕೆ ಗುರಿಯಾಗುವರು. ಆದುದರಿಂದಲೇ ಮತದಾರರು ಕಾಂಗ್ರೆಸ್ ಉಮೇದುವಾರರಿಗೇ ತಮ್ಮ ಮತವನ್ನು ಕೊಡಬೇಕು. ಈ ಕಾರ್ಯಕ್ರಮ ಫಲದಾಯಕವಾದರೆ, ಕೆಲವು ವ್ಯಕ್ತಿಗಳಿಗೆ ಇದರಿಂದ ಸ್ವಲ್ಪ ಪರಿಹಾರ ದೊರೆಯಬಹುದು. ಉದಾಹರಣೆಗೆ ಸುಭಾಷ್ ಬೋಸ್ ಮತ್ತು ನಿರ್ಬಂಧದಲ್ಲಿರುವ ಇತರ ಡೆಟಿನ್ಯೂಗಳ ಬಿಡುಗಡೆಯಾಗಬಹುದು. ಆದರೆ ಇದು ರಾಜಕೀಯವಾಗಿಯಾಗಲಿ, ಆರ್ಥಿಕವಾಗಿಯಾಗಲಿ, ಸ್ವಾತಂತ್ರ್ಯವಲ್ಲ.

ಇದನ್ನು ಮತ್ತೊಂದು ದೃಷ್ಟಿಯಿಂದ ನೋಡಬಹುದು. ಒಂದು ಮಿತ ಸಂಖ್ಯೆಯಲ್ಲಿ ಸ್ತ್ರೀಯರಾಗಲಿ ಪುರುಷರಾಗಲಿ ವಿಧಾನಸಭೆಗಳ ಸದಸ್ಯರಾಗಬಹುದು. ಈ ಸಂಖ್ಯೆ ೧೫೦೦ ಎಂದು ಇಟ್ಟುಕೊಳ್ಳೋಣ. ನಾನು ಮಾತಾಡುತ್ತಿರುವ ಈ ಸಭೆಯಲ್ಲಿರುವವರಲ್ಲಿ ಎಷ್ಟು ಜನರು ವಿಧಾನಸಭಾ ಸದಸ್ಯರಾಗಲು ಸಾಧ್ಯ? ಈಗಿನ ಪದ್ಧತಿಯಂತೆ ಮೂರೂವರೆ ಕೋಟಿಗಿಂತಲೂ ಹೆಚ್ಚು ಜನರು ಈ ೧೫೦೦ ಸದಸ್ಯರು ಆರಿಸಿಬರುವುದಕ್ಕೆ ತಮ್ಮ ಮತವನ್ನು ಕೊಡಬಹುದು. ಉಳಿದಿರುವ ಮೂವತ್ತೊಂದೂವರೆ ಕೋಟಿ ಜನರ ವಿಷಯ ಹೇಗೆ? ಸ್ವರಾಜ್ಯಕ್ಕೆ ನಾವು ಮಾಡಿರುವ ಕಲ್ಪನೆಯ ಪ್ರಕಾರ ಅವರೇ ಪ್ರಭುಗಳು, ಯಜಮಾನರು. ಈ ಮೂರೂವರೆ ಕೋಟಿ ಮತದಾರರು ಅವರ ಅಧೀನರು. ಹಾಗೂ ಈ ೧೫೦೦ ಸದಸ್ಯರ ಯಜಮಾನರು. ಆದ್ದರಿಂದ ಈ ೧೫೦೦ ಜನ ಭೃತ್ಯರ ಭೃತ್ಯರು, ಅವರಿಗೆ ಒಪ್ಪಿಸಿರುವ ಕರ್ತವ್ಯವನ್ನು ಸರಿಯಾಗಿ ಅವರು ನಿರ್ವಹಿಸಿದ ಪಕ್ಷಕ್ಕೆ.

ಆದರೆ ಈ ಮೂವತ್ತೊಂದೂವರೆ ಕೋಟಿ ಜನರು ತಮ್ಮ ಕರ್ತವ್ಯವನ್ನು ನಿರ್ವಹಿಸಬೇಕಾಗಿದೆ. ಜನಾಂಗಕ್ಕೆ ತಮ್ಮ ಕರ್ತವ್ಯವಿದೆ. ವ್ಯಕ್ತಿಗಳಾಗಿ ಜನಾಂಗದಲ್ಲಿ ಅವರು ಅಣುಮಾತ್ರ. ಅವರು ಸೋಮಾರಿಗಳಾದರೆ, ಸ್ವರಾಜ್ಯವೆಂದರೇನು ?. ಅದನ್ನು ಹೇಗೆ ಸಾಧಿಸಬೇಕು ಎಂಬ ತಿಳುವಳಿಕೆ ಇಲ್ಲದವರಾದರೆ, ಅವರೇ ಈ ೧೫೦೦ ವಿಧಾನಸಭಾ ಸದಸ್ಯರುಗಳ ಗುಲಾಮರಾದಾರು. ನನ್ನ ಅರ್ಥದಲ್ಲಿ ಈ ಮೂರೂವರೆ ಕೋಟಿ ಮತದಾರರೂ, ಈ ಮೂವತ್ತೊಂದೂವರೆ ಕೋಟಿಯುವರ ವರ್ಗಕ್ಕೇ ಸೇರಿದವರು. ಏಕೆಂದರೆ ಈ ಮತದಾರರು ಉದ್ಯೋಗಶೀಲರೂ ವಿವೇಕಿಗಳೂ ಆಗದಿದ್ದರೆ ಈ ೧೫೦೦ ಜನರ ಕೈಯಲ್ಲಿ ಚದುರಂಗ ಆಡುವವನ ಕೈಯಲ್ಲಿರುವ ಪೇದೆಗಳಂತೆ ಆಗುವರು. ಅವರು ಹೀಗಾಗದಿರಬೇಕಾದರೆ ಅವರ ಚರಖಾದ ಕೆಲಸವನ್ನೂ ಗ್ರಾಮೋದ್ಯೋಗಗಳನ್ನೂ ಕೈಗೊಳ್ಳಬೇಕು. ಇದನ್ನು ವಿಚಾರಪರತೆ ಇಲ್ಲದೆ ಅವರು ಮಾಡಬಾರದು. ನನ್ನ ಅನುಭವದಿಂದ ಈ ಮಾತನ್ನು ನಾನು ಹೇಳಬಲ್ಲೆ. ಈ ಪ್ರಯತ್ನ ನಿಜವಾದ ವಯಸ್ಕರ ಶಿಕ್ಷಣದ ಸಾಧನವಾಗುತ್ತದೆ. ಈ ಕೆಲಸಕ್ಕೆ ತಾಳ್ಮೆ, ಶ್ರದ್ಧೆ, ನಿಷ್ಠೆ, ಯಾವ ಕೈಗಾರಿಕೆಯನ್ನು ಹಳ್ಳಿಯಲ್ಲಿ ಮಾಡಿಸಬೇಕೆಂದಿರುವೆವೊ ಅದರ ಶಾಸ್ತ್ರೀಯ ಹಾಗೂ ಪ್ರಾಯೋಗಿಕ ಜ್ಞಾನ ಇವೆಲ್ಲವೂ ಬೇಕು.

ಈ ವ್ಯವಸ್ಥೆಯಲ್ಲಿ, ಚರಖಾ ಕೇಂದ್ರವಾಗಿರುತ್ತದೆ. ಇದನ್ನು ಸೌರ ವ್ಯೂಹವೆಂದು ಕರೆದರೆ, ಚರಖಾ ಸೂರ್ಯ, ಗ್ರಾಮೋದ್ಯೋಗಗಳು ಅದನ್ನು ಅನುಲ್ಲಂಘನೀಯವಾದ ನಿಯಮಕ್ಕೆ ವಿಧೇಯವಾಗಿ ಸುತ್ತಿಬರುವ ಗ್ರಹಗಳು, ಈಸ್ಟ್ ಇಂಡಿಯಾ ಕಂಪೆನಿಯವರ ಕಾರ್ಯದಿಂದ ಈ ಸೂರ್ಯ ಪ್ರಜ್ವಲಿಸುವ ಶಕ್ತಿಯನ್ನು ಕಳೆದುಕೊಂಡನು, ಬಹು ಮಟ್ಟಿಗೆ ಕಣ್ಮರೆಯಾದನು. ಸೂರ್ಯನನ್ನು ತನ್ನ ಪೂರ್ವಸ್ಥಾನದಲ್ಲಿ ಪ್ರತಿಷ್ಠೆಮಾಡಲು ಪ್ರಯತ್ನಗಳಾಗುತ್ತಿವೆ. ಗ್ರಹಗಳು ಈ ಸೂರ್ಯನ ಪ್ರಕಾಶಕ್ಕೆ ಅನುಗುಣವಾಗಿ ತಮ್ಮ ಚಲನ ಶಕ್ತಿಯನ್ನು ಮತ್ತೆ ಪಡೆಯುತ್ತಲಿವೆ.

ಚರಖಾದ ಅರ್ಥವನ್ನೂ ಅದರ ಸಂದೇಶವನ್ನೂ ಪ್ರಾಯಶಃ ಈಗ ನೀವು ಅರಿಯುವಿರಿ. ಕಾಂಗ್ರೆಸ್ ನಿಜವಾಗಿಯೂ ಯಶಸ್ವಿಯಾಗಿಯೂ ತನ್ನ ಕಾರ್ಯಕ್ರಮವನ್ನು ಮಾಡಿದ್ದೇ ಆಗಿದ್ದರೆ ಇದರಲ್ಲಿ ರಚನಾತ್ಮಕ ಕಾರ್ಯ

ಕ್ರಮದ ನಾಲ್ಕು ಅಂಶಗಳು, ಅಂದರೆ ಖಾದೀ, ಕೋಮುವಾರು ಐಕ್ಯತೆ, ಮದ್ಯಪಾನ ನಿಷೇಧ, ಹಿಂದೂಗಳಿಂದ ಅಸ್ಪೃಶ್ಯತಾ ನಿವಾರಣೆ—ಒಂದು ವರ್ಷದಲ್ಲಿ ನಾವು ಸ್ವರಾಜ್ಯವನ್ನು ಸಾಧಿಸುವುದು ಖಂಡಿತವೆಂದು ನಾನು ೧೯೨೦ ರಲ್ಲಿ ಹೇಳಿದೆ. ನಾನು ಆರೀತಿ ಹೇಳಿದ್ದಕ್ಕಾಗಿ ವಿಷಾದಿಸುವುದೂ ಇಲ್ಲ ನಾಚಿಕೊಳ್ಳುವುದೂ ಇಲ್ಲ. ಅದೇ ಮಾತನ್ನೇ ಈಗಲೂ ನಿಮ್ಮ ಮುಂದೆ ಹೇಳಲಿಚ್ಛಿಸುವೆನು. ಈ ನಾಲ್ಕು ಅಂಶಗಳನ್ನೊಳಗೊಂಡ ಕಾರ್ಯಕ್ರಮವನ್ನು ಎಂದು ಪೂರೈಸಿದರೂ ಅಂದು ಸ್ವರಾಜ್ಯ ಹಸ್ತಗತವಾಗುತ್ತದೆ. ಏಕೆಂದರೆ ಅದನ್ನು ನಿಮ್ಮ ವಶಕ್ಕೆ ತೆಗೆದುಕೊಳ್ಳಲು ನೀವು ಶಕ್ತಿಯನ್ನು ಪಡೆದಿರುವಿರಿ. ಚರಖಾದ ಬಗೆಗೆ ಈಗ ನಿಮಗಿರುವ ಶ್ರದ್ಧೆಯೂ ಆಚರಣೆಯೂ ಎಷ್ಟು ಮಾತ್ರ ಇರುವುದೆಂದು ಸ್ವಲ್ಪ ವಿಚಾರಮಾಡಿ; ಬೊಂಬಾಯಿಯಲ್ಲಿ ನಡೆದ ಘಟನೆ, ರಹಸ್ಯವಾಗಿ ಜನರು ಒಬ್ಬರನ್ನೊಬ್ಬರು ಕೊಂದದ್ದು, ಕೋಮುವಾರು ಐಕ್ಯತೆಯ ನಿದರ್ಶನವೆ? ಪೂರ್ಣ ಮದ್ಯಪಾನ ನಿಷೇಧ ಎಲ್ಲಿದೆ? ಹಿಂದೂಗಳು ಅಸ್ಪೃಶ್ಯತಾ ಭಾವನೆಯನ್ನು ಪೂರ್ತಿಯಾಗಿ ನಿರ್ಮೂಲ ಮಾಡಿದ್ದಾರೆಯೇ? ಅಲ್ಲಿ ಕೆಲವರು ಇಲ್ಲಿ ಕೆಲವರು ಕೆಲಸಮಾಡುವುದರಿಂದ ಹೊಸ ಯುಗ ಆರಂಭವಾಗಲಾರದು. ತಿರುವಾಂಕೂರಿನಲ್ಲಿ ದೇವಸ್ಥಾನಗಳಿಗೆ ಹರಿಜನರಿಗೆ ಪ್ರವೇಶ ಉಂಟೆಂದು ಸಾರಿದ ಘೋಷಣೆ ಅಸ್ಪೃಶ್ಯತೆ ಅಂತ್ಯವಾಗುವ ಪ್ರಯತ್ನದ ಆರಂಭ. ಆದರೆ ಇನ್ನೂ ಅಂತ್ಯವಿಲ್ಲ. ಹರಿಜನರ ಅಸ್ಪೃಶ್ಯತೆಯನ್ನು ಕೊನೆಗಾಣಿಸಿ, ಮುಸ್ಲಿಮರನ್ನೂ ಇತರರನ್ನೂ ಅಸ್ಪೃಶ್ಯರನ್ನಾಗಿ ನಾವು ಕಾಣುವವರಾದರೆ, ಈ ಕಳಂಕವನ್ನು ನಾವು ತೊಡೆದು ಹಾಕಿದಂತಾಗಲಿಲ್ಲ. “ಎಲ್ಲ ಜಮೀನು ದೇವರಿಗೆ ಸೇರಿದ್ದು” ಎಂಬ ಹೇಳಿಕೆಗೆ ಗಾಢವಾದ ಅರ್ಥವಿದೆ. ಜಮೀನಿನಂತೆಯೇ ನಾವೂ ಸಹ ದೇವರ ಸ್ವತ್ತುಗಳು; ನಾವೆಲ್ಲರೂ ಒಂದೆಂದು ಭಾವಿಸಬೇಕು: ನಮ್ಮ ಮಧ್ಯೆ ಗೋಡೆಗಳನ್ನು ನಿರ್ಮಿಸಿಕೊಂಡು ಪರಸ್ಪರ ಬಹಿಷ್ಕಾರವನ್ನು ವಿಧಿಸಿಕೊಳ್ಳಬಾರದು.

ಇದೇ ಕಾರ್ಯತಃ ಅಹಿಂಸೆಯ ಮಾರ್ಗ. ಈ ಕಾರ್ಯಕ್ರಮವನ್ನು ನಾವು ಪೂರ್ತಿಯಾಗಿ ಸಾಧಿಸಿದ್ದೇ ಆದರೆ ಶಾಂತರೀತಿಯ ಶಾಸನೋಲ್ಲಂಘನಕ್ಕೆ ಆವಶ್ಯಕತೆಯೇ ಇರಲಾರದು: ಹಿಂಸೆಯನ್ನು ಎಸಗುವುದಕ್ಕಂತೂ ಖಂಡಿತವಾಗಿ ಆವಶ್ಯಕತೆ ಇರಲಾರದು. ಮೂವತ್ತೈದುಕೋಟಿ ಜನರು, ತಮ್ಮ

ಸಂಖ್ಯಾಬಲವನ್ನು ಅರಿತು ತಾವೆಲ್ಲರೂ ಒಂದೆಂಬ ಪ್ರಜ್ಞೆಯುಳ್ಳವರಾದರೆ ಭಾರತದಲ್ಲಿ ಏಳುಲಕ್ಷ ಬಿಳಿಯ ಜನರ ಮೇಲೆ ಹಿಂಸಾಕೃತ್ಯಗಳನ್ನೆಸಗಲು ನಾಚಿಕೊಳ್ಳುವರು : ಈ ಬಿಳಿಯ ಜನರ ಕೈಯಲ್ಲಿ ಎಷ್ಟು ಮಾರಕ ಶಸ್ತ್ರಗಳು, ಲಕ್ಷಾಂತರ ಜನರ ಮೇಲೆ ವಿಷವಾಯು ಪ್ರಯೋಗಮಾಡುವ ಶಕ್ತಿ ಇದ್ದರೆತಾನೆ ಏನು ? ವಿಚಾರಪೂರ್ವಕವಾಗಿ ಚರಖಾದ ಕೆಲಸ ನಡೆದರೆ ಅದು ನಮ್ಮ ಆರ್ಥಿಕ ವಿಮೋಚನೆಯನ್ನು ಮಾತ್ರವಲ್ಲದೆ ನಮ್ಮ ಮನಸ್ಸನ್ನೂ ಹೃದಯವನ್ನೂ ಕ್ರಾಂತಿಕಾರಕ ರೀತಿಯಲ್ಲಿ ಬದಲಾಯಿಸಬಲ್ಲದು. ಅಹಿಂಸಾ ಮಾರ್ಗವೇ ಸ್ವರಾಜ್ಯ ಪ್ರಾಪ್ತಿಗೆ ಅತ್ಯಂತ ಕ್ಷೇಮವೂ ಸುಲಭವೂ ಎಂದು ತೋರಿಸಿಕೊಡಬಲ್ಲದು. ನಮ್ಮಮುನ್ನಡೆ ಬಹು ನಿಧಾನವೆಂದು ತೋರಿದರೂ ಉತ್ತರೋತ್ತರ ಅದೇ ಅತಿ ಶೀಘ್ರವಾದ ಮಾರ್ಗವೆಂದು ಸಿದ್ಧಪಡಿಸುವುದು.

ಜವಾಹರಲಾಲರು ಇಂದು ಸೆರೆಮನೆಯಲ್ಲಿಲ್ಲ. ಸೆರೆಮನೆಗೆ ಹೋಗಲು ಆತ ಹೆದರುತ್ತಾನೆಂಬುದು ಕಾರಣವಲ್ಲ. ಈ ಮಾತಿನಲ್ಲಿ ವಿಶ್ವಾಸವಿಡಿ. ಸೆರೆಮನೆಯ ಬಾಗಿಲನ್ನು ಪ್ರವೇಶ ಮಾಡುವ ಧೈರ್ಯ ಆತನಲ್ಲಿದೆ. ಅಷ್ಟೇ ಅಲ್ಲ, ಗಲ್ಲಿಗೆ ಏರಿಸಿದರೂ ನಗುತ್ತ ಹೋಗುವ ಕೆಚ್ಚೆದೆ ಆತನಲ್ಲಿದೆ. ಈ ಬಗೆಯ ಸತ್ತ್ವಪರೀಕ್ಷೆಯಿಂದೊದಗುವ ಶಕ್ತಿಯಲ್ಲಿ ನನ್ನ ಶ್ರದ್ಧೆ ಕಡಿಮೆಯಾಗಿಲ್ಲ. ಆದರೆ ಈ ವಿಧಾನಕ್ಕೆ ಈಗ ಸಮಯವಿರುವಂತೆ ನನಗೆ ಕಾಣಿಸುವುದಿಲ್ಲ. ನಾವೆಲ್ಲರೂ ನಿಷ್ಠೆಯಿಂದ ಏಕೀಭವಿಸಿ ದೃಢ ಸಂಕಲ್ಪದಿಂದ ರಚನಾತ್ಮಕ ಕಾರ್ಯವನ್ನು ಆಚರಿಸಿದ್ದೇ ಆದರೆ ಈ ಸಂಕಟಗಳನ್ನನುಭವಿಸಬೇಕಾಗಿಲ್ಲ. ನಾವು ಹೀಗೆ ಮಾಡಲು ಶಕ್ತರಾದರೆ, ಬ್ರಿಟಿಷರ ಜೊತೆಯಲ್ಲಿ ಅಥವಾ ಅವರ ವಿರುದ್ಧ ಹೋರಾಡುವ ಆವಶ್ಯಕತೆಯೇ ಇರಲಾರದೆಂದು ನಾನು ನಿಮಗೆ ಆಶ್ವಾಸನ ಕೊಡುವೆನು. ಲಾರ್ಡ್ ಲಿನ್‌ಲಿತ್‌ಗೋ ಅವರೇ ನಮ್ಮ ಬಳಿ ಬಂದು ನಮ್ಮ ಅಹಿಂಸೆ ಮತ್ತು ಸತ್ಯಗಳ ವಿಷಯದಲ್ಲಿ ಅವರು ಅಪನಂಬಿಕೆಯನ್ನು ತಾಳಿದ್ದು ತಪ್ಪಾಯಿತೆಂದು ಒಪ್ಪಿಕೊಂಡು ಅವರ ದೇಶದ ಪರವಾಗಿ ನಮ್ಮ ತೀರ್ಮಾನಗಳಿಗೆ ಒಡಂಬಡುವೆವೆಂದು ವಾಗ್ದಾನ ಮಾಡುವರು. ಹಾಗೆ ಅವರು ಮಾಡಲಿ ಬಿಡಲಿ ನಾನು ಆ ಗುರಿಯನ್ನು ಸಾಧಿಸಲು ಕಾರ್ಯಮಾಡುತ್ತಿದ್ದೇನೆ. " ಎಲ್ಲವೂ ಭಗವಂತನ ಅಧೀನ." ೧೭

# ೧೮. ಗಾಂಧೀ ಸೇವಾ ಸಂಘದ ವಾರ್ಷಿಕ ಸಭೆಯಲ್ಲಿ ಮಾಡಿದ ಭಾಷಣ

[ಕಾಂಗ್ರೆಸ್ಸಿನವರು ಅಧಿಕಾರ ಸ್ವೀಕಾರಮಾಡಬೇಕೇ ಬೇಡವೆ ಎಂಬ ವಿಷಯದಲ್ಲಿ ವಾದವಿವಾದಗಳು ದೇಶದಲ್ಲಿ ನಡೆಯುತ್ತಿದ್ದ ಕಾಲದಲ್ಲಿ ಬೆಳಗಾಂ ಜಿಲ್ಲೆಯ ಹುದ್ಲಿ ಎಂಬ ಸಣ್ಣ ಗ್ರಾಮದಲ್ಲಿ ಗಾಂಧೀ ಸೇವಾ ಸಂಘದ ವಾರ್ಷಿಕ ಸಭೆ ೧೯೩೭ರ ಏಪ್ರಿಲ್‌ನಲ್ಲಿ ನಡೆಯಿತು. ಜೋಳದ ಕಡ್ಡಿಗಳನ್ನು ಜೋಡಿಸಿದ ಛಾವಣಿಯಿರುವ ಗುಡಿಸಲುಗಳನ್ನು ಹಾಕಿ ಒಂದು ಮಾವಿನ ತೋಪಿನಲ್ಲಿ ಶಿಬಿರವನ್ನು ಏರ್ಪಡಿಸಲಾಗಿತ್ತು. ಹಳ್ಳಿಯ ರಸ್ತೆಗಳಲ್ಲಿ ಜಲ್ಲಿಯನ್ನು ಹರವಿ ಸಂಚಾರಕ್ಕೆ ಅನುಕೂಲವಾಗುವಂತೆ ಮಾಡಲು ಹಳ್ಳಿಯವರ ಸಹಾಯದಿಂದ ಸಂಘದ ಸದಸ್ಯರು ಶ್ರಮದಾನ ಮಾಡಿದರು. ಒಂದು ಸಾರ್ವಜನಿಕ ಭಾವಿ ಅಗೆಯುವುದನ್ನು ಗಾಂಧೀಯವರು ಆರಂಭಿಸಿದರು.]

(ಗಾಂಧೀಜೀ ತಮ್ಮ ಆರಂಭ ಭಾಷಣದಲ್ಲಿ ಕಾಂಗ್ರೆಸ್ಸಿಗೂ ಸಂಘಕ್ಕೂ ಇರುವ ಸಂಬಂಧದ ವಿಷಯದಲ್ಲಿ ಕೆಲವು ಸದಸ್ಯರ ಮನಸ್ಸಿನಲ್ಲಿದ್ದ ತಪ್ಪು ತಿಳುವಳಿಕೆಗಳನ್ನು ದೂರ ಮಾಡಿದರು. ಫೈಜಪುರ ಜವಾಹರಲಾಲರ ಕಾಂಗ್ರೆಸ್ಸಾದರೆ, ಹುದ್ಲಿ, ಗಾಂಧೀಯವರ ಕಾಂಗ್ರೆಸೆಂದು ಕುಹಕಿಯೊಬ್ಬನು ಕುಚೋದ್ಯ ಮಾಡಿದ್ದನು.)

ಈ ಹಾಸ್ಯದ ಚುಟುಕದಲ್ಲಿ ಗಾಂಧೀ ಸೇವಾ ಸಂಘವೂ ಕಾಂಗ್ರೆಸ್ಸೂ ಪರಸ್ಪರ ಸ್ಪರ್ಧಿಸುವ ಸಂಸ್ಥೆಗಳೆಂಬ ಸೂಚನೆ ಇದೆ. ಸಂಘವು ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯಕ್ರಮವನ್ನೇ ಮುಂದುವರಿಸುವ ಉದ್ದೇಶದಿಂದ ಹುಟ್ಟಿರುವಾಗ ಅದು ಕಾಂಗ್ರೆಸ್ಸಿಗೆ ಹೇಗೆ ಸ್ಪರ್ಧಿಯಾದೀತು? ಅದು ಕಾಂಗ್ರೆಸ್ಸಿನಿಂದ ಹುಟ್ಟಿರುವ ಸಂಸ್ಥೆ. ಕಾಂಗ್ರೆಸ್ ಬೆಳೆಯುತ್ತಿರುವ ಸಂಸ್ಥೆ. ಹೆಚ್ಚು ಹೆಚ್ಚು ಜನರನ್ನು ಪ್ರತಿನಿಧಿಸಲು ಅದು ಪ್ರಯತ್ನಿಸುತ್ತಿರುವುದು, ಮೂವತ್ತು ಕೋಟಿ ಜನರ ಪ್ರತಿನಿಧಿಯೆಂದು ಅದು ಸಾರುತ್ತಿರುವುದು ಸರಿಯಾದ ಮಾತೆ. ಸಂಘ ಯಾರ ಪ್ರತಿನಿಧಿಯೂ ಅಲ್ಲ. ಸಂಘದ ಸದಸ್ಯರು ಕಾಂಗ್ರೆಸ್ಸಿಗೆ ಸೇರಿದ ಮಟ್ಟಿಗೆ ಸತ್ಯ ಮತ್ತು ಅಹಿಂಸೆಯ ಪ್ರತಿನಿಧಿಗಳೆಂದು ಅವರು ಹೇಳಿಕೊಳ್ಳಬಹುದು. ಅಲ್ಲದೆ ಸಂಘದ ಸದಸ್ಯರೆಲ್ಲರೂ ಕಾಂಗ್ರೆಸ್ಸಿನ ಸದಸ್ಯರೆ. ಆದ್ದರಿಂದ ಈ ಕುಹಕವಾದ

ಮಾತನ್ನು ಯಾರು ಆರಂಭಿಸಿದರೋ ಅವರು ಅಸತ್ಯದ ಪ್ರಚಾರವನ್ನು ಆರಂಭಿಸಿದರು. ಈ ಅಪಪ್ರಚಾರಕ್ಕೆ ಯಾರೂ ಎಡೆಗೊಡಬಾರದಾಗಿತ್ತು.

ಈ ಸಂಘದ ಹೆಸರನ್ನೇ ಏಕೆ ಬದಲಾಯಿಸಬಾರದೆಂಬ ಒಂದು ಕೌತುಕದ ವಿಚಾರ ನನ್ನ ಮನಸ್ಸಿನಲ್ಲಿ ಸುಳಿಯಿತು. ನಾನು ಸತ್ಯ ಮತ್ತು ಅಹಿಂಸಾ ವ್ರತಗಳನ್ನು ಪಾಲಿಸಲು ಬದ್ಧನಾಗಿರುವುದರಿಂದ ಸಂಘಕ್ಕೆ ನನ್ನ ಹೆಸರನ್ನಿಟ್ಟಿರುವಿರಿ. ೧೯೨೦–೨೧ರಲ್ಲಿ ರೂಪುಗೊಂಡ ಕಾಂಗ್ರೆಸ್ಸಿನ ಕಾರ್ಯಕ್ರಮ ಸತ್ಯ ಮತ್ತು ಅಹಿಂಸೆಯ ಆಧಾರದ ಮೇಲೆ ಕೈಗೊಳ್ಳಲಾಗಿತ್ತು. ಅದಕ್ಕೆ ನೀವು ಬದ್ಧಕಂಕಣರಾಗಿದ್ದೀರಿ. ನನಗೆ ಅದರಲ್ಲಿರುವ ಶ್ರದ್ಧೆ ಎಂದಿಗಿಂತಲೂ ತೀವ್ರವಾಗಿದೆ. ಅದರೆ ಒಂದು ವೇಳೆ ಅದು ಮುಸಕಾದರೆ ನೀವೇನು ಮಾಡಬೇಕೆಂದಿರುವಿರಿ? ಕಾರ್ಯಕ್ರಮವನ್ನು ಬಿಟ್ಟುಬಿಡುವಿರೇನು? ನಿಮಗೆ ಸ್ವತಂತ್ರವಾಗಿ ಇದರಲ್ಲಿ ಶ್ರದ್ಧೆ ಇದೆಯೇ, ಅಥವಾ ನಾನು ನಂಬುವೆನೆಂಬ ಕಾರಣದಿಂದ ನೀವದಕ್ಕೆ ಶ್ರದ್ಧೆಯುಳ್ಳವರಾಗಿರುವಿರೋ? ನಿಮಗೆ ಸ್ವತಂತ್ರವಾಗಿ ಶ್ರದ್ಧೆ ಇದ್ದರೆ, ಸಂಘಕ್ಕೆ ನನ್ನ ಹೆಸರಿಡಬೇಕಾದ ಅವಶ್ಯಕತೆ ಇಲ್ಲ. ನನಗಾಗಿ ನಿಮ್ಮ ಶ್ರದ್ಧೆಯಾದರೆ, ನರನ ಪೂಜೆಯನ್ನು ಮಾಡುತ್ತಿದ್ದೀರಿ, ತತ್ತ್ವವನ್ನಲ್ಲ. ನರನ ಪೂಜೆ ಒಬ್ಬ ಮನುಷ್ಯನನ್ನು ಉದ್ಧಾರ ಮಾಡುವುದಕ್ಕೆ ಬದಲಾಗಿ ಅವನನ್ನು ಅಧೋಗತಿಗೆ ಒಯ್ಯುತ್ತದೆಂದು ನಾನು ನಿಮಗೆ ಹೇಳಬಯಸುವೆ. ಪ್ರಾಯಶಃ ನಾನು ಹೇಳಿದ್ದರಿಂದ ನೀವು ಆ ತತ್ತ್ವಗಳನ್ನು ಒಪ್ಪಿದಿರೆಂಬುದು ಗಣನೆಗೆ ತೆಗೆದುಕೊಳ್ಳಬೇಕಾಗಿಯೇ ಇಲ್ಲ. ಆ ತತ್ತ್ವಗಳಿಗೆ ನೀವು ಹೃತ್ಪೂರ್ವಕವಾಗಿಯೂ ಒಪ್ಪಿಗೆಯನ್ನು ಕೊಟ್ಟಿರುವಿರಿ. ಅವುಗಳನ್ನು ನೀವು ಅರಗಿಸಿದ ಒಂದು ಕಾರಣ. ಅರಗಿಸಿಕೊಳ್ಳದಿದ್ದರೆ ಅವುಗಳಿಂದ ಪ್ರಯೋಜನವಿಲ್ಲ; ಜೀರ್ಣವಾಗದ ಆಹಾರ ಹೇಗೆ ಪ್ರಯೋಜನವಿಲ್ಲವೊ ಹಾನಿಕರವೂ ಆಗಬಹುದೊ ಹಾಗೆ. ಚೆನ್ನಾಗಿ ಅರಗಿಸಿಕೊಳ್ಳದ ತತ್ತ್ವಗಳು ಜೀರ್ಣವಾಗದ ಆಹಾರಕ್ಕಿಂತಲೂ ಕೆಡಕನ್ನು ಮಾಡುವುವು. ಏಕೆಂದರೆ ಇಂತಹ ಆಹಾರ ಕೇವಲ ದೇಹಕ್ಕೆ ಹಾನಿ ತರುವುದು. ಆದರೆ ಅದಕ್ಕೆ ಚಿಕಿತ್ಸೆ ಇದೆ. ಆದರೆ ಜೀರ್ಣವಾಗದ ತತ್ತ್ವಗಳು ಆತ್ಮವನ್ನು ಕೆಡಿಸುವುವು, ಅದಕ್ಕೆ ಚಿಕಿತ್ಸೆಯೇ ಇಲ್ಲ.

ಆದುದರಿಂದ ನನ್ನ ಸೂಚನೆಯನ್ನು ಕುರಿತು ನೀವು ಪರ್ಯಾಲೋಚಿಸಬೇಕೆಂದು ಪ್ರಾರ್ಥಿಸುವೆನು. ನಿಮ್ಮ ಕಾರ್ಯಕಲಾಪಗಳಲ್ಲಿ ನಾನು ಭಾಗ ವಹಿಸಬೇಕೆಂದು ನನ್ನನ್ನು ಕರೆದದ್ದು ಸೂಕ್ತವಾಗಿಯೇ ಇದೆ. ನೀವು ನನ್ನನ್ನು ಪ್ರಶ್ನಿಸಬೇಕು—ಮತ್ತೆ ಮತ್ತೆ ಪ್ರಶ್ನೆಗಳನ್ನು ಹಾಕಿ ಪರೀಕ್ಷೆಗೆ ಗುರಿಮಾಡಬೇಕು. ನನ್ನ ಶ್ರದ್ಧೆ ಎಂದಿನಂತೆಯೇ ದೃಢವಾಗಿದೆಯೇ, ೧೯೨೦ರಲ್ಲಿ ನುಡಿದ ಧ್ವನಿ ಇಂದಿಗೂ ಅದೇ ಸ್ವರವನ್ನೇ ನುಡಿಯುತ್ತಿದೆಯೇ ಎಂದು ಕಂಡುಕೊಳ್ಳುವುದಕ್ಕೆ ಇದು ಅವಶ್ಯ. ನಾನು ಸತತವಾಗಿ ವಿಕಾಸ ಗೊಳ್ಳುತ್ತಿದ್ದೇನೆಂದು ನಾನು ಹೇಳಬಲ್ಲೆ. ನನ್ನ ತತ್ತ್ವಗಳ ಪ್ರಯೋಗ ವಿಸ್ತಾರವಾಗುತ್ತಲಿದೆ. ಈ ವಿಕಾಸ ಸರಿಯಾದ ಮಾರ್ಗದಲ್ಲಿ ಆಗುತ್ತಿದೆಯೇ ಎಂದು ನೀವು ಪರೀಕ್ಷಿಸಬೇಕು. ನೀವು ನನ್ನ ಪ್ರಭಾವಕ್ಕೆ ಒಳಗಾಗದೆ ಸ್ವತಂತ್ರವಾಗಿ ವಿಚಾರ ನಡೆಸದಿದ್ದರೆ ಇದು ಸಾಧ್ಯವಿಲ್ಲ. ನೀವು ನನ್ನ ಹೆಸರನ್ನು ಮಾತ್ರ ಗಟ್ಟಿಯಾಗಿ ಹಿಡಿದು ಕೂತರೆ, ನೀವೂ ನಾನೂ ಅಪಹಾಸ್ಯಕ್ಕೆ ಗುರಿಯಾಗುವ ಸಂಭವವಿದೆ.

ಮತ್ತೊಂದು ಅಪಾಯ, ಹಾಸ್ಯಕ್ಕೆ ಗುರಿಯಾಗುವುದಕ್ಕಿಂತಲೂ ಹೆಚ್ಚಿನದು ಕಾದಿದೆ. ನಿಮ್ಮ ಸಂಘ ಒಂದು ಪಂಥವಾಗಿಬಿಡುವ ಅಪಾಯವಿದೆ. ನಿಮ್ಮ ಮನಸ್ಸಿನಲ್ಲಿ ಗೊಂದಲವೆದ್ದಾಗ ನಾನು 'ಯಂಗ್ ಇಂಡಿಯಾ' ಮತ್ತು 'ಹರಿಜನ' ಪತ್ರಿಕೆಗಳಲ್ಲಿ ಬರೆದ ಲೇಖನಗಳನ್ನು ಓದಿ—ಅವೇ ಪ್ರಮಾಣವೆಂದು ಭಾವಿಸುವಿರಿ. ನಿಜವಾಗಿ ಹೇಳುವುದಾದರೆ ನನ್ನ ದೇಹದೊಂದಿಗೆ ನನ್ನ ಲೇಖನಗಳನ್ನೂ ಸುಟ್ಟುಹಾಕಿಬಿಡಬೇಕು. ನಾನು ಮಾಡಿದ್ದು ಉಳಿಯುತ್ತದೆಯೇ ಹೊರತು, ನಾನು ನುಡಿದದ್ದಲ್ಲ, ಬರೆದದ್ದಲ್ಲ. ನಮ್ಮ ಶಾಸ್ತ್ರಗಳೆಲ್ಲವೂ ನಾಶಹೊಂದಿದರೂ, ಈಶೋಪನಿಷತ್ತಿನ ಒಂದು ಮಂತ್ರ ಹಿಂದೂಧರ್ಮದ ಸಾರವನ್ನು ಎತ್ತಿ ಹಿಡಿಯಲು ಸಾಕೆಂದು ನಾನು ಈಚೆಗೆ ಅನೇಕ ಬಾರಿ ಹೇಳಿದ್ದೇನೆ. ಆದರೆ ಆ ಒಂದು ಮಂತ್ರವೂ ಸಹ ಅದರ ಅನುಷ್ಠಾನ ಮಾಡಲು ಒಬ್ಬರಾದರೂ ಇಲ್ಲದಿದ್ದರೆ ವ್ಯರ್ಥ ವಾಗುವುದು. ಹೀಗೆಯೇ ನಾನು ಹೇಳಿದ್ದೂ, ಬರೆದದ್ದೂ ಸಹ ಮಹಾ ತತ್ತ್ವಗಳಾದ ಸತ್ಯ ಮತ್ತು ಅಹಿಂಸೆ. ಇವುಗಳನ್ನು ನೀವು ಮೈಗೂಡಿಸಿ ಕೊಳ್ಳಲು ಎಷ್ಟು ಮಾತ್ರ ಸಹಾಯಕವಾಗುವುವೋ ಅಷ್ಟು ಮಾತ್ರವೇ

ಅವುಗಳ ಪ್ರಯೋಜನ. ನೀವು ಈ ತತ್ತ್ವಗಳನ್ನು ಅರಗಿಸಿಕೊಳ್ಳದಿದ್ದರೆ, ನನ್ನ ಲೇಖನಗಳಿಂದ ನಿಮಗೆ ಯಾವ ಪ್ರಯೋಜನವೂ ಇಲ್ಲ. ನಾನು ಈ ಮಾತನ್ನು ಸತ್ಯಾಗ್ರಹಿಯಾಗಿ ಒಂದೊಂದು ಶಬ್ದವನ್ನೂ ಅರ್ಥವತ್ತಾಗಿ ನುಡಿಯುತ್ತಿದ್ದೇನೆ.

ಮತ್ತು ಈ ವಾರ ನಾನು ಹೇಳಿರುವ ಮಾತುಗಳ ಆಶಯವನ್ನರಿತು ಆದಕ್ಕನುಸಾರವಾಗಿ ನಿಮ್ಮ ಮುಂದೆ ಬರುವ ಸಮಸ್ಯೆಗಳನ್ನು ನೀವು ಎದುರಿಸಬೇಕು. ಸತ್ಯ ಅಹಿಂಸೆಗಳಲ್ಲಿ ನನ್ನ ನಂಬಿಕೆ ಕ್ರಮೇಣ ಬೆಳೆಯುತ್ತಲಿದೆ. ಅವನ್ನು ನನ್ನ ಜೀವನದಲ್ಲಿ ಅನುಷ್ಠಾನ ಮಾಡಿದಂತೆಲ್ಲ ನಾನು ಕ್ಷಣಕ್ಷಣಕ್ಕೂ ವಿಕಾಸಗೊಳ್ಳುತ್ತಿದ್ದೇನೆ. ಅವುಗಳ ಅರ್ಥ ಪರಂಪರೆ ಯೇನೆಂಬುದನ್ನು ಕಾಣುತ್ತಿದ್ದೇನೆ. ಅವುಗಳನ್ನು ಹೊಸ ಬೆಳಕಿನಲ್ಲಿ ಪ್ರತಿನಿತ್ಯವೂ ನೋಡುತ್ತಿದ್ದೇನೆ. ಅವುಗಳಲ್ಲಿನ ಹೊಸ ಅರ್ಥವನ್ನು ಅರಿಯುತ್ತಿದ್ದೇನೆ. ಆದ್ದರಿಂದಲೇ ಚರಖಾಸಂಘ, ಹರಿಜನ ಸೇವಕ ಸಂಘ, ಗ್ರಾಮೋದ್ಯೋಗ ಸಂಘ ಇವುಗಳ ಮುಂದೆ ಆಗಾಗ್ಗೆ ಹೊಸ ಸೂಚನೆಗಳನ್ನು ಇಡುತ್ತಿದ್ದೇನೆ. ನನ್ನ ಮನಸ್ಸು ಅನಿಶ್ಚಿತವಾಗಿದೆಯೆಂದಾಗಲಿ, ಸಮತೋಲನ ತಪ್ಪಿದೆಯೆಂದಾಗಲಿ ಇದರ ಅರ್ಥವಲ್ಲ. ಅವು ಜೀವಂತವಾದ ಸಂಸ್ಥೆಗಳು; ಮರವು ಸದಾ ಬೆಳೆಯುತ್ತಿರುವಂತೆ ಅವು ಸದಾ ಬೆಳೆಯುತ್ತಿರಬೇಕೆಂಬುದೇ ಇದರ ಅರ್ಥ. ನೀವೂ ನನ್ನೊಡನೆ ವಿಕಾಸಗೊಳ್ಳುತ್ತ ಹೋಗಬೇಕೆಂದು ನಾನು ಬಯಸುವೆನು. ನಾನು ಹೋದನಂತರ ಏನಾಗುವುದೊ ಅದನ್ನು ತಿಳಿಯುವ ಕುತೂಹಲ ನನಗಿಲ್ಲ; ಆದರೆ ನಿಮ್ಮ ಸಂಸ್ಥೆ ತಟಸ್ಥವಾಗಿ ಚಲನೆಯಿಲ್ಲದ ನೀರಿನ ಕೂಪದಂತಿರದೆ ಸದಾ ಬೆಳೆಯುತ್ತಿರುವ ಮರದಂತಿರಬೇಕೆಂಬುದು ನನ್ನ ಇಚ್ಛೆ. ಆದ್ದರಿಂದ ನನ್ನನ್ನು ಮರೆತುಬಿಡಿ. ನನ್ನ ಹೆಸರಿಗೆ ಅಂಟಿಕೊಂಡಿರಬೇಡಿ. ತತ್ತ್ವಗಳಿಗೆ ಅಂಟಿಕೊಳ್ಳಿ. ನಿಮ್ಮ ಪ್ರತಿಯೊಂದು ಕಾರ್ಯವನ್ನೂ ಈ ಬಗೆಯಲ್ಲಿ ಅಳೆಯಿರಿ; ಬರುವ ಸಮಸ್ಯೆಗಳೆಲ್ಲವನ್ನೂ ನಿರ್ಭಯವಾಗಿ ಎದುರಿಸಿ.[೧೮]

# ೧೯. ಪೆಷಾವರಿನ ಇಸ್ಲಾಮಿಯಾ ಕಾಲೇಜ್ ಮತ್ತು ಎಡ್ವರ್ಡ್ಸ್ ಕಾಲೇಜಿನಲ್ಲಿ ಮಾಡಿದ ಭಾಷಣ

[೧೯೩೮ರ ಮೇ ತಿಂಗಳಲ್ಲಿ ಗಾಂಧೀಜೀ ವಾಯುವ್ಯ ಗಡಿನಾಡಿನ ಪ್ರಾಂತದಲ್ಲಿ ಪ್ರವಾಸ ಮಾಡಿದರು ಖಾನ್ ಅಬ್ದುಲ್ ಗಫಾರ್ ಖಾನರ ಜೊತೆಯಲ್ಲಿ. ಆ ಸಂದರ್ಭದಲ್ಲಿ ಇಸ್ಲಾಮಿಯಾ ಕಾಲೇಜಿನ ಆಹ್ವಾನವನ್ನು ಅಂಗೀಕರಿಸಿ ಈ ಭಾಷಣ ಮಾಡಿದರು.]

ಹಿಂದೂ—ಮುಸ್ಲಿಮ್ ಐಕ್ಯತೆಯ ವಿಚಾರವನ್ನು ನೀವು ಪ್ರಸ್ತಾಪಿಸಿದ್ದು ಒಳ್ಳೆಯದೇ ಆಯಿತು. ಈ ದೊಡ್ಡ ಕಾರ್ಯ ಸಾಧನೆಗಾಗಿ ನೀವೇನು ಮಾಡಬೇಕೆಂದಿರುವಿರೊ ಅದನ್ನು ನೀವು ವಿಚಾರ ಮಾಡಬೇಕೆಂದು ನಾನು ಕೋರುತ್ತೇನೆ. ಈ ಕಾರ್ಯ ಮುಖ್ಯವಾಗಿ ಈಗ ಎಳೆ ವಯಸ್ಸಿನಲ್ಲಿರುವ ಪೀಳಿಗೆಯವರಿಗೆ ಸೇರಿದ್ದೆಂದು ನಿಸ್ಸಂದೇಹವಾಗಿ ಹೇಳಬಹುದು. ನಾವೆಲ್ಲರೂ ಮುದುಕರಾಗುತ್ತಿದ್ದೇವೆ. ನಮ್ಮ ಕಾಲ ಮುಗಿಯಿತು. ನಾವು ನಮ್ಮ ಪಿತೃಗಳೊಡನೆ ಹೋಗಿ ಸೇರುವವರು. ನೀವು ಅರ್ಪಿಸಿದ ಬಿನ್ನವತ್ತಳೆಯಲ್ಲಿ ಅಹಿಂಸೆಯನ್ನು ಶ್ಲಾಘಿಸಿದ್ದೀರಿ. ಖಾನ್ ಸಾಹೇಬರ ಕಾರ್ಯವನ್ನು ಪ್ರಶಂಸಿಸಿದ್ದೀರಿ. ಇದರಿಂದ ನಿಮ್ಮ ಗುರಿ ಮಹತ್ತರವಾದುದೆಂದು ನೀವೇ ತೋರಿಸಿಕೊಂಡಿದ್ದೀರಿ. ನೀವು ಬುದ್ಧಿ ಪೂರ್ವಕವಾಗಿ ಈ ರೀತಿ ಪ್ರಸ್ತಾಪಿಸಿದ್ದೀರೊ ನೀವು ಹೇಳಿದ ಮಾತುಗಳ ಪೂರ್ಣ ಅರ್ಥ ಪರಂಪರೆಯನ್ನು ನೀವು ಅರಿತಿರುವಿರೊ ಇಲ್ಲವೊ ನನಗೆ ಗೊತ್ತಿಲ್ಲ. ನೀವು ಆಡಿದ ಮಾತುಗಳ ಅರ್ಥವನ್ನು ಅರಿತು ಒಂದೊಂದು ಶಬ್ದವನ್ನೂ ತೂಕಮಾಡಿ ಆಡಿರುವಿರೆಂದು, ನಾನು ಪೂರ್ತಿಯಾಗಿ ನಂಬುತ್ತೇನೆ. ನೀವು ಹಾಗೆ ಮಾಡಿದ್ದ ಪಕ್ಷಕ್ಕೆ ನಿಮ್ಮನ್ನು ಮತ್ತೊಂದು ಹೆಜ್ಜೆ ಮುಂದೊಯ್ಯಲು ಇಚ್ಛಿಸುತ್ತೇನೆ. ನಾನು ಗಡಿ ಪ್ರಾಂತಕ್ಕೆ ಬಂದದ್ದಕ್ಕೆ ನನ್ನ ಘನೋದ್ದೇಶ ಪಠಾಣರನ್ನು ನಿರ್ವೀರ್ಯನ್ನಾಗಿ ಮಾಡುವುದರಲ್ಲಿ ಪರಿಣಾಮಗೊಳ್ಳುವುದೆಂದು ಒಂದು ಉರ್ದು ಪತ್ರಿಕೆ ಹೇಳಿದೆ. ಆದರೆ ಪಠಾಣರಲ್ಲಿ ವ್ಯಾಪಿಸಿರುವ ಅಹಿಂಸಾತತ್ತ್ವದ ಸಂದೇಶವನ್ನು ನಾನು ತಿಳಿಸಬೇಕೆಂದು ಡಾ. ಖಾನ್ ಸಾಹೇಬರು ನನ್ನನ್ನು ಕರೆದಿದ್ದಾರೆ. ಅಂದರೆ ಆ ಉರ್ದು ಪತ್ರಿಕೆ

ವ್ಯಕ್ತಮಾಡಿರುವ ಭಯ ಡಾ. ಖಾನ್ ಸಾಹೇಬರಿಗೆ ಇಲ್ಲವೆಂದು ಅರ್ಥ ವಾಗುತ್ತದೆ. ಏಕೆಂದರೆ ನಿಜವಾದ ಅಹಿಂಸೆ ಬಲಿಷ್ಠತಮವಾದ ಹಿಂಸೆ ಗಿಂತಲೂ ಶಕ್ತಿಯುತವೆಂದು ಅವರು ತಿಳಿದಿರುವರು. ಆದ್ದರಿಂದ ನೀವು ಅಹಿಂಸೆಯ ತಿರುಳನ್ನು ನಿಜವಾಗಿ ಅರಿತವರಾದರೆ, ಖಾನ್ ಸಾಹೇಬರ ಕಾರ್ಯವನ್ನು ಮೆಚ್ಚುವಿರಾದರೆ ನೀವು ಅಹಿಂಸೆಯ ಪಾಲನೆಗೆ ಬದ್ಧ ಕಂಕಣರಾಗಬೇಕು. ಈಗ ಹಿಂಸೆಯ ಮಾತು ಇಷ್ಟು ಹರಡಿರುವಾಗ, ಹಗಲೆಲ್ಲ ಯುದ್ಧದ ಚಲನವಲನಗಳ ವಿಚಾರ, ವಿಮಾನದಾಳಿ, ಶಸ್ತ್ರ ಸಾಮಗ್ರಿಗಳು, ನೌಕಾಬಲ—ಇವುಗಳ ವಿಷಯ ಮಾತಾಡುತ್ತಿರುವಾಗ—ಹೀಗೆಲ್ಲ ಇದ್ದರೂ ನೀವು ಅಹಿಂಸೆಗೇ ಪ್ರಮಾಣಪೂರ್ವಕವಾಗಿ ನಿಷ್ಠರಾಗ ಬೇಕು. ಸದಾಕಾಲದಲ್ಲಿಯೂ ನಿರಾಯುಧ ಅಹಿಂಸೆಯ ಶಕ್ತಿ ಶಸ್ತ್ರಸಜ್ಜಿತ ಬಲಕ್ಕಿಂತಲೂ ಉತ್ತಮವೆಂದು ನೀವು ಮನಗಾಣಬೇಕು. ನನ್ನ ಮಟ್ಟಿಗೆ ಹೇಳುವುದಾದರೆ, ನನಗೆ ಅಹಿಂಸೆಯ ಸ್ವೀಕಾರ ಸಹಜವಾಗಿ ಬಂದದ್ದು. ನನ್ನ ಬಾಲ್ಯದ ತರಪೇತು ಮತ್ತು ಮನೆಯ ಪ್ರಭಾವ ಅದರ ಕಡೆಯೇ ಒಲಿಯುವಂತೆ ಮಾಡಿತು. ಆದರೆ ಅದರಲ್ಲಿ ಅಡಗಿರುವ ಉತ್ತಮ ಶಕ್ತಿ ಯನ್ನು ದಕ್ಷಿಣ ಆಫ್ರಿಕಾದಲ್ಲಿ ಮನಗಂಡೆನು. ಅದನ್ನು ಸುವ್ಯಸ್ಥಿತವಾದ ಹಿಂಸಾಶಕ್ತಿಗೂ, ವರ್ಣ ವಿದ್ವೇಷಕ್ಕೂ ವಿರುದ್ಧವಾಗಿ ನಿಲ್ಲಿಸಬೇಕಾಯಿತು. ನಾನು ದಕ್ಷಿಣ ಆಫ್ರಿಕಾದಿಂದ ಹಿಂದಿರುಗುವ ವೇಳೆಗೆ ಅಹಿಂಸೆ, ಹಿಂಸೆ ಗಿಂತಲೂ ಉತ್ತಮ ಮಾರ್ಗವೆಂಬ ಸ್ಪಷ್ಟವಾದ ಮನವರಿಕೆ ನನ್ನಲ್ಲಿ ದೃಢ ಗೊಂಡಿತು.

ಹಿಂಸಾ ಮಾರ್ಗಕ್ಕೆ ಬಹಳ ತರಪೇತಾಗಬೇಕಾದರೆ ಅಹಿಂಸಾ ಮಾರ್ಗಕ್ಕೆ ಇನ್ನೂ ಹೆಚ್ಚಿನ ತರಪೇತು ಅವಶ್ಯಕ. ಆ ತರಪೇತು ಹಿಂಸೆಗಾಗಿ ಮಾಡುವ ತರಪೇತಿಗಿಂತಲೂ ಕಠಿಣವಾದುದು. ಅದರಲ್ಲಿ ಅತ್ಯಾವಶ್ಯಕ ವಾದ ಪ್ರಥಮ ಪಾಠ ಭಗವಂತನಲ್ಲಿ ಗಾಢವಾದ ಭಕ್ತಿ. ಇಂತಹ ಭಕ್ತಿ ಯುಳ್ಳವನು ದೇವರ ಹೆಸರನ್ನು ಬಾಯಲ್ಲಿ ಹೇಳುತ್ತ ಕೆಟ್ಟ ಕೆಲಸಗಳನ್ನು ಮಾಡಲಾರ. ಅವನು ಖಡ್ಗವನ್ನು ಅವಲಂಬಿಸಿರಲಾರ. ಭಗವಂತನ ಮೇಲೆಯೇ ಅವನ ಅವಲಂಬನೆ ಇರುವುದು. ಆದರೆ ಒಬ್ಬ ಹೇಡಿಯೂ ಸಹ ತಾನು ಖಡ್ಗವನ್ನುಪಯೋಗಿಸುವುದಿಲ್ಲವೆಂದು ಹೇಳಿ ದೈವಭಕ್ತ

ನೆಂಬ ಸೋಗುಹಾಕಬಹುದೆಂದು ನೀವು ಆಕ್ಷೇಪಿಸಬಹುದು. ಹೇಡಿತನ ದೈವಭಕ್ತಿಯ ಲಕ್ಷಣವಲ್ಲ. ನಿಜವಾದ ದೈವಭಕ್ತನು ಖಡ್ಗವನ್ನುಪಯೋಗಿಸಲು ಶಕ್ತನಾಗಿರುವನು—ಆದರೆ ಪ್ರತಿ ಮಾನವನೂ ಭಗವಂತನ ಪ್ರತಿಬಿಂಬವೆಂದರಿತು ಹಾಗೆ ಉಪಯೋಗಿಸಲಾರನು.

ಮಾನವ ಭ್ರಾತೃತ್ವವನ್ನು ಇಸ್ಲಾಂ ಮತ ಸಾರುತ್ತದೆಂದು ಹೇಳಲಾಗಿದೆ. ಆದರೆ ಒಂದು ಮಾತನ್ನು ಹೇಳಲು ನಿಮ್ಮ ಅಪ್ಪಣೆ ಬೇಡುತ್ತೇನೆ: ಈ ಭ್ರಾತೃತ್ವ ಕೇವಲ ಮುಸಲ್ಮಾನರಾಗಿರುವವರಲ್ಲಿ ಮಾತ್ರವಲ್ಲ. ಇಡೀ ಮಾನವಕುಲಕ್ಕೇ ವ್ಯಾಪಿಸಬೇಕು. ಈ ಮಾತನ್ನು ಹೇಳಿ ಅಹಿಂಸೆಯ ತರಪೇತಿಗೆ ಆವಶ್ಯಕವಾದ ಎರಡನೆ ವಿಷಯಕ್ಕೆ ಬರುತ್ತೇನೆ. ಇಸ್ಲಾಂ 'ಅಲ್ಲಾ' ಎಂದು ಯಾರನ್ನು ಹೇಳುತ್ತದೆಯೊ ಆತನನ್ನೆ ಕ್ರೈಸ್ತರು 'ಗಾಡ್' ಎಂದೂ ಮತ್ತು ಹಿಂದೂಗಳು ಈಶ್ವರನೆಂದೂ ಕರೆಯುತ್ತಾರೆ. ಹಿಂದೂ ಧರ್ಮದಲ್ಲಿ ದೇವರಿಗೆ ಅನೇಕ ಹೆಸರುಗಳಿರುವಂತೆಯೇ ಇಸ್ಲಾಂನಲ್ಲಿಯೂ ಉಂಟು. ಈ ವಿವಿಧವಾದ ಹೆಸರುಗಳು ಬೇರೆ ಬೇರೆ ವ್ಯಕ್ತಿತ್ವವನ್ನು ಸೂಚಿಸುವುದಿಲ್ಲ: ಗುಣಗಳನ್ನು ಸೂಚಿಸುತ್ತವೆ. ಅಲ್ಪನಾದ ಮನುಷ್ಯನು ತನ್ನ ನಮ್ರವಾದ ರೀತಿಯಲ್ಲಿ ಸರ್ವಶಕ್ತನಾದ ಭಗವಂತನಿಗೆ ಗುಣ ವಿಶೇಷಗಳನ್ನುಕೊಟ್ಟು ವರ್ಣಿಸುವ ಪ್ರಯತ್ನ ಮಾಡಿದ್ದಾನೆ. ಆದರೆ ಭಗವಂತನು ಗುಣಾತೀತನು; ವಾಚಾಮಗೋಚರನು. ನಮ್ಮ ಕಲ್ಪನೆಗೂ, ಅಳತೆಗೂ ಮೀರಿದವನು. ಇಂತಹ ಭಗವಂತನಲ್ಲಿ ಜೀವಂತ ನಂಬಿಕೆ ಇದ್ದರೆ ಮಾನವ ಕುಲದ ಭ್ರಾತೃತ್ವವನ್ನು ಒಪ್ಪಲೇಬೇಕು, ಎಲ್ಲ ಧರ್ಮಗಳನ್ನೂ ಸಮಾನ ಗೌರವದಿಂದ ಕಾಣಬೇಕೆಂದೂ ಇದರ ಅರ್ಥ. ನಿಮಗೆ ಇಸ್ಲಾಂ ಪ್ರಿಯವಾದರೆ, ನನಗೆ ಹಿಂದೂಧರ್ಮ ಪ್ರಿಯವಾದುದು; ಕ್ರೈಸ್ತರಿಗೆ ಕ್ರೈಸ್ತ ಧರ್ಮ ಪ್ರಿಯವಾದುದು. ನಿಮ್ಮ ಧರ್ಮವೇ ಎಲ್ಲ ಧರ್ಮಗಳಿಗಿಂತಲೂ ಶ್ರೇಷ್ಠವೆಂದೂ, ಇತರರು ತಮ್ಮ ಧರ್ಮವನ್ನು ಬಿಟ್ಟು ನಿಮ್ಮ ಧರ್ಮವನ್ನು ಸ್ವೀಕರಿಸಬೇಕೆಂದು ಹೇಳುವುದು ಅಸಹಿಷ್ಣುತೆಯ ಪರಮಾವಧಿ; ಅಸಹಿಷ್ಣುತೆ ಒಂದು ರೀತಿಯ ಹಿಂಸಾ ಮನೋಧರ್ಮವೇ ಹೌದು. ಅಹಿಂಸೆಯ ತರಪೇತಿನಲ್ಲಿ ಮೂರನೆಯ ಅವಶ್ಯವಾದ ಅಂಶ ಸತ್ಯ ಮತ್ತು ಪರಿಶುದ್ಧತೆ: ಏಕೆಂದರೆ ದೇವರಲ್ಲಿ ಉತ್ಕಟವಾದ ಭಕ್ತಿಯುಳ್ಳವನು ಸತ್ಯವಂತನಾಗಿಯೂ ಪರಿಶುದ್ಧನಾಗಿಯೂ ಇರಲೇಬೇಕು.

ಆದ್ದರಿಂದ ಡಾ. ಖಾನ್ ಸಾಹೇಬರ ಸೇವೆಯ ವಿಷಯದಲ್ಲಿಯೂ ಅಹಿಂಸೆಯ ವಿಷಯದಲ್ಲಿಯೂ ನಿಮಗಿರುವ ಮೆಚ್ಚುಗೆ ನಿಜವಾದ ಪಕ್ಷಕ್ಕೆ ಅದರಲ್ಲಿ ನಾನು ಸೂಚಿಸಿರುವ ಸಮಗ್ರ ಅರ್ಥವೆಲ್ಲ ಅಡಗಿದೆಯೆಂದು ನಾನು ಹೇಳಬೇಕಾಗಿದೆ. ಯಾರು ಮುಂದಾಳುಗಳಾಗಿರುವರೊ ಅವರು ತಮ್ಮ ಜೀವನವನ್ನು ಈ ಮಟ್ಟಕ್ಕೆ ತರಬೇಕು. ತಮ್ಮ ನಿತ್ಯ ಜೀವನದಲ್ಲಿ ಈ ಸಲ್ಲಕ್ಷಣಗಳ ನಿದರ್ಶಕರಾಗಿರಬೇಕು. ನೀವು ಇತರರನ್ನು ಹಿಂಬಾಲಿಸುವ ಪಾಮರ ಜನರಲ್ಲ: ನೀವು ಜನತೆಯ ನಾಯಕರು. ಈ ಧ್ಯೇಯಕ್ಕೆ ತಕ್ಕಂತೆ ನಿಮ್ಮ ಜೀವನ ಹಿರಿದಾದರೆ, ಅಹಿಂಸೆಯಿಂದ ನೀವು ನಿರ್ವೀರ್ಯರಾಗುವಿರೆಂದು ಹೇಳಲು ಯಾರಿಗೂ ಕಾರಣವಿರಲಾರದೆಂದು ನೀವು ನಿಶ್ಚಯವಾಗಿ ಭಾವಿಸಬಹುದು. ನಿಮ್ಮ ಅಹಿಂಸೆ ಧೀರೋದಾತ್ತರ ಅಹಿಂಸೆಯಾಗಿ ಬೆಳಗುವುದು.

ಎಡ್ವರ್ಡ್ ಕಾಲೇಜಿನವರು ಅರ್ಪಿಸಿದ ಬಿನ್ನವತ್ತಳೆಗೆ ಉತ್ತರ ಕೊಡುತ್ತ ಗಾಂಧೀಯವರು ಮತ್ತೆ ಈ ವಿಷಯವನ್ನೇ ಪ್ರಸ್ತಾಪಿಸಿದರು. ಬಿನ್ನವತ್ತಳೆಯಲ್ಲಿ ಈ ರೀತಿ ಹೇಳಲಾಗಿತ್ತು : "ಸಾವಿರಾರು ವರ್ಷಗಳ ಹಿಂದೆ ಯಾವ ದೇಶದಲ್ಲಿ ಅಹಿಂಸೆಯ ಸಂದೇಶ ಸಾರಲ್ಪಟ್ಟಿತೊ, ಆ ದೇಶದಲ್ಲಿ ಜನ್ಮತಾಳಿ, ಅಹಿಂಸಾತ್ಮಕ ಶಾಸನೋಲ್ಲಂಘನದ ತತ್ತ್ವವನ್ನು ಪ್ರತಿಪಾದಿಸಿ, ದುರ್ಬಲರಿಗೂ ದಬ್ಬಾಳಿಕೆಗೆ ಗುರಿಯಾದವರಿಗೂ ಈ ಆಯುಧ ಎಲ್ಲಕ್ಕಿಂತಲೂ ಶಕ್ತಿಯುತವೆಂದು ಅಸಾಧಾರಣ ರೀತಿಯಲ್ಲಿ ಬೋಧಿಸುವ ಯಶಸ್ಸು ನಿಮ್ಮದಾಗಿದೆ."

ನಿಮ್ಮ ಬಿನ್ನವತ್ತಳೆ, ನನ್ನ ವಿಷಯದಲ್ಲಿ ರಚಿಸಿರುವ ದೊಡ್ಡ ಸ್ತೋತ್ರಮಾಲೆ ಆಗಿದೆ. ಇಂತಹ ಪ್ರಶಂಸೆಯನ್ನೆಲ್ಲ ನನಗೆ ಅನ್ವಯಿಸುವುದೆಂದು ಭಾವಿಸುವುದು ನನಗೆ ಎಂದೂ ಸುಲಭವಾಗಿರಲಿಲ್ಲ. ಇಷ್ಟು ಪ್ರಶಂಸೆಗೆ ನಾನು ಪಾತ್ರನಲ್ಲವೆಂಬ ಭಾವನೆ ಈಗಿರುವಷ್ಟು ನನಗೆ ಹಿಂದೆ ಎಂದೂ ಆಗಿರಲಿಲ್ಲ. ಒಂದು ಬಗೆಯ ವಿಚಿತ್ರವಾದ ಖಿನ್ನತೆ ನನ್ನನ್ನು ಆವರಿಸಿದೆ. ಅದರಿಂದ ಪಾರಾಗಲು ನನಗೆ ಸಾಧ್ಯವಾಗುತ್ತಿಲ್ಲ. ನಾನಿಲ್ಲಿಗೆ ಭಾಷಣ ಕೊಡುವುದಕ್ಕೆಂದು ಬರಲಿಲ್ಲ. ನಾನು ಐದು ನಿಮಿಷಕ್ಕಿಂತಲೂ ಹೆಚ್ಚಾಗಿ ಮಾತಾಡಬೇಕಿಲ್ಲವೆಂದು ನನಗೆ ಹೇಳಿದರು. ಆದರೆ ನಿಮ್ಮ ಬಿನ್ನವತ್ತಳೆ

ಯಲ್ಲಿರುವ ಒಂದು ವಾಕ್ಯ ನಾನು ನಿರೀಕ್ಷಿಸಿದುದಕ್ಕಿಂತ ಸ್ವಲ್ಪ ಹೆಚ್ಚುಕಾಲ ಮಾತಾಡಬೇಕೆಂದು ಬಲವಾಗಿ ಪ್ರೇರಿಸುತ್ತದೆ. ಇವು ಮಾಡಿದ ಅಹಿಂಸಾತ್ಮಕ ಶಾಸನೋಲ್ಲಂಘನದ ಪ್ರಸ್ತಾಪ ನನ್ನ ನೆನಪನ್ನು ದಕ್ಷಿಣ ಆಫ್ರಿಕದ ಜರ್ಮಿಸ್ಟನ್ನಿಗೆ—೧೯೦೭ ಇಸವಿಗೆ ತತ್‌ಕ್ಷಣ ಕೊಂಡೊಯ್ಯಿತು. ಐರೋಪ್ಯ ಮಿತ್ರರ ಸಭೆಯೊಂದನ್ನು ಆಗ ಕರೆಯಲಾಗಿತ್ತು. ನಾನು ಅವರಿಗೆ ಈ ಶಾಸನೋಲ್ಲಂಘನದ ವಿಷಯ ಹೇಳಬೇಕಾಗಿತ್ತು. ಅಂದಿನ ಅಧ್ಯಕ್ಷರು ನೀವು ಹೇಳಿರುವ ಮಾತನ್ನೇ ಹೇಳಿದರು; ಅಂದರೆ, ಈ ಶಾಂತಿಯುತ ಶಾಸನೋಲ್ಲಂಘನ ದುರ್ಬಲರ ಆಯುಧವೆಂದು ಈ ಧ್ವನಿ ನನಗೆ ಕರ್ಕಶವಾಗಿ ತೋರಿತು : ತತ್‌ಕ್ಷಣ ನಾನು ಆ ಭಾಷಣಕಾರರನ್ನು ತಿದ್ದಬೇಕಾಯಿತು. ಇಪ್ಪತ್ತು ವರ್ಷಗಳಾಗಿ ಭಾರತದಲ್ಲಿ ಸತ್ಯಾಗ್ರಹ ನಡೆದಿದ್ದರೂ ನೀವೂ ಸಹ ಅದೇ ತಪ್ಪು ಅಭಿಪ್ರಾಯವನ್ನು ವ್ಯಕ್ತಮಾಡಿರುವುದು ಆಶ್ಚರ್ಯಕರವಲ್ಲದಿದ್ದರೂ ವಿಚಿತ್ರವಾಗಿದೆ. ನಾವು ದುರ್ಬಲರಾಗಿ ಇರಬಹುದು, ದಬ್ಬಾಳಿಕೆಗೆ ತುತ್ತಾಗಿರಬಹುದು. ಆದರೆ ಅಹಿಂಸೆ ದುರ್ಬಲರ ಆಯುಧವಲ್ಲ. ಅದು ಅತಿ ಬಲಿಷ್ಠರ ಹಾಗೂ ಧೀರರ ಆಯುಧ, ಹಿಂಸೆಯಾದರೊ ದುರ್ಬಲರ ಮತ್ತು ತುಳಿಯಲ್ಪಟ್ಟವರ ಆಯುಧವೇನೊ ಆದೀತು, ಏಕೆಂದರೆ ಅಹಿಂಸೆಯ ಪರಿಚಯ ಅವರಿಗೆ ಇಲ್ಲದಿರುವುದರಿಂದ ಅವರಿಗೆ ಬೇರೆ ಉಪಾಯವಿಲ್ಲ. ಆದರೆ ಈ ಮಾತು ನಿಜ. ಶಾಂತಿಯುತ ಶಾಸನೊಲ್ಲಂಘನಕ್ಕೆ ದುರ್ಬಲ ಆಯುಧವೆಂದು ಪರಿಗಣಿಸಲಾಗಿದೆ. ಆದ್ದರಿಂದಲೇ 'ಸತ್ಯಾಗ್ರಹ'ವೆಂಬ ಹೆಸರನ್ನು — ಶಾಂತಿಯುತ ಶಾಸನೋಲ್ಲಂಘನೆಗೆ ಬದಲಾಗಿ ದಕ್ಷಿಣ ಆಫ್ರಿಕದಲ್ಲಿ ಇದಕ್ಕೆ ಇಡಲಾಯಿತು.

ಶಾಂತಿಯುತ ಪ್ರತಿಭಟನೆ ನಕಾರಾತ್ಮಕ. ಅದರಲ್ಲಿ ಪ್ರೇಮ ತತ್ತ್ವ ಜಾಗೃತ ರೂಪದಲ್ಲಿಲ್ಲ. ಸತ್ಯಾಗ್ರಹ ಈ ರೀತಿಯ ಜಾಗೃತವಾದ ಪ್ರೇಮ ತತ್ತ್ವದಿಂದ ಹೊರಡುತ್ತದೆ. ಯಾರು ಎಮ್ಮೊಡನೆ ಅವಹೇಳನ ಭಾವದಿಂದ ವರ್ತಿಸುವರೊ ಅವರನ್ನು ಪ್ರೀತಿಸಿ ನಿಮ್ಮ ಸ್ನೇಹಿತರನ್ನು ಪ್ರೀತಿಸುವುದು ಸುಲಭ. ಆದರೆ ನಿಮ್ಮ ಶತ್ರುಗಳನ್ನು ಪ್ರೀತಿಸು ಎಂದು ಏಸುಕ್ರಿಸ್ತನು ಹೇಳಿದ ಮಾತಿನಲ್ಲಿ ಈ ಪ್ರೇಮ ತತ್ತ್ವವಿದೆ. ಸತ್ಯಾಗ್ರಹ ದುರ್ಬಲರ ಆಯುಧವಾಗಿದ್ದ ಪಕ್ಷಕ್ಕೆ ನಾನು ಖಾನ್ ಸಾಹೇಬರನ್ನು ವಂಚಿಸಿ

ದಂತೆಯೇ ಆದೀತು. ಏಕೆಂದರೆ ಯಾವ ಪಠಾಣನೂ ತಾನು ದುರ್ಬಲನೆಂದು ಒಪ್ಪಿಕೊಳ್ಳಲಾರನು. ತಾವು ಲಾಠಿಯನ್ನೂ ಬಂದೂಕನ್ನೂ ಸ್ವಯಂ ಪ್ರೇರಣೆಯಿಂದ ತ್ಯಜಿಸುವಾಗ ಅವರಿಗೆ ತಾವು ಬಲಿಷ್ಠರೆಂದೂ ಧೀರರೆಂದೂ ತೋರಿದಷ್ಟು ಹಿಂದೆ ಎಂದೂ ತೋರಿರಲಿಲ್ಲವೆಂದು ಖಾನ್ ಸಾಹೇಬರೇ ನನಗೆ ಹೇಳಿದರು. ಅಹಿಂಸೆ ಧೀರರ ಅತ್ಯುತ್ತಮ ಆಯುಧವಲ್ಲದಿದ್ದರೆ ಪಠಾಣರಂತಹ ಧೈರ್ಯಶಾಲಿಗಳಾದ ಜನರ ಮುಂದೆ ಇದನ್ನಿಡಲು ನಾನು ಖಂಡಿತವಾಗಿಯೂ ಶಂಕಿಸುತ್ತಿದ್ದೆನು. ಈ ಆಯುಧದಿಂದಲೇ ಧೈರ್ಯ ವಂತರಾದ ಆಫ್ರಿದಿಗಳನ್ನೂ ಇತರ ಕೆಲಸದವರನ್ನೂ ಖಾನ್ ಸಾಹೇಬರು ಒಲಿಸಿಕೊಂಡು ಅವರ ಮೈತ್ರಿಯನ್ನು ಸಂಪಾದಿಸುವ ಪ್ರಯತ್ನದಲ್ಲಿ ಯಶಸ್ವಿಯಾಗುವ ಸಂಭವವಿದೆ.

ನಿಮ್ಮ ತಪ್ಪು ತಿಳುವಳಿಕೆಗಳನ್ನು ತಿದ್ದುವ ಅವಕಾಶ ನನಗೆ ದೊರೆತದ್ದಕ್ಕಾಗಿ ನನಗೆ ಸಂತೋಷವಾಗುತ್ತದೆ. ಏಕೆಂದರೆ ನಾನು ಹೇಳಿದ್ದನ್ನು ನೀವು ಮನಗಂಡ ಕ್ಷಣವೇ ಯಾವ ಉದ್ದೇಶಕ್ಕಾಗಿ ಖಾನ್ ಸಾಹೇಬರೂ ನಾನೂ ಕೆಲಸಮಾಡುತ್ತಿದ್ದೇವೆಯೊ ಆದರ ಸಾಧನೆಗೆ ನಿಮ್ಮ ಸೇವೆಯನ್ನು ಸಲ್ಲಿಸಲು ನೀವು ಕಾರ್ಯಕರ್ತರಾಗಿ ಮುಂದೆ ಬರುವಿರಿ. ಈ ವಿಷಯದಲ್ಲಿ ಒಂದು ನಿಶ್ಚಿತ ಅಭಿಪ್ರಾಯವನ್ನು ಇತರರಲ್ಲಿ ಮೂಡಿಸು ವುದು ಕಷ್ಟವೆಂದು ನಾನು ಒಪ್ಪುತ್ತೇನೆ. ನಾನು ಕಳೆದ ಐವತ್ತು ವರ್ಷ ಗಳಿಂದ ಸತತವಾಗಿ ಬುದ್ಧಿಪೂರ್ವಕ ಪ್ರಯತ್ನ ಮಾಡುತ್ತಿದ್ದರೂ ನನಗೆ ಈ ಕಷ್ಟ ತೋರಿದೆ. ಇದಕ್ಕೆ ಪೂರ್ವಭಾವಿಯಾಗಿ ಅತ್ಯುತ್ತಮವಾದ ಪರಿಶುದ್ಧತೆ ಇರಬೇಕು. ಅಮಿತವಾದ ತಾಳ್ಮೆ ಬೇಕು. ಒಂದು ಹುಲ್ಲುಕಡ್ಡಿ ಯಿಂದ ಸಮುದ್ರದ ನೀರನ್ನೆಲ್ಲ ಬತ್ತಿಸುವಂತಹ ತಾಳ್ಮೆಯದು.[೯]

# ೨೦. ಗಡಿನಾಡಿನ ಪ್ರವಾಸ ಮಾಡುತ್ತ ಬನ್ನುವಿನಲ್ಲಿ ಮಾಡಿದ ಭಾಷಣ

[ಅಕ್ಟೋಬರ್ ೨೫ನೆಯ ತಾರೀಖು ಬನ್ನುವಿನಲ್ಲಿ ಗಾಂಧೀಯವರು ಒಂದು ಬಹಳ ಮುಖ್ಯವಾದ ಭಾಷಣವನ್ನು ಮಾಡಿದರು.]

ನಾನು ಎರಡು ತಿಂಗಳುಗಳಿಂದ ಸಂಪೂರ್ಣ ಮೌನವನ್ನು ಆಚರಿಸುತ್ತಿದ್ದೇನೆಂದು ಪ್ರಾಯಶಃ ನಿಮಗೆ ಗೊತ್ತಿದೆ. ಅದರಿಂದ ನನಗೆ ಪ್ರಯೋಜನವಾಗಿದೆ. ಅದರಿಂದ ದೇಶಕ್ಕೂ ಪ್ರಯೋಜನವಾಗಿದೆ ಎಂದು ನಾನು ನಂಬಿದ್ದೇನೆ. ನನಗೆ ಉಂಟಾದ ತೀವ್ರವಾದ ಮಾನಸಿಕ ಕ್ಲೇಶ ಮೊದಲು ಇದಕ್ಕೆ ಕಾರಣವಾಯಿತು. ಅನಂತರ ಹೀಗೆಯೇ ಮೌನವನ್ನು ಅದರಿಂದ ಆಗುವ ಗುಣಕ್ಕಾಗಿಯೇ ಅನಿಶ್ಚಿತ ಕಾಲದವರೆಗೂ ಅದನ್ನು ಮುಂದುವರಿಸಬೇಕೆಂದು ನಿರ್ಧಾರ ಮಾಡಿದೆ. ನನಗೆ ಅದೊಂದು ರಕ್ಷಾಕವಚದಂತಾಗಿದೆ. ನನ್ನ ಕೆಲಸವನ್ನು ಹಿಂದಿಗಿಂತಲೂ ಉತ್ತಮವಾಗಿ ಮಾಡಿ ಮುಗಿಸಲು ನನಗೆ ಅದು ಸಹಾಯಕವಾಗಿದೆ. ನಾನು ಇಲ್ಲಿ ಬಂದಾಗ ಖುದಾಯೀ ಖಿದ್ಮತ್‌ದಾರರೊಂದಿಗೆ ಮಾತನಾಡಲು ಮಾತ್ರ ನನ್ನ ಮೌನವನ್ನು ಭಂಗಮಾಡಬೇಕೆಂದಿದ್ದೆನು. ಆದರೆ ಖಾನ್ ಸಾಹೇಬರ ಒತ್ತಾಯಕ್ಕೆ ನಾನು ಬಗ್ಗಬೇಕಾಯಿತು.

ನಿಮ್ಮ ಬಿನ್ನವತ್ತಳೆಗಳು ನನ್ನನ್ನು ಪ್ರಶಂಸೆ ಮಾಡಿವೆ. ನಾನು ಬಂದದ್ದಕ್ಕಾಗಿ ನನ್ನನ್ನು ವಂದಿಸಿವೆ. ನನ್ನ ಬಗೆಗೆ ಪ್ರಶಂಸೆಯಾಗಲಿ, ವಂದನೆಗಳಾಗಲಿ ಅವಶ್ಯವಿಲ್ಲ. ನಿಮ್ಮ ನಿರೀಕ್ಷಣೆಗಳನ್ನು ತೃಪ್ತಿಪಡಿಸಲು ನಾನು ಯಾವುದನ್ನು ಮಾಡಲೂ ಅಶಕ್ತನೆಂದು ನಾನು ಬಲ್ಲೆ. ನಾನು ಈ ಗಡಿನಾಡಿಗೆ ಬಂದದ್ದು ಕೇವಲ ಖುದಾಯೀ ಖಿದ್ಮತ್‌ಗಾರರನ್ನು ಭೇಟಿಯಾಗುವುದಕ್ಕೆ. ಅವರು ಅಹಿಂಸೆಯ ಬಗೆಗೆ ಎಷ್ಟು ತಿಳಿದಿರುವರೆಂದು ಅರಿಯಲು, ನಿಮ್ಮ ನಗರಕ್ಕೆ ನಾನು ಬಂದುದು ಕೇವಲ ಪ್ರಾಸಂಗಿಕ.

ಈ ದಿನ, ಅನೇಕ ಘಂಟೆಗಳ ಕಾಲ, ನನ್ನನ್ನು ನೋಡಲು ಬಂದ ನಿಯೋಗಗೋಷ್ಠಿಗಳನ್ನು ಭೇಟಿ ಮಾಡುವುದರಲ್ಲಿಯೂ ಅವರು ಕೊಟ್ಟ ಕಾಗದಗಳನ್ನು ಓದುವುದರಲ್ಲಿಯೂ ಕಳೆದೆನು. ಬನ್ನು ಮೇಲೆ ಈಚೆಗೆ

ನಡೆದ ದಾಳಿ ಆಗ ನಡೆದ ಘಟನೆಗಳು ನನ್ನ ಮನಸ್ಸನ್ನು ಬಹಳ ಕಲಕಿವೆ. ಈ ಪ್ರಾಂತ ಭೌಗೋಳಿಕವಾಗಿ ಒಂದು ವಿಚಿತ್ರವಾದ ಸ್ಥಿತಿಯಲ್ಲಿದೆ. ಏಕೆಂದರೆ ಒಂದು ಕಡೆ ದಾಳಿ ಮಾಡುವುದೇ ಅವರ ಕಸಬಾಗಿರುವ ಬೆಟ್ಟ ಗುಡ್ಡಗಳ ಜಾತಿಯವರು ಆವರಿಸಿಕೊಂಡಿದ್ದಾರೆ. ನಾನು ತಿಳಿದಿರುವ ಮಟ್ಟಿಗೂ ಅವರಿಗೆ ಜಾತಿ–ಕೋಪ ಎಂಬ ವಿದ್ವೇಷದ ಭಾವನೆಗಳಿಲ್ಲ. ಈ ದಾಳಿಗಾರರ ಉದ್ದೇಶವಾದರೂ ಕೇವಲ ತಮ್ಮ ಬಾಳಿನ ಮೂಲಭೂತ ಆವಶ್ಯಕತೆಗಳ ಪೂರೈಕೆಗಳೆಂದೇ ಕಾಣುತ್ತದೆ. ಅವರಿಗೆ ತುತ್ತಾಗುವವರು ಅನೇಕ ವೇಳೆ ಹಿಂದೂಗಳಾಗಿರುವುದಕ್ಕೆ ಕಾರಣ ಪ್ರಾಯಶಃ ಹಿಂದೂಗಳೇ ಹೆಚ್ಚು ಶ್ರೀಮಂತರಾಗಿರುವುದರಿಂದ. ಜನಗಳ ಅಪಹರಣಕ್ಕೂ ಇದೇ ಕಾರಣವೆಂದು ತೋರುತ್ತದೆ.

ಈ ರೀತಿಯ ದಾಳಿಗಳು ನಡೆಯುತ್ತಲೇ ಇರುವುದು ಭಾರತದ ಈ ಭಾಗದಲ್ಲಿ ಬ್ರಿಟಿಷರ ಆಡಳಿತ ವಿಫಲವಾಗಿರುವುದಕ್ಕೆ ಒಂದು ನಿದರ್ಶನವೆಂದು ನನ್ನ ಅಭಿಪ್ರಾಯ. ಗಡಿಗಳ ರಕ್ಷಣೆ ಬಗೆಗೆ ಅವರು ಅನುಸರಿಸಿರುವ ಧೋರಣೆಯಿಂದ ದೇಶಕ್ಕೆ ಕೋಟ್ಯಂತರ ರೂಪಾಯಿಗಳು ಖರ್ಚಾಗಿವೆ, ಸಾವಿರಾರು ಜನರ ಪ್ರಾಣ ನಷ್ಟವಾಗಿದೆ. ಈ ಗುಡ್ಡಗಾಡಿನ ವೀರ ಜನ ಇನ್ನೂ ದಮನವಾಗದೆ ಇದ್ದಾರೆ. ನಾನು ಈ ದಿನ ಕೇಳಿದ ವಿಷಯಗಳೆಲ್ಲವೂ ನಿಜವಾಗಿದ್ದರೆ—ಅವು ನಿಜವೆಂದೇ ನನ್ನ ನಂಬಿಕೆ—ಪ್ರಾಣವೂ ಆಸ್ತಿಪಾಸ್ತಿಗಳೂ ಈ ಪ್ರಾಂತದ ಅನೇಕ ಭಾಗಗಳಲ್ಲಿ ಸುರಕ್ಷಿತವಾಗಿಲ್ಲ.

ತಮ್ಮ ಬಂಧುಗಳನ್ನೂ ಪ್ರಿಯರನ್ನೂ ಮರಣದಿಂದಲೊ ಅಪಹರಣದಿಂದಲೊ ಕಳೆದುಕೊಂಡಿರುವ ಜನರು ಈ ರೀತಿ ಅಪಹೃತವಾದವರನ್ನು ವಾಪಸ್ಸು ಪಡೆಯಲು ಹಣ ತೆರಬೇಕಾಗುವುದು. ಈ ದಿನ ನನ್ನನ್ನು ನೋಡಲು ಬಂದಿದ್ದವರು ಅವರು ಹೇಳಿದ ಹೃದಯವಿದ್ರಾವಕ ಕಥೆಗಳನ್ನು ಕೇಳುತ್ತ, ನನ್ನ ಮನಸ್ಸು ಕರಗಿ ಅವರೊಂದಿಗೆ ಸಹಾನುಭೂತಿಯನ್ನು ತಾಳಿತು. ಆದರೆ ನನಗೆ ಎಷ್ಟೇ ಇಚ್ಛೆ ಇದ್ದರೂ ನಾನು ಈ ಬಂಧುಗಳನ್ನು ವಾಪಸ್ಸು ಬರುವಂತೆ ಮಾಡುವ ಯಾವ ಮಂತ್ರಶಕ್ತಿಯೂ ನನ್ನಲ್ಲಿಲ್ಲವೆಂದು ನಾನು ನಿಮ್ಮ ಮುಂದೆ ಒಪ್ಪಿಕೊಳ್ಳಲೇಬೇಕು. ನೀವು ಸರಕಾರದಿಂದಲಾಗಲಿ, ಕಾಂಗ್ರೆಸ್ ಮಂತ್ರಿಮಂಡಲಗಳಿಂದಾಗಲಿ ಹೆಚ್ಚು

ನಿರೀಕ್ಷಿಸಬಾರದು. ಯಾವ ಸರಕಾರಕ್ಕೂ ಇಷ್ಟು ಸಾಧನ ಸಂಪತ್ತಿ ಇಲ್ಲ. ಬ್ರಿಟಿಷ್ ಸರಕಾರವಂತೂ ತಮ್ಮ ಪ್ರಜೆಗಳು ಅಪಹರಿಸಲ್ಪಟ್ಟಾಗ ಪ್ರತಿಯೊಂದು ಬಾರಿಯೂ ತಮ್ಮ ಸೈನ್ಯದ ಶಕ್ತಿಗಳನ್ನು ವಿನಿಯೋಗಿಸುವ ಇಚ್ಛೆಯೂ ಸಹ ಉಳ್ಳವರಾಗಿಲ್ಲ. ಆಳರಸರ ಜಾತಿಗೆ ಸೇರಿದವರು ಅಪಹೃತರಾದರೆ ಆ ಮಾತು ಬೇರೆ.

ಎಲ್ಲಾ ವಿಷಯಗಳನ್ನೂ ಪರಿಶೀಲಿಸಿದ ತರುವಾಯ ಕಾಂಗ್ರೆಸ್ ಸರಕಾರಗಳು ಅಧಿಕಾರಕ್ಕೆ ಬಂದಮೇಲೆ, ಈ ದಾಳಿಗಳ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿದೆಯೆಂದು ನನಗೆ ತೋರಿದೆ. ಕಾಂಗ್ರೆಸ್ ಮಂತ್ರಿಗಳಿಗೆ ಪೋಲೀಸಿನವರ ಮೇಲೆ ಪರಿಣಾಮಕಾರಿಯಾದ ಅಧಿಕಾರವಿಲ್ಲ; ಸೈನ್ಯದ ಮೇಲಂತೂ ಅದು ಇಲ್ಲವೇ ಇಲ್ಲ. ಈ ಪ್ರಾಂತದ ಕಾಂಗ್ರೆಸ್ ಮಂತ್ರಿಗಳಿಗೆ ಉಳಿದ ಕಡೆ ಇರುವಷ್ಟೂ ಸಹ ಇಲ್ಲ. ಆದುದರಿಂದ ಡಾ. ಖಾನ್ ಸಾಹೇಬರು ಈ ದಾಳಿಗಳ ಸಮಸ್ಯೆಯನ್ನು ಪರಿಹರಿಸಲು ಅಶಕ್ತರಾದರೆ ಅವರು ರಾಜೀನಾಮೆಯನ್ನು ಅರ್ಪಿಸುವುದೇ ಉತ್ತಮವೆಂದು ನನಗನಿಸಿದೆ. ಈ ದಾಳಿಗಳು ಹೆಚ್ಚುತ್ತ ಹೋದರೆ ಕಾಂಗ್ರೆಸ್ ತನ್ನ ಪ್ರತಿಷ್ಠೆಯನ್ನು ಕಳೆದುಕೊಳ್ಳುವ ಅಪಾಯವಿದೆ. ನನ್ನ ಅಭಿಪ್ರಾಯ ಏನೇ ಇರಲಿ, ನಾನು ಪ್ರಸ್ತಾಪಿಸಿರುವ ನ್ಯೂನತೆಗಳು ಇದ್ದರೂ ಕಾಂಗ್ರೆಸ್ ಮಂತ್ರಿಮಂಡಲಗಳು ಮುಂದುವರಿಸಬೇಕೇ ಬೇಡವೇ ಎಂಬುದನ್ನು ನೀವೇ ನಿರ್ಧರಿಸಬೇಕು. ಕೊನೆಗೂ ಮುಖ್ಯ ಮಂತ್ರಿಯು* ನಿಮ್ಮ ಸೇವಕ. ಅತ್ರ ಆ ಅಧಿಕಾರದಲ್ಲಿರುವುದಕ್ಕೆ ಮತದಾರರು, ಪ್ರಾಂತದ ಕಾಂಗ್ರೆಸ್ ಸಮಿತಿ ಮತ್ತು ಕಾಂಗ್ರೆಸ್ ಕಾರ್ಯಕಾರೀ ಸಮಿತಿ—ಈ ಮೂವರೂ ಒಪ್ಪಿಗೆ ಕೊಡಬೇಕು.

ಈ ದಿನ ನನ್ನನ್ನು ಭೇಟಿಮಾಡಿದ ಕೆಲವರು, ಈ ಗಡಿ ಪ್ರಾಂತದಿಂದ ಹೊರಬಿದ್ದು ಬೇರೆ ಎಲ್ಲಿಗಾದರೂ ಹೋಗಿ ತಮ್ಮ ರಕ್ಷಣೆಯನ್ನು ಮಾಡಿಕೊಳ್ಳಬಹುದೆ ಎಂದು ಪ್ರಶ್ನಿಸಿದರು. ಸ್ವಸ್ಥವಾಗಿಯೂ ಗೌರವಯುತ

* ಡಾ. ಖಾನ್ ಸಾಹೇಬ್—ಗಡಿನಾಡಿನ ಗಾಂಧೀ ಎಂದು ಹೆಸರು ಪಡೆದಿದ್ದ ಖಾನ್ ಅಬ್ದುಲ್ ಗಫಾರ್ ಖಾನ್‌ರ ಸಹೋದರ.

ವಾಗಿಯೂ ಬಾಳಲು ಬೇರೆ ಮಾರ್ಗವಿಲ್ಲದ ಪಕ್ಷಕ್ಕೆ ಹೀಗೆ ಪ್ರಾಂತದಿಂದ ಹೊರಬೀಳುವುದು ಸರ್ವಥಾ ಸೂಕ್ತವೆಂದೇ ನಾನು ಹೇಳಿದೆ. ದಾಳಿಯಾಗುವ ಪ್ರದೇಶದಲ್ಲಿ ವಾಸಿಸುವ ಮುಸಲ್ಮಾನರು, ಗಡಿನಾಡಿನ ಅಪರಾಧಗಳ ನಿಯಂತ್ರಣದ ಕಾನೂನಿನ (Frontier Crime Regulation Act) ಕೆಲವು ಪರಿಚ್ಛೇದಗಳು ರದ್ದಾಗುವುದಕ್ಕೆ ಪೂರ್ವದಲ್ಲಿ, ದಾಳಿಕಾರರನ್ನು ಹಿಮ್ಮೆಟ್ಟಿಸಲು ಏನು ಸಹಾಯವನ್ನು ಕೊಡುತ್ತಿದ್ದರೊ ಅದನ್ನು ಈಗ ಕೊಡುತ್ತಿಲ್ಲವೆಂದು ಒಂದು ದೂರನ್ನು ನಾನು ಕೇಳಿದೆ. ಇದರಿಂದ ದಾಳಿಕಾರರಿಗೆ ಉತ್ತೇಜನ ದೊರತಿದೆಯೆಂದು ಹೇಳಲಾಗಿದೆ. ಇದು ನಿಜವೇ ಇರಬಹುದಾದರೂ, ನಿಮ್ಮ ರಕ್ಷಣೆಗಾಗಿ ಶಸ್ತ್ರಸಜ್ಜಿತರಾದ ಇತರರ ಮೇಲೆ ನೀವು ಅವಲಂಬಿಸುವುದಾದರೆ ಉತ್ತರೋತ್ತರ ಅವರ ಅಧೀನದಲ್ಲೇ ನೀವು ಇರಬೇಕಾದೀತೆಂದು ನಿಮಗೆ ಎಚ್ಚರಿಕೆಯನ್ನು ಕೊಡುತ್ತೇನೆ. ನಿಮ್ಮ ರಕ್ಷಣೆಯನ್ನು ಶಸ್ತ್ರಾಸ್ತ್ರಗಳ ಮೂಲಕ ಸಾಧಿಸಿಕೊಳ್ಳುವ ಉಪಾಯವನ್ನು ಕಲಿಯುವ ಅಧಿಕಾರ ನಿಮಗೆ ಉಂಟೇ ಉಂಟು. ಆದರೆ ನಿಮ್ಮಲ್ಲಿ ಪರಸ್ಪರ ಸಹಕಾರ ಪ್ರವೃತ್ತಿ ಬೆಳೆಯಬೇಕು. ಎಂದಿಗೂ ನೀವು ಹೇಡಿಗಳಾಗಬಾರದು. ಆತ್ಮರಕ್ಷಣೆ ಎಲ್ಲರ ಜನ್ಮಸಿದ್ಧವಾದ ಹಕ್ಕು. ಭಾರತದಲ್ಲಿ ಒಬ್ಬನಾದರೂ ಹೇಡಿ ಇರುವುದನ್ನು ನೋಡಲು ನನಗೆ ಇಷ್ಟವಿಲ್ಲ.

ನಾಲ್ಕನೆಯ ಉಪಾಯ ಅಹಿಂಸಾ ಮಾರ್ಗ. ಅದನ್ನು ನಿಮಗೆ ಸೂಚಿಸಲು ಬಂದಿದ್ದೇನೆ. ಆತ್ಮರಕ್ಷಣೆಗೆ ಅದೇ ನಿಶ್ಚಿತವೂ, ವಿಫಲತೆಯೇ ಇಲ್ಲದಂತಹ ಮಾರ್ಗ. ನನ್ನ ಮಾರ್ಗದಲ್ಲಿ ಮುಂದುವರಿಸಲು ನನಗೆ ಅವಕಾಶ ಇದ್ದಿದ್ದರೆ, ನಾನು ಆ ಜನರ ಬಳಿ ಹೋಗಿ ಅವರೊಂದಿಗೆ ಬೆರೆತು, ಈ ವಿಷಯವನ್ನು ಚರ್ಚಿಸುವೆನು. ಪ್ರೇಮ ಮತ್ತು ಯುಕ್ತಾಯುಕ್ತ ವಿಚಾರದಿಂದ ಕೂಡಿದ ಈ ಚರ್ಚೆಗಳು ಅವರನ್ನು ಪಟ್ಟುದೆ ಹೋಗಲಾರವೆಂದು ನನಗೆ ನಿಶ್ಚಯವಾಗಿ ತೋರುತ್ತದೆ. ಆದರೆ ಇಂದು ಆ ಮಾರ್ಗವನ್ನು ನಾನು ಹಿಡಿಯುವಂತಿಲ್ಲ. ಗಾಡಿಯ ಆಚೆಗೆ ಹೋಗಿ ಆ ಜನರನ್ನು ಸಂದರ್ಶಿಸಲು ನನಗೆ ಸರಕಾರ ಅಪ್ಪಣೆ ಕೊಡಲಾರದು.

ಗಡಿನಾಡಿನ ಆಚೆ ವಾಸಿಸುವ ಈ ಜನ ಅವರನ್ನು ವರ್ಣಿಸುವಷ್ಟು ಪಿಶಾಚಿಗಳಾಗಿರಲಾರರು. ನಿಮ್ಮಲ್ಲಿ ನನ್ನಲ್ಲಿ ಇರುವಂತಹ ಮಾನವ ಗುಣ

ಅವರಲ್ಲಿಯೂ ಇರುವುದು. ಈವರೆಗೂ ಅವರೊಂದಿಗೆ ನಡೆಸಿದ ವ್ಯವಹಾರ ದಲ್ಲಿ ಈ ಮಾನವೀಯ ಸಂಪರ್ಕವೇ ಇಲ್ಲದಾಗಿತ್ತು. ಈ ಮಧ್ಯಾಹ್ನ ಅನೇಕ ವಝೀರಿಗಳು (Waziris) ಬಂದು ನನ್ನನ್ನು ಭೇಟಿ ಮಾಡಿದರು. ಇತರರಲ್ಲಿರುವ ಮಾನವ ಸ್ವಭಾವವೇ ಅವರಲ್ಲಿಯೂ ಇತ್ತೆಂದು ನನಗೆ ಕಂಡಿತು.

ಮಾನವ ಸ್ವಭಾವ ಮೂಲತಃ ಕೆಟ್ಟದ್ದಲ್ಲ. ಪಾಶವೀ ಸ್ವಭಾವವೂ ಸಹ ಪ್ರೇಮದ ಪ್ರಭಾವಕ್ಕೆ ಬಗ್ಗುತ್ತದೆಂಬುದಕ್ಕೆ ನಿದರ್ಶನಗಳಿವೆ. ಮಾನವ ಸ್ವಭಾವದ ವಿಷಯದಲ್ಲಿ ನೀವು ಎಂದಿಗೂ ತೀರ ನಿರಾಶೆಯನ್ನು ತಾಳಬಾರದು. ನೀವು ವ್ಯಾಪಾರ ಮಾಡುವ ಜನ. ನಿಮ್ಮ ವ್ಯವಹಾರದಲ್ಲಿ ಎಲ್ಲಕ್ಕೂ ಘನವಾದ ಮತ್ತು ಬೆಲೆಯುಳ್ಳ ವ್ಯಾಪಾರ ಸಾಮಗ್ರಿಯಾದ ಪ್ರೇಮವನ್ನು ತೆಗೆದುಹಾಕಬೇಡಿ. ನಿಮ್ಮಿಂದ ಸಾಧ್ಯವಾದಷ್ಟು ಪ್ರೇಮ ವನ್ನು ಆ ಜನರಿಗೆ ಕೊಡಿ: ಅದರ ಪ್ರತಿಯಾಗಿ ಅವರೂ ನಿಮಗೆ ಕೊಡು ವರು.

ಅವರ ಬೆದರಿಕೆಗಾಗಿಯಾಗಲಿ ಅವರು ಕದ್ದೊಯ್ದವರ ಬಿಡುಗಡೆ ಗಾಗಿಯಾಗಲಿ ನೀವು ಪರಿಹಾರ ದ್ರವ್ಯವನ್ನು ಕೊಟ್ಟು ನಿಮ್ಮ ರಕ್ಷಣೆ ಯನ್ನು ಮಾಡಲೆಣಿಸುವುದು ದಾಳಿಗಳನ್ನು ಪುನಃ ಆರಂಭಿಸಲು ಅವರಿಗೆ ಆಹ್ವಾನವಿತ್ತಂತೆಯೇ ಆಗುವುದು. ಈ ರೀತಿ ಕೊಡುವ ನಿಮ್ಮನ್ನೂ ರಕ್ಷಣೆ ಪಡೆಯುವ ಅವರನ್ನೂ ಇಬ್ಬರನ್ನೂ ಇದು ಕೆಡಿಸುವುದು. ಅವರಿಗೆ ಈ ರೀತಿಯ ದ್ರವ್ಯ ಪರಿಹಾರವನ್ನು ಕೊಡುವುದಕ್ಕೆ ಬದಲಾಗಿ ಕಡು ಬಡತನ ದಿಂದ ಅವರನ್ನು ಉದ್ಧಾರಮಾಡಬೇಕು ಅವರನ್ನು ಉದ್ಯೋಗಶೀಲರನ್ನಾಗಿ ಮಾಡಬೇಕು. ಈ ದಾಳಿ ಮಾಡುವ ಚಾಳಿಗೆ ಮೂಲ ಕಾರಣವಾದ ದಾರಿ ದ್ರ್ಯಕ್ಕೆ ಯುಕ್ತ ಪರಿಹಾರ ಹುಡುಕಿ ಅದನ್ನು ನಿರ್ಮೂಲ ಮಾಡಬೇಕು.

ಈ ವಿಷಯದಲ್ಲಿ ನಾನು ಖುದಾಯೀ ಖಿದ್ಮತ್‌ಗಾರರೊಂದಿಗೆ ಮಾತು ಕತೆ ನಡೆಸುತ್ತಿದ್ದೇನೆ; ಖಾನ್ ಸಾಹೇಬರ ಸಹಕಾರವನ್ನು ಪಡೆದು ಒಂದು ಯೋಜನೆಯನ್ನು ಸಿದ್ಧ ಮಾಡುತ್ತಿದ್ದೇವೆ. ಈ ಯೋಜನೆ ಫಲಪ್ರದ ವಾದರೆ, ಖುದಾಯೀ ಖಿದ್ಮತ್‌ಗಾರರು ತಮ್ಮ ಹೆಸರಿಗೆ ಅನುಗುಣವಾಗಿ ವರ್ತಿಸುವವರಾದರೆ (ಭಗವಂತನ ಸೇವಕರಾಗಿ) ಅವರು ತಮ್ಮ ಆಚರಣೆ

ಯಿಂದ ತೋರಿಸಿಕೊಡುವ ಆದರ್ಶ ಈ ದಾಳಿಕಾರರ ಮೇಲೆ ಗುಲಾಬಿ ತನ್ನ ಸೌರಭವನ್ನು ಬೀರುವಂತೆ ಪ್ರಭಾವವನ್ನು ಬೀರುವುದು. ಅದು ಈ ಗಡಿ ಪ್ರದೇಶದ ಪ್ರಶ್ನೆಗೆ ಒಂದು ಶಾಶ್ವತವಾದ ಪರಿಹಾರವನ್ನೇ ಒದಗಿಸುವುದು.೨೦

## ೨೧. ಖುದಾಯೀ ಖಿದ್ಮತ್‌ಗಾರರನ್ನು*ದ್ದೇಶಿಸಿ ಮಾಡಿದ ಭಾಷಣ

[ಖುದಾಯೀ ಖಿದ್ಮತ್‌ಗಾರರಿಗೆ ಮಾಡಿದ ಭಾಷಣದಲ್ಲಿ, ಹಿಂಸೆಗಾಗಿಯೂ ಮತ್ತು ಅಹಿಂಸೆಗಾಗಿಯೂ ಮಾಡಬೇಕಾಗಿರುವ ವ್ಯವಸ್ಥೆಗಳಲ್ಲಿರುವ ಭೇದವನ್ನು ಗಾಂಧೀಯವರು ವಿವರಿಸಿದರು. ಅವರು ಈ ರೀತಿ ನುಡಿದರು :]

ಅಹಿಂಸಾತ್ಮಕ ವ್ಯವಸ್ಥೆ ಯಾವ ತತ್ತ್ವಗಳ ಆಧಾರದ ಮೇಲೆ ಸ್ಥಾಪಿತವಾಗುತ್ತೊ ಅವಕ್ಕೂ ಹಿಂಸಾತ್ಮಕ ವ್ಯವಸ್ಥೆ ಯಾವ ತತ್ತ್ವಗಳ ಆಧಾರದ ಮೇಲೆ ಸ್ಥಾಪಿತವಾಗುತ್ತೊ ಅವಕ್ಕೂ ಬಹಳ ಭೇದವಿದೆ. ಅವು ಪರಸ್ಪರ ವಿರುದ್ಧ. ಉದಾಹರಣೆಗೆ, ಕ್ರಮವಾದ ಸೈನ್ಯದಲ್ಲಿ ಅಧಿಕಾರ ವರ್ಗಕ್ಕೆ ಸೇರಿದವನಿಗೂ ಸಾಮಾನ್ಯ ಸಿಪಾಯಿಗೂ ಸ್ಪಷ್ಟವಾದ ತಾರತಮ್ಯವಿದೆ. ಸಿಪಾಯಿ ಅಧಿಕಾರಿಗೆ ಅಧೀನ ಕೆಳ ದರ್ಜೆಯವನು. ಅಹಿಂಸೆಯ ಸೇನೆಯಲ್ಲಿ, ದಂಡನಾಯಕ ಮುಖ್ಯ ಸೇವಕ ಮಾತ್ರ—ಸಮಾನಸ್ಕಂಧರಲ್ಲಿ ಪ್ರಥಮನು. ಅವನಿಗೆ ಸಾಮಾನ್ಯರಿಗೆ ಇರುವುದಕ್ಕಿಂತಲೂ ಹೆಚ್ಚಿನ ಹಕ್ಕುಗಳಾಗಲಿ ಶ್ರೇಷ್ಠತೆಯಾಗಲಿ ಇರುವುದಿಲ್ಲ. ಖಾನ್ ಸಾಹೇಬರಿಗೆ ನೀವು ಪ್ರೀತಿಯಿಂದ 'ಬಾದಶಹ ಖಾನ್' ಎಂಬ ಬಿರುದನ್ನು ಕೊಟ್ಟಿರುವಿರಿ. ಆದರೆ ತಮ್ಮ ಅಂತರಂಗದಲ್ಲಿ ಅವರು ದಂಡನಾಯಕರಂತೆ ವರ್ತಿಸಬಹುದು ಎಂದು ನಂಬುವುದಾದರೆ, ಅವರ ಪತನವಾದೀತು. ಅವರ ಅಧಿಕಾರ ಕೊನೆಗೊಂಡಿತು. ಅವರು ಖುದಾಯೀ ಖಿದ್ಮತ್‌ಗಾರರ ಪೈಕಿ ಅತಿ ನಿಷ್ಠಾವಂತರು ; ಮೊದಲಿಗರು. ಇತರ ಖುದಾಯೀ ಖಿದ್ಮತ್‌ಗಾರರು ಸಲ್ಲಿಸುವ

* ಭಗವಂತನ ಸೇವಕರು.

ಸೇವೆಗಿಂತಲೂ ಅವರ ಸೇವೆ ಗುಣದಲ್ಲಿಯೂ ಪ್ರಮಾಣದಲ್ಲಿಯೂ ಹೆಚ್ಚಿನದು. ಈ ಕಾರಣದಿಂದ ಅವರು ಬಾದಶಹ ಅನಿಸಿಕೊಂಡಿದ್ದಾರೆ.

ಸೈನ್ಯದ ವ್ಯವಸ್ಥೆ ಶಾಂತಿದಳದ ವ್ಯವಸ್ಥೆ ಇವೆರಡಕ್ಕೂ ಇರುವ ಎರಡನೆಯ ಭೇದವೆಂದರೆ ಸೈನ್ಯದಲ್ಲಿ ತಮ್ಮ ದಂಡನಾಯಕರನ್ನೂ ಅಧಿಕಾರಗಳನ್ನೂ ಆರಿಸುವ ಅಧಿಕಾರ ಸಾಮಾನ್ಯ ಸಿಪಾಯಿಗಳಿಗಿರುವುದಿಲ್ಲ. ಈ ಅಧಿಕಾರ ವರ್ಗದವರನ್ನು ಅವರ ಮೇಲೆ ತಂದು ಕೊಡಿಸುತ್ತಾರೆ. ಅವರು ನಿರಾತಂಕವಾದ ಅಧಿಕಾರವನ್ನು ಚಲಾಯಿಸುತ್ತಾರೆ. ಆದರೆ ಶಾಂತಿ ದಳದಲ್ಲಿ ಈ ಅಧಿಕಾರ ವರ್ಗದವರು ಚುನಾಯಿತರಾಗುತ್ತಾರೆ. ಕ್ರಮವಾಗಿ ಚುನಾವಣೆ ಇಲ್ಲದಿದ್ದರೂ ಅವರ ಅಧಿಕಾರ ನೈತಿಕ ಶಕ್ತಿ, ಸಾಮಾನ್ಯ ಸಿಪಾಯಿಗಳು ಅವರಿಗೆ ಸ್ವಪ್ರೇರಣೆಯಿಂದ ಸಲ್ಲಿಸುವ ವಿಧೇಯತೆ, ಇವುಗಳ ಮೇಲೆಯೇ ಅವಲಂಬಿಸಿದೆ.

ಇದು ನಾಯಕರಲ್ಲಿ ಮತ್ತು ಸಿಪಾಯಿಗಳಲ್ಲಿ ಇರುವ ಪರಸ್ಪರ ಸಂಬಂಧದ ಮಾತಾಯಿತು. ಬಾಹ್ಯ ಪ್ರಪಂಚದೊಂದಿಗೆ ಅವರ ಸಂಬಂಧ ವೇನೆಂದು ಗಮನಿಸಿದರೆ ಇದೇ ರೀತಿಯ ಭೇದ ಈ ಎರಡು ಬಗೆಯ ವ್ಯವಸ್ಥೆಗಳಲ್ಲಿ ಎದ್ದು ಕಾಣುತ್ತದೆ. ಈಗ ತಾನೆ ನಮ್ಮ ಕೋಣೆಯ ಹೊರಗಡೆ ಸೇರಿದ್ದ ದೊಡ್ಡ ಗುಂಪನ್ನು ನಾವು ಹತೋಟಿಗೆ ತರಬೇಕಾಯಿತು. ನೀವು ಅವರನ್ನು ಸೌಮ್ಯವಾಗಿಯೇ ಪ್ರೀತಿಯ ಮಾತಿನಿಂದಲೂ ಚದುರಿಸಲು ಪ್ರಯತ್ನಿಸಿದಿರಿ. ಬಲ ಪ್ರಯೋಗ ಮಾಡಲಿಲ್ಲ. ಕೊನೆಗೆ ನಮ್ಮ ಪ್ರಯತ್ನ ವಿಫಲವಾದಾಗ ನಾವು ಕೋಣೆಯೊಳಕ್ಕೆ ಹೋಗಿ ಬಾಗಿಲನ್ನು ಹಾಕಿ ಇವರ ಗದ್ದಲದಿಂದ ಪಾರಾದೆವು. ಸೈನ್ಯದ ಶಿಸ್ತಿನಲ್ಲಿ ಈ ರೀತಿಯ ನೈತಿಕವಾದ ವರ್ತನೆಗೆ ಸ್ಥಾನವಿಲ್ಲ.

ಇನ್ನೊಂದು ಹೆಜ್ಜೆ ನಾನು ಮುಂದೆ ಹೋಗುತ್ತೇನೆ. ಇಲ್ಲಿ ಹೊರಗೆ ಸೇರಿರುವ ಗುಂಪಿನವರೆಲ್ಲ ನಮ್ಮ ಮಿತ್ರರು. ಅವರೆಲ್ಲರೂ ಖುದಾಯೀ ಖಿದ್ಮತ್‌ಗಾರರಲ್ಲ. ನಾವು ಹೇಳುವುದನ್ನು ಕೇಳಲು ಅವರಿಗೆ ಕುತೂಹಲವಿದೆ. ಅವರ ಆ ಶಿಸ್ತೂ ಸಹ ಅವರ ಪ್ರೇಮದ ಕುರುಹಾಗಿದೆ. ಬೇರೆ ಕಡೆಗಳಲ್ಲಿ ಇಂಥವರಲ್ಲದೆ ನಮ್ಮ ವಿಷಯದಲ್ಲಿ ಸ್ನೇಹಭಾವ ಇಲ್ಲದಿರುವ ಜನ ಅನೇಕರಿರಬಹುದು; ನಮ್ಮ ಮೇಲೆ ಶತ್ರುತ್ವ ಸಾಧಿಸುವವರಿರ

ಬಹುದು. ಶಸ್ತ್ರ ಸಜ್ಜಿತವಾದ ಸಂಸ್ಥೆಗಳಲ್ಲಿ ಇಂತಹವರನ್ನು ಹೊರ ದೂಡುವುದೊಂದೇ ಮಾರ್ಗ, ಆದರೆ ಇಲ್ಲಿ ವಿರೋಧಿಯನ್ನು ಅಷ್ಟೇ ಏಕೆ—ಯಾರನ್ನೇ ಆಗಲಿ—ನಿಮ್ಮ ಮನಸ್ಸಿನಲ್ಲಿಯೂ ಶತ್ರುವೆಂದು ಭಾವಿಸುವುದು ಅಹಿಂಸಾ ಅಥವಾ ಸತ್ಯದ ಪರಿಭಾಷೆಯಲ್ಲಿ ಪಾಪವೆಂದು ಅನಿಸಿಕೊಳ್ಳುತ್ತದೆ. ಅಹಿಂಸಾ ಭಕ್ತನು ಪ್ರತೀಕಾರವನ್ನು ಮಾಡುವುದರ ಯೋಜನೆಗೆ ಬದಲಾಗಿ ತನ್ನ ಶತ್ರುವಿನ ಹೃದಯ ಪರಿವರ್ತನೆಯಾಗಲೆಂದು ಭಗವಂತನಲ್ಲಿ ಪ್ರಾರ್ಥಿಸುವನು. ಅದು ಸಂಭವಿಸದಿದ್ದರೆ, ವಿರೋಧಿಯು ತನಗೆ ಮಾಡುವ ಹಾನಿಯನ್ನು ಸಹಿಸುವನು, ಹೇಡಿತನದಿಂದಾಗಲಿ ಅಸಹಾಯಕವಾಗಿಯಾಗಲಿ ಅಲ್ಲ; ಧೈರ್ಯದಿಂದ ತನ್ನ ಮುಖದಲ್ಲಿ ಮುಗುಳ್ನಗೆಯನ್ನು ಬೀರುತ್ತ. ಅಹಿಂಸೆ ನಿಜವೂ ಸಂಪೂರ್ಣವೂ ಆಗಿರುವ ಪಕ್ಷಕ್ಕೆ ಎಂತಹ ಕಲ್ಲು ಎದೆಯನ್ನಾಗಲಿ ಕರಗಿಸಬಲ್ಲದೆಂಬ ನಮ್ಮ ಪ್ರಾಚೀನರ ವಚನದಲ್ಲಿ ಅಕ್ಷರಶಃ ನಾನು ಪೂರ್ತಿ ನಂಬಿಕೆಯುಳ್ಳವನು.

(ಅವರು ಹೇಳಿದ ಮಾತುಗಳಿಗೆ ನಿದರ್ಶನವಾಗಿ ದಕ್ಷಿಣ ಆಫ್ರಿಕದಲ್ಲಿ ಅವರ ಮೇಲೆ ಕೈಮಾಡಿದ್ದ ಮೀರ್ ಆಲಂ ಖಾನ್ ಎಂಬ ಪಠಾಣನ ಕಥೆಯನ್ನು ವಿವರಿಸಿದರು.) ಆ ಪಠಾಣ ಅನಂತರ ಪಶ್ಚಾತ್ತಾಪಗೊಂಡು ಸ್ನೇಹಪರನಾದನು. ಭಾಷಣವನ್ನು ಮುಂದುವರಿಸಿ ಹೀಗೆ ನುಡಿದರು ನಾನು ಪ್ರತೀಕಾರಮಾಡಿದ್ದರೆ ಇದು ಸಾಧ್ಯವಾಗುತ್ತಿರಲಿಲ್ಲ. ಇನ್ನೊಬ್ಬರ ಮನಸ್ಸನ್ನು ಶಾಂತರೀತಿಯಲ್ಲಿ ತಿರುಗಿಸುವ ವಿಧಾನಕ್ಕೆ ನನ್ನ ಆಚರಣೆಯನ್ನು ಸೂಕ್ತವಾದ ನಿದರ್ಶನವೆಂದು ಹೇಳಬಹುದು. ನಿಮ್ಮ ಶತ್ರುವಿನ ಮನಸ್ಸನ್ನು ಪ್ರೇಮದ ಮೂಲಕ ಒಲಿಸಿಕೊಳ್ಳಬೇಕೆಂಬ ಆಂತರಿಕ ಪ್ರೇರಣೆ ನಿಮ್ಮಲ್ಲಿಲ್ಲದಿದ್ದರೆ ಈ ಮಾರ್ಗದಿಂದ ಹಿಂದೆ ಸರಿಯಿರಿ. ಈ ಅಹಿಂಸೆಯ ವ್ಯವಹಾರ ನಿಮಗಲ್ಲ. ಆದರೆ ನೀವು ಈ ರೀತಿ ಪ್ರಶ್ನಿಸಬಹುದು: "ಕಳ್ಳರು, ದರೋಡೆಗಾರರು, ಅಸಹಾಯರಾದ ಸ್ತ್ರೀಯರ ಮಾನಭಂಗಮಾಡುವವರ ವಿಷಯ ಹೇಗೆ? ಖುದಾಯೀ ಖಿದ್ಮತ್‌ಗಾರನು ಇಂತಹವರ ಅಹಿಂಸೆಯನ್ನು ತೋರಬೇಕೇ?" ನನ್ನ ಉತ್ತರವಿಷ್ಟೆ: "ಖಂಡಿತವಾಗಿಯೂ ಹೌದು. ದಂಡಿಸುವುದು ಭಗವಂತನ ಕೆಲಸ. ಆತನೊಬ್ಬನೇ ಎಂದೂ ತಪ್ಪುಮಾಡಲಾರದ ತೀರ್ಪುಗಾರ. ಮಾನವನ ತೀರ್ಪುಗಳು ದೋಷಯುಕ್ತವಾದುವು. ಹಿಂಸೆಯು

ತ್ಯಾಜ್ಯವೆಂದರೆ—ಅನ್ಯಾಯ ನಡೆದರೆ ಅದನ್ನು ನೋಡುತ್ತ ತಟಸ್ಥನಾಗಿ ಅಥವಾ ಅಸಹಾಯನಾಗಿರುವುದೆಂದು ಅರ್ಥವಲ್ಲ. ನಮ್ಮ ಅಹಿಂಸೆ ಶುದ್ಧವಾಗಿದ್ದರೆ, ಅದರ ಮೂಲ ಪ್ರೇಮದಲ್ಲಿದ್ದರೆ ಅನ್ಯಾಯವನ್ನೆದುರಿಸಲು ಪಾಶವ ಶಕ್ತಿಯನ್ನು ಪ್ರಯೋಗಿಸುವುದಕ್ಕಿಂತಲೂ ಅಹಿಂಸೆ ಪರಿಣಾಮ ಕಾರಿಯಾದ ಉಪಾಯವಾಗಲೇಬೇಕು. ಇಂತಹ ದರೋಡೆಕಾರರನ್ನು ನೀವು ಕಂಡುಹಿಡಿದು ಅವರ ಮಾರ್ಗಗಳು ತಪ್ಪಾದುವೆಂದು ತೋರಿಸಿಕೊಟ್ಟು, ಈ ಪ್ರಯತ್ನದಲ್ಲಿ ನಿಮ್ಮ ಪ್ರಾಣವನ್ನಾದರೂ ಅರ್ಪಿಸುವ ಧೈರ್ಯ ನಿಮಗಿರ ಬೇಕೆಂದು ನಾನು ನಿರೀಕ್ಷಿಸುತ್ತೇನೆ."[೨೧]

## ೨೨. ರಾಜಕೋಟೆಯಲ್ಲಿ ಉಪವಾಸ ಕೈಗೊಳ್ಳುವುದಕ್ಕೆ ಪೂರ್ವಭಾವಿಯಾಗಿ ಗಾಂಧೀಜೀ ಕೊಟ್ಟ ಹೇಳಿಕೆ

[೧೯೩೯ರ ಮಾರ್ಚ್ ೩ನೆಯ ತಾರೀಖು, ರಾಜಕೋಟೆಯ ಠಾಕೂರ್ ಸಾಹೇಬರು ಕೊಟ್ಟ ವಚನ ಪಾಲಿಸದಿದ್ದರೆ, ಗಾಂಧೀಜೀ ಆಮರಣಾಂತ ಉಪವಾಸಮಾಡಲು ನಿಶ್ಚಯಿಸಿರುವರೆಂದು ತಿಳಿಯಿತು. ಉಪವಾಸ ಮಧ್ಯಾಹ್ನ ಹನ್ನೆರಡು ಘಂಟೆಗೆ ಆರಂಭವಾಗಬೇಕು. ಠಾಕೂರ್ ಸಾಹೇಬ ರಿಂದ ಹನ್ನೆರಡಕ್ಕೆ ಒಂದು ನಿಮಿಷ ಇರುವವರೆಗೂ ಯಾವ ಉತ್ತರವೂ ಬಂದಿರಲಿಲ್ಲ. ಅವರು ಬರೆದಿದ್ದ ಪತ್ರವನ್ನು ಪತ್ರಿಕೆಗಳಿಗೆ ಪ್ರಕಟನೆಗೆ ಕೊಡುವವರಾಗಿದ್ದರು. ಆದರೆ ಅದಕ್ಕೆ ಪೂರ್ವದಲ್ಲಿ ಅವರಿಗೆ ಪ್ರಿಯವಾದ "ವೈಷ್ಣವ ಜನತೋ" ಎಂಬ ಕೀರ್ತನೆಯನ್ನು ಮೊದಲು ಹಾಡಿಸಿದರು. ಅದಾದನಂತರ ತಾವು ಠಾಕೂರ್ ಸಾಹೇಬರಿಗೆ ಬರೆದ ಪತ್ರವನ್ನು ಪತ್ರಿಕೆಗಳ ಬಾತ್ಮೀದಾರರಿಗೆ ಕೊಟ್ಟರು. ಅದಾದಕೂಡಲೆ ಪತ್ರಿಕೆಗಳಿಗೆ ಒಂದು ಹೇಳಿಕೆ ಯನ್ನು ಹೇಳಿ ಬರೆಯಿಸಿದರು.]

ಭಾರವಾದ ಹೃದಯದಿಂದ ಠಾಕೂರ್ ಸಾಹೇಬರಿಗೆ ನಾನು ಬರೆದ ಪತ್ರವನ್ನು ಬಹಿರಂಗಪಡಿಸುತ್ತಿದ್ದೇನೆ. ಆದರೆ ಯಾತನೆಯಿಂದ ಕೂಡಿದ ಕರ್ತವ್ಯವನ್ನು ಮಾಡುವ ದುರದೃಷ್ಟ ನನ್ನಪಾಲಿಗೆ ಅನೇಕ ಬಾರಿ ಬಂದಿದೆ. ಇದೂ ಅಂತಹ ದುರದೃಷ್ಟ ಘಟನೆಗಳಲ್ಲೊಂದು. ನನ್ನ ಮಿತ್ರರೂ

ನನ್ನೊಂದಿಗೆ ಸಹಾನುಭೂತಿಯುಳ್ಳವರೂ ನನ್ನ ಜೊತೆಗೆ ತಮ್ಮ ಸಹಾನುಭೂತಿಯನ್ನು ತೋರಿಸಲು ಒಂದು ದಿನದ ಉಪವಾಸವನ್ನೂ ಸಹ ಮಾಡಲು ಖಂಡಿತ ತೊಡಗಬಾರದೆಂದು ನಾನು ಆಶಿಸುತ್ತೇನೆ. ಸತ್ಯಾಗ್ರಹದಂತೆ ಉಪವಾಸಮಾಡುವುದೂ ಸಹ ಬಹಳ ದುರುಪಯೋಗಕ್ಕೆ ಈಗ ಗುರಿಯಾಗುತ್ತಿದೆಯೆಂದು ನನಗೆ ಗೊತ್ತಿದೆ. ಅಲ್ಪ ನೆಪಗಳಿಗಾಗಿ ಜನರು ಉಪವಾಸವನ್ನು ಕೈಗೊಳ್ಳುವುದನ್ನು ನಾವು ನೋಡುತ್ತೇವೆ. ಅನೇಕ ವೇಳೆ ಇಂತಹ ಉಪವಾಸಗಳ ಹಿನ್ನೆಲೆಯಲ್ಲಿ ಹಿಂಸೆ ಇದೆ. ಇತರ ಕಾರಣಗಳಿಲ್ಲದಿದ್ದರೂ ಈ ಬಗೆಯ ಅರ್ಥವಿಲ್ಲದ ಅನುಕರಣಗಳನ್ನು ತಡೆಗಟ್ಟಲು, ಈ ಉಪವಾಸವನ್ನು ಆರಂಭಿಸುವುದರಲ್ಲಿ ನನ್ನ ಮನಸ್ಸು ಹಿಮ್ಮೆಟ್ಟುತ್ತಿತ್ತು, ಆದರೆ ಆಂತರಿಕ ಪ್ರೇರಣೆಗೆ ನಕಾರವೆಲ್ಲಿಯದು ? ಆದ್ದರಿಂದ ಇನ್ನು ಮುಂದೆ ನಿಜವಾದ ಅಥವಾ ಕಲ್ಪಿತವಾದ ಕಿರುಕುಳಗಳನ್ನೆದುರಿಸಲು ಉಪವಾಸ ಮಾಡಲಿಚ್ಛಿಸುವವರಿಗೆ ನನ್ನನ್ನು ಅನುಕರಿಸಬಾರದೆಂಬ ಎಚ್ಚರಿಕೆಯನ್ನು ಕೊಡುತ್ತೇನೆ. ಕೆಲವು ಬಲವಾದ ಸಿದ್ಧೌಷಧಗಳಂತೆ ಉಪವಾಸವನ್ನು ಕೆಲವು ಅಪೂರ್ವ ಸಂದರ್ಭಗಳಲ್ಲಿ ಪ್ರವೀಣರ ಸಲಹೆಯಂತೆ ಮಾತ್ರ ಸ್ವೀಕರಿಸಬಹುದು. ಪ್ರತಿಯೊಬ್ಬನೂ ತಾನೇ ಪ್ರವೀಣನೆಂದು ಭಾವಿಸಿಗೊಳ್ಳುವುದು ತಪ್ಪಾದೀತು, ಪಾಪವಾದೀತು.

ನಾನು ನನ್ನ ಎಳೆಯ ವಯಸ್ಸಿನಲ್ಲಿಯೇ ಆತ್ಮಶುದ್ಧಿಗಾಗಿ ಉಪವಾಸ ಕ್ರಮವನ್ನು ಮೊದಲು ಮಾಡಿದೆನೆಂಬ ವಿಷಯ ಸಾರ್ವಜನಕರಿಗೆ ತಿಳಿದಿರಲಿ. ಅನಂತರ ತಪ್ಪು ದಾರಿ ಹಿಡಿದ ನನ್ನ ಮಗನ ಸಲುವಾಗಿ ಒಂದು ದೀರ್ಘ ಕಾಲದ ಉಪವಾಸವನ್ನು ಮಾಡಿದೆನು. ಇದಾದ ಸ್ವಲ್ಪ ಕಾಲದ ನಂತರ ನನ್ನ ಆಪ್ತಮಿತ್ರನ ತಪ್ಪಿತಸ್ಥ ಮಗಳ ಸಲುವಾಗಿ ಮತ್ತಷ್ಟು ದೀರ್ಘವಾದ ಉಪವಾಸವನ್ನು ಕೈಗೊಂಡೆನು. ಈ ಎರಡು ಸಂದರ್ಭಗಳಲ್ಲಿಯೂ ನನ್ನ ಉಪವಾಸಗಳು ಸರಿಯೆಂದು ಪರಿಣಾಮಗಳಿಂದ ತಿಳಿದು ಬಂದಿತು. ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹ ಸಮರವನ್ನು ಸೇರಿದ ಕೆಲವು ಕರಾರುಬದ್ಧ ಕೂಲಿ ಜನರ (Indentured) ಸಂಕಷ್ಟಗಳನ್ನು ಪರಿಹರಿಸಲು ನಾನು ಮೊಟ್ಟಮೊದಲು ಸಾರ್ವಜನಿಕ ಉದ್ದೇಶದಿಂದ ಉಪವಾಸದ ಕ್ರಮವನ್ನು ಅನುಸರಿಸಿದ್ದು. ನಾನು ಈವರೆಗೆ ಕೈಗೊಂಡ

ಈ ಉಪವಾಸದ ಪ್ರಯೋಗದಲ್ಲಿ ಒಂದಾದರೂ ವ್ಯರ್ಥವಾದದ್ದು ನನಗೆ ನೆನಪಿಲ್ಲ. ಅಷ್ಟೇ ಅಲ್ಲದೆ ಈ ಎಲ್ಲ ಉಪವಾಸದ ಅವಧಿಗಳಲ್ಲಿಯೂ ಬೆಲೆ ಕಟ್ಟಲಾಗದ ಶಾಂತಿ, ಅನಂತವಾದ ಆನಂದಾನುಭವ ಆಗುತ್ತಿತ್ತು. ಭಗವಂತನ ಕೃಪೆಯ ಫಲವಾಗಿ ಉಪವಾಸವನ್ನು ಕೈಗೊಳ್ಳದಿದ್ದಲ್ಲಿ ಅದು ವ್ಯರ್ಥವಾದ ದೇಹದೊಡನೆ ಹೊಟ್ಟೆಯನ್ನು ಸುಡುವ ಕಾರ್ಯ ಮಾತ್ರವೇ ಆದೀತೆಂಬ ತೀರ್ಮಾನಕ್ಕೆ ಬಂದಿದ್ದೇನೆ.

ನಾನು ಹೇಳಬಯಸುವ ಎರಡನೆಯ ಮಾತೆಂದರೆ ಈ ಸಮಯದಲ್ಲಿ ಠಾಕೂರ್ ಸಾಹೇಬರ ವಿಷಯದಲ್ಲಾಗಲಿ ಅವರ ಸಲಹೆಗಾರರ ವಿಷಯದಲ್ಲಾಗಲಿ ರೆಸಿಡೆಂಟರ ವಿಷಯದಲ್ಲಾಗಲಿ ಕಟುವಾದ ಮಾತುಗಳಾಗಲಿ ಲೇಖನಗಳಾಗಲಿ ಇರಬಾರದು. ರೆಸಿಡೆಂಟರ ವಿಚಾರದಲ್ಲೂ, ಸಂಸ್ಥಾನದ ಅಧಿಕಾರಿಗಳ ವಿಚಾರದಲ್ಲೂ ನಾನು ತೀಕ್ಷ್ಣವಾದ ಭಾಷೆಯನ್ನು ಉಪಯೋಗಿಸಿದ್ದೇನೆ. ನಾನು ಅವರಿಗೆ ಅನ್ಯಾಯ ಮಾಡಿದ್ದ ಪಕ್ಷಕ್ಕೆ ಅದಕ್ಕೆ ಯಾವ ಪರಿಹಾರವನ್ನೊದಗಿಸಬೇಕೆಂದು ನನಗೆ ಗೊತ್ತಿದೆ. ಈ ವಿಷಾದ ಘಟನೆಯಲ್ಲಿ ಠಾಕೂರ್ ಸಾಹೇಬರ ಬಗೆಗಾಗಲಿ ಇತರ ಪಾತ್ರಧಾರಿಗಳ ಬಗೆಗಾಗಲಿ ಕಠಿಣವಾದ ಶಬ್ದ ಪ್ರಯೋಗ ಮಾಡಿದರೆ ಈ ಉಪವಾಸದಿಂದ ಯಾವ ಪರಿಣಾಮವಾಗಬೇಕೆಂದು ನಾವು ಆಶಿಸುವೆವೋ, ಅದನ್ನು ಕೆಡಿಸಿದಂತಾಗುವುದು.

ಗಂಭೀರವಾಗಿ ಕೈಗೊಂಡ ಒಂದು ಒಪ್ಪಂದ ಭಂಗವಾದರೆ ಇಂತಹ ಭಂಗದಿಂದ ಎಂತಹ ಪ್ರಬಲವಾದ ಕೇಡುಗಳುಂಟಾಗವುವೆಂಬುದನ್ನು ಎತ್ತಿ ತೋರಿಸಲು ಕಠಿಣವಾದ ಅಥವಾ ಕಹಿಯಾದ ಮಾತುಗಳು ಅನಾವಶ್ಯಕ. ಸಾರ್ವಜನಿಕರೂ ಪತ್ರಿಕಾಕರ್ತರೂ ಮಾಡಬಹುದಾದ ಉಪಕಾರವೇನೆಂದರೆ ಠಾಕೂರ್ ಸಾಹೇಬರ ವರ್ತನೆಯ ಬಗೆಗೆ ಅಸಮಾಧಾನವನ್ನು ಗಂಭೀರವಾಗಿ ವ್ಯಕ್ತಮಾಡುವುದು ಮತ್ತು ಸಾರ್ವಜನಿಕರು ಸುಸಂಸ್ಕೃತವಾದ ಅಭಿಪ್ರಾಯದ ಪ್ರಭಾವವೆಷ್ಟೆಂಬುದನ್ನು ಅವರಿಗೆ ಮನದಟ್ಟು ಮಾಡಿಸುವುದು.

ಎಲ್ಲ ಬಗೆಯ ಸತ್ಯಾಗ್ರಹ ಮತ್ತು ಉಪವಾಸ ಒಂದು ರೀತಿಯ ತ್ಯಾಗ. ಅದು ಪರಿಣಾಮಕಾರಿಯಾಗಬೇಕಾದರೆ ಕಹಿ ಇಲ್ಲದ ಉತ್ಕೃಷ್ಟ

ವಾದ ಸಾರ್ವಜನಿಕ ಅಭಿಪ್ರಾಯ ವ್ಯಕ್ತವಾಗಬೇಕು. ಉಪವಾಸ ನಾವು ಅಪೇಕ್ಷಿಸುವ ಫಲವನ್ನು ಕೊಡಬೇಕೆಂದು ಆತುರಬೇಡ. ಯಾವ ಭಗವಂತನ ಪ್ರೇರಣೆಯಿಂದ ಈ ಉಪವಾಸವನ್ನು ಆರಂಭಿಸಿರುವೆನೊ ಅವನು ಇದನ್ನು ಯಶಸ್ವಿಯಾಗಿ ಪೂರೈಸಲು ಶಕ್ತಿಯನ್ನೊದಗಿಸುವನು. ನಾನು ಬದುಕಿರುವವರೆಗೂ ನಾನಾಗಿ ಕೈಗೊಂಡಿರುವ ಮಾನವ ಸೇವೆಯ ಪವಿತ್ರ ಕಾರ್ಯವನ್ನು ಮುಂದುವರಿಸಿಕೊಂಡು ಹೋಗಬೇಕೆಂದು ಆತನ ಸಂಕಲ್ಪವಿದ್ದರೆ — ಯಾವ ಉಪವಾಸವೂ ಅದೆಷ್ಟೇ ದೀರ್ಘವಾದದ್ದಿರಲಿ ನನ್ನ ಶರೀರವನ್ನು ಕರಗಿಸಿ ಅಂತ್ಯಗೊಳಿಸಲಾರದು.

ದಿವಂಗತ ಮ್ಯಾಕ್‌ಡೊನಾಲ್ಡ್‌ರ ಕೋಮುವಾರು ಪ್ರಶ್ನೆಯ ತೀರ್ಪಿನ ವಿರುದ್ಧ ನಾನು ಉಪವಾಸವನ್ನು ಮಾಡಿದಾಗ, ಅನೇಕರು ಅವರಿಚ್ಛೆಗೆ ವಿರುದ್ಧವಾಗಿ ಉಪವಾಸಮಾಡಲು ಇದು ಪ್ರೇರಣೆ ಕೊಟ್ಟಿತೆಂದು ನನಗೆ ತಿಳಿದಿದೆ. ಇದು ನನಗೆ ನೋವನ್ನುಂಟುಮಾಡಿದೆ. ಈ ಉಪವಾಸದ ಸಂಬಂಧದಲ್ಲಿ ಅಂತಹುದೇನೂ ಆಗಲಾರದೆಂದು ನಾನು ನಂಬಿದ್ದೇನೆ. ಠಾಕೂರ್ ಸಾಹೇಬರು ಜನವರಿ ೨೬ನೆ ತಾರೀಖು ಹೊರಡಿಸಿದ ಪ್ರಕಟನೆ, ಅವರು ಡಿಸೆಂಬರ್ ೨೬ನೆ ತಾರೀಖು ಹೊರಡಿಸಿದ ಪ್ರಕಟನೆಯಲ್ಲಿ ಕೊಟ್ಟ ವಚನಕ್ಕೆ ಭಂಗವಾಯಿತೆಂದು ನಾನು ಮಾಡಿದ ಟೀಕೆ ತಪ್ಪೆಂದು ಯಾರಾದರು ಸಾರ್ವಜನಿಕ ಮುಖಂಡರು ಭಾವಿಸುವುದಾದರೆ ಅವರು ನನ್ನ ಟೀಕೆಯನ್ನೂ ಈ ಉಪವಾಸವನ್ನೂ ಖಂಡಿಸುವುದರಿಂದ ಒಂದು ಸ್ನೇಹಪರವಾದ ಕಾರ್ಯವನ್ನೇ ಮಾಡಿದಂತಾಗುವುದು. ಈ ಉಪವಾಸದ ಉದ್ದೇಶವೇನೊ ಠಾಕೂರ್ ಸಾಹೇಬರ ಹೃದಯವನ್ನು ಕರಗಿಸುವುದೇ—ಆದರೆ ಸಾರ್ವಜನಿಕ ಅಭಿಪ್ರಾಯದಿಂದ ಠಾಕೂರ್ ಸಾಹೇಬರನ್ನು ಒತ್ತಾಯಪಡಿಸುವುದು ಇದರ ಉದ್ದೇಶವಲ್ಲ. ಠಾಕೂರ್ ಸಾಹೇಬರ ವರ್ತನೆ ದೋಷರಹಿತವಾಗಿತ್ತೆಂದು ಯಾರು ಭಾವಿಸುವರೊ ಅಂತಹವರ ಅಭಿಪ್ರಾಯವನ್ನು ಬದಲಾಯಿಸುವಂತೆ ಬಲಾತ್ಕರಿಸುವುದೂ ಇದರ ಉದ್ದೇಶವಲ್ಲ.

ಮತ್ತೊಂದು ವಿಷಯವನ್ನು ನಾನು ಪ್ರಸ್ತಾಪಿಸಬೇಕು. ನನ್ನ ಪತ್ರದ ಮೊದಲನೆಯ ವಾಕ್ಯವೃಂದದಲ್ಲಿ ದರ್ಬಾರ್ ವೀರವಾಲಾರವರನ್ನು

ಕುರಿತು ಟೀಕೆ ಮಾಡಿದ್ದೇನೆ. ನಾನು ಇತರ ಮನುಷ್ಯರ ಲೋಪದೋಷಗಳನ್ನು ಬೇಗ ಕಾಣುವವನಲ್ಲವೆಂದು ನಿಜವಾಗಿ ಹೇಳಿಕೊಳ್ಳಬಲ್ಲೆ. ಏಕೆಂದರೆ ನನ್ನಲ್ಲೇ ಅನೇಕ ಲೋಪದೋಷಗಳಿವೆ ಮತ್ತು ಇತರರ ಔದಾರ್ಯ ದೃಷ್ಟಿ ನನಗೆ ಬೇಕಾಗಿದೆ. ಯಾರ ವಿಷಯದಲ್ಲೂ ಕಠಿಣವಾದ ರೀತಿಯಲ್ಲಿ ತೀರ್ಪು ಕೊಡಬಾರದೆಂದೂ ನನಗೆ ಕಾಣುವ ದೋಷಗಳ ವಿಷಯದಲ್ಲಿ ಸಹನೆಯನ್ನು ತಾಳಬೇಕೆಂದೂ ನಾನು ಕಲಿತಿದ್ದೇನೆ.

ದರಬಾರ್ ವೀರಾವಾಲಾ ಅವರ ವಿಷಯದಲ್ಲಿ ಏನಾಯಿತೆಂದರೆ ಅವರ ವಿರುದ್ಧ ಬಹಳ ಕಟುವಾದ ಹಾಗೂ ಗುರುತರವಾದ ದೂರುಗಳ ಒಂದು ದೊಡ್ಡ ಪ್ರವಾಹವೇ ನನ್ನನ್ನು ಮುಳುಗಿಸಿತು. ನಾನು ಅವರೊಡನೆ ನಡೆಸಿದ ಮಾತುಕತೆಗಳಲ್ಲಿ ಈ ದೂರುಗಳ ಪ್ರಸ್ತಾಪವನ್ನೂ ಸಹ ಮಾಡಿದ್ದೆ. ಈ ದೂರುಗಳ ವಿಷಯದಲ್ಲಿ ನಾನು ತನಿಖೆ ನಡೆಸಬಹುದೆಂದು ಅವರು ನನಗೆ ಆಹ್ವಾನವಿತ್ತರು. ಇದು ಅವರಿಗೆ ಗೌರವ ತರುವಂತಹ ಮಾತು. ನಾನು ಹಾಗೆ ಮಾಡುವೆನೆಂದು ಅವರಿಗೆ ಹೇಳಿದೆ. ಈ ಮಧ್ಯೆ ಈ ಉಪವಾಸ ಬಾರದಿದ್ದರೆ ಈ ತನಿಖೆಯನ್ನು ನಡೆಸಬೇಕೆಂಬುದೇ ನನ್ನ ಪೂರ್ಣ ಇಚ್ಛೆಯಾಗಿತ್ತು.

ಅವರ ವಿರುದ್ಧವಿರುವ ನಿರ್ದಿಷ್ಟವಾದ ಆರೋಪಣೆಗಳಿಗೆ ಋಜುವಾತನ್ನು ನನಗೆ ಒದಗಿಸಬೇಕೆಂದು ನಾನು ಮೊದಲೇ ಮಿತ್ರರನ್ನು ಕೇಳಿಕೊಂಡಿದ್ದೆ. ಆದರೆ ಮೂರು ದಿನ ಅವರೊಡನೆ ನಡೆಸಿದ ದೀರ್ಘವಾದ ಸಂಭಾಷಣೆಗಳಿಂದ ಅವರ ವಿರುದ್ಧ ನಾನು ಕೇಳಿದ್ದ ದೂರುಗಳ ಪರಿಣಾಮವಾಗಿ ನನ್ನ ಮನಸ್ಸಿನಲ್ಲಿ ರೂಪುಗೊಂಡಿದ್ದ ಅಭಿಪ್ರಾಯಗಳು ಸ್ಥಿರಗೊಂಡವು. ಈ ಸಂಭಾಷಣೆಗಳು ಒದಗಿಸಿದ ಸಾಕ್ಷ್ಯವೇ ಅವರ ಮೇಲೆ ಮಾಡಿರುವ ಪ್ರಬಲವಾದ ಆರೋಪಣೆಗಳನ್ನು ಸಿದ್ಧಪಡಿಸಲು ಸಾಕೆಂದು ನನಗೆ ತೋರಿತು.

ನನ್ನ ಪತ್ರದ ಮೊದಲನೆಯ ವಾಕ್ಯವೃಂದದಲ್ಲಿ ಹೇಳಿರುವುದು ನನ್ನ ಅಭಿಪ್ರಾಯವನ್ನು ತೀರ ಸೌಮ್ಯವಾಗಿ ಕಡಮೆ ಮಾಡಿಯೇ ತಿಳಿಸಿದೆ. ಅದನ್ನು ಬರೆಯಬೇಕಾದರೆ ನನ್ನ ಮನಸ್ಸಿಗೆ ಯಾತನೆ ಆಯಿತು. ಆದರೆ ಠಾಕೂರ್ ಸಾಹೇಬರನ್ನು ತನ್ನ ಅತ್ಯಧಿಕ ಪ್ರಭಾವಕ್ಕೆ ಆಳಾಗಿ ಮಾಡಿ

ಕೊಂಡಿರುವುದರ ಬಗೆಗೆ ಠಾಕೂರ್ ಸಾಹೇಬರಿಗೆ ನಾನು ಎಚ್ಚರಿಕೆ ಕೊಡುವುದು ನನ್ನ ಪವಿತ್ರ ಕರ್ತವ್ಯವಾದದ್ದರಿಂದ ಈ ಲೇಖನಕ್ಕೆ ಆವಶ್ಯಕತೆ ಇತ್ತು. ದರಬಾರ್ ವೀರವಾಲಾ ಅವರಿಗೆ ಈ ರೀತಿಯ ಪ್ರಭಾವ ಇರುವವರಿಗೂ ಜನರಿಗೆ ಶಾಂತಿ ಇಲ್ಲವೆಂದು ಕೆಲವರಲ್ಲಿ ಅನೇಕ ಜನ ನಿಸ್ಪೃಹರಾದವರೂ, ದೊಡ್ಡವರೂ ನನಗೆ ಬಾರಿ ಬಾರಿಗೂ ಹೇಳಿದ್ದಾರೆ.

ಈ ಮಾತಿನಲ್ಲಿ ಬಹಳ ಸತ್ಯವಿದೆ ಎಂದು ನನಗನಿಸುತ್ತದೆ. ನಾನು ಉಪವಾಸವನ್ನು ಆರಂಭಿಸುವ ತರುಣದಲ್ಲಿ ಸಾರ್ವಜನಿಕರಿಂದ ಈ ವಿಷಯ ಮುಚ್ಚಿಡುವುದು ತಪ್ಪಾದೀತು. ನಾನು ಖಾಸಗಿಯಾಗಿ, ವೈಯಕ್ತಿಕವಾಗಿ ಆತನಿಗೆ ಒಂದು ಪತ್ರವನ್ನು ಬರೆದು ಕಳುಹಿಸಿದ್ದೇನೆ. ನನ್ನ ಮಟ್ಟಿಗೆ ಹೇಳುವುದಾದರೆ ಆ ಪತ್ರ ಎಂದೂ ಬಹಿರಂಗವಾಗಲಾರದು. ಆದರೆ ನಾನು ಆತನಿಗೆ ನನ್ನ ನಮ್ರವಾದ ವಿಜ್ಞಾಪನೆಯನ್ನು ಮಾಡುತ್ತೇನೆ. ಇದರಲ್ಲಿ ಆತನನ್ನು ಬಲ್ಲವರು ತಮ್ಮ ದನಿಯನ್ನೂ ನನ್ನದರೊಡನೆ ಕೂಡಿಸ ಬೇಕೆಂದು ನಾನು ಆಶಿಸುತ್ತೇನೆ. ಠಾಕೂರ್ ಸಾಹೇಬರು ಈ ಪ್ರಭಾವದಿಂದ ತಪ್ಪಿಸಿಕೊಳ್ಳಲು ಕಷ್ಟವೇ ಆದರೂ ದರಬಾರ್ ವೀರವಾಲಾ ಅವರು ಈ ರೀತಿಯ ಪ್ರಭಾವ ಬೀರುವುದನ್ನು ನಿಲ್ಲಿಸಬೇಕು. ನಾನು ಹೆಚ್ಚಾಗಿ ಹೇಳ ಬಲ್ಲೆ. ಆದರೆ ಅದು ಸೂಕ್ತವಲ್ಲ.

ನಾನು ಕಾಥೆಯವಾಡದಿಂದ ಒಂದೂವರೆ ತಲೆಮಾರಿಗಿಂತಲೂ ಹೆಚ್ಚಾಗಿ ದೇಶಾಂತರಕ್ಕೆ ಹೋದವನಾದರೂ ಕಾಥೆಯವಾಡದ ರಾಜಕೀಯ ಎಷ್ಟು ಅಶುದ್ಧವೂ ಕೆಸರಿನಿಂದ ಕೂಡಿದ್ದೂ ಎಂದು ನಾನು ಬಲ್ಲೆ. ಈ ನತದೃಷ್ಟ ಉಪಪ್ರಾಂತ ಕುಟಿಲ ತಂತ್ರಗಳಿಗೆ ಕೆಟ್ಟ ಹೆಸರನ್ನು ಗಳಿಸಿದೆ, ಈ ನಾಲ್ಕು ದಿನಗಳಲ್ಲೇ ಆ ಮಾರಕ ಪ್ರಭಾವದ ಅನುಭವ ನನಗಾಗಿದೆ. ಎಷ್ಟೇ ಅಲ್ಪ ಪ್ರಮಾಣದಲ್ಲೇ ಆದರೂ ನನ್ನ ಉಪವಾಸ ಕಾಥೆಯವಾಡದ ರಾಜಕೀಯ ಶುದ್ಧೀಕರಣಕ್ಕೆ ಸಹಾಯಕವಾಗಲೆಂದು ನನ್ನ ಉತ್ಕಟವಾದ ಆಶೆ! ಕಾಥೆಯವಾಡದ ರಾಜಕುವರರೂ ರಾಜಕಾರಣಿಗಳೂ ನನ್ನ ಉಪ ವಾಸವನ್ನು ಉಪಯೋಗಿಸಿಕೊಂಡು, ಕಾಥೆಯವಾಡದಲ್ಲಿ ಶುದ್ಧ ಜೀವನ ವನ್ನು ನಡೆಸುವುದೇ ದುಸ್ತರವಾಗುವಂತೆ ಮಾಡಿರುವ ಈ ವಿಷಪೂರಿತ ವಾತಾವರಣದಿಂದುಂಟಾದ ವಿನಾಶಕಾರಿ ಪ್ರಭಾವದಿಂದ ಕಾಥೆಯವಾಡ ವನ್ನು ಸಂರಕ್ಷಿಸಬೇಕೆಂದು ನಾನು ಅವರನ್ನು ಬೇಡಿಕೊಳ್ಳುತ್ತೇನೆ.೨೨

# ೨೩. ಗಾಂಧೀ ಸೇವಾ ಸಂಘದ ವಾರ್ಷಿಕ ಸಭೆಯಲ್ಲಿ ಗಾಂಧೀಯವರು ಮಾಡಿದ ಭಾಷಣ

[೧೯೩೯ ರಲ್ಲಿ ಕಲ್ಕತ್ತೆಯಿಂದ ಚಂಪಾರಣ್ಯದಲ್ಲಿರುವ ಬೃಂದಾವನಕ್ಕೆ ಗಾಂಧೀ ಸೇವಾ ಸಂಘದ ಅಧಿವೇಶನವನ್ನು ಉದ್ಘಾಟಿಸಲು ಗಾಂಧೀಯವರು ತೆರಳಿದರು. ತ್ರಿವರ್ಣ ಧ್ವಜವನ್ನು ಹಾರಿಸುವ ಸಂದರ್ಭದಲ್ಲಿ, ಕಾಂಗ್ರೆಸ್ ಕಾರ್ಯಕರ್ತರನೇಕರು ಅಹಿಂಸಾ ತತ್ತ್ವವನ್ನು ಪಾಲಿಸುತ್ತಿಲ್ಲವೆಂದು ಬಾಬು ರಾಜೇಂದ್ರ ಪ್ರಸಾದರು ಹೇಳಿದರು. ಸತ್ಯ ಮತ್ತು ಅಹಿಂಸೆ ಸಾರ್ವತ್ರಿಕವಾಗಿ ಅನ್ವಯವಾಗುವ ತತ್ತ್ವಗಳೆಂದು ತಮ್ಮ ನಂಬಿಕೆಯನ್ನು ಒತ್ತಿ ಹೇಳಿದರು. ಅನಂತರ ಗಾಂಧೀಯವರು ಮಾತನಾಡಿದರು:]

ರಾಜಕೋಟೆಯನ್ನು ಬಿಡುವ ಸಮಯದಲ್ಲಿ ನಾನೊಂದು ಹೇಳಿಕೆಯನ್ನು ಕೊಟ್ಟೆ. ಅದರಲ್ಲಿ ಹೇಳಿರುವ ಒಂದೆರಡು ಮಾತುಗಳನ್ನು ಈ ದಿನದ ವಿಷಯವಾಗಿ ಆರಿಸಿಕೊಳ್ಳುತ್ತೇನೆ. ಅಹಿಂಸೆಯ ಮುಖ್ಯ ಅರ್ಥ—ಅಥವಾ ಸಾರ್ಥಕತೆ—ನಮ್ಮ ಎದುರಾಳಿಯನ್ನು ನಮ್ಮ ವಿಷಯದಲ್ಲಿ ಮತ್ತಷ್ಟು ಉದ್ಧತನನ್ನಾಗಿ ಮಾಡದೆ ಮೆತ್ತಗೆ ಮಾಡಬೇಕೆಂದು ಕಿಶೋರಲಾಲ್ ಮಶ್ರುವಾಲಾ ಕೊಟ್ಟ ವಿವರಣೆ ಸೂಕ್ತವಾಗಿದೆ. ಅಹಿಂಸೆ ಎದುರಾಳಿಯನ್ನು ಕರಗಿಸಬೇಕು. ಆತನ ಹೃದಯದಲ್ಲಿ ನಮ್ಮ ಪರವಾಗಿ ಮಿಡಿತವನ್ನುಂಟುಮಾಡಬೇಕು. ತನ್ನೆದುರಿಗೆ ಬರುವುದೆಲ್ಲವನ್ನೂ ಅಹಿಂಸೆ ನುಂಗಿಬಿಡುವುದಾದರೆ, ಅಹಿಂಸೆಯ ಶಕ್ತಿಯನ್ನು ಪರೀಕ್ಷೆಗೆ ಗುರಿಮಾಡುವ ಅವಕಾಶವೇ ಇರುವುದಿಲ್ಲ. ಅದನ್ನು ಪರೀಕ್ಷಿಸಬೇಕಾದರೆ, ಅದು ಹಿಂಸೆಯನ್ನೆದುರಿಸಿದಾಗಲೆ ಆಗಬೇಕು.

ಇದೆಲ್ಲವೂ ನನಗೆ ಗೊತ್ತಿತ್ತು, ಮತ್ತು ಇದನ್ನು ಆಚರಣೆಗೆ ತರಲು ನಾನು ಪ್ರಯತ್ನಿಸುತ್ತಿದ್ದೇನೆ. ಆದರೆ ಪೂರ್ಣಫಲಪ್ರದವಾದ ರೀತಿಯಲ್ಲಿ ಮಾಡಿದ್ದೇನೆಂದು ಹೇಳಲಾರೆ. ಯಾವಾಗಲೂ ನನ್ನ ಎದುರಾಳಿಗಳ ಹೃದಯವನ್ನು ಕರಗಿಸುವುದರಲ್ಲಿ ನಾನು ಜಯಗಳಿಸಿದ್ದೇನೆಂದೂ ಹೇಳಲಾರೆ. ಬಹಳ ತೀಕ್ಷ್ಣವಾದ ರೀತಿಯಲ್ಲಿ ರಾಜಕೋಟೆಯ ಘಟನೆ ಇದನ್ನು ನನಗೆ ಮನವರಿಕೆ ಮಾಡಿಸಿತು. ಇದುವರೆಗೂ ದರಬಾರ್ ವೀರವಾಲಾ ಅವರ

ಮನಸ್ಸನ್ನು ಪರಿವರ್ತನೆಗೊಳಿಸಲು ನಾವೇಕೆ ವಿಫಲರಾಗಿದ್ದೇವೆಂದು ನನ್ನಲ್ಲಿ ಪ್ರಶ್ನಿಸಿಕೊಳ್ಳುತ್ತಿದ್ದೆ. ಆತನೊಂದಿಗೆ ನಾವು ಅಹಿಂಸೆಯ ವಿಧಾನದಿಂದ ವ್ಯವಹರಿಸಲಿಲ್ಲವೆಂದು ನೇರವಾದ ಉತ್ತರ ದೊರೆಯಿತು. ನಾವು ಆತನನ್ನು ಬೈಗಳಿಗೆ, ಶಾಪಗಳಿಗೆ, ಗುರಿಮಾಡಿದ್ದೆವು. ಸತ್ಯಾಗ್ರಹಿಗಳು ಉಪಯೋಗಿಸುವ ಭಾಷೆಯ ವಿಚಾರದಲ್ಲಿಯೂ ನಾನು ಉದಾಸೀನನಾಗಿದ್ದೆ. ನನ್ನ ನಾಲಿಗೆಯನ್ನು ನಾನು ಬಿಗಿ ಹಿಡಿದಿರಬಹುದು. ಆದರೆ ಇತರರ ಮಾತಿನ ಮೇಲೆ ಆ ಹಿಡಿತವನ್ನು ಹಾಕಿರಲಿಲ್ಲ.

ರೆಸಿಡೆಂಟರಾದ ಮಿ. ಗಿಬ್ಸನ್‌ರನ್ನು ನಾನು ಭೇಟಿಯಾದಾಗ ಸಮಿತಿಯ ರಚನೆಯನ್ನು ಠಾಕೂರ್ ಸಾಹೇಬರಿಗೇ ಬಿಡೋಣವೆಂದು ನಾನು ಸಲಹೆ ಮಾಡಿದೆ. ಇದು ಉದಾರನಾದ ಸೂಚನೆ ಎಂದು ಮಿ. ಗಿಬ್ಸನ್ ಒಪ್ಪಿಕೊಂಡರು. ಈ ವಿಚಾರ (ನಾವು ಅಹಿಂಸಾ ವಿಧಾನದಲ್ಲಿ ವ್ಯವಹರಿಸಲಿಲ್ಲವೆಂಬುದು) ಆಗ ನನ್ನ ಮನಸ್ಸಿಗೆ ಥಟ್ಟನೆ ಹೊಳೆಯಿತು. ಇದೊಂದು ಹೊಸ ವಿಧಾನವೆಂದು ನಾನು ಕರೆದಿರುವುದನ್ನು ಆಗ ನಾನು ಕಂಡುಕೊಂಡೆ. ಅದರಲ್ಲಿ ಅಪಾಯವಿಲ್ಲದೆ ಇಲ್ಲ: ಏಕೆಂದರೆ ನಡೆಯುತ್ತಿದ್ದ ವ್ಯವಹಾರಕ್ಕೆಲ್ಲ ನಾನು ತಡೆಹಾಕಬೇಕಾಯಿತು. ರಾಜಕೋಟೆಯಲ್ಲಿ ಹೋರಾಟವಾಗುತ್ತಿದ್ದಾಗ ನಾನು ಉಪವಾಸಮಾಡುತ್ತಿದ್ದ ಕಾಲದಲ್ಲಿ ಚಕ್ರವರ್ತಿಯ ಪ್ರತಿನಿಧಿಯ ಮಧ್ಯಸ್ತಿಕೆಯನ್ನು ಕೋರಿದ್ದೆ. ಅನಂತರ ರಾಜಕೋಟೆಯಲ್ಲಿ ಆ ಪ್ರತಿನಿಧಿಯ ಪ್ರತಿನಿಧಿಯಾದ ರೆಸಿಡೆಂಟರ ಮಧ್ಯಸ್ತಿಕೆಯನ್ನು ಕೋರುತ್ತಿದ್ದೇನೆ. ನಾನು ಮೇಲೆ ಹೇಳಿರುವ ಉದಾರವಾದ ಸಲಹೆಯನ್ನು ಮಾಡಿದಾಗ ಸಾರ್ವಭೌಮ ಸರಕಾರವನ್ನು ಮರೆತು, ಸಂಸ್ಥಾನದಲ್ಲಿರುವ ಅಧಿಕಾರಿಯ ಕಡೆಗೇ ನನ್ನ ಗಮನವನ್ನು ಏಕೆ ನಿಲ್ಲಿಸಬಾರದೆಂದು ತೋರಿತು. ಆದರೆ ಈ ಸಾಹಸಕ್ಕೆ ಪ್ರಾಯಶಃ ಧೈರ್ಯ ಸಾಲದು. ಸಾರ್ವಭೌಮ ಸರಕಾರದ ಮುಂದೆ ಈ ರಾಜಕೋಟೆಯ ವ್ಯವಹಾರವನ್ನು ತೆಗೆದುಕೊಂಡು ಹೋಗಬಾರದೆಂದಾಗಲಿ, ಗ್ವೈಯರ್ ಅವರ ತೀರ್ಪನ್ನು ಜನರು ಹರಿದುಹಾಕಬೇಕೆಂದಾಗಲಿ ಸಂಸ್ಥಾನದೊಂದಿಗೆ ಎಲ್ಲ ವ್ಯವಹಾರವನ್ನೂ ಹೊಸ ವ್ಯವಹಾರದಂತೆ ಆರಂಭಿಸಬೇಕೆಂದಾಗಲಿ ನಾನು ಇನ್ನೂ ನಿರ್ಧಾರಕ್ಕೆ ಬಂದಿಲ್ಲ. ಹಾಗಾದ ಪಕ್ಷಕ್ಕೆ ನನ್ನ ಸತ್ಯಾಗ್ರಹವನ್ನು ಕೇವಲ

ಸಂಸ್ಥಾನವನ್ನು ಮಾತ್ರ ಉದ್ದೇಶಿಸಿ ಮಾಡದೇಕಾಗುವುದು : ರಾಜಕೋಟೆ ಅಧಿಕಾರಿಗಳ ಮನಸ್ಸನ್ನು ಪರಿವರ್ತಿಸುವ ಪ್ರಯತ್ನದಲ್ಲಿ ನನ್ನ ಪ್ರಾಣ ವನ್ನೇ ಅರ್ಪಿಸಬೇಕಾದೀತು. ಆಗ ನನ್ನ ಪ್ರಯೋಗಗಳನೆಲ್ಲ ರಾಜಕೋಟೆ ಯೆಂಬ ಅನುಪಮವಾದ ಪ್ರಯೋಗಶಾಲೆಯಲ್ಲೇ ನಡೆಸಬೇಕು. ಅಹಿಂಸಾ ಶಾಸ್ತ್ರದ ದೃಷ್ಟಿಯಿಂದ ಈ ಪ್ರಯೋಗಗಳಿಗೆ ಹೆಚ್ಚು ಪೂರ್ಣತೆ ಇರುತ್ತದೆ. ನಾನು ವಿಷಣ್ಣನಾಗಿರುವ ಪಕ್ಷಕ್ಕೆ—ನಿಜವಾಗಿಯೂ ಇದು ಹೃದಯ ದೌರ್ಬಲ್ಯವೇ ಆದರೆ— ನನ್ನ ಅಹಿಂಸೆಯಲ್ಲಿ ಏನೋ ಲೋಪವಿದೆ.

ಇನ್ನು ಕಾಂಗ್ರೆಸ್ಸಿನಲ್ಲಿರುವ ಭ್ರಷ್ಟಾಚಾರಗಳ ವಿಷಯ ತೆಗೆದುಕೊಳ್ಳಿ. ಕಾಂಗ್ರೆಸ್ಸಿನಲ್ಲಿ ಈ ದೋಷಗಳು ಏಕಿರಬೇಕು? ಇಷ್ಟು ಭ್ರಷ್ಟಾಚಾರಗಳ ನ್ನಿಟ್ಟುಕೊಂಡು ನಾವು ಕಾಂಗ್ರೆಸ್ಸಿನವರೆಂದು ಅನಿಸಿಕೊಳ್ಳಲು ಅರ್ಹರೆ? ನಿಮ್ಮಲ್ಲಿ ಕೆಲವರಿಗೆ 'ಗಾಂಧೀ ಅನುಯಾಯಿಗಳು' ಎಂಬ ಹೆಸರು ಬಂದಿದೆ. 'ಗಾಂಧೀ ಅನುಯಾಯಿ' ಎಂಬ ಹೆಸರು ಇಟ್ಟುಕೊಳ್ಳತಕ್ಕದ್ದಲ್ಲ. ಅದ ಕ್ಕಿಂತಲೂ 'ಅಹಿಂಸಾ ಅನುಯಾಯಿ' ಎಂದು ಏಕೆ ಆಗಬಾರದು? ಏಕೆಂ ದರೆ ಗಾಂಧೀ ಒಳ್ಳೆಯದು ಮತ್ತು ಕೆಟ್ಟದು---ಇವುಗಳ ಮಿಶ್ರಣ; ದೌರ್ಬಲ್ಯ, ಮತ್ತು ಬಲಗಳ ಮಿಶ್ರಣ; ಹಿಂಸೆ ಮತ್ತು ಅಹಿಂಸೆಗಳ ಮಿಶ್ರಣ. ಆದರೆ ಅಹಿಂಸೆಯಲ್ಲಿ ಬೆರಕೆ ಇಲ್ಲ. 'ಅಹಿಂಸಾ ಅನುಯಾಯಿ' ಎಂದು ಅನಿಸಿಕೊಂಡರೆ ನೀವು ಶುದ್ಧವಾದ ಅಹಿಂಸೆಯನ್ನು ಆಚರಿಸುತ್ತೇ ವೆಂದು ಹೇಳಬಲ್ಲಿರಾ? ನಿಮ್ಮ ಎದುರಾಳಿಗಳ ಬಾಣಗಳು ನಿಮ್ಮ ಎದೆಗಳನ್ನು ನಾಟಿದರೂ ಯಾವ ಪ್ರತೀಕಾರವನ್ನೂ ಮಾಡದೆ ಇರುವೆವೆಂದು ಹೇಳ ಬಲ್ಲಿರಾ? ಅವರು ನಿಮ್ಮನ್ನು ಟೀಕಿಸುವಾಗ ನಿಮಗೆ ಅದರಿಂದ ಕೋಪ ಬರುವುದಿಲ್ಲವೆಂದೂ ನಿಮ್ಮ ಮನಸ್ಸು ಕಲಕುವುದಿಲ್ಲವೆಂದೂ ಹೇಳ ಬಲ್ಲಿರಾ? ನಿಮ್ಮಲ್ಲಿ ಅನೇಕರು ಹೀಗೆ ಹೇಳಲಾರದವರೆಂದೇ ನಾನು ದುಃಖ ದಿಂದ ಒಪ್ಪಿಕೊಳ್ಳಬೇಕು.

ಇಷ್ಟು ದೂರ ಅಹಿಂಸೆಯ ಅಭ್ಯಾಸವನ್ನು ಮಾಡಿರುವುದಾಗಿ ನೀವೆಂದೂ ಹೇಳಿಕೊಳ್ಳಲಿಲ್ಲವೆಂದು ನೀವು ಉತ್ತರ ಹೇಳಬಹುದು. ಹಾಗಾದರೆ ಅಷ್ಟರ ಮಟ್ಟಿಗೆ ನನ್ನ ಆಚರಣೆಯಲ್ಲಿ ಏನೋ ನ್ಯೂನತೆ ಇತ್ತೆಂದು ನಾನು ನನ್ನ ಲೋಪವನ್ನು ಒಪ್ಪಿಕೊಳ್ಳುತ್ತೇನೆ. ಅಹಿಂಸಾ

ಪಾಲನೆಯಲ್ಲಿ ಸ್ವಂತ ಲೋಪಗಳನ್ನು ದೊಡ್ಡದನ್ನಾಗಿ ಕಾಣಬೇಕು. ಎದುರಾಳಿಯ ಲೋಪಗಳನ್ನು ಸಣ್ಣದನ್ನಾಗಿ ಕಾಣಬೇಕು. ತನ್ನ ಕಣ್ಣಿನಲ್ಲಿರುವ ಧೂಳಿನ ಕಣವನ್ನು ದೂಲದಂತೆಯೂ, ಎದುರಾಳಿಯ ಕಣ್ಣಿನಲ್ಲಿದ ದೂಲವನ್ನು ಧೂಳಿನ ಕಣವಾಗಿಯೂ ಕಾಣಬೇಕು. ನಾವು ಇದಕ್ಕೆ ತೀರ ವಿರೋಧವಾಗಿ ನಡೆದುಕೊಂಡಿದ್ದೇವೆ.

ದೇಶೀಯ ಸಂಸ್ಥಾನಗಳ ವಿಷಯದಲ್ಲಿ ಆಡಳಿತವನ್ನು ಸುಧಾರಿಸಿ, ಅರಸರ ಮನಸ್ಸನ್ನು ಒಳ್ಳೆಯ ದಾರಿಗೆ ಸೌಮ್ಯಮಾರ್ಗದಿಂದ ತಿರುಗಿಸಲು ಇಚ್ಛಿಸಿದ್ದೇವೆ, ಅವರ ನಾಶವನ್ನು ಬಯಸಿಲ್ಲ. ಆದರೆ ನಮ್ಮ ಮಾತುಗಳು ಅನೇಕ ವೇಳೆ ಈ ಧೋರಣೆಗೆ ವಿರುದ್ಧವಾಗಿವೆ.

ರಾಜಕೋಟೆಯ ಬಗೆಗೆ ನಾನು ಆ ಹೇಳಿಕೆಯನ್ನು ಕೊಟ್ಟಿದ್ದರೂ, ರಾಜಕೋಟೆಯನ್ನು ಅತಂತ್ರ ಸ್ಥಿತಿಯಲ್ಲಿ ಬಿಟ್ಟು ಹೊರಟುಹೋಗಲಾರೆನೆಂದು ನಿಮಗೆ ಆಶ್ವಾಸನಕೊಡುತ್ತೇನೆ. ನನ್ನ ಸಹೋದ್ಯೋಗಿಗಳನ್ನು ಕೈಬಿಟ್ಟು ಅವರನ್ನು ಅಧೈರ್ಯಕ್ಕೂ ಗೊಂದಲಕ್ಕೂ ಗುರಿಮಾಡಲಾರೆ. ಹಾಗೆ ಮಾಡಿದ್ದೇ ಆದರೆ ನನ್ನ ಅರುಳು ಮರಳು ಸ್ಥಿತಿ ಅದರಿಂದ ಎದ್ದು ಕಾಣುವುದು. ಆದರೆ ನಾನು ಅರುಳು ಮರುಳಾಗಿರುವ ಸೂಚನೆ ನನಗೇನೂ ತೋರುವುದಿಲ್ಲ. ಇದಕ್ಕೆ ಬದಲಾಗಿ ಇಲ್ಲಿನ ಕಾರ್ಯಕರ್ತರು ದಿನೇದಿನೇ ಶಕ್ತಿಯುತರಾಗಿ ಬೆಳೆಯಬೇಕೆಂದು ಪ್ರಾರ್ಥಿಸುತ್ತಿದ್ದೇನೆ. ನಮ್ಮ ಕ್ರಿಯಾ ವಿಧಾನದಲ್ಲಿ ಮೂಲಭೂತವಾದ ಬದಲಾವಣೆಯಾಗಬೇಕೆಂಬುದೇ ನನ್ನ ಪ್ರಾರ್ಥನೆ.

ಇಷ್ಟನ್ನು ಹೇಳಿದ ಮೇಲೆ ಗಾಂಧೀ ಸೇವಾ ಸಂಘದ ಧೋರಣೆಯನ್ನು ಕುರಿತು ವಿಚಾರ ಮಾಡುತ್ತೇನೆ. ನಾನು ಈವರೆಗೂ ಹೇಳಿದ್ದನ್ನು ನೀವು ಅರ್ಥಮಾಡಿಕೊಂಡಿದ್ದರೆ, ನಮ್ಮಲ್ಲಿ ಪುನರ್ವ್ಯವಸ್ಥೆಯಾಗಬೇಕೆಂಬುದನ್ನು ನೀವು ಮನಗಾಣುವಿರಿ. ಆತ್ಮಪರೀಕ್ಷಣವನ್ನು ನಾವು ಕೂಲಂಕಷವಾಗಿ ಮಾಡಿಕೊಳ್ಳಬೇಕು. ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದೇವೆಯೋ ಎಂದು ತಿಳಿದುಕೊಳ್ಳಬೇಕು. ಆಗದಿದ್ದರೆ—ನಮ್ಮ ಯೋಗ್ಯತೆ ಕಡಿಮೆಯಾಗಿದ್ದರೆ—ನಮ್ಮ ಸಂಖ್ಯೆಯನ್ನು ಕಡಮೆಮಾಡುವುದು ಒಳ್ಳೆಯದು. ಅಂತರ್ಯದಿಂದ ಸತ್ಯ ಮತ್ತು ಅಹಿಂಸೆಗಳಲ್ಲಿ ಶ್ರದ್ಧೆ ಇರುವ ಇಪ್ಪತ್ತು ಜನ

ಉದಾಸೀನರಾದ ಅಷ್ಟಕ್ಕಷ್ಟೇ ಇರುವ ಇನ್ನೂರು ಜನರಿಗಿಂತಲೂ ಉತ್ತಮ. ಇಂತಹವರು ಎಂದೋ ಒಂದು ದಿನ ನಮ್ಮನ್ನು ನಾಶದ ಕಡೆ ಒಯ್ಯುವರು. ಇಪ್ಪತ್ತು ಜನರಾದರೂ ಎಂದೋ ಒಂದು ದಿನ ಸರಿಯಾದ ಇನ್ನೂರು ಜನರಾಗಿ ವರ್ಧಿಸುವಂತೆ ಮಾಡುವರು.

ಈ ಸಂಘದಲ್ಲಿಯೂ ಭ್ರಷ್ಟಾಚಾರ ಪ್ರವೇಶಿಸಿಲ್ಲವೆ? ಸದಸ್ಯರು ಕಪಟ ವರ್ತನೆ, ಸಂಶಯ, ಪರಸ್ಪರ ಅವಿಶ್ವಾಸಕ್ಕೆ ಎಡೆ ಕೊಟ್ಟಿಲ್ಲವೆ? ನನಗೆ ಎಲ್ಲ ಸದಸ್ಯರ ಪರಿಚಯವಿಲ್ಲ. ಕೆಲವರ ಹೆಸರನ್ನು ಮಾತ್ರ ನಾನು ಬಲ್ಲೆ. ಪ್ರತ್ಯಕ್ಷ ಅರಿವಿನಿಂದ ನಾನು ಮಾತಾಡುತ್ತಿಲ್ಲ. ಮಿತವಾದ ಅನುಭವದಿಂದ ಮಾತಾಡುತ್ತಿದ್ದೇನೆ. ದುರ್ದೈವದಿಂದ ಜಮನಾಲಾಲರು ಇಂದು ಇಲ್ಲಿಲ್ಲ. ಅವರು ಸಂಪರ್ಕ ಹೊಂದಿರುವ ಅನೇಕ ಸಂಸ್ಥೆಗಳ ಅನುಭವವನ್ನು ಅನೇಕ ವೇಳೆ ನನಗೆ ತಿಳಿಸಿದ್ದಾರೆ. ಅವುಗಳನ್ನು ಸುಗಮವಾಗಿ ನಡೆಸಿಕೊಂಡು ಹೋಗಲು ಏಕೆ ಕಷ್ಟವಾಗುತ್ತದೆ? ನಮ್ಮ ಕೆಲಸ ಕಾರ್ಯಗಳನ್ನು ನಿರ್ವಹಿಸಲು ನಮ್ಮ ಕಾರ್ಯಕರ್ತರನ್ನು ದೇಶದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ವರ್ಗಾಯಿಸಲು ನಮಗೇಕೆ ಭರವಸೆ ಸಾಲದಾಗಿದೆ?

ಇವೆಲ್ಲವನ್ನು ನಿಮ್ಮ ಮೇಲೆ ದೋಷಾರೋಪಣೆಮಾಡಬೇಕೆಂದು ನಾನು ಹೇಳುತ್ತಿಲ್ಲ. ಶಿಸ್ತಿನ ಆವಶ್ಯಕತೆಯನ್ನೂ ನಮ್ಮ ತತ್ತ್ವಗಳನ್ನು ಎಷ್ಟು ನಿಷ್ಠೆಯಿಂದ ಪಾಲಿಸಬೇಕೆಂಬುದನ್ನೂ ನಿಮಗೆ ಚೆನ್ನಾಗಿ ಮನದಟ್ಟಾಗಬೇಕೆಂದು ಈ ಪ್ರಸ್ತಾವವನ್ನು ಮಾಡುತ್ತಿದ್ದೇನೆ. ಸತ್ಯಾಗ್ರಹಿಯಲ್ಲಿ ಭಗವದ್ಭಕ್ತಿ ಕಳಕಳಿಸುತ್ತಿರಬೇಕು. ಏಕೆಂದರೆ ಇದರ ಹೊರತು ಅವನಿಗೆ ಬೇರೆ ಬಲವಿಲ್ಲ. ಆ ಭಕ್ತಿ ಇಲ್ಲವಾದರೆ ಅವನು ಸತ್ಯಾಗ್ರಹವನ್ನು ಹೇಗೆ ಕೈಗೊಂಡಾನು? ನಮ್ಮಲ್ಲಿ ಯಾರಿಗೆ ಈ ಬಗೆಯ ಭಕ್ತಿ ಇಲ್ಲವೊ ಅಂತಹವರು ಗಾಂಧೀ ಸೇವಾ ಸಂಘವನ್ನು ಬಿಡಬೇಕೆಂದು ನಾನು ಕೇಳಿಕೊಳ್ಳುವೆನು. ಅವರು ಸತ್ಯಾಗ್ರಹದ ಮಾತನ್ನು ಮರೆತು ಬಿಡಲಿ.

ನಿಮ್ಮಲ್ಲಿ ಎಷ್ಟು ಜನರಿಗೆ ಚರಖಾದಲ್ಲಿ ಅಂತರಂಗ ಶ್ರದ್ಧೆ ಇದೆ? ಅದು ಅಹಿಂಸೆಯ ಪ್ರತೀಕವೆಂದು ನಿಮಗೆ ನಂಬಿಕೆ ಇದೆಯೇ? ನಮಗೆ ಆ ಶ್ರದ್ಧೆ ಇದ್ದರೆ ನಮ್ಮ ನೂಲುವ ಕಾರ್ಯ ತನ್ನದೇ ಆದ ಒಂದು ಶಕ್ತಿಯನ್ನು ಪಡೆದಿದ್ದೀತು. ಶಾಂತಿಯುತ ಶಾಸನೋಲ್ಲಂಘನಕ್ಕಿಂತಲೂ ನೂಲುವುದು ಶಕ್ತಿ

ಯುತವಾದದ್ದು. ಶಾಸನೋಲ್ಲಂಘನದಿಂದ ರಾಗದ್ವೇಷಗಳನ್ನು ಕೆರಳಿಸುವ ಸಂಭವವಿದೆ. ನೂಲುವ ಕಾರ್ಯದಲ್ಲಿ ಅಂತಹುದೇನೂ ಇಲ್ಲ. ಇಪ್ಪತ್ತು ವರ್ಷಗಳ ಹಿಂದೆ ಚರಖಾದಲ್ಲಿ ನನಗಿದ್ದ ಶ್ರದ್ಧೆಯನ್ನು ಸಾರಿ ಹೇಳಿದೆನು. ಈ ಇಪ್ಪತ್ತು ವರ್ಷಗಳ ಅನುಭವದ ಬಲದಿಂದ ಮತ್ತೆ ಅದನ್ನೇ ಸಾರು ತ್ತಿದ್ದೇನೆ. ನಿಮ್ಮಲ್ಲಿ ಈ ಶ್ರದ್ಧೆ ಇಲ್ಲದಿದ್ದರೆ ನೀವು ಸತ್ಯಾಗ್ರಹ ವಿಚಾರವನ್ನು ಮರೆತುಬಿಡಬೇಕೆಂದು ಮನವಿ ಮಾಡುವೆನು.

ಇಲ್ಲಿಂದ ಐದು ಮೈಲಿ ದೂರದವರೆಗಿರುವ ಹಳ್ಳಿಗಳಲ್ಲಿ ಚರಖಾದ ಕಾರ್ಯ ಆರಂಭಿಸಿರುವುದಾಗಿ ಪ್ರಜಾಪತಿ ಮಿಶ್ರ ಅವರು ಹೇಳಿದರು. ಇದರಲ್ಲಿ ಹೆಮ್ಮೆ ಪಡೆಯತಕ್ಕ ವಿಷಯವೇನಿದೆ? ಲಕ್ಷ್ಮೀಬಾಬು ಅವರು ಒಂದು ಒಳ್ಳೆಯ ಪ್ರದರ್ಶನವನ್ನು ಏರ್ಪಡಿಸಿದ್ದಾರೆ. ಆದರೆ ನನ್ನನ್ನು ಸಂತೋಷಭರಿತನನ್ನಾಗಿ ಮಾಡುವಂತಹ ವಿಷಯ ಅದರಲ್ಲೇನೂ ಇರಲಿಲ್ಲ. ಬಿಹಾರಿನಲ್ಲಿ ಅನೇಕ ಉತ್ತಮ ಕಾರ್ಯಕರ್ತರಿರುವರೆಂದು ಹೆಮ್ಮೆಗೊಳ್ಳು ತ್ತಾರೆ. ಇಂತಹ ಪ್ರಾಂತದಲ್ಲಿ ಚರಖಾ ಇಲ್ಲದ ಒಂದು ಮನೆಯೂ ಇರಬಾರದು. ಚರಖಾದ ಶಕ್ತಿ ಎಷ್ಟೆಂದು ನಾವು ಅರಿತವರಾದರೆ ಇಡಿಯ ಪ್ರಾಂತವೇ ಹೊಸ ರೂಪವನ್ನು ತಾಳುವಂತೆ ನಾವು ಮಾಡಬಹುದು. ತಮ್ಮ ರೊಟ್ಟಿಗಾಗಿ ನೂಲಬೇಕಾಗಿರುವ ನಮ್ಮ ಹಸಿದಿರುವ ಸಾವಿರಾರು ಸೋದರಿಯರ ಮಾತನ್ನು ನಾನು ಹೇಳುತ್ತಿಲ್ಲ. ಯಾರು ಸತ್ಯ ಮತ್ತು ಅಹಿಂಸೆಯಲ್ಲಿ ಶ್ರದ್ಧೆಯುಳ್ಳವರೆಂದು ಹೇಳಿಕೊಳ್ಳುತ್ತಿರುವರೊ ಅಂತಹ ವರ ವಿಚಾರ ಹೇಳುತ್ತಿದ್ದೇನೆ. ಚರಖಾ ಅಹಿಂಸೆಯ ಪ್ರತೀಕವೆಂದು ಅವರು ಮನಗಂಡ ಕೂಡಲೆ ಅವರಿಗೆ ಅದೊಂದು ಮಾರ್ಗಸೂಚಕ ಬೆಳಕಾಗಿ ಪರಿಣಮಿಸುವುದು. ಅವರ ಆಚರಣೆಯನ್ನು ಸ್ಫೂರ್ತಿಗೊಳಿಸುವುದು. ವ್ಯರ್ಥವಾಗಿ ಕಾಲಹರಣ ಮಾಡುವುದು ಅಪರಾಧವೆಂದು ಅವರು ಎಣಿಸು ವರು. ಅವರ ಮಾತಿನಲ್ಲಿ ಯಾವ ದೌರ್ಜನ್ಯವೂ ಇರಲಾರದು. ಒಂದಾದರೂ ವೃಥಾ ಚಿಂತನೆಯನ್ನು ಅವರು ಮಾಡಲಾರರು.

ಚರಖಾ ಒಂದು ಜಡ ಪದಾರ್ಥವೇ ಆದರೂ, ಅದರಲ್ಲಿ ಕೆಲವು ಗುಣಗಳನ್ನು ನಾವು ಆವಾಹನೆ ಮಾಡಿದ ಕೂಡಲೆ ಅದೊಂದು ಚೇತನಾ ಮಯ ವಸ್ತುವಾಗುವುದು. ರಾಮನಾಮವೂ ಸಹ ಒಂದು ಜಡ ವಸ್ತು.

ಆದರೆ ಕೋಟ್ಯಂತರ ಜನರು ಈ ನಾಮ ಜಪವನ್ನು ಮಾಡಿ ಅದನ್ನು ಪವಿತ್ರವನ್ನಾಗಿ ಮಾಡಿರುವುದರಿಂದ ಈ ನಾಮವು ಭಗವಂತನ ಸಜೀತನ ಪ್ರತೀಕವಾಗಿದೆ. ಒಬ್ಬ ಪಾಪಿಯೂ ಚರಕಾವನ್ನು ತಿರುಗಿಸಿ ದೇಶದ ಐಶ್ವರ್ಯದ ವೃದ್ಧಿಗೆ ತನ್ನ ಕಾಣಿಕೆಯನ್ನು ಕೊಡಬಹುದು. ಚರಕಾದ ಇಂಪಾದ ಧ್ವನಿಯಿಂದ ತಮ್ಮ ಕಾಮ ಕ್ರೋಧಾದಿಗಳ ಶಮನವಾದುವೆಂದು ನನಗೆ ಕೆಲವರು ಹೇಳಿದ್ದಾರೆ.

ಈ ಬಗೆಯ ಶಕ್ತಿಯನ್ನು ನಾನು ಚರಕಾದಲ್ಲಿ ಪ್ರತಿಷ್ಠಿಸಿರುವುದರಿಂದ ಭಾರತದಲ್ಲಿ ನನ್ನ ಕಲ್ಪನೆಗೆ ಅನುಗುಣವಾದ ಸತ್ಯಾಗ್ರಹಕ್ಕೆ ಅದು ಅಷ್ಟು ಅಗತ್ಯವಾಗಿದೆ. ನಾನು ೧೯೦೯ರಲ್ಲಿ ಹಿಂದ್ ಸ್ವರಾಜ್ಯ ಎಂಬ ಪುಸ್ತಕವನ್ನು ಬರೆದಾಗ ನಾನು ಚರಕಾವನ್ನು ನೋಡಿಯೇ ಇರಲಿಲ್ಲ. ಕೈಮಗ್ಗವನ್ನೇ ಚರಕಾ ಎಂದು ತಪ್ಪು ತಿಳಿದಿದ್ದೆ. ಆದರೆ ಆಗಲೂ ಚರಕಾ ನನಗೆ ಅಹಿಂಸೆಯ ಪ್ರತೀಕವಾಗಿತ್ತು. ಆದ್ದರಿಂದ ಈ ಮಾತನ್ನು ಮತ್ತೆ ಹೇಳುತ್ತೇನೆ. ಚರಕಾದಲ್ಲಿ ನಂಬಿಕೆ ಇಲ್ಲದಿದ್ದವರು ಸತ್ಯಾಗ್ರಹವನ್ನು ಹೂಡದಿರಲಿ. ಅವರು ತಮ್ಮಷ್ಟಕ್ಕೆ ತಾವೇ ಸತ್ಯಾಗ್ರಹ ಮಾಡಬಹುದು. ಆದರೆ ನನ್ನಿಂದ ಅವರಿಗೆ ಯಾವ ಪ್ರಯೋಜನವೂ ಇಲ್ಲ.

ಕಾಂಗ್ರೆಸ್ಸಿನಲ್ಲಿ ಪ್ರವೇಶಿಸಿರುವ ನಡತೆಗೇಡಿತನದ ವಿಚಾರದಲ್ಲಿ, ಇದನ್ನು ನಿರ್ಮೂಲಮಾಡಲು ನಮ್ಮನ್ನು ನಾವು ಪರಿಶುದ್ಧಮಾಡಿಕೊಳ್ಳುವುದೇ ಅತ್ಯುತ್ತಮ ಮಾರ್ಗ. ವ್ಯವಸ್ಥೆಗೆ ಸಂಬಂಧಪಟ್ಟ ಅಂಶವನ್ನು ಕಾಂಗ್ರೆಸ್ಸೇ ಸರಿಮಾಡಬೇಕು. ಏಕೆಂದರೆ ನಿಮಗೆ ಎಷ್ಟು ಪ್ರಮಾಣದಲ್ಲಿ ಸತ್ಯ ಮತ್ತು ಅಹಿಂಸೆ ನಿಮ್ಮ ಮೂಲತತ್ತ್ವಗಳೋ ಅವರಿಗೂ ಅಷ್ಟೇ ಆಗಿವೆ. ಕಾಂಗ್ರೆಸ್ಸಾದರೂ ಇದನ್ನು ಬದಲಾಯಿಸಬಹುದು. ಆದರೆ ನೀವು ಹಾಗೆ ಮಾಡಲಾಗದು,

'ಗಾಂಧೀಯ ವಿಚಾರ ಸರಣಿ' ಎಂದು ಕರೆಯಲಾಗಿರುವ ವಿಷಯಕ್ಕೂ ಅದರ ಪ್ರಚಾರ ಹೇಗೆ ಮಾಡಬೇಕೆಂಬುವ ವಿಚಾರಕ್ಕೂ ಈಗ ಬರುತ್ತೇನೆ. ಸತ್ಯ ಮತ್ತು ಅಹಿಂಸೆಗಳ ಪ್ರಚಾರ ಪುಸ್ತಕಗಳಿಂದ ಆಗುವುದಕ್ಕಿಂತಲೂ ಈ ತತ್ತ್ವಗಳನ್ನು ಜೀವನದಲ್ಲಿ ಅನುಷ್ಠಾನಮಾಡುವುದರಿಂದ ಹೆಚ್ಚಾಗಿ ಆಗುತ್ತದೆ. ನಿಷ್ಠಾವಂತ ಜೀವನ ಪುಸ್ತಕಗಳಿಗಿಂತಲೂ ಮಹ

ತ್ವದ್ದು. ಪುಸ್ತಕಗಳನ್ನೂ ಪತ್ರಿಕೆಗಳನ್ನೂ ನಾವು ಹೊರಡಿಸಬಾರದೆಂದು ನಾನು ಹೇಳುತ್ತಿಲ್ಲ. ಅವು ಅನಿವಾರ್ಯವಲ್ಲವೆಂದೇ ನನ್ನ ಅರ್ಥ. ನಾವು ಸತ್ಯ ಮತ್ತು ಅಹಿಂಸೆಗಳ ನಿಜವಾದ ಭಕ್ತರಾದರೆ ಸಮಸ್ಯೆಗಳನ್ನು ಪರಿಹಾರ ಮಾಡಲು ಬೇಕಾಗುವ ಬುದ್ಧಿ ಶಕ್ತಿಯನ್ನು ಭಗವಂತನು ನಮಗೆ ಅನುಗ್ರಹಿಸುವನು. ನಮ್ಮ ಎದುರಾಳಿಯ ಅಭಿಪ್ರಾಯವೇನೆಂಬುದನ್ನು ಅರ್ಥ ಮಾಡಿಕೊಳ್ಳುವ ಇಚ್ಛೆಯೂ ಈ ಭಕ್ತಿಯಲ್ಲಿ ಅಡಕವಾಗಿರುವ ಒಂದು ಅಂಶ. ಆತನ ಮನಸ್ಸನ್ನು ಪ್ರವೇಶಿಸಲು ನಿಜವಾಗಿ ಪ್ರಯತ್ನಿಸಿ, ಆತನ ದೃಷ್ಟಿ ಏನೆಂದು ನಾವು ಅರಿತುಕೊಳ್ಳಬೇಕು. ಹಿಂಸೆಯ ಬಾಯಲ್ಲಿ ಅಹಿಂಸೆ ನೇರವಾಗಿ ಪ್ರವೇಶಿಸುವುದೆಂಬ ಮಾತಿಗೆ ಇದೇ ಅರ್ಥ. ಈ ರೀತಿಯ ಮನೋಧರ್ಮದಿಂದ ಕೂಡಿ ನಾವು ಸಿದ್ಧರಾಗಿದ್ದರೆ ಅಹಿಂಸೆಯ ತತ್ತ್ವಗಳನ್ನು ಪ್ರಚಾರಮಾಡಲು ನಮಗೆ ವಿಶ್ವಾಸ ಹುಟ್ಟುವುದು. ಇದಿಲ್ಲವಾದರೆ ಪುಸ್ತಕ—ಪತ್ರಿಕೆಗಳ ಮೂಲಕ ಮಾಡುವ ಪ್ರಚಾರ ನಿರರ್ಥಕ. ನಾನು "ಯಂಗ್ ಇಂಡಿಯಾ" ಪತ್ರಿಕೆಯನ್ನು ನಡೆಸುವುದರಲ್ಲಿ ಎಷ್ಟು ಉದಾಸೀನನಾಗಿದ್ದೇನೆಂದು ನಿಮಗೆ ಕಲ್ಪನೆ ಇರಲಾರದು. ಆ ಪತ್ರಿಕೆ ನಿಲ್ಲಬೇಕಾಗಿ ಬಂದಾಗ ನನ್ನ ಕಣ್ಣಿನಿಂದ ಒಂದು ತೊಟ್ಟು ನೀರೂ ಬರಲಿಲ್ಲ. ಆದರೆ ಆ ಪತ್ರಿಕೆ ಪ್ರತಿಪಾದಿಸುತ್ತಿದ್ದ ಸತ್ಯಾಗ್ರಹ, ಪತ್ರಿಕೆಯೊಂದಿಗೆ ನಿಲ್ಲಲಿಲ್ಲ; ಮುಂದುವರಿಯಿತು. ಏಕೆಂದರೆ ಹೊರಗಿನಿಂದ ಬರುವ ಸಹಾಯದ ಮೇಲೆ ಸತ್ಯಾಗ್ರಹ ಅವಲಂಬಿಸಿರುವುದಿಲ್ಲ: ಅದಕ್ಕಿರುವುದು ಅಂತಃಶಕ್ತಿಯೊಂದೇ.[೨೨]

# ೨೪. ಗ್ವೈಯರ್ ಕೊಟ್ಟ ತೀರ್ಪನ್ನು ನಿರಾಕರಿಸುವ ಸಂದರ್ಭದಲ್ಲಿ ಕೊಟ್ಟ ಹೇಳಿಕೆ

[ಮೇ ೧೭ನೆಯ ತಾರೀಖು ಗಾಂಧೀಯವರು ಒಂದು ನಿರ್ಧಾರಕ್ಕೆ ಬಂದರು. ಭಯ್ಯಾಟರ ಮತ್ತು ಮುಸ್ಲಿಮರ ಹೇಳಿಕೆಗಳು ಆಗಲೆ ಪ್ರಕಟವಾಗಿದ್ದುವು. ತಮ್ಮ ಉತ್ತರವನ್ನು ಹೇಳಿ ಬರೆಯಿಸಲು ಆರಂಭಿಸಿದರು. ಆದರೆ ಅವರು ಹೀಗೆಂದರು. ಈ ಪತ್ರ ಬಂದಿರುವುದು ಮುಖ್ಯ ನ್ಯಾಯಾಧೀಶರು ಕೊಟ್ಟ ತೀರ್ಪಿನ ಸಂಬಂಧವಾಗಿ. ನಾನು ಆ ತೀರ್ಪಿನಿಂದ ಪ್ರಯೋಜನ ಪಡೆಯಲು ಇಷ್ಟಪಡದಿರುವಾಗ ಅವರ ಮೇಲೆ ಈ ಭಾರವನ್ನು ಏಕೆ ಹಾಕಬೇಕು? ಈ ಪತ್ರದ ಮೇಲೆ ಅವರು ನನ್ನ ಪರವಾಗಿ ತೀರ್ಪು ಕೊಟ್ಟರೂ—ಹಾಗೆಯೇ ಕೊಡಬೇಕಾಗುವುದೆಂದು ನಾನು ಖಂಡಿತವಾಗಿ ಹೇಳಬಲ್ಲೆ—ಅದರಿಂದ ನನಗೆ ಪ್ರಯೋಜನವಿಲ್ಲ. ಈ ಮಾತನ್ನು ಹೇಳಿ ಮತ್ತೆ ಮೌನವನ್ನು ಧಾರಣೆ ಮಾಡಿ, ತೀರ್ಪನ್ನು ತ್ಯಜಿಸುವ ಹೇಳಿಕೆಯನ್ನು ಬರೆಯಲು ಕುಳಿತರು.]

ಹೋದ ತಿಂಗಳು ೨೪ನೆಯ ತಾರೀಖು ನಾನು ಕಲ್ಕತ್ತೆಗೆ ಹೊರಟಾಗ, ರಾಜಕೋಟೆ ನನಗೊಂದು ಪ್ರಯೋಗಶಾಲೆಯಾಗುವುದೆಂದು ನಾನು ಹೇಳಿದೆ. ಈ ವಿಷಯಕ್ಕೆ ಬಹಳ ಇತ್ತೀಚಿನ ನಿದರ್ಶನವೆಂದರೆ—ಈಗ ಪ್ರಕಟಿಸುತ್ತಿರುವ — ನಾನು ಈಗ ಮುಂದಿಡುತ್ತಿರುವ ಹೆಜ್ಜೆ. ನನ್ನ ಸಹೋದ್ಯೋಗಿಗಳೊಂದಿಗೆ ಕೂಲಂಕಷವಾದ ಚರ್ಚೆ ಮಾಡಿದನಂತರ, ಮುಖ್ಯನ್ಯಾಯಾಧೀಶರ ತೀರ್ಪನ್ನು ನಾವು ನಿರಾಕರಿಸಬೇಕೆಂಬ ನಿರ್ಧಾರವನ್ನು ಈ ಸಂಜೆ ಆರು ಘಂಟೆಗೆ ಮಾಡಿದೆವು.

ನನ್ನ ತಪ್ಪನ್ನು ನಾನು ಕಂಡುಕೊಂಡಿದ್ದೇನೆ. ನನ್ನ ಉಪವಾಸ ಮುಗಿದ ನಂತರ ಹಿಂದೆ ಯಾವ ಉಪವಾಸವೂ ಆಗದಷ್ಟು ಈ ಉಪವಾಸವು ಫಲಪ್ರದವಾಯಿತೆಂಬ ಮಾತನ್ನು ಹೇಳುವ ಚಪಲಕ್ಕೆ ಮನ ಸೋತೆನು. ಅದು ಹಿಂಸೆಯಿಂದ ಕಲುಷಿತವಾಗಿತ್ತೆಂದು ಈಗ ನನಗೆ ಗೋಚರವಾಗುತ್ತಿದೆ. ಠಾಕೂರು ಸಾಹೇಬರು ಕೊಟ್ಟ ಮಾತನ್ನು ಅವರು ನಡೆಸುವಂತೆ ಪ್ರೇರಿಸಲು, ಈ ಉಪವಾಸದಿಂದ ಸಾರ್ವಭೌಮ ಸರಕಾರದ ಮಧ್ಯಸ್ಥಿಕೆಯನ್ನು ನಾನು ಕೋರಿದೆನು. ಇದು ಅಹಿಂಸಾ ಮಾರ್ಗವಲ್ಲ. ಸೌಜನ್ಯದಿಂದ ಮನಸ್ಸನ್ನು ಒಲಿಸುವ ಮಾರ್ಗವಲ್ಲ. ಇದು ಹಿಂಸಾಮಾರ್ಗ,

ಒತ್ತಾಯದ ಮಾರ್ಗ. ನನ್ನ ಉಪವಾಸ ಶುದ್ಧವಾಗಿ ಉಳಿಯಲು ಅದನ್ನು ಠಾಕೂರ್ ಸಾಹೇಬರನ್ನು ಮಾತ್ರ ಉದ್ದೇಶಿಸಿ ಮಾಡಬೇಕಾಗಿತ್ತು. ಇದು ಆತನ ಮನಸ್ಸನ್ನು ಅಥವಾ ಆತನ ಸಲಹೆಗಾರರಾದ ದರಬಾರ್ ವೀರವಾಲಾ ಅವರ ಮನಸ್ಸನ್ನು ಕರಗಿಸಲು ಅಸಮರ್ಥವಾಗಿದ್ದರೆ, ನಾನು ಸಮಾಧಾನ ಚಿತ್ತದಿಂದ ಪ್ರಾಣವನ್ನು ನೀಗಲು ಸಿದ್ಧವಾಗಬೇಕಾಗಿತ್ತು. ನನಗೆ ಅನಿರೀಕ್ಷಿತ ತೊಡಕುಗಳು ಎದುರಿಗೆ ಬಾರದಿದ್ದರೆ, ನನ್ನ ಕಣ್ಣು ತೆರೆಯುತ್ತಿದ್ದಿಲ್ಲ. ಈ ತೀರ್ಪಿಗೆ ದರಬಾರ್ ವೀರವಾಲಾ ಸಮ್ಮತಿ ಇರಲಿಲ್ಲ. ಸಹಜವಾಗಿಯೇ ಆತನು ಸಹಾಯಕನಾಗಿರಬೇಕೆಂಬ ಮನೋಧರ್ಮವನ್ನು ತಾಳಿರಲಿಲ್ಲ. ಆದ್ದರಿಂದ ವಿಳಂಬಮಾಡಲು ಎಲ್ಲ ಅವಕಾಶಗಳನ್ನೂ ಆತ ಉಪಯೋಗಿಸಿಕೊಂಡನು. ಈ ತೀರ್ಪು ನನ್ನ ಮಾರ್ಗವನ್ನು ಸುಗಮವಾಗಿ ಮಾಡುವುದಕ್ಕೆ ಬದಲಾಗಿ ನನ್ನ ವಿರುದ್ಧ ಮುಸ್ಲಿಮರ ಮತ್ತು ಭಯ್ಯಾಟರ ಕೋಪವನ್ನು ಕೆರಳಿಸಲು ಪ್ರಬಲ ಕಾರಣವಾಯಿತು. ಈ ತೀರ್ಪಿಗೆ ಪೂರ್ವದಲ್ಲಿ ನಾವು ಮಿತ್ರರಂತೆ ಸಂದರ್ಶಿಸುತ್ತಿದ್ದೆವು. ನಾನಾಗಿಯೇ, ವಿಚಾರವನ್ನು ಮಾಡದೆಯೇ ಮಾಡಿದ ವಾಗ್ದಾನವನ್ನು ಭಂಗ ಮಾಡಿದ್ದೇನೆಂದು ನನ್ನ ಮೇಲೆ ದೋಷಾರೋಪಣೆ ಮಾಡಲಾಗಿದೆ. ನಾನು ಈ ರೀತಿಯಲ್ಲಿ ಕೊಟ್ಟ ಮಾತನ್ನು ತಪ್ಪಿದೆನೇ ಇಲ್ಲವೆ—ಎಂಬುದನ್ನು ನಿರ್ಧರಿಸಲು ಈ ವಿಷಯವನ್ನು ಮುಖ್ಯ ನ್ಯಾಯಾಧೀಶರ ಮುಂದಿಡಲಾಗಿದೆ. ಮುಸ್ಲಿಂ ಕೌನ್ಸಿಲ್ ಅವರೂ ಗಿರಾಸಿಯಾ ಸಂಘದವರೂ ಕೊಟ್ಟ ಹೇಳಿಕೆಗಳೂ ನನ್ನ ಮುಂದಿವೆ. ನಾನೀಗ ಮುಖ್ಯ ನ್ಯಾಯಾಧೀಶರ ತೀರ್ಪನ್ನು ತ್ಯಾಗಮಾಡಿರುವುದರಿಂದ, ಈ ಎರಡು ಹೇಳಿಕೆಗಳಿಗೆ ಉತ್ತರ ಕೊಡುವ ಕಾರಣವಿಲ್ಲ. ಮುಸ್ಲಿಮರು ಮತ್ತು ಭಯ್ಯಾಟರು ಅವರಿಗೆ ಠಾಕೂರ್ ಸಾಹೇಬರು ಏನು ಕೊಡಲಿಚ್ಛಿಸುವರೊ ಅದನ್ನು ಪಡೆಯಬಹುದು. ನನ್ನದೇನು ಅಡ್ಡಿಯಿಲ್ಲ. ತಮ್ಮ ವಾದವನ್ನೊಳಗೊಂಡ ಹೇಳಿಕೆಯನ್ನು ಸಿದ್ಧಪಡಿಸುವ ಶ್ರಮಕ್ಕೆ ಅವರನ್ನು ಗುರಿಪಡಿಸಿದ್ದಕ್ಕಾಗಿ ಅವರ ಕ್ಷಮೆಯನ್ನು ಬೇಡುತ್ತೇನೆ.

ನನ್ನ ದುರ್ಬಲತೆಯಿಂದ ನಾನು ವೈಸರಾಯರಿಗೆ ವೃಥಾ ಕಷ್ಟವನ್ನು ಕೊಟ್ಟದ್ದಕ್ಕಾಗಿ ಅವರ ಕ್ಷಮೆಯನ್ನು ಬೇಡಬೇಕು. ಮುಖ್ಯ ನ್ಯಾಯಾಧೀ

ಶರು ಶ್ರಮವನ್ನು ವಹಿಸಲು ನಾನು ಕಾರಣನಾಗಿದ್ದುದ್ದರಿಂದ ಅವರ ಕ್ಷಮೆಯನ್ನು ಬೇಡುತ್ತೇನೆ. ನನಗೆ ಹೆಚ್ಚು ವಿಷಯ ತಿಳಿದಿದ್ದರೆ ಈ ಶ್ರಮ ಅವರು ವಹಿಸಲೇ ಬೇಕಾಗಿರಲಿಲ್ಲ. ಎಲ್ಲಕ್ಕೂ ಹೆಚ್ಚಾಗಿ ಠಾಕೂರ್ ಸಾಹೇಬರ ಮತ್ತು ದರಬಾರ್ ವೀರವಾಲಾ ಅವರ ಕ್ಷಮೆಯನ್ನು ಬೇಡುತ್ತೇನೆ. ವೀರವಾಲಾ ಅವರ ವಿಷಯದಲ್ಲಿ — ನನ್ನ ಸಹೋದ್ಯೋಗಿಗಳಂತೆಯೇ—ನಾನು ದುರಭಿಪ್ರಾಯಗಳನ್ನು ಪಡೆದಿದ್ದೆನೆಂದು ಒಪ್ಪಿಕೊಳ್ಳಬೇಕು. ಅವರ ಮೇಲೆ ಮಾಡಿದ ಆರೋಪಣೆಗಳು ನಿಜವೇ ಇಲ್ಲವೆ ಎನ್ನುವುದನ್ನು ವಿಚಾರ ಮಾಡಲು ನಾನೀಗ ತೊಡಗುವುದಿಲ್ಲ. ಅದರ ಚರ್ಚೆಗೆ ಈ ಹೇಳಿಕೆಯಲ್ಲಿ ಸ್ಥಳವಿಲ್ಲ. ಇಷ್ಟು ಹೇಳಿದರೆ ಸಾಕು. ಅವರ ಬಗೆಗೆ ನಾವು ಅಹಿಂಸಾ ಮಾರ್ಗದ ರೀತಿಯಲ್ಲಿ ವರ್ತಿಸಲಿಲ್ಲ.

ನಾನು ಇಬ್ಬಗೆಯ ಆಟವನ್ನು ಏಕ ಕಾಲದಲ್ಲಿ ಹೂಡಿದೆನೆಂದು ಹೇಳಬಹುದಾದರೆ ಒಂದು ಕಡೆ ಮುಖ್ಯ ನ್ಯಾಯಾಧೀಶರ ತೀರ್ಪನ್ನು ಒಂದು ಖಡ್ಗದಂತೆ ದರಬಾರ್ ವೀರವಾಲಾ ತಲೆಯ ಮೇಲೆ ನಿಲ್ಲಿಸಿದೆ, ಮತ್ತೊಂದು ಕಡೆ, ಅವರನ್ನು ಪುಸಲಾಯಿಸಿ ಅವರ ಸ್ವತಂತ್ರ ಇಚ್ಛೆಯಿಂದ ಉದಾರವಾದ ಸುಧಾರಣೆಗಳನ್ನು ಠಾಕೂರ್ ಸಾಹೇಬರು ಅನುಗ್ರಹಿಸುವಂತೆ ಅವರಿಗೆ ಸಲಹೆ ಕೊಡುವರೆಂದು ನಿರೀಕ್ಷಿಸಿದೆ. ಈ ದ್ವಂದ್ವ ವ್ಯವಹಾರ ನಡೆಸಿದೆನೆಂಬ ಅಪಕೀರ್ತಿಗೆ ನಾನು ಪಾತ್ರನಾಗಿದ್ದೇನೆ.

ಅಹಿಂಸಾ ಮಾರ್ಗಕ್ಕೆ ಈ ವಿಧಾನವು ಹೊಂದಿಕೊಳ್ಳಲಾರದೆಂಬುದನ್ನು ನಾನು ಒಪ್ಪುತ್ತೇನೆ. ಏಪ್ರಿಲ್ ೧೯ನೆಯ ತಾರೀಕು ಮಿ. ಗಿಬ್ಸನ್ ಅವರಿಗೆ ಯಾವುದನ್ನು ಉದಾರವಾದ ಸಮ್ಮತವೆಂದು ಹೇಳಲಾಗಿದೆಯೊ ಅದನ್ನು ಇದ್ದಕ್ಕಿದ್ದಂತೆ ಮಾಡಿದಾಗ ನನ್ನ ದೌರ್ಬಲ್ಯ ನನಗೇ ಗೋಚರವಾಯಿತು. "ಈ ತೀರ್ಪು ನನಗೇನು ಬೇಕಾಗಿಲ್ಲ" ಎಂದು ತತ್‌ಕ್ಷಣ ಅಲ್ಲಿಯೇ ಹೇಳುವಷ್ಟು ಧೈರ್ಯ ನನ್ನಲ್ಲಿರಲಿಲ್ಲ. ಆದರೆ ನಾನು ಹೇಳಿದೆ: "ಠಾಕೂರ್ ಸಾಹೇಬರು ತಮ್ಮ ಸ್ವಂತ ಸಮಿತಿಯನ್ನು ನೇಮಿಸಲಿ. ಅನಂತರ ಆ ವರದಿಯನ್ನು ಈ ಮುಖ್ಯ ನ್ಯಾಯಾಧೀಶರ ತೀರ್ಪಿನೊಂದಿಗೆ ಹೊಂದಿಕೊಳ್ಳುತ್ತಿದೆಯೇ ಪರಿಷತ್ತಿನವರು ಪರಿಶೀಲಿಸಲಿ. ಅದರಲ್ಲಿ ಲೋಪವಿದ್ದರೆ ಅದು ಮುಖ್ಯ ನ್ಯಾಯಾಧೀಶರ ಮುಂದೆ ಹೋಗಬಹುದು."

ದರಬಾರ್ ವೀರವಾಲಾ ಈ ವಿಧಾನದಲ್ಲಿ ಸರಿಯಾಗಿಯೇ ಒಂದು ಲೋಪ ವನ್ನು ಕಂಡು ಈ ಮಾತನ್ನು ತಿರಸ್ಕರಿಸಿದರು. “ನ್ಯಾಯಾಧೀಶರ ತೀರ್ಪನ್ನು ಈಗಲೂ ನನ್ನ ತಲೆಯ ಮೇಲೆ ಹಿಡಿದು ಹೆದರಿಸುತ್ತಿದ್ದೀರಿ. ಠಾಕೂರ್ ಸಾಹೇಬರು ನೇಮಿಸಿರುವ ಸಮಿತಿಯ ಮೇಲೆ ಪುನರ್ವಿಮರ್ಶೆ ಮಾಡುವ ಉತ್ತಮ ನ್ಯಾಯಾಲಯದಂತಿರಲು ನೀವು ಬಯಸುತ್ತೀರಿ. ಹೀಗಿರುವ ಪಕ್ಷಕ್ಕೆ ನಿಮಗೇನು ಸಲ್ಲುವುದೊ ಅಷ್ಟನ್ನು ಮಾತ್ರ ನೀವು ಪಡೆದು ಹೋರಡಬಹುದು. ಅದರ ಮೇಲೆ ಲೇಶ ಮಾತ್ರವೂ ಸಿಗಲಾರದು” ಎಂದು ಅವರು ವಾದಿಸಿದರು. ಅವರ ಆಕ್ಷೇಪಣೆಯಲ್ಲಿ ಬಲವಾದ ನ್ಯಾಯವಿತ್ತೆಂದು ನನಗನಿಸಿತು. ಆ ಹೊತ್ತಿನಲ್ಲೇ ನ್ಯಾಯಾಧೀಶರ ತೀರ್ಪನ್ನು ನಿರಾಕರಣೆ ಮಾಡುವಷ್ಟು ಧೈರ್ಯ ನನಗಿರಲಿಲ್ಲವೆಂದು ನಾನು ಆತನಿಗೂ ಹೇಳಿದೆ. ಆದರೆ ಈ ತೀರ್ಪೇ ಇಲ್ಲವೆಂದೂ ನಾನೂ ಸರದಾರರೂ ಈ ರಂಗದಿಂದ ನಿಷ್ಕ್ರಮಿ ಸಿರುವುದಾಗಿಯೂ ಭಾವಿಸಿ, ಜನರೊಂದಿಗೆ ಒಂದು ಸಮಾಧಾನಕರವಾದ ಒಪ್ಪಂದಕ್ಕೆ ಬರಬೇಕೆಂದೂ ಆತನಲ್ಲಿ ಪ್ರಾರ್ಥಿಸಿಕೊಂಡೆನು. ಆತನು ಪ್ರಯತ್ನಪಡುವುದಾಗಿ ಹೇಳಿದನು. ತನ್ನದೇ ಆದ ಧೋರಣೆಯಲ್ಲಿ ಪ್ರಯತ್ನಿಸಿದನು. ಆದರೆ ವಿಶಾಲ ಹೃದಯದಿಂದಲ್ಲ. ಆತನು ದೋಷಿ ಎಂದು ನಾನು ಹೇಳುವುದಿಲ್ಲ. ನಾನು ಈ ನ್ಯಾಯಾಧೀಶರ ತೀರ್ಪನ್ನು ಬಿಗಿ ಯಾಗಿ ಹಿಡಿದಿರುವ ನನ್ನ ಹೃದಯವನ್ನು ಆತನು ಅರಿತವನಾಗಿದ್ದಾಗ ಆತನಲ್ಲಿ ವಿಶಾಲ ಹೃದಯವನ್ನು ನಾನು ಹೇಗೆ ನಿರೀಕ್ಷಿಸಲಾದೀತು?

ನಂಬಿಕೆಯೇ ನಂಬಿಕೆಯನ್ನು ಹುಟ್ಟಿಸುತ್ತದೆ. ನನ್ನಲ್ಲಿಯೇ ಅದರ ಲೋಪವಿತ್ತು. ಆದರೆ ಈಗ ಕೊನೆಗೆ ನಾನು ಕಳೆದುಕೊಂಡಿದ್ದ ಧೈರ್ಯವನ್ನು ಮತ್ತೆ ಪಡೆದಿದ್ದೇನೆ. ನಾನು ನನ್ನ ತಪ್ಪನ್ನು ನಿಸ್ಸಂಕೋಚವಾಗಿ ಒಪ್ಪಿ ಕೊಂಡುದರಿಂದಲೂ ನನ್ನ ಪಶ್ಚಾತ್ತಾಪದಿಂದಲೂ ಅಹಿಂಸೆಯಲ್ಲಿರುವ ಸರ್ವ ಶ್ರೇಷ್ಠವಾದ ಶಕ್ತಿಯ ವಿಷಯದಲ್ಲಿ ನನಗಿದ್ದ ಶ್ರದ್ಧೆ ಮತ್ತಷ್ಟು ಜಾಜ್ವಲ್ಯಮಾನವಾಗಿ ಬೆಳಗುತ್ತಿದೆ.

ನನ್ನ ಸಹೋದ್ಯೋಗಿಗಳ ವಿಷಯದಲ್ಲಿ ನಾನು ಯಾವ ಅನ್ಯಾಯ ವನ್ನೂ ಎಸಗಬಾರದು. ಅವರಲ್ಲಿ ಅನೇಕರ ಮನಸ್ಸಿನಲ್ಲಿ ಶಂಕೆಗಳು ತುಂಬಿವೆ. ಅಹಿಂಸೆಗೆ ನಾನು ಮಾಡುತ್ತಿರುವ ವಿವರಣೆ ಅವರಿಗೆ ಹೊಸ

ದಾಗಿದೆ. ನಾನು ಪಶ್ಚಾತ್ತಾಪಪಡಲು ಕಾರಣವೇನೆಂದು ಅವರಿಗೆ ಗೋಚರವಾಗದೆ ಇದೆ. ಈ ತೀರ್ಪಿನಿಂದ ಒದಗಿದ ಉತ್ತಮ ಅವಕಾಶವನ್ನು ಬಿಟ್ಟುಕೊಡುತ್ತಿದ್ದೇನೆಂದು ಅವರ ಭಾವನೆ. ರಾಜಕೀಯ ಮುಖಂಡನಾಗಿ ನಾನು ಎಪ್ಪತ್ತೈದು ಸಾವಿರ ಜನರ ಪ್ರಾಯಶಃ ಇಡೀ ಕಾಠೆಯವಾಡದ ಜನರ ಆಗುಹೋಗುಗಳನ್ನು ಚಂಡಾಡ ಬಾರದೆಂದು ಅವರ ಭಾವನೆ, ಅವರ ಭೀತಿಗೆ ಕಾರಣವಿಲ್ಲವೆಂದು ನಾನು ಅವರಿಗೆ ಹೇಳಿದ್ದೇನೆ. ಆತ್ಮಶುದ್ಧೀಕರಣಕ್ಕೂ ಧೈರ್ಯದ ವೃದ್ಧಿಗೂ ಒದಗುವ ಪ್ರತಿಯೊಂದು ಘಟನೆಯೂ ಸತ್ಯಾಗ್ರಹ ಉದ್ಯಮದಲ್ಲಿ ಸಂಬಂಧವಿರುವ ಜನರ ಉದ್ದೇಶ ಸಾಧನೆಗೆ ಬಲಪಡಿಸುತ್ತದೆಂದು ನಾನು ಅವರಿಗೆ ಆಶ್ವಾಸನ ಕೊಟ್ಟಿದ್ದೇನೆ. ನಾನು ಅವರ ಅಧಿನಾಯಕನೆಂದೂ ಸತ್ಯಾಗ್ರಹದ ಶಾಸ್ತ್ರದಲ್ಲಿ ತಜ್ಞನೆಂದೂ ಅವರು ಎಣಿಸುವುದಾದರೆ ನನ್ನ ಹುಚ್ಚಾಟಗಳೆಂದು ಅವರಿಗೆ ತೋರಬಹುದಾದ ನನ್ನ ಚರ್ಯೆಗಳನ್ನು ಅವರು ಸಹಿಸಿಕೊಂಡಿರಬೇಕೆಂದೂ ಸಹ ನಾನು ಅವರಿಗೆ ಹೇಳಿರುವೆನು.

ನ್ಯಾಯಾಧೀಶರ ತೀರ್ಪಿನ ನಿರ್ಬಂಧದಿಂದ ಠಾಕೂರ್ ಸಾಹೇಬರನ್ನೂ ಅವರ ಸಲಹೆಗಾರರನ್ನೂ ಬಿಡುಗಡೆ ಮಾಡಿದ ಮೇಲೆ, ರಾಜಕೋಟೆಯ ಜನರ ಆಕಾಂಕ್ಷೆಗಳನ್ನು ಪೂರೈಸಿ ಅವರ ಶಂಕೆಗಳನ್ನು ದೂರಮಾಡಿ ಈ ಮೂಲಕ ಅವರಲ್ಲಿ ಸಮಾಧಾನವನ್ನು ಸ್ಥಾಪಿಸಬೇಕೆಂದೂ ನಾನು ಯಾವ ಸಂಕೋಚವೂ ಇಲ್ಲದೆ ವಿನಂತಿ ಮಾಡಿಕೊಳ್ಳುತ್ತೇನೆ. ೨೪

## ೨೫. ಒಂದು ಹೇಳಿಕೆ

[೧೯೩೯ರಲ್ಲಿ ಪ್ರಪಂಚದ ದ್ವಿತೀಯ ಮಹಾಯುದ್ಧ ಆರಂಭವಾದ ಸಮಯದಲ್ಲಿ ವೈಸರಾಯರು ಭಾರತದ ಮುಖಂಡರನ್ನು ಸಮಾಲೋಚನೆಗಾಗಿ ಆಹ್ವಾನಿಸಿದರು. ಗಾಂಧೀಯವರು ಸೆಪ್ಟೆಂಬರ್ ೫ನೆಯ ತಾರೀಖು ಸಿಮ್ಲಾ ತಲಪಿದರು; ಈ ಹೇಳಿಕೆಯನ್ನು ಹೊರಡಿಸಿದರು.]

ಡಿಲ್ಲಿಯಲ್ಲಿ ನಾನು ಕಾಲ್ಕಾಗೆ ಹೋಗುವ ರೈಲಿನಲ್ಲಿ ಹತ್ತುತ್ತಿದ್ದಾಗ, ಒಂದು ದೊಡ್ಡ ಗುಂಪು ಹಳಸಿ ಜೀರ್ಣವಾಗಿರುವ ಪದವಾದ ಮಹಾತ್ಮಾ

ಗಾಂಧೀ ಕೀ ಜಯ್, ಎಂಬ ಸ್ವರವನ್ನೂ “ ನಮಗೆ ಯಾವ ಒಪ್ಪಂದವೂ ಬೇಡ” ಎಂಬ ವಾಕ್ಯವನ್ನೂ ಉತ್ಸಾಹದಿಂದಲೂ ನಗೆಮುಖದಿಂದಲೂ ದನಿಗೂಡಿಸಿ ಉದ್ಗಾರ ಮಾಡುತ್ತಿದ್ದರು. ಪ್ರತಿವಾರವೂ ಒಂದು ದಿನ ನಾನು ಆಚರಿಸುವ ಮೌನದಲ್ಲಿ ಅಂದು ನಾನಿದ್ದೆ. ಆದ್ದರಿಂದ ಕೇವಲ ಮುಗುಳ್ನಗೆಯನ್ನು ನಕ್ಕೆನು. ಗಾಡಿಯನ್ನು ಹತ್ತಲು ಇರುವ ಮೆಟ್ಟಲಿನ ಮೇಲೆ ನಿಂತಿದ್ದವರೂ ಮುಗುಳ್ನಗೆಯನ್ನು ಬೀರಿದರು—ನಾನು ವೈಸರಾಯ ರೊಂದಿಗೆ ಯಾವ ಒಪ್ಪಂದವನ್ನೂ ಮಾಡಬಾರದೆಂದು ಎಚ್ಚರಿಕೆ ಕೊಟ್ಟರು. ಇದೇ ಬಗೆಯ ಎಚ್ಚರಿಕೆಯನ್ನು ಕೊಟ್ಟು ಒಂದು ಕಾಂಗ್ರೆಸ್ ಕಮಿಟಿ ಯಿಂದ ನನಗೊಂದು ಪತ್ರವೂ ಬಂದಿತ್ತು. ಈ ಸಲಹೆಗಾರರಿಬ್ಬರೂ ನನ್ನನ್ನು ಅರಿತವರಾಗಿರಲಿಲ್ಲ. ನನ್ನ ಶಕ್ತಿ ಸೀಮಿತವಾದದ್ದೆಂದು ಅರಿಯಲು ಈ ಎಚ್ಚರಗಳ ಆವಶ್ಯಕತೆ ಇರಲಿಲ್ಲ. ಡಿಲ್ಲಿಯಲ್ಲಾದ ಪ್ರದರ್ಶನ ಮತ್ತು ಕಾಂಗ್ರೆಸ್ ಕಮಿಟಿಯ ಎಚ್ಚರಿಕೆ, ಇವುಗಳ ಮಾತಿರಲಿ. ವೈಸರಾಯ ರೊಂದಿಗೆ ಆದ ನನ್ನ ಸಂದರ್ಶನದಲ್ಲಿ ಏನು ನಡೆಯಿತೆಂದು ಸಾರ್ವಜನಿಕ ರಿಗೆ ತಿಳಿಸುವುದು ನನ್ನ ಕರ್ತವ್ಯ.

ಕೇವಲ ನನ್ನ ಪರವಾಗಿ ಮಾತ್ರವಲ್ಲದೆ ಯಾರ ಪ್ರತಿನಿಧಿಯಾಗಿಯೂ ಮಾತುಕತೆ ನಡೆಸಲು ನಮಗೆ ಅಧಿಕಾರವಿರಲಿಲ್ಲವೆಂದು ನನಗೆ ಗೊತ್ತಿತ್ತು. ಈ ವಿಷಯದಲ್ಲಿ ಕಾರ್ಯಕಾರೀ ಸಮಿತಿಯಿಂದ ಯಾವ ಆದೇಶವೂ ನನ ಗಿರಲಿಲ್ಲ. ನನಗೆ ಬಂದ ತಂತಿ ವರ್ತಮಾನವನ್ನು ಉತ್ತರಿಸಿ ತತ್‌ಕ್ಷಣವೇ ಮೊದಲು ಸಿಕ್ಕಿದ ರೈಲು ಗಾಡಿಯನ್ನು ಹತ್ತಿದ್ದೆ. ಅಷ್ಟೇ ಅಲ್ಲ. ನನ್ನ ಅದಮ್ಯವಾದ ಪರಿಪೂರ್ಣ ಅಹಿಂಸಾ ಮನೋಧರ್ಮಕ್ಕೆ ಅನುಸಾರವಾಗಿ, ನಾನು ರಾಷ್ಟ್ರದ ಚಿತ್ರವನ್ನು ಪ್ರತಿನಿಧಿಸಲು ಸಾಧ್ಯವಿಲ್ಲವೆಂದು ನನಗೆ ತಿಳಿದಿತ್ತು. ಹಾಗೆ ಪ್ರತಿನಿಧಿಸಲು ಪ್ರಯತ್ನಿಸಿದರೆ ತೀರ ವಿಫಲನಾಗಿ ನಗೆ ಗಿಡಾಗುವೆನೆಂದೂ ನನಗೆ ತಿಳಿದಿತ್ತು. ನಾನು ವೈಸರಾಯರಿಗೆ ಈ ಮಾತು ಹೇಳಿದೆ. ಆದ್ದರಿಂದ ನನ್ನೊಂದಿಗೆ ಸಮಜಾಯಿಷಿ ಅಥವಾ ಒಪ್ಪಂದ ಮಾಡುವ ಪ್ರಶ್ನೆಯೇ ಇರಲಿಲ್ಲ. ಹಾಗೆ ಒಪ್ಪಂದವನ್ನು ಮಾಡುವ ಉದ್ದೇಶದಿಂದ ನನ್ನನ್ನು ಅವರು ಕರೆಸಿಯೂ ಇರಲಿಲ್ಲ. ನಾನು ವೈಸ ರಾಯರ ಭವನದಿಂದ ಬರಿಗೈಯಿಂದ ಬಂದಿದ್ದೇನೆ. ರಹಸ್ಯವಾದ ಅಥವಾ

ಬಹಿರಂಗವಾದ ಯಾವ ಒಪ್ಪಂದವನ್ನೂ ಮಾಡಿಕೊಂಡು ಬಂದಿಲ್ಲ. ಹಾಗೇನಾದರೂ ಒಪ್ಪಂದವಾಗಬೇಕಾದರೆ ಅದು ಕಾಂಗ್ರೆಸ್ಸಿಗೂ ಸರಕಾರಕ್ಕೂ ಮಧ್ಯೆ ನಡೆಯಬೇಕು.

ಕಾಂಗ್ರೆಸ್ಸಿಗೂ ನನಗೂ ಇರುವ ಸಂಬಂಧವನ್ನು ಸ್ಪಷ್ಟಪಡಿಸಿದ ಮೇಲೆ ನನ್ನ ಸಹಾನುಭೂತಿ, ಕೇವಲ ಮಾನವೀಯತೆಯ ದೃಷ್ಟಿಯಿಂದ ಇಂಗ್ಲೆಂಡ್ ಮತ್ತು ಫ್ರಾನ್ಸಿನೊಂದಿಗೆ ಇತ್ತೆಂದು ವೈಸರಾಯರಿಗೆ ಹೇಳಿದೆ. ಅಭೇದ್ಯವೆಂದು ಎಣಿಸಲಾಗಿದ್ದ ಲಂಡನ್ ನಗರವು ನಾಶಕ್ಕೆ ಗುರಿಯಾಗುವುದೆಂಬ ಚಿಂತನೆಯೂ ಸಹ ಅಂತರಾಳದಿಂದ ನನ್ನ ಮನಸ್ಸನ್ನು ಕಲಕುವ ವಿಷಯವೆಂದು ಅವರಿಗೆ ಹೇಳಿದೆ. ಪಾರ್ಲಿಮೆಂಟ್ ಭವನಗಳೂ ವೆಸ್ಟ್ ಮಿನಿಸ್ಟರ್ ಅಬಿ ಅಂತಹ ಮಹಾ ಸೌಧಗಳೂ ನಾಶಕ್ಕೆ ಗುರಿಯಾಗಬಹುದೆಂಬ ಚಿತ್ರವನ್ನು ಕಲ್ಪಿಸುತ್ತಿದ್ದಂತೆ ನಾನು ಅಪ್ರತಿಭವಾಗಿ ಕುಸಿದುಬಿದ್ದಂತೆ ಆಯಿತು. ನಾನು ಅತಿ ಖಿನ್ನನಾಗಿದ್ದೇನೆ. ಭಗವಂತನು ಇಂತಹ ಘಟನೆಗಳಿಗೆ ಅವಕಾಶ ಕೊಡುತ್ತಿರುವನಲ್ಲಾ ಎಂಬುದರ ಬಗೆಗೆ ನನ್ನ ಹೃದಯಾಂತರಾಳದಲ್ಲಿ ಅವನೊಂದಿಗೆ ಸತತವಾಗಿ ಹೋರಾಟ ನಡೆಸುತ್ತಿದ್ದೇನೆ. ನನ್ನ ಅಹಿಂಸೆ ನಿಶ್ಯಕ್ತವೆಂದು ತೋರುವಷ್ಟು ಆಗಿದೆ. ಆದರೆ ದಿನವೂ ನಡೆಯುತ್ತಿರುವ ಈ ಹೋರಾಟದ ಮುಕ್ತಾಯದಲ್ಲಿ ಭಗವಂತನಾಗಲಿ ಅಹಿಂಸೆಯಾಗಲಿ ನಿಶ್ಯಕ್ತವಲ್ಲವೆಂಬ ಉತ್ತರ ಬರುತ್ತಲಿದೆ. ಈ ನಿಶ್ಯಕ್ತಿ ಮನುಷ್ಯರಲ್ಲಿದೆ. ನಾನು ಶ್ರದ್ಧೆಯನ್ನು ಕೈಬಿಡದೆ ಈ ಪ್ರಯತ್ನದಲ್ಲಿ ನಾನೇ ಮುರಿದು ಬಿದ್ದರೂ ಪ್ರಯತ್ನಿಸುತ್ತ ನಡೆಯಬೇಕು.

ಆದ್ದರಿಂದ ನನಗೆ ಕಾದಿರುವ ಅತೀವ ಮನಃಕ್ಲೇಶದ ಮುನ್ಸೂಚನೆಯಂತೆ, ಜುಲೈ ೨೩ನೆಯ ತಾರೀಖು ಅಬ್ಬಾಟಾಬಾದಿನಿಂದ ಹೆರ್ ಹಿಟ್ಲರ್ ಅವರಿಗೆ ಈ ಕೆಳಗೆ ಕಂಡ ಪತ್ರವನ್ನು ಕಳಿಸಿದೆ:

"ಮಾನವ ಕೋಟಿಯ ಸಲುವಾಗಿ ನಾನು ಈ ಪತ್ರವನ್ನು ಬರೆಯಬೇಕೆಂದು ಮಿತ್ರರು ನನ್ನನ್ನು ಆಗ್ರಹಪೂರ್ವಕ ಪ್ರೇರಿಸುತ್ತಿದ್ದಾರೆ. ಆದರೆ ನನ್ನಿಂದ ಯಾವ ಪತ್ರವೇ ಆಗಲಿ ಅವಿನಯವಾಗುವುದೆಂಬ ಭಾವನೆಯಿಂದ ಈ ಪ್ರೇರಣೆಗೆ ಕಿವಿಗೊಡದೆ ಇದ್ದೇನೆ. ಆದರೆ ಇದರ ಲೆಕ್ಕಾಚಾರ ಮಾಡಬಾರದೆಂದೂ, ಅದಕ್ಕೆ ಬೆಲೆ ಇದ್ದರೂ ಇಲ್ಲದಿದ್ದರೂ ನನ್ನ ವಿನಂತಿ

ಯನ್ನು ಮುಟ್ಟಿಸಬೇಕೆಂದೂ ನನಗೆ ಯಾವುದೋ ಪ್ರೇರಣೆಯಾಗುತ್ತಿದೆ. ಇಂದು ಪ್ರಪಂಚದಲ್ಲಿ ಇಡೀ ಮಾನವಕುಲವನ್ನೇ ರೂಕ್ಷಾವಸ್ಥೆಗೆ ಇಳಿಸಬಲ್ಲ ಯುದ್ಧವನ್ನು ನಿಲ್ಲಿಸಬಲ್ಲವರು ನೀವೊಬ್ಬರೇ ಎಂಬುದು ಸ್ಪಷ್ಟವಾಗಿಯೇ ಇದೆ. ನಿಮ್ಮ ಗುರಿ ಎಷ್ಟೇ ಯೋಗ್ಯವೆಂದು ನಿಮಗೆ ಕಂಡರೂ ಅದಕ್ಕೆ ಇಷ್ಟು ದೊಡ್ಡ ಬೆಲೆಯನ್ನು ತೆರಲೇಬೇಕೆ? ಯುದ್ಧದ ವಿಧಾನವನ್ನೇ ಬುದ್ಧಿಪೂರ್ವಕವಾಗಿ ತ್ಯಜಿಸಿರುವ ನಾನು ಈ ವಿಧಾನದಿಂದ ಗಣನೀಯ ಯಶಸ್ಸನ್ನು ಹೊಂದದೆ ಇಲ್ಲ. ನನ್ನ ವಿನಂತಿಯನ್ನು ಲಾಲಿಸುವಿರಾ ? ಏನೇ ಆಗಲಿ ನಾನು ಬರೆದುದು ಅಪರಾಧವಾದರೆ, ಅದನ್ನು ನೀವು ಕ್ಷಮಿಸುವಿರೆಂದು ನಾನು ನಿರೀಕ್ಷಿಸುತ್ತೇನೆ.

ಈಗಲಾದರೂ ವಿವೇಕದ ಮಾತಿಗೂ, ಇಡೀ ಮಾನವ ಜನಾಂಗದ ವಿಚಾರ ಶೀಲರೆಲ್ಲರೂ —ಇದರಲ್ಲಿ ಜರ್ಮನರೂ ಸೇರಿಕೊಂಡಿದ್ದಾರೆ—ಮಾಡಿರುವ ವಿನಂತಿಗೂ ಹಿಟ್ಲರ್ ಕಿವಿಗೊಡುವನೆಂದು ನನ್ನ ಉತ್ಕಟವಾದ ಇಚ್ಛೆಯಾಗಿದೆ. ಲಂಡನ್ನಿನ ಅಂತಹ ದೊಡ್ಡ ನಗರಗಳು ಮಾನವನ ಬುದ್ಧಿ ಚಾತುರ್ಯದ ಫಲವಾಗಿ ನಾಶಕ್ಕೆ ಗುರಿಯಾಗುವ ಸಂಭವವನ್ನು ಅರಿತು ಅದರಿಂದ ತಪ್ಪಿಸಿಕೊಳ್ಳಲು ಅಲ್ಲಿನ ಲಕ್ಷಾಂತರ ನಿವಾಸಿಗಳು ಊರನ್ನೇ ಬಿಡುವ ಪ್ರಯತ್ನವನ್ನು ಕಂಡು ಜರ್ಮನರೇ ಸಮಾಧಾನ ಚಿತ್ತರಾಗಿರುವರೆ? ಇದನ್ನು ನಾನು ನಂಬಲಾರೆ. ಅವರೇ ನಾಶವಾಗುವುದಾದರೆ, ಅವರ ಬೆಲೆಯುಳ್ಳ ಸ್ಮಾರಕ ಕಟ್ಟಡಗಳ ವಿನಾಶವಾಗುವುದಾದರೆ, ಈ ಸಮಾಧಾನ ಚಿತ್ತ, ಅವರಲ್ಲಿ ಉಳಿಯುವುದೇನು ? ನಾನು ಈಗ ಭಾರತದ ಬಂಧ ವಿಮೋಚನೆಯನ್ನು ಆಲೋಚಿಸುತ್ತಿಲ್ಲ. ಅದು ಆಗಿಯೇ ಆಗುತ್ತದೆ. ಆದರೆ ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳ ಪತನವಾದರೆ, ಅಥವಾ ಅವರು ಜರ್ಮನಿಯನ್ನು ಗೆದ್ದು ಜರ್ಮನಿ ನಾಶಹೊಂದಿ ತೀರ ದೈನ್ಯಾವಸ್ಥೆಗೆ ಇಳಿಯುವುದಾದರೆ ಭಾರತದ ವಿಮೋಚನೆಗೆ ಏನು ಬೆಲೆ ಉಳಿದೀತು ? "

ಇಷ್ಟೆಲ್ಲ ಇದ್ದರೂ ಹಿಟ್ಲರ್ ಪಾಶವೀ ಬಲವೊಂದೇ ದೇವರೆಂದು ಭಾವಿಸುವಂತೆ ಕಾಣುತ್ತದೆ. ಮಿ. ಚೇಂಬರ್‌ಲೇನ್ ಹೇಳಿದಂತೆ ಬೇರೆ ಯಾರ ಮಾತಿಗೂ ಆತ ಕಿವಿಗೊಡುವಂತಿಲ್ಲ. ಈ ಅನುಪಮವಾದ ವಿಪತ್ತು ಸಂಭವಿಸುತ್ತಿರುವ ತರುಣದಲ್ಲಿ ಕಾಂಗ್ರೆಸ್ಸಿಗರೂ ಜವಾಬುದಾರಿಯುತರಾದ

ಭಾರತೀಯರೂ ಸಹ ವೈಯಕ್ತಿಕವಾಗಿಯೂ, ಸಾಮೂಹಿಕವಾಗಿಯೂ, ಈ ಬೃಹತ್ ನಾಟಕದಲ್ಲಿ ಯಾವ ಪಾತ್ರವನ್ನು ನಿರ್ವಹಿಸಬೇಕೆಂದು ನಿಶ್ಚಯಿಸಬೇಕಾಗಿದೆ.[೨೫]

## ೨೬. ಗಾಂಧೀ ಸೇವಾಸಂಘದ ಸದಸ್ಯರನ್ನು ಕುರಿತು ಮಾಡಿದ ಭಾಷಣ

[ಕಾರ್ಯಕಾರೀ ಮಂಡಳಿಯ (Working Commitee) ಸಭೆ ಮುಗಿದ ತರುವಾಯ ಅಹಿಂಸೆಯ ಪ್ರಶ್ನೆಯನ್ನು ಕೂಲಂಕಷವಾಗಿ ವಿವರಗಳ ಸಹಿತ ಪರಿಶೀಲಿಸಬೇಕೆಂದು ಗಾಂಧೀಯವರು ಸದಸ್ಯರನ್ನು ಕೇಳಿಕೊಂಡರು. ಈ ಪ್ರಶ್ನೆಗೆ ತಮ್ಮ ಸಮಯವನ್ನೆಲ್ಲ ವಿನಿಯೋಗಿಸುತ್ತಿದ್ದರು. ಮೊದಲೇ ಗೊತ್ತುಮಾಡಿ ಇವರೊಂದಿಗೆ ಭೇಟಿಯಾಗಲು ಬಂದವರೊಂದಿಗೆ ಮಾತ್ರ ಮಾತುಕತೆ, ಇತರ ಸಮಯಗಳಲ್ಲಿ ಮೌನ; ಅನೇಕ ದಿನಗಳು ಮುಂಜಾವಿನಲ್ಲೇ ಎದ್ದು ಅಹಿಂಸೆಯ ಬಗೆಗೆ ಚಿಂತನೆ—ಹೀಗೆ ಈ ಪ್ರಶ್ನೆ ಅವರ ಕಾಲವನ್ನೆಲ್ಲ ಆಕ್ರಮಿಸಿಕೊಂಡಿತ್ತು. ಅಕ್ಟೋಬರ್ ೨೫ನೆಯ ತಾರೀಖು ಗಾಂಧೀ ಸೇವಾಸಂಘದ ಕಾರ್ಯಕಾರೀ ಮಂಡಳಿಯ ಸದಸ್ಯರನ್ನುದ್ದೇಶಿಸಿ ಹೀಗೆ ನುಡಿದರು:]

ಈ ಪ್ರಶ್ನೆ ಮೂರು ಹೊತ್ತೂ ನನ್ನ ಮನಸ್ಸಿನ ಮುಂದೆಯೇ ಇದೆ. ಅದು ನನಗೆ ವಿಶ್ರಾಂತಿಯನ್ನು ಕೊಡುತ್ತಿಲ್ಲ. ಕಾಂಗ್ರೆಸ್ಸಿನ ಕಾರ್ಯಕಾರೀ ಮಂಡಳಿಯ ಹಿರಿಯ ಸದಸ್ಯರ ಸ್ಥಿತಿಯನ್ನು ಕುರಿತು ನಾನು "ಹರಿಜನ" ಪತ್ರಿಕೆಯಲ್ಲಿ ಬರೆದಿದ್ದೇನೆ. ಅವರ ಸ್ಥಿತಿ ಕಷ್ಟವಾದದ್ದು. ಒಂದು ತತ್ತ್ವದ ಬಗೆಗೆ ನಿಷ್ಠೆಗೂ, ನಮ್ಮ ಸಹೋದ್ಯೋಗಿಗಳ ಬಗೆಗೆ ನಿಷ್ಠೆಗೂ ಪರಸ್ಪರ ಘರ್ಷಣೆ ಅವರ ಮನಸ್ಸಿನಲ್ಲಿ ಉಂಟಾಯಿತು. ಅವರ ಸ್ಥಿತಿಯನ್ನು ಅವರು ನನಗೆ ತಿಳಿಸಲು ಕಾತರರಾಗಿದ್ದುದನ್ನು ನಾನು ಸಂತೋಷದಿಂದ ಸ್ವಾಗತಿಸಿದೆ. ನಾವೆಲ್ಲರೂ 'ಸತ್ಯ'ದ ಉಪಾಸಕರು. ನಮ್ಮ ಮಾನಸಿಕ ಹೋರಾಟಗಳೂ ಘರ್ಷಣೆಗಳೂ ಈ ಸತ್ಯಕ್ಕೆ ನಿಷ್ಠರಾಗಿರುವುದರಿಂದ ಹುಟ್ಟುತ್ತವೆ. ನಿನ್ನೆ ಕಾರ್ಯಕಾರೀ ಮಂಡಲಿ ಸಭೆಯಲ್ಲಿ ಬಹಳ ಸೊಗಸಾದ ಚರ್ಚೆ ನಡೆಯಿತು. ಸದಸ್ಯರ ಸ್ಥಿತಿಯನ್ನು ಕುರಿತು ವೈಯಕ್ತಿಕ

ವಾಗಿ, ಕಾಂಗ್ರೆಸ್ ಹಾಗೂ ಜನರ ಪ್ರತಿನಿಧಿಯಾಗಿ, ವಿಶದವಾಗಿ ಯಾವ ಅಂಶವನ್ನೂ ಬಿಡದೆ ಮಾತುಕತೆಗಳಾದುವು. ನಿಮ್ಮ ವಿಷಯದಲ್ಲಿ ಪ್ರಶ್ನೆಯೇ ಬೇರೆ. ನೀವು ಇಲ್ಲಿ ವ್ಯಕ್ತಿಗಳಾಗಿ ಮಾತ್ರ ಇರುವವರು. ಕಾಂಗ್ರೆಸ್ ಆಗಲಿ ಕಾಂಗ್ರೆಸಿಗರಾಗಲಿ ಯಾವುದನ್ನಾದರೂ ಯೋಚಿಸಲಿ. ನಿಮ್ಮ ಆಚರಣೆ ಎಂತಹುದಾಗಿರಬೇಕೆಂದು ನೀವೇ ನಿರ್ಧರಿಸಬೇಕು. ಆದ್ದರಿಂದ ಈ ಪ್ರಶ್ನೆ ನಿಮ್ಮ ಪೂರ್ತಿಗೆ ಸರಳವಾದದ್ದೇ ಆಗಿದೆ. ನಿಮಗೆ ಪ್ರಿಯರಾದವರಿಗೆ ತೀವ್ರವಾಗಿ ಘಾಸಿಪಡಿಸಿದವರೊಡನೆ ನೀವು ಭ್ರಾತೃ ಭಾವದಿಂದ ವರ್ತಿಸುವಿರಾ? ರಾಜೇಂದ್ರಬಾಬು ಅವರನ್ನೇ ಹೊಡೆಯಲು ಒಬ್ಬ ಬಂದನೆಂದು ಭಾವಿಸೋಣ. ನೀವು ದಾಳಿಕಾರನ ಮೇಲೆ ಪ್ರತೀಕಾರ ಮಾಡುವಿರೊ ಅಥವಾ ರಾಜೇಂದ್ರಬಾಬುವಿಗೂ ಅವರಿಗೂ ಮಧ್ಯೆ ನಿಂತು ಅವನಿಗೆ ತಗಲಬಹುದಾದ ಹೊಡತವನ್ನು ಹರ್ಷಚಿತ್ತದಿಂದ ನೀವು ಸಹಿಸುವರೋ? ನಿಮಗೆ ಮರಣ ಭಯ, ಅಂಗಗಳಿಗೆ ಘಾಯವಾಗುತ್ತದೆಂಬ ಭಯ ಮತ್ತು ನಿಮ್ಮನ್ನು ಬಂಧಿಸಿರುವ ಮನೆಯ ಬಂಧನಗಳು. ಇವುಗಳನ್ನು ನೀವು ತೊರೆದಿದ್ದರೆ ನೀವು ಮಧ್ಯೆ ನಿಂತು ಏಟುಗಳನ್ನು ಸಹಿಸಬಲ್ಲಿರಿ. ನೀವು ಯಾರೊಂದಿಗೆ ಭುಜಕ್ಕೆ ಭುಜ ಕೊಟ್ಟು ನಿಲ್ಲುತ್ತೀರೊ ಅವರೊಂದಿಗೆ ಕೇವಲ ಭ್ರಾತೃತ್ವಭಾವ ಇಲ್ಲದಿದ್ದರೆ, ಎಷ್ಟೇ ಕಷ್ಟ ಬಂದರೂ ಅಹಿಂಸೆಯನ್ನು ಆಚರಿಸುತ್ತೇವೆ ಎನ್ನುವುದಕ್ಕೆ ಅರ್ಥವಿಲ್ಲ. ಕೇವಲ ಔಪಚಾರಿಕವಾದ, ಅರ್ಥವಿಲ್ಲದ ತೀರ್ಮಾನವನ್ನು ಮಾಡುವುದಕ್ಕಿಂತಲೂ ಸಂಘವನ್ನು ಮುಚ್ಚಿಬಿಡುವುದು ಉತ್ತಮ.

ಅಹಿಂಸೆ ಮಠದ ಏಕಾಂತವಾಸದಲ್ಲಿ ಆಚರಿಸುವ ಗುಣವಲ್ಲ. ಕೇವಲ ಋಷಿಗಳೂ ಗುಹೆಯಲ್ಲಿ ವಾಸಿಸುವವರೂ ಅನುಷ್ಠಾನ ಮಾಡಬೇಕಾದ್ದಿಲ್ಲ. ಇದು ಜನಸಾಮಾನ್ಯರೂ ಕೋಟ್ಯಂತರ ಮಾನವರೂ ಅನುಷ್ಠಿಸಲು ಸಾಧ್ಯವಾದುದು. ಅದರ ಸಮಗ್ರ ಅರ್ಥ ಅವರು ಗ್ರಹಿಸಬೇಕಾಗಿಲ್ಲ. ಆದರೆ ಮಾನವ ವರ್ಗಕ್ಕೇ ಇದು ನಿಯಮವಾದ್ದರಿಂದ ಇದನ್ನು ಆಚರಿಸಬೇಕು. ಮಾನವನಿಗೂ ಪಶುಗಳಿಗೂ ಇದೇ ವ್ಯತ್ಯಾಸ. ಆದರೆ ಮಾನವನು ಇನ್ನೂ ಪಶು ಸ್ವಭಾವವನ್ನು ತ್ಯಜಿಸಿಲ್ಲ. ತ್ಯಜಿಸಲು ಪ್ರಯತ್ನಿಸಬೇಕು. ಈ ಪ್ರಯತ್ನವೆಂದರೆ ಅಹಿಂಸೆಯ ಆಚರಣೆ, ಅಭ್ಯಾಸ. ಅದರಲ್ಲಿ ನಂಬಿಕೆಯು

ನ್ನಿಡುವುದಲ್ಲ. ಒಂದು ತತ್ತ್ವದಲ್ಲಿ ನಂಬಿಕೆಯನ್ನಿಡಲು ಪ್ರಯತ್ನ ಮಾಡು ವುದು ಸಾಧ್ಯವಿಲ್ಲ. ಅದರಲ್ಲಿ ನನಗೆ ನಂಬಿಕೆ ಇದೆ ಅಥವಾ ಇಲ್ಲ ಅಷ್ಟೆ, ನಂಬಿಕೆ ಇದ್ದರೆ ಅದನ್ನು ಅಭ್ಯಾಸ ಮಾಡಲು ನಾನು ಧೈರ್ಯವಾಗಿ ಪ್ರಯತ್ನ ಮಾಡಬೇಕು. ಅಹಿಂಸೆ ವೀರರ ಲಕ್ಷಣ. ಹೇಡಿತನವೂ ಅಹಿಂಸೆಯೂ ಒಟ್ಟಿಗೆ ಇರಲಾರವು; ನೀರು, ಬೆಂಕಿ ಹೇಗೆ ಒಟ್ಟಿಗೆ ಇರಲಾರವೋ ಹಾಗೆ. ಇಂತಹ ಅಹಿಂಸೆಯನ್ನು ತನ್ನಲ್ಲಿ ಬೆಳೆಸಿಕೊಳ್ಳಲು ಗಾಂಧೀ ಸೇವಾ ಸಂಘದ ಪ್ರತಿಯೊಬ್ಬ ಸದಸ್ಯನೂ ಬುದ್ಧಿಪೂರ್ವಕವಾಗಿ ಪ್ರಯತ್ನ ಮಾಡಬೇಕು.

ಈ ಪ್ರಶ್ನೆಯ ಬಗೆಗೆ ನಾವು ಅನೇಕ ಬಾರಿ ವಿಚಾರ ಮಾಡಿದ್ದೇವೆ. ಆದರೆ ಇಂದು ಪರೀಕ್ಷೆಯ ಗಳಿಗೆ ಬಂದಿದೆ. ಈ ಯುದ್ಧಸಂಬಂಧದಲ್ಲಿ ಮಾತ್ರವಲ್ಲ. ಸ್ವರಾಜ್ಯ ಪ್ರಾಪ್ತಿಗೆ ನಮ್ಮ ಹೋರಾಟ ಮತ್ತು ಹಿಂದೂ-ಮುಸ್ಲಿಮರ ಐಕ್ಯತೆ ಇವುಗಳ ಸಂಬಂಧದಲ್ಲಿಯೂ ಬಂದಿದೆ. ಇದನ್ನೂ ನೆನಪಿನಲ್ಲಿಡಿ. ನಿಮಗೆ ಚರಖಾದಲ್ಲಿ ಶ್ರದ್ಧೆ ಇಲ್ಲದಿದ್ದರೆ ನಿಮ್ಮ ಅಹಿಂಸೆ ಪರಿಣಾಮಕಾರಿಯಾದ ಕ್ರಿಯಾಶಕ್ತಿಯನ್ನು ಪಡೆಯಲಾರದು. "ಹಿಂದ್ ಸ್ವರಾಜ್" ಎಂಬ ಪುಸ್ತಕವನ್ನು ನೀವು ನನ್ನ ದೃಷ್ಟಿಯಿಂದ ಓದಬೇ ಕೆಂದು ಸೂಚಿಸುತ್ತೇನೆ. ಅದರಲ್ಲಿ ಭಾರತವನ್ನು ಹೇಗೆ ಅಹಿಂಸಾತ್ಮಕ ಮಾಡಬೇಕೆನ್ನುವ ವಿಷಯ ಹೇಳುವ ಅಧ್ಯಾಯವನ್ನು ನೋಡಿ, ದೊಡ್ಡ ಯಂತ್ರೋಪಕರಣಗಳ ಕೈಗಾರಿಕಾ ಕೇಂದ್ರಗಳ ತಳಹದಿಯ ಮೇಲೆ ಅಹಿಂಸೆಯನ್ನು ಕಟ್ಟಲು ಸಾಧ್ಯವಿಲ್ಲ. ಆದರೆ ಸ್ವಯಂ ಪರಿಪೂರ್ಣ ಹಳ್ಳಿಗಳ ತಳಹದಿಯ ಮೇಲೆ ಕಟ್ಟಬಹುದು. ಹೆರ್ ಹಿಟ್ಲರ್ ಒಂದು ವೇಳೆ ಹಾಗೆ ಮನಸ್ಸುಳ್ಳವನಾದರೂ ಅಹಿಂಸೆಯಿಂದ ಕೂಡಿದ ಏಳು ಲಕ್ಷ ಹಳ್ಳಿಗಳನ್ನು ನಾಶಮಾಡಲು ಶಕ್ತನಾಗಲಾರ. ಹೀಗೆ ಮಾಡಲು ಹೋದರೆ ತಾನೇ ಅಹಿಂಸೆಯ ಮನುಷ್ಯನಾಗುವ ಸಂಭವವಿದೆ. ನಾನು ಕಲ್ಪಿಸಿ ಕೊಂಡಿರುವ ಹಳ್ಳಿ ಜೀವನದ ವ್ಯವಸ್ಥೆಯಲ್ಲಿ ಶೋಷಣೆ ಇಡಲು ಸಾಧ್ಯವಿಲ್ಲ. ಶೋಷಣೆಯೇ ಹಿಂಸೆಯ ಜೀವಾಳ. ಆದ್ದರಿಂದ ಅಹಿಂಸೆಯನ್ನು ಪಾಲಿಸು ವವರಾಗಬೇಕಾದರೆ ನೀವು ಹಳ್ಳಿಯ ಮನೋಧರ್ಮವನ್ನುಳ್ಳವರಾಗಬೇಕು. ಹಳ್ಳಿಯ ಮನೋಧರ್ಮವುಳ್ಳವರಾಗಬೇಕಾದರೆ ಚರಖಾದಲ್ಲಿ ಪೂರ್ಣ ಶ್ರದ್ಧೆ ಇರಬೇಕು.[೨೬]

# ೨೭. ಸರ್ ಸಾಮ್ಯುಯಲ್‌ರ ಭಾಷಣವನ್ನು ಕುರಿತು ಕೊಟ್ಟ ಹೇಳಿಕೆ.

[ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಅಕ್ಟೋಬರ್ ೨೬ನೆಯ ತಾರೀಖು ಕಾಂಗ್ರೆಸ್ಸಿನ ನಿಲುವನ್ನು ಕುರಿತು ಚರ್ಚೆ ನಡೆಯಿತು. ಸರ್ ಸಾಮ್ಯುಯಲ್‌ರ ಭಾಷಣವನ್ನು ಕುರಿತು ಪ್ರಸ್ತಾಪಿಸುತ್ತಾ ಗಾಂಧೀಯವರು ಈ ರೀತಿ ನುಡಿದರು.]

ಆತನು ತನ್ನ ಕರ್ತವ್ಯವನ್ನು ನೆರವೇರಿಸುವುದಕ್ಕೆಂದು ಮಾತಾಡಿದುವಂತೆ ನಾನೂ ಮಾಡಬೇಕೆಂದಿದ್ದೇನೆ. ಅದೇ ಆದರ ನನಗೆ ದೊರೆಯುವುದೆಂದು ಆಶಿಸುತ್ತೇನೆ. ಭಾರತ ದೇಶಕ್ಕೆ ಸಾಮ್ರಾಜ್ಯಾಂತರ್ಗತ ಸ್ಥಾನಮಾನ—(ಡೊಮಿನಿಯನ್ ಸ್ಟೇಟಸ್) ಅದು ಸ್ವಾತಂತ್ರ್ಯವೇ ಆಗದಿದ್ದ ಪಕ್ಷಕ್ಕೆ—ಅದರಲ್ಲಿ ಏನಾದರೂ ಅರ್ಥವುಂಟೆ? ಅವರ ಕಲ್ಪನೆಯಲ್ಲಿ ಕಾಮನ್‌ವೆಲ್ತ್‌ನಿಂದ ಪ್ರತ್ಯೇಕಗೊಂಡು ದೂರ ಸರಿಯಲು ಅಧಿಕಾರವುಂಟೆ? ಬ್ರಿಟಿಷರು ಚಕ್ರಾಧಿಪತ್ಯ ನಡೆಸಬೇಕೆಂಬ ತಮ್ಮ ಅಧಿಕಾರ ಕಾಂಕ್ಷೆಯನ್ನು ಬಿಟ್ಟರೆಂಬ ಹೇಳಿಕೆಯನ್ನು ಕೇಳಿ ಸಂತೋಷವಾಯಿತು. ನಿಜವಾಗಿಯೂ ಈ ಆಕಾಂಕ್ಷೆಯನ್ನು ಬಿಟ್ಟಿರುವರೆ ಎಂಬುದನ್ನು ತೀರ್ಮಾನಿಸಲು ಭಾರತೀಯರಿಗೇ ಬಿಡಲು ಅವರು ಸಮ್ಮತಿಸುವರೆ? ಹಾಗೆ ಬಿಡುವುದಾದರೆ, ಕಾನೂನಿನ ರೀತಿಯಾಗಿ ಭಾರತ ಸ್ವತಂತ್ರವೆಂದು ಘೋಷಿಸುವುದಕ್ಕೆ ಪೂರ್ವಭಾವಿಯಾಗಿಯೇ ಇದರ ನಿದರ್ಶನ ಎದ್ದು ಕಾಣಬೇಕು. ಅಧಿಕಾರಯುತ ಘೋಷಣೆಯಾಗಬೇಕೆಂಬ ಕಾಂಗ್ರೆಸ್ಸಿನ ಕೇಳಿಕೆಗೆ ವಿರುದ್ಧವಾಗಿ ಅಲ್ಪ ಸಂಖ್ಯಾತರ ರಕ್ಷಣೆಯ ಹೊಣೆಗಾರಿಕೆ ತಂದೊಡ್ಡಿದಾಗ ಸರ್ ಸಾಮ್ಯುಯಲ್ ಹೋರ್ ಅವರು ಮಾಡಿರುವ ದೊಡ್ಡ ಪ್ರವಚನ ತಿಳಿಯಲಿಲ್ಲವೆಂದು ಕಾಣುತ್ತದೆ. ಭಾರತೀಯರ ಅಭಿಪ್ರಾಯವೇನೆಂದು ಕಂಡುಕೊಳ್ಳಬೇಕೆಂದು ಕಾಂಗ್ರೆಸ್ ಕೇಳಲಿಲ್ಲ. ಅದು ಬ್ರಿಟಿಷರ ಉದ್ದೇಶವನ್ನು ಘೋಷಿಸಬೇಕೆಂದು ಕೇಳಿತು. ಭಾರತ ಸ್ವತಂತ್ರವಾಗುವುದರಿಂದ ಅಪಾಯಕ್ಕೆ ಗುರಿಯಾಗುವ ಹಕ್ಕುಗಳುಳ್ಳ ಯಾವ ಅಲ್ಪ ಸಂಖ್ಯಾತರ ಗುಂಪೂ ಭಾರತದಲ್ಲಿಲ್ಲವೆಂದು ನಾನು ತೋರಿಸಲು ಪ್ರಯತ್ನಿಸಿದ್ದೇನೆ. ಸರ್ ಸಾಮ್ಯುಯಲ್ ಹೋರ್ ಅವರು ಐರೋಪ್ಯರನ್ನೂ ಅಲ್ಪ ಸಂಖ್ಯಾತರಲ್ಲಿ ಸೇರಿಸಿದ್ದಾರೆಂದೇ ನಾನು

ಗಮನಿಸಿದೆ. ಅಲ್ಪ ಸಂಖ್ಯಾತರ ಹಕ್ಕು ಬಾಧ್ಯತೆಗಳ ಬಗೆಗೆ ಎದ್ದಿರುವ ಕೂಗು ಎಷ್ಟು ಖಂಡನೀಯವೆನ್ನುವುದಕ್ಕೆ ಐರೋಪ್ಯ ಜನರ ಮಾತೆತ್ತಿರುವುದೇ ಸಾಕು. ಆದರೆ ಅಲ್ಪ ಸಂಖ್ಯಾತರ ರಕ್ಷಣೆಯ ವಿಷಯದಲ್ಲಿ ಬ್ರಿಟಿಷ್ ಸರಕಾರಕ್ಕೂ ಮತ್ತು ಕಾಂಗ್ರೆಸ್ಸಿಗೂ ಮಧ್ಯೆ ಮತ ಭೇದವಿಲ್ಲ. ಕಾಂಗ್ರೆಸ್ ಭಾರತವೆಂದು ಸರ್ ಸಾಮ್ಯುಯಲ್ ಅವರು ಯಾವುದನ್ನು ಕರೆದಿರುವರೋ ಅದು ಭವಿಷ್ಯದಲ್ಲಿ ತೀರ ಅಸಹಾಯವಾದ ಅಲ್ಪ ಸಂಖ್ಯೆಯಲ್ಲಿರುವ ಪೂರ್ಣ ಸಂಭವವಿದೆಯೆಂಬುದಾಗಿ ಬ್ರಿಟಿಷರು ನೆನಪಿನಲ್ಲಿಡಬೇಕೆಂದು ನಾನು ಆಶಿಸುತ್ತೇನೆ. ಕಾಂಗ್ರೆಸ್ ಮತ್ತು ಕಾಂಗ್ರೆಸ್ಸೇತರವೆಂದು ಸರ್ ಸಾಮ್ಯುಲರ್ ಅವರು ಮಾಡಿರುವ ಭಾರತದ ವಿಭಜನೆ ನನಗೆ ರುಚಿಸಿತು. ಮುಸಲ್ಮಾನರಲ್ಲಿ ಬಹುತೇಕ ಎಲ್ಲರೂ, ಹಿಂದೂ ಮಹಾಸಭೆ ಮುಂತಾದ ಇತರ ಗುಂಪಿನ—ಕಾಂಗ್ರೆಸ್ಸಿಗರೆಂದು ಹೇಳಿಕೊಳ್ಳಲು ನಿರಾಕರಿಸಿದವರು, ಇವರೆಲ್ಲರೂ ಕಾಂಗ್ರೆಸೇತರರೆಂದು ಲೆಕ್ಕ ಹಾಕಿದರೆ ಇವರೇ ಬಹು ಸಂಖ್ಯಾರಾಗಿ ಕಾಂಗ್ರೆಸ್ ಭಾರತವೇ ಅಪಾಯಕ್ಕೆ ಗುರಿಯಾಗುವುದು. ಕಾಂಗ್ರೆಸ್ ನಿರಾಯುಧರಾದ ಅಲ್ಪ ಸಂಖ್ಯಾತರ ಪ್ರತಿನಿಧಿಯಾಗಿದ್ದರೂ ಸ್ವಲ್ಪ ಮಟ್ಟಿಗೆ ಹೊರಗಿನ ಬಲದ ಸಹಾಯವನ್ನು ಪಡೆದು, ಆದರೆ ಹೆಚ್ಚಾಗಿ ತನ್ನ ಸ್ವಂತ ದೃಢ ಸಂಕಲ್ಪದಿಂದಲೇ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳಬೇಕಾಗುವುದು.

ನಾನು ಸೂಚಿಸಿದ ನೈತಿಕ ತತ್ವಗಳ ಆಧಾರದ ಮೇಲೆ ಈಗಿನ ಬ್ರಿಟಿಷ್ ಧೋರಣೆಯನ್ನು ಪರೀಕ್ಷಿಸಿ ತೀರ್ಮಾನಕ್ಕೆ ಬರಬೇಕೆಂದು ಸರ್ ಸಾಮ್ಯುಯಲ್ ಹೋರ್ ಅವರು ಸಾರಿರುವುದು ನನಗೆ ಸಂತೋಷವನ್ನುಂಟು ಮಾಡಿದೆ. ಬ್ರಿಟಿಷ್ ಸರಕಾರದ ಪರವಾಗಿ ಸರ್ ಸಾಮ್ಯುಯಲ್ ಅವರ ಭಾಷಣವೇ ಕೊನೆಯ ಮಾತಾದರೆ ಬ್ರಿಟಿಷ್ ರಾಜಕೀಯ ನೀತಿ ದೋಷಯುಕ್ತವೆಂದು ನಾನು ಸೂಚಿಸುವ ಸಾಹಸವನ್ನು ಮಾಡುತ್ತೇನೆ. ಅಸಹಕಾರ, ಬರಡು ತತ್ತ್ವವೆಂದು ಸರ್ ಸಾಮ್ಯುಯಲ್ ಅವರು ಅಪಹಾಸ್ಯ ಮಾಡಿದ್ದಾರೆ. ಅವರು ಎಣಿಸಿರುವಷ್ಟು ಅದು ಬರಡಲ್ಲವೆಂದು ನನ್ನ ನಿಶ್ಚಿತ ಅಭಿಪ್ರಾಯ. ಕೋಟ್ಯಂತರ ಭಾರತೀಯರ ದೃಷ್ಟಿಯಲ್ಲಿ ಅದು ಶಕ್ತಿಯುತ ಸಾಧಕವೆಂದು ತೋರಿದೆ. ನಾನು ಆಶಿಸುವಂತೆ ಕಾಂಗ್ರೆಸ್ ನಿಜವಾಗಿಯೂ

ಅಹಿಂಸಾ ಮಾರ್ಗವನ್ನು ಮುಂದೆಯೂ ಅವಲಂಬಿಸಿದರೆ ಈ ಅಸಹಕಾರ ತತ್ತ್ವವು ಮುಂದೆಯೂ ತನ್ನ ಶಕ್ತಿಯನ್ನು ತೋರಿಸಬಲ್ಲದು. ಕಾಂಗ್ರೆಸ್ ಕೈಗೊಳ್ಳುವ ನಿರ್ಧಾರವನ್ನು ಯಾರೂ ದುರ್ಲಕ್ಷ್ಯಮಾಡದೆ ಎಲ್ಲರನ್ನೂ ಕರ್ತವ್ಯೋನ್ಮುಖರಾಗಿ ಮಾಡುವ ಆದೇಶವಾಗಿದೆ. ಇದರಿಂದ ಕಾಂಗ್ರೆಸ್, ಮತ್ತು ಬ್ರಿಟಿಷ್ ಸರಕಾರ, ಉಭಯತ್ರರ ಸತ್ತ್ವ ಪರೀಕ್ಷೆಯೂ ಆಗುತ್ತದೆ. ಈರ್ವರೂ ತಮ್ಮ ತಮ್ಮ ಕಾರ್ಯವನ್ನೂ ಪಾತ್ರವನ್ನೂ ಸರಿಯಾಗಿ ನಿರ್ವಹಿಸಿದ್ದೇ ಆದರೆ ಇದರ ಪರಿಣಾಮವಾಗಿ ಸೌಹಾರ್ದತೆ ಉದ್ಭವಿಸಲೇ ಬೇಕು; ಬೇರೆ ರೀತಿಯೇ ಇಲ್ಲ.[೨೭]

## ೨೮. ವೈಸರಾಯರ ಆಕಾಶವಾಣಿ ಪ್ರಸಾರ ಭಾಷಣದ ವಿಮರ್ಶೆ

[೧೯೩೯ ಜನವರಿ ೧ನೆಯ ತಾರೀಖು ಗಾಂಧೀ, ರಾಜೇಂದ್ರ ಪ್ರಸಾದ್, ಜಿನ್ನಾ ಮೂವರೂ ಕೂಡಿ ಮಂತ್ರಿ ಮಂಡಲವನ್ನು ವಿಸ್ತರಿಸುವ ವಿಚಾರದಲ್ಲಿ ಬ್ರಿಟಿಷ್ ಸರಕಾರ ಮಾಡಿದ್ದ ಸಲಹೆಯನ್ನು ಚರ್ಚಿಸಲು ವೈಸರಾಯರನ್ನು ಸಂದರ್ಶಿಸಿದರು. ಕಾಂಗ್ರೆಸ್ ಸೂಚನೆಯಂತೆ, ಬ್ರಿಟಿಷ್ ಸರಕಾರವು ತಮ್ಮ ಘೋರಣೆಯನ್ನು ಸ್ಪಷ್ಟಪಡಿಸಿದ ಹೊರತು ಯಾವ ಸಹಕಾರವನ್ನು ನೀಡುವ ವಿಚಾರವನ್ನೂ ಚರ್ಚಿಸಲು ಅವರು ನಿರಾಕರಿಸಿದರು. ಮುಖ್ಯವಾದ ಪ್ರಶ್ನೆಯ ವಿಚಾರವನ್ನು ಗೊಂದಲಕ್ಕೆ ಗುರಿಮಾಡುವಂತೆ ಕೋಮುವಾರು ಪ್ರಶ್ನೆಯನ್ನು ಮಧ್ಯೆತಂದು ಹಾಕಿದ್ದಕ್ಕಾಗಿ ತಮ್ಮ ವಿರೋಧವನ್ನು ಸೂಚಿಸಿದರು. ಸಂವಿಧಾನ ಸಭೆ, ಈ ಕೋಮುವಾರು ಪ್ರಶ್ನೆಯನ್ನು ವಿಚಾರಕ್ಕೆ ತೆಗೆದುಕೊಳ್ಳುವುದೆಂದು ಹೇಳಿದರು. ಈ ವಿಷಯದಲ್ಲಿ ಬ್ರಿಟಿಷರು ಮಧ್ಯೆ ಕೈಹಾಕುವುದರಿಂದ ಒಪ್ಪಂದಕ್ಕೆ ಬರುವುದು ಮತ್ತಷ್ಟು ಕಷ್ಟವಾಗುವುದು. ಕಾಂಗ್ರೆಸ್ ನಾಯಕರ ಈ ನಿಲುವು, ಈ ನಾಯಕರಿಗೂ ತಮಗೂ ಮಧ್ಯೆ ಚರ್ಚೆಯಾಗದಂತೆ ತಡೆಗಟ್ಟುವುದೆಂದು ಜಿನ್ನಾ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಹೀಗಾಗಿ ಬಿಕ್ಕಟ್ಟುಂಟಾಗಿ ಮಾತುಗಳು ಮುಂದುವರಿಯಲು ಅಸಾಧ್ಯವಾದಾಗ ನವೆಂಬರ್ ೫ನೆಯ ತಾರೀಖು ವೈಸರಾಯರು ಒಂದು ಹೇಳಿಕೆಯನ್ನು ಕೊಟ್ಟರು. ಗಾಂಧೀಯವರ ಟೀಕೆ ಹೀಗಿತ್ತು :]

ವೈಸರಾಯರು ಪ್ರಸಾರ ಮಾಡಿದ ಆಕಾಶವಾಣಿಯ ಭಾಷಣವನ್ನೂ ಅವರಿಗೂ ಮತ್ತು ಶ್ರೀ ರಾಜೇಂದ್ರ ಪ್ರಸಾದ್, ಜಿನ್ನಾ ಸಾಹೇಬ ಇವರೊಡನೆ ನಡೆದ ಪತ್ರ ವ್ಯವಹಾರವನ್ನೂ ಗೌರವಪೂರಿತವಾದ ಗಮನದಿಂದ ಓದಿದೆ. ಸೋಲನ್ನೊಪ್ಪಿಕೊಳ್ಳಲು ಅವರ ನಿರಾಕರಣೆಯನ್ನೂ ಅಪರಿಹಾರ್ಯವೆಂದು ಕಾಣುವ ಈ ಸಮಸ್ಯೆಯನ್ನು ಅವರು ಪರಿಹರಿಸುವುದಕ್ಕೆ ದೃಢ ಸಂಕಲ್ಪ ಮಾಡಿರುವುದನ್ನೂ ನಾನು ಸ್ವಾಗತಿಸುತ್ತೇನೆ. ಒಂದು ಪರಿಹಾರವನ್ನು ಹುಡುಕುವುದರಲ್ಲಿ ಅವರಿಗಿರುವಷ್ಟು ಕಾತರತೆಯೇ ನನಗೂ ಇದೆ. ಆದ್ದರಿಂದ ಈ ಹೇಳಿಕೆಗಳ ಬಗೆಗೆ ಕಾಂಗ್ರೆಸ್ಸಿನ ಪ್ರತಿಕ್ರಿಯೆ ಏನೆಂದು ಕಾದು ನೋಡದೆ, ಎಲ್ಲರಿಗೂ ಸಮಾನವಾಗಿರುವ ಉದ್ದೇಶ ಸಾಧನೆಗೆ ಸಹಾಯಕವಾಗುವಂತೆ ಭಾರತಕ್ಕೆ ಸಂಬಂಧಿಸುವ ರೀತಿಯಲ್ಲಿ ಯುದ್ಧದ ಉದ್ದೇಶಗಳೇನೆಂದು ಎಲ್ಲರ ಒಪ್ಪಿಗೆಯನ್ನು ಪಡೆಯುವಂತೆ ಘೋಷಣೆ ಆಗದಿದ್ದರೆ, ಈ ಸಮಸ್ಯೆಯ ಪರಿಹಾರ ಸಾಧ್ಯವಿಲ್ಲವೆಂದು ನಾನು ಸೂಚಿಸಲು ಬಯಸುತ್ತೇನೆ. ಈವರೆಗೂ ಆಗಿರುವ ಘೋಷಣೆಗಳು —ಇಲ್ಲಾಗಲಿ, ಗ್ರೇಟ್ ಬ್ರಿಟನಿನಲ್ಲಿ ಆಗಲಿ—ಹಳೆಯ ಮಾದರಿಯವು. ಅವುಗಳ ವಿಷಯದಲ್ಲಿ ಸ್ವಾತಂತ್ರ್ಯಾಪೇಕ್ಷೆಯುಳ್ಳ ಭಾರತ ಸಂಶಯವನ್ನೂ ಅವಿಶ್ವಾಸವನ್ನೂ ತಾಳಿದೆ. ಚಕ್ರಾಧಿಪತ್ಯದ ಮನೋಧರ್ಮ ಹೋಗಿಲ್ಲವಾದರೆ, ಹಿಂದಿನ ಬಗೆಯ ಮಾತುಗಳನ್ನು ಪೂರ್ತಿಯಾಗಿ ಬಿಡಬೇಕು. ಹೊಸ ಯುಗಕ್ಕೆ ಅನ್ವಯಿಸುವಂತಹ ಭಾಷೆಯನ್ನು ಉಪಯೋಗಿಸಬೇಕು. ಈ ಮೂಲಭೂತವಾದ ಸತ್ಯವನ್ನು ಒಪ್ಪಿಕೊಳ್ಳಲು ಇನ್ನೂ ಸಮಯ ಸನ್ನಿಹಿತವಾಗದಿದ್ದಲ್ಲಿ, ಈ ಸಮಸ್ಯೆಗೆ ಪರಿಹಾರವನ್ನು ಹುಡುಕುವ ಪ್ರಯತ್ನವನ್ನು ಸದ್ಯಕ್ಕೆ ನಿಲ್ಲಿಸಬೇಕೆಂದು ನಾನು ಆಗ್ರಹದಿಂದ ಬಿನ್ನೈಸುವೆನು. ಭಾರತದ ಆಶಯಗಳೇನೇ ಇದ್ದರೂ ಭಾರತದ ವಿಷಯದಲ್ಲಿ ತಮ್ಮ ಧೋರಣೆ ಹೇಗಿರಬೇಕೆಂದು ಯೋಚಿಸಿರುವರೊ ಅದನ್ನು ಸ್ಪಷ್ಟಪಡಿಸಬೇಕಾಗಿದೆಯೆಂದು ಈ ಸಂದರ್ಭದಲ್ಲಿ ನಾನು ಬ್ರಿಟಿಷ್ ರಾಜತಂತ್ರ ವಿಶಾರದರಿಗೆ ನೆನಪುಕೊಡಲು ಬಯಸುವೆನು. ಗುಲಾಮ ಪದ್ಧತಿಯನ್ನು ರದ್ದು ಮಾಡಬೇಕೆಂದು ನಿಶ್ಚಯಿಸಿರುವ ಗುಲಾಮರ ಮಾಲೀಕನು, ಅವರಿಗೆ ಸ್ವಾತಂತ್ರ್ಯ ಬೇಕೆ ಬೇಡವೆ ಎಂದು ತನ್ನ ಗುಲಾಮರನ್ನು ಕೇಳುತ್ತ ಹೋಗುವುದಿಲ್ಲ.

ಭಾರತವನ್ನು ಪಾರತಂತ್ರ್ಯದಿಂದ ಬಿಡುಗಡೆ ಮಾಡಲು—ಹಂತ ಹಂತವಾಗಲ್ಲದೆ ಒಂದೇ ಬಾರಿಗೆ—ಘೋಷಣೆಯನ್ನು ಮಾಡಿದ ಕೂಡಲೇ ತಾತ್ಕಾಲಿಕ ಪರಿಹಾರವನ್ನು ಕಂಡುಹಿಡಿಯುವುದು ಸುಲಭ. ಅಲ್ಪಸಂಖ್ಯಾತರ ಹಕ್ಕುಗಳ ರಕ್ಷಣೆಯನ್ನು ಬಹಳ ಸರಳವಾಗಿ ಮಾಡಿ ಬಿಡಬಹುದು. ಈ ಡೋಲಾಯಮಾನದ ಆಟ ನಿಲ್ಲುವುದು. ಹಂತಗಳಲ್ಲದೆ, ಒಂದೇ ಬಾರಿಗೆ ಪೂರ್ತಿಯಾಗಿ ಅಲ್ಪಸಂಖ್ಯಾತರು ರಕ್ಷಣೆಗೆ ಹಕ್ಕುಳ್ಳವರು. ಯಾವ ಸ್ವಾತಂತ್ರ್ಯದ ಶಾಸನವು ಬಹುಸಂಖ್ಯಾತರಿಗೆ ಎಷ್ಟು ಸ್ವಾತಂತ್ರ್ಯವಿರುವುದೊ ಅಷ್ಟೇ ಸ್ವಾತಂತ್ರ್ಯವನ್ನು ಅಲ್ಪಸಂಖ್ಯಾತರಿಗೂ ನಿಶ್ಚಿತರೂಪದಲ್ಲಿ ಒದಗಿಸುವುದಿಲ್ಲವೊ ಅಂತಹ ಸ್ವಾತಂತ್ರ್ಯ ಶಾಸನಕ್ಕೆ ಬೆಲೆಯೇ ಇಲ್ಲ. ಸಂವಿಧಾನದ ರಚನೆಯಲ್ಲಿ ಅವರೂ ಪೂರ್ಣ ಅಧಿಕಾರವುಳ್ಳ ಭಾಗಿಗಳಾಗುತ್ತಾರೆ. ಇದನ್ನು ಹೇಗೆ ಸಾಧಿಸಬೇಕೆನ್ನುವುದು, ಈ ಸಂವಿಧಾನವನ್ನು ರಚಿಸುವ ಪವಿತ್ರ ಕರ್ತವ್ಯವನ್ನು ಯಾವ ಪ್ರತಿನಿಧಿಗಳಿಗೆ ಒಪ್ಪಿಸಲಾಗುತ್ತದೆಯೋ ಅವರ ವಿವೇಕದ ಮೇಲೆ ಅವಲಂಬಿಸಿದೆ. ಈವರೆಗೂ ಎಲ್ಲ ಅಧಿಕಾರವನ್ನೂ ಬ್ರಿಟನ್ ತನ್ನ ಕೈಯಲ್ಲಿಟ್ಟುಕೊಂಡಿತ್ತು. ಸಾಮ್ರಾಜ್ಯಶಾಹೀ ಪದ್ಧತಿಯಲ್ಲಿ ಇದು ಅನಿವಾರ್ಯ. ಇದಕ್ಕಾಗಿ ಅಲ್ಪಸಂಖ್ಯಾತರನ್ನು ಬಹುಸಂಖ್ಯಾತರ ಮೇಲೆ ಅದು ಎತ್ತಿ ಕಟ್ಟಿತು. ಹೀಗಾಗಿ ಜನಾಂಗಕ್ಕೆ ವಿವಿಧ ಭಾಗದವರೆಲ್ಲರೂ ಒಪ್ಪುವಂತಹ ಏರ್ಪಾಡು ಅಸಾಧ್ಯವೇ ಆಗುತ್ತಿತ್ತು. ಅಲ್ಪಸಂಖ್ಯಾತರ ರಕ್ಷಣೆಗೆ ಸರಿಯಾದ ಸೂತ್ರವನ್ನು ಕಂಡುಹಿಡಿಯುವ ಹೊಣೆಯನ್ನು ಅವರ ಮೇಲೆಯೇ ಹೊರಿಸಬೇಕು. ಎಂದಿನವರೆಗೂ ಈ ಹೊರೆಯನ್ನು ತಾನೇ ಹೊರುವುದು ತನ್ನ ಪವಿತ್ರ ಕರ್ತವ್ಯವೆಂದು ಬ್ರಿಟನ್ ಭಾವಿಸುವುದೊ, ಅಂದಿನವರೆಗೂ ಭಾರತವನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವುದು ಆವಶ್ಯಕವೆಂದು ಅದು ಭಾವಿಸುವುದು. ದೇಶದ ವಿಭಜನೆ ತಡವಾಗುವುದನ್ನು ಸಹಿಸಲಾರದ ದೇಶಭಕ್ತರು ಹೋರಾಟಕ್ಕಿಳಿಯುವರು; ನನ್ನ ಮಾರ್ಗದರ್ಶನ ಸಾಧ್ಯವಾದರೆ ಅಹಿಂಸಾ ಮಾರ್ಗದಲ್ಲಿ; ಅದಿಲ್ಲದೆ ನಾನು ಈ ಪ್ರಯತ್ನದಲ್ಲಿ ಮಡಿದೆನಾದರೆ—ಹಿಂಸಾಮಾರ್ಗವನ್ನು ಅವರು ಕೈಗೊಳ್ಳುವರು. ಈ ಯುದ್ಧ ಭಗವಂತನ ಶಾಪ. ಇದನ್ನು ವರವನ್ನಾಗಿ ಬ್ರಿಟನ್ ರೂಪುಗೊಳಿಸುವುದೆಂದು ನಾನು

ವಿಶ್ವಾಸವನ್ನು ಹೊಂದಿದ್ದೆ. ಈಗಲೂ ಹೊಂದಿದ್ದೇನೆ. ಈ ಯುದ್ಧದಲ್ಲಿ ಪ್ರವೇಶ ಮಾಡಿದ್ದಕ್ಕೆ ಸಮರ್ಥನೆಯಾಗಿ ಮತ್ತು ಯುದ್ಧವನ್ನು ಬೇಗ ಕೊನೆಗಾಣಿಸಲು ತಾನು ಮಾಡಬೇಕಾದ ಅವಶ್ಯ ಕರ್ತವ್ಯವೆಂದರೆ ಪಾರತಂತ್ರ್ಯದಿಂದ ಭಾರತದಂತಹ ದೊಡ್ಡ ಮತ್ತು ಪುರಾತನ ದೇಶವನ್ನು ವಿಮುಕ್ತವನ್ನಾಗಿ ಮಾಡುವುದೆಂದು ಬ್ರಿಟನ್ ಮನಗಂಡರೆ ಈ ಶಾಪ ವರವಾಗಿಯೇ ಪರಿಣಮಿಸುವುದು.

ವೈಸರಾಯರು ಪ್ರಾಮಾಣಿಕರೆಂದು ನಾನು ನಂಬುವುದರಿಂದ ನನ್ನ ಸಹೋದ್ಯೋಗಿಗಳು ತಮ್ಮ ತಾಳ್ಮೆಯನ್ನು ಕಳೆದುಕೊಳ್ಳಬಾರದೆಂದು ನಾನು ಅವರನ್ನು ಆಗ್ರಹ ಪೂರ್ವಕ ಕೇಳಿಕೊಳ್ಳುತ್ತೇನೆ. ಶಾಂತಿಯುತ ಪ್ರತಿಭಟನೆ, ಸಾಧ್ಯವಿಲ್ಲ. ಏಕೆಂದರೆ ಪ್ರಥಮತಃ ವೈಸರಾಯರು ಒಪ್ಪಂದದ ಮಾರ್ಗವನ್ನು ಹುಡುಕುತ್ತಿದ್ದಾರೆ. ಎರಡನೆಯದಾಗಿ ಮುಸ್ಲಿಂಲೀಗ್ ದಾರಿಗೆ ಅಡ್ಡವಾಗಿ ನಿಂತಿದೆ. ಮೂರನೆಯದಾಗಿ ಕಾಂಗ್ರೆಸ್ಸಿನ ಕಾರ್ಯಕರ್ತರಲ್ಲಿ ಅಶಿಸ್ತಿದೆ ; ಒಗ್ಗಟ್ಟಿಲ್ಲ.

ನಾನು ಮೇಲೆ ಹೇಳಿದ ಎರಡನೆಯ ಕಾರಣದ ವಿಷಯದಲ್ಲಿ ಮುಸ್ಲಿಂ ಮಿತ್ರರು ನಾನು ಅವರಿಗೆ ಅಪಮಾನ ಮಾಡಿದೆನೆಂದು ಕೋಪಿಸಿಕೊಳ್ಳ ಬಾರದು. ನಾವು ಮುಸ್ಲಿಂ ಲೀಗಿನೊಂದಿಗೆ ಒಂದು ವ್ಯಾವಹಾರಿಕ ಒಪ್ಪಂದಕ್ಕೆ ಬಾರದಿರುವವರೆಗೂ ಶಾಂತಿಯುತ ಪ್ರತಿಭಟನೆಯೆಂದರೆ ಲೀಗಿನ ವಿರುದ್ಧವಾಗಿಯೂ ಪ್ರತಿಭಟನೆ ಮಾಡಬೇಕಾಗುವುದು. ಆದರೆ ಯಾವ ಕಾಂಗ್ರೆಸ್ಸಿಗನೂ ಇದರಲ್ಲಿ ಭಾಗಿಯಾಗಲಾರ. ನಾನು ಹರಿಜನದಲ್ಲಿ ಬರೆದ ಟಿಪ್ಪಣಿ ಜಿನ್ನಾ ಸಾಹೇಬರಿಗೆ ಡಂಗು ಹೊಡೆದಂತಾಯಿತೆಂದು ನನ್ನ ಗಮನಕ್ಕೆ ಬಂದಿತು. ಆದರೆ ಈ ಸದ್ಯ ಸ್ಥಿತಿಯಲ್ಲಿ ನಾನು ಯಾವ ಸಮರ್ಥನೆ ಮಾಡಲೂ ಹೋಗುವುದಿಲ್ಲ. ಅವರಿಗೂ ಪಂಡಿತ ನೆಹರೂ ಅವರಿಗೂ ಮಧ್ಯೆ ಒಪ್ಪಂದಕ್ಕೆ ಬರುವುದಕ್ಕಾಗಿ ನಡೆಯುತ್ತಿರುವ ಪ್ರಯತ್ನವನ್ನು ಕೆಡಿಸಲು ನನಗೆ ಇಷ್ಟವಿಲ್ಲ. ಈ ಮಾತುಕತೆಗಳು ಮತ್ತೆ ಬೇಗ ಆರಂಭವಾಗಿ, ಕೋಮುವಾರು ಶಾಂತಿ ಸ್ಥಾಪನೆಯಾಗುವುದೆಂದು ಆಶಿಸುತ್ತೇನೆ. ಈ

## ೨೯. ಗಾಂಧೀ ಸೇವಾ ಸಂಘದ ಸಭೆಯಲ್ಲಿ ಮಾಡಿದ ಭಾಷಣ.

[ ಫೆಬ್ರುವರಿ ೨೯ನೆಯ ತಾರೀಖು, ೧೯೪೦, ಗಾಂಧೀ ಸೇವಾ ಸಂಘದ ಏಳು ದಿನಗಳ ಅಧಿವೇಶನ, ಪೂರ್ವ ಬಂಗಾಳದಲ್ಲಿ ಪದ್ಮಾನದಿ ತೀರದಲ್ಲಿರುವ ಮಲಿಕಾಂದ ಎಂಬ ಹಳ್ಳಿಯಲ್ಲಿ ಆರಂಭವಾಯಿತು. ದಾರಿಯಲ್ಲೂ, ಸಂಘದ ಸಭೆಗಳಾಗುತ್ತಿದ್ದಾಗಲೂ ಪ್ರದರ್ಶನಕಾರರು, ಗಾಂಧೀ ವಿರುದ್ಧವಾಗಿ "ನಮಗೆ ಗಾಂಧೀ ಬೇಡ" 'ಗಾಂಧೀ ವಾದಕ್ಕೆ ಧಿಕ್ಕಾರ' "ನಮಗೆ ವಿಶೇಷ ಸಮಿತಿ ಬೇಡ" ಎಂಬ ಕೂಗುಗಳನ್ನು ಎಬ್ಬಿಸುತ್ತಿದ್ದರು. ಸುಭಾಷ್ ಬೋಸರ ಮೇಲೆ ತೆಗೆದುಕೊಂಡಿದ್ದ ಶಿಸ್ತಿನ ಕಾರ್ಯಕ್ರಮ ಮತ್ತು ಬಂಗಾಳ ಪ್ರಾಂತದ ಕಾಂಗ್ರೆಸ್ ಕಮಿಟಿಯನ್ನು ಹಂಗಾಮಿಯಾಗಿ ರದ್ದುಮಾಡಿದುದರ ಫಲ ವಿದು.

ತಮ್ಮ ವಿರುದ್ಧ ನಡೆದ ಈ ಪ್ರದರ್ಶನಗಳಿಂದ ಗಾಂಧೀಯವರಿಗೆ ವೈಯುಕ್ತಿಕವಾಗಿ ಅಪಮಾನವಾಯಿತೆಂದು ಅವರು ಕೋಪಗೊಳ್ಳಲಿಲ್ಲ. ಕಾರ್ಯಕರ್ತರನ್ನುದ್ದೇಶಿಸಿ ಭಾಷಣಮಾಡುತ್ತ ಅವರು ಹೀಗೆ ನುಡಿದರು: ]

ಪರಸ್ಪರ ಹೊಂದಿಕೆ ಇಲ್ಲದ ಪದಾರ್ಥಗಳನ್ನು ಮಿಶ್ರಣಮಾಡಿದರೆ ಅದು ಸಿಡಿಯಲೇ ಬೇಕು. ನೀವು ನೇರವಾಗಿಯೂ ನ್ಯಾಯವಾಗಿಯೂ ವರ್ತಿಸಬೇಕು. ಗೌಣವಾದ ವಿಷಯಗಳಲ್ಲಿ ನೀವು ರಾಜಿಮಾಡಿಕೊಳ್ಳಲು ಸಿದ್ಧರಾಗಿದ್ದರೂ ಸತ್ಯದ ವಿಷಯದಲ್ಲಿ ಅದರಿಂದ ಸರಿದು ರಾಜಿ ಮಾಡಿ ಕೊಳ್ಳುವ ಅಹಿತವಾದ ಸ್ಥಿತಿಗೆ ಬರಬಾರದು. ಅಂತಹ ಪರಿಸ್ಥಿತಿಗಳಿಂದ ನಿವೃತ್ತರಾಗಿ ದೂರವಿರಬೇಕು. ಅದೇ ರಾಜಿಯ ಮರ್ಮ. ಹತ್ತಿರದ ಅಥವಾ ದೂರದ ಗುರಿಯ ಸಾಧನೆಯ ಉದ್ದೇಶವಿಲ್ಲದೆ ಸೇವೆ ಮಾಡುವುದೇ ನಿಮ್ಮ ಧ್ಯೇಯವಾಗಿರಲಿ. ನಿಮ್ಮ ಸುತ್ತಲೂ ಬಡತನ ಆವರಿಸಿದೆ. ಯಾರು ಸಂಕಟದಲ್ಲಿ ಇರುವರೊ—ಅವರು ಮುಸಲ್ಮಾನರಾಗಿರಲಿ, ನಾಮ ಶೂದ್ರ ರಾಗಿರಲಿ, ಅವರ ಸೇವೆಮಾಡಿ. ಸತ್ಯಾಗ್ರಹ ಎಲ್ಲ ಪಕ್ಷಗಳನ್ನೂ ವರ್ಗ ಮತ್ತು ಮತ ಭೇದಗಳನ್ನೂ ಅತಿಕ್ರಮಿಸುವ ತತ್ತ್ವ. ಅದು ನಮ್ಮ ವೈಯುಕ್ತಿಕ ಮತ್ತು ಸಾಮಾಜಿಕ ಜೀವನವನ್ನು ಪೂರ್ಣವಾಗಿ ಹೊಕ್ಕು ವ್ಯಾಪಿಸಿರಬೇಕು. ಕಾಂಗ್ರೆಸ್ಸಿಗೆ ಸದಸ್ಯರನ್ನು ಕೂಡಿಸುವ ಪ್ರಶ್ನೆ ನಿಮ್ಮ ಮುಂದೆ ಇಲ್ಲ. ನಿಮ್ಮ ಪಟ್ಟಿಯನ್ನು ದೊಡ್ಡದನ್ನಾಗಿ ಮಾಡುವ ಉದ್ದೇಶ

ದಿಂದ ಸದಸ್ಯರನ್ನು ಸೇರಿಸುವ ಯೋಜನೆಯನ್ನು ಬಿಟ್ಟುಬಿಡಿ. ಅದು ಅಧಿಕಾರ ಲಾಲಸೆಯ ರಾಜಕೀಯ. ಸುಳ್ಳು ಹೆಸರುಗಳುಳ್ಳ ಸದಸ್ಯರಿಂದ ತುಂಬಿ ಕಲುಷಿತವಾದ ಪಟ್ಟಿ ಇರುವುದಕ್ಕಿಂತಲೂ, ಪಟ್ಟಿಯೇ ಬೇಡ ವೆಂದು ನನ್ನ ಆಶಯ. ನೀವು ಈ ಬಗೆಯಲ್ಲಿ ಮೌನವಾದ ಸದಸ್ಯರಾದರೆ, "ಕಾಂಗ್ರೆಸ್ಸನ್ನು ವಿರೋಧ ಪಕ್ಷದವರು ಆಕ್ರಮಿಸಿಕೊಂಡರೆ ಏನು ಗತಿ" ಎಂದು ನಿಮ್ಮಲ್ಲಿ ಈಗ ಒಬ್ಬರಾದರೂ ಹೇಳಲಾರಿರಿ. ನಿಮಗೆ ಉಪ ನಿಷತ್ತಿನ ಉಪದೇಶ ಗೊತ್ತಿದೆ "ತ್ಯಕ್ತೇನ ಭುಂಜೀಥಾ:"—ತ್ಯಾಗದಿಂದ ಭುಂಜಿಸಿರಿ. ಕಾಂಗ್ರೆಸ್ಸನ್ನು ತ್ಯಾಗಮಾಡಿ ಅದನ್ನು ಭುಂಜಿಸುವಂತಹವರಾಗಿ. ಯಾವುದೋ ಒಂದು ಬಗೆಯಲ್ಲಿ ಅದನ್ನು ಆಕ್ರಮಿಸಬೇಕೆಂಬ ಯೋಚನೆ ಬಂದ ಕೂಡಲೆ, ನನ್ನ ಕೆಲಸ ಮುಗಿಯಿತು—ಭ್ರಷ್ಟನಾದೆ. ಯಾವುದೋ ಯುಕ್ತಿಯಿಂದ ಕಾಂಗ್ರೆಸ್ಸಿನ ಆಕ್ರಮಣದ ಚಿಂತೆ ಇರಬಾರದು: ಋಜು ಮಾರ್ಗದಿಂದ ಎಂದೂ ಸರಿಯಬಾರದು: ಹೀಗೆಮಾಡಿದರೆ ನಿಮ್ಮ ವಿರೋಧಿ ಗಳನ್ನು ನಿರಾಯುಧರನ್ನಾಗಿ ಮಾಡುವಿರಿ. ಸುಳ್ಳು ಹೆಸರುಗಳು ತುಂಬಿದ ಕಾಂಗ್ರೆಸ್ ಸದಸ್ಯರ ಪಟ್ಟಿ ನಿಮ್ಮನ್ನು ಸ್ವರಾಜ್ಯಕ್ಕೆ ಒಯ್ಯಲಾರದು. ಹೇಗೆ ಕಾಗದದ ದೋಣಿ ಪದ್ಮಾ ನದಿಯನ್ನು ದಾಟಿಸಲಾರದೊ ಹಾಗೆ.

(ಅನಂತರ ಹೆಚ್ಚು ಸಂಖ್ಯೆಯಲ್ಲಿ ಕಾರ್ಯಕರ್ತರು ನೆರೆದಿದ್ದ ಸಭೆ ಯನ್ನುದ್ದೇಶಿಸಿ ಹೀಗೆ ಭಾಷಣ ಮಾಡಿದರು.) "ಗಾಂಧೀವಾದಕ್ಕೆ ಧಿಕ್ಕಾರ ವಿರಲಿ" ಎಂಬ ಕೂಗು ಕೇಳಿಸುತ್ತಿತ್ತು. "ವಾತಾವರಣ ವಿಷಮವಾಗಿದೆ ಯೆಂದು ಅರ್ಥಮಾಡಿಕೊಳ್ಳೋಣ. ಇದರೊಂದಿಗೆ ನಾವು ಹೋರಾಡುವ ಬಗೆ ಹೇಗೆ?"

ಹೀಗೆ ಕೂಗುತ್ತಿರುವವರ ಸಂಖ್ಯೆ ಐವತ್ತಿರಲಿ ಐನೂರಿರಲಿ, ಅವ ರನ್ನು ನಾವು ನಿರ್ಲಕ್ಷಿಸುವಹಾಗಿಲ್ಲ. ಅವರ ದೂರು ಏನೆಂಬುದನ್ನು ಕಂಡು ಕೊಳ್ಳಲು ನಾವು ಪ್ರಯತ್ನಿಸಬೇಕು. ನಾವು ಅಹಿಂಸೆಯಲ್ಲಿ ನಂಬಿಕೆ ಇರುವವರಾದರೆ ಅವರನ್ನು ತಿರಸ್ಕಾರ ಬುದ್ಧಿಯಿಂದ ಕಾಣಬಾರದು. ಭಾವೋದ್ರೇಕದ ಚರ್ಚೆಗಳಿಂದ ಅಥವಾ ವೈಯುಕ್ತಿಕ ಆರೋಪಣೆಗಳಿಂದ ಫಲವಿಲ್ಲ. ಅವರು ಹಣಕ್ಕಾಗಿ ಕೂಗುತ್ತಿರುವವರೆಂದು ಹೇಳುವುದು ಉತ್ತರವಾಗಲಾರದು—ಏಕೆಂದರೆ ಯಾರಾರಿಗೆ ರೈಲು ಖರ್ಚು, ಕೂಲಿ

ಒದಗಿಸುತ್ತಾರೊ ಅಂತಹವರೆಲ್ಲರೂ ಇಲ್ಲಿಗೆ ಬರಲು ಸಮ್ಮತಿಸಲಾರರೆಂದು ಖಂಡಿತವಾಗಿ ಹೇಳಬಹುದು. ಸ್ವಲ್ಪಮಟ್ಟಿಗೆ ಕರ್ತವ್ಯ ದೃಷ್ಟಿಯಿಂದ ಹೀಗೆ ಇವರು ವರ್ತಿಸಿರಲೇಬೇಕು. ಅವರು ಯಾವುದರಲ್ಲಿ ಪ್ರೀತಿ ಇಟ್ಟಿರುವರೊ ಅದನ್ನು ಗಾಂಧೀ ವಾದ ನಾಶಮಾಡಲು ಉದ್ಯುಕ್ತವಾಗಿದೆಯೆಂಬ ಅಭಿಪ್ರಾಯ ಅವರ ತಲೆಯಲ್ಲಿ ಹುದುಗಿದೆ. ವಿಷಯ ಇದೇ ಆಗಿದ್ದರೆ ಗಾಂಧೀ ವಾದ ನಾಶವಾಗಬೇಕೆಂದು ಅವರು ಆಶಿಸುವುದು ಸಹಜವೆ. ನಾವು ಈ ದೃಷ್ಟಿಯಿಂದ ಇದನ್ನು ವಿಚಾರಮಾಡಿದರೆ ಉದ್ವೇಗಕ್ಕೆ ಎಡೆಗೊಡಬೇಕಾಗಿಲ್ಲ; ಶಾಂತರಾಗಿರಬಹುದು: ಆಗ ನಾವು ಅವರನ್ನು ಸಂದರ್ಶಿಸಿ, ಅವರೊಂದಿಗೆ ವಾದಿಸಿ, ಅವರ ಕಾರ್ಯಕ್ಕೆ ನಾವು ಅಡ್ಡ ಬರಲಾರೆವೆಂಬ ಭರವಸೆಯನ್ನು ಅವರಿಗೆ ಕೊಡುವ ಪ್ರಯತ್ನಗಳನ್ನು ಮಾಡೋಣ. ನೀವು ತತ್‌ಕ್ಷಣವೇ ಅವರನ್ನು ಒಲಿಸಿಕೊಳ್ಳುವಿರೆಂದು ನಾನು ಹೇಳುತ್ತಿಲ್ಲ. ಆದರೆ ಈ ವಿಷ ಹರಡದಂತೆ ಖಂಡಿತವಾಗಿಯೂ ತಡೆಗಟ್ಟುವಿರಿ ಎನ್ನೋಣ. ಇದಕ್ಕೆ ಪ್ರತಿಭಟನೆ ಮಾಡಿದರೆ ಮತ್ತೊಂದು ವಿಷವನ್ನು ಎರಚಿದಂತಾಗುವುದು. ಒಂದು ವಿಷದಿಂದ ಬೇರೆ ವಿಷಗಳು ಹುಟ್ಟಿಕೊಳ್ಳುವುವು. ಪ್ರೇಮದ ಅಮೃತವೇ ದ್ವೇಷದ ವಿಷವನ್ನು ನಾಶಗೊಳಿಸಲು ಸತ್ತ್ವವುಳ್ಳುದು.

ಆದ್ದರಿಂದ ಈ ಕೂಗುಗಳು ನಿಮ್ಮ ಕೋಪವನ್ನು ಕೆರಳಿಸದಿರಲಿ. ನೀವು ಯಾರೂ "ಮಹಾತ್ಮಾ ಗಾಂಧೀಕೀ ಜೈ" ಎಂಬ ಕೂಗಿನಿಂದ ಅವರ ಕೂಗನ್ನು ಮುಳುಗಿಸುವ ಯೋಚನೆಯನ್ನು ಮಾಡದಿರಿ. ನೀವು ಪ್ರತಿ—ಕೂಗುಗಳನ್ನು ಎಬ್ಬಿಸದೆ ಇದ್ದದ್ದು ಒಳ್ಳೆಯದೇ ಆಯಿತು. ಇದರಿಂದ ಅವರ ಕೂಗು ನಿರ್ವೀರ್ಯವಾಗುವಂತೆ ಮಾಡಿರುವಿರಿ. ಕೆಟ್ಟದು ಏನೂ ಆಗಲಿಲ್ಲ. ಈ ಸಹನೆ ಅಹಿಂಸೆಯಿಂದ ಹುಟ್ಟಿದ್ದೇ ಆದರೆ, ಅವರು ಉತ್ತರೋತ್ತರ ಸುಮ್ಮನಾಗುವರೆಂದು ನಾನು ಖಂಡಿತವಾಗಿ ಹೇಳಬಲ್ಲೆ.'

ಕಾಂಗ್ರೆಸ್ಸಿನ ಸೇವೆಮಾಡಲು ಅದರ ಸದಸ್ಯರಾಗಿರಲೇಬೇಕೆಂದು ಒಂದು ತಪ್ಪು ತಿಳುವಳಿಕೆ. ಕಾಂಗ್ರೆಸ್ ಹೊರಗಿರುವ ಅನೇಕರು, ಅದರೊಳಗಿರುವವರಿಗಿಂತಲೂ ಅದರ ಸೇವೆಯನ್ನು ಉತ್ತಮವಾಗಿ ಮಾಡುತ್ತಿರುವರು. ಆದ್ದರಿಂದ ಯಾರು ಅದರ ಸಮಗ್ರ ಅರ್ಥವನ್ನು ಅರಿತವರಾಗಿ ಚರಖಾದ ಕೆಲಸವನ್ನು ಮಾಡುವರೊ ಅಂಥವರು ಕಾಂಗ್ರೆಸ್ಸಿಗರಿಗಿಂತಲೂ

ಕಾಂಗ್ರೆಸ್ಸಿನ ಸೇವೆಯನ್ನು ಉತ್ತಮ ರೀತಿಯಲ್ಲಿ ಮಾಡುವರೆಂದು ನಾನು ನಿಮಗೆ ಹೇಳಿದ್ದೇನೆ. ನೀವೆಲ್ಲರೂ ವರ್ಷಕ್ಕೆ ಕನಿಷ್ಠ ಪಕ್ಷ ೬೦,೦೦೦ ಗಜಗಳ ದಾರವನ್ನು ನೂಲುವುದಾಗಿ ಪ್ರತಿಜ್ಞೆಮಾಡಿರುವಿರೆಂದು ಕೇಳಿ ನನಗೆ ಸಂತೋಷವಾಯಿತು. ಆದರೆ ಇದರಲ್ಲಿ ನಿಮಗೆ ಮನಸ್ಸಿನಲ್ಲಿ ಸ್ವಲ್ಪವಾದರೂ ಹಿಂಜರಿಯುವಿಕೆ ಇರುವುದಾದರೆ, ನೀವು ಪ್ರತಿಜ್ಞೆಯನ್ನು ಮಾಡಬೇಡಿ. ಪ್ರತಿಜ್ಞೆಯನ್ನು ಮಾಡದೆ ಅಷ್ಟನ್ನು ನೂಲುವ ಪ್ರಯತ್ನಮಾಡಬೇಕೆಂದು ಕೋರುತ್ತೇನೆ.

ಸ್ವಯಂಪೂರ್ಣತೆಗಾಗಿ ನೂಲುವುದರಲ್ಲಿ ಒಂದು ಲೋಪವಿದೆ. ಅದಕ್ಕೆ ನಿಮ್ಮ ಗಮನವನ್ನೆಳೆಯಲು ಬಯಸುತ್ತೇನೆ. ನೀವೇನೋ ಸಹಜವಾಗಿಯೇ ನಿಮ್ಮ ಸ್ವಂತ ಬಟ್ಟೆ ಮಾಡಿಕೊಳ್ಳುವುದಕ್ಕಾಗಿ ನೂಲುವಿರಿ. ಅಷ್ಟು ಪ್ರಮಾಣದಲ್ಲಿ ಬಡ ನೂಲುವವರ ಕೆಲಸವನ್ನು ಕಸಿದುಕೊಂಡಂತೆ ಆಗುತ್ತದೆ. ನೂಲುವುದು ಎಲ್ಲೆಲ್ಲಿಯೂ ವ್ಯಾಪಿಸುವಂತೆ ಮಾಡಲು ನೀವು ನೂಲಬೇಕೆಂದು ನಿಮ್ಮನ್ನು ಕೇಳಿಕೊಳ್ಳುತ್ತಿದ್ದೇನೆ. ನಿಮ್ಮಲ್ಲಿ ಖಾದಿಯನ್ನು ಕೊಳ್ಳಲು ಹಣವಿಲ್ಲದವರು ನೀವೇ ಹಂಜಿಮಾಡಿ ನೂಲುವಿರಿ. ಆದರೆ ನಿಮ್ಮಲ್ಲಿ ಯಾರಿಗೆ ಖಾದಿಯನ್ನು ಕೊಳ್ಳಲು ಶಕ್ತಿಯಿರುವುದೊ ಅಂಥವರು ೬೦,೦೦೦ ಗಜಗಳ ದಾರವನ್ನು ಅಖಿಲ ಭಾರತ ಚರಖಾ ಸಂಘಕ್ಕೆ ಕಳುಹಿಸುವಿರಿ. ಹೀಗೆ ದಾನ ಮಾಡುವುದರಿಂದ ಖಾದಿಯ ಬೆಲೆಯನ್ನು ಇಳಿಸಲು ಸಹಾಯಕರಾಗುವಿರಿ. ಖಾದೀ ಅಗ್ಗವಾಗುವುದರಿಂದ ಈಗ ಸ್ವಂತ ನೂಲು ತೆಗೆಯಲಾರದ ಮತ್ತು ಖಾದಿಯನ್ನು ಕೊಂಡುಕೊಳ್ಳಲಾರದ ಬಡವರು ಖಾದಿಯನ್ನು ಕೊಳ್ಳಲು ಸಹಾಯವಾಗುವುದು. ಇದನ್ನು ತಾವಾಗಿ ಶ್ರಮದ ರೂಪದಲ್ಲಿ ತೆರುವ ತೆರಿಗೆ ಎಂದು ನಾನು ಕರೆಯುವೆನು. ಯೂರೋಪಿನಲ್ಲಿ ಒತ್ತಾಯವಾಗಿ ಸೈನ್ಯಕ್ಕೆ ಸೇರಿ ಸೇವೆ ಸಲ್ಲಿಸಬೇಕು. ಇಲ್ಲಿ ನಾವು ಒತ್ತಾಯವಾದ ಸೈನ್ಯೇತರ ಸೇವೆಯನ್ನು ಸಲ್ಲಿಸೋಣ. ನೀವು ಮಾಡುವುದೆಲ್ಲವನ್ನೂ ನೀವು ಬುದ್ಧಿಪೂರ್ವಕವಾಗಿ ಸ್ವಯಂಪ್ರೇರಣೆಯಿಂದ ಸೇವಾಕಾಂಕ್ಷೆಯಿಂದ ಮಾಡಬೇಕು.

ಖಾದಿಯ ಜೊತೆಗೆ ಇತರ ಗ್ರಾಮೋದ್ಯೋಗಗಳಿವೆ. ಹರಿಜನ ಸೇವೆ ಇದೆ. ಇತರ ರಚನಾತ್ಮಕ ಕಾರ್ಯಕ್ರಮಗಳೂ ಇವೆ. ಇವೆಲ್ಲವನ್ನೂ

ದೃಢವಾದ ರೀತಿ ನಡೆಸಿದ್ದೇ ಆದರೆ ಶಾಂತಿಯುತ ಶಾಸನೋಲ್ಲಂಘನಕ್ಕೆ ಆವಶ್ಯಕತೆಯೇ ಇಲ್ಲದಂತಾಗುವುದು. ಹಿಂದೂ–ಮುಸ್ಲಿಂ ಘರ್ಷಣೆ ತಾನಾಗಿ ಶಾಂತವಾಗುವುದು. ನಮಗೂ ತೀವ್ರಗಾಮಿಗಳಿಗೂ ಪರಸ್ಪರ ಇರುವ ತಿಕ್ಕಾಟ ಮಾಯವಾಗುವುದು. ನಮ್ಮ ಗುಲಾಮತನದ ಸಂಕೋಲೆಗಳು ಮುರಿದುಬೀಳುವವು. ನನ್ನ ದೃಷ್ಟಿಯಲ್ಲಿ ಇದೇ ಶ್ರೇಷ್ಠವಾದ ರಾಷ್ಟ್ರ ಧರ್ಮ.೨೯

## ೩೦. ಗಾಂಧೀ ಸೇವಾ ಸಂಘವನ್ನು ಕ್ಲಿಪ್ತ ಸದಸ್ಯರಿಗೆ ಪರಿಮಿತಗೊಳಿಸುವಾಗ ಮಾಡಿದ ಭಾಷಣ.

[ನಿರ್ಣಯದ ಮೇಲೆ ಭಾಷಣ ಮಾಡುತ್ತಾ, ಸಂಘದ ಗುಣದ ದೃಷ್ಟಿಯಿಂದ ಮೂಲಭೂತವಾದ ಬದಲಾವಣೆ ಆಗುತ್ತಿದ್ದರೂ ಇನ್ನೂ ಹೆಚ್ಚು ಶುದ್ಧವಾದ ಮತ್ತು ಉತ್ತಮವಾದ ರೀತಿಯಲ್ಲಿ ಪುನರ್ರಚನೆಯಾಗಬೇಕೆಂದು ನಿರೀಕ್ಷಿಸಲಾಗಿತ್ತು.]

ಈಗಿರುವವರ ಸ್ಥಾನದಲ್ಲಿ ಮತ್ತೊಂದು ತಜ್ಞರ ಗುಂಪನ್ನು ಹುಡುಕುವ ಪ್ರಯತ್ನದಲ್ಲಿ ವಿಫಲರಾಗಿ ನಮ್ಮ ದಿವಾಳಿತನವನ್ನು ನಾವು ಕಂಡುಕೊಂಡೆವು. ಆದ್ದರಿಂದ ಒಂದು ಹಂಗಾಮಿ ತೀರ್ಮಾನವನ್ನು ಮಾಡಬೇಕಾಯಿತು. ಬೇರೆ ಉಪಾಯವಿರಲಿಲ್ಲ. ವಸ್ತುಸ್ಥಿತಿ ಏನೆಂದರೆ ಯಾವ ಸಂಘ ನಿಮಗೆ ಸ್ಫೂರ್ತಿಯನ್ನೂ ಬಲವನ್ನೂ ಕೊಡುತ್ತದೆಂದು ತಿಳಿದಿದ್ದಿರೊ ಅದು ನಿಮಗೆ ಕೊಡಲಾರದೆ ಹೋಯಿತು. ಅದರ ಅಧ್ಯಕ್ಷರು ನಿಮಗೆ ಸ್ಫೂರ್ತಿಯನ್ನೂ ಬಲವನ್ನು ಕೊಟ್ಟರು—ಅಧ್ಯಕ್ಷರಾಗಿದ್ದದ್ದರಿಂದಲ್ಲ—ಅವರು ಕಿಶೋರ್‌ಲಾಲ್ ಮಶ್ರುವಾಲಾ ಆದ್ದರಿಂದ. ಸಂಘದ ಸದಸ್ಯತ್ವವನ್ನು ಬಿಟ್ಟರೂ ನೀವು ಪ್ರತಿಯೊಬ್ಬರೂ ಸಂಘದ ಧ್ಯೇಯದ ಪ್ರತಿನಿಧಿಗಳಾಗಿರಬೇಕು. ನಾನು ಸಾಬರಮತಿಯ ಸತ್ಯಾಗ್ರಹ ಆಶ್ರಮವನ್ನು ವಿಸರ್ಜನೆ ಮಾಡಿದಾಗ, ಅಲ್ಲಿನ ಪ್ರತಿಯೊಬ್ಬನೂ ಮುಂದೆ ಸಂಚಾರದಲ್ಲಿರುವ ಆಶ್ರಮವಾಗಿರಬೇಕು ಎಂದು ಹೇಳಿದೆನು. ಆದೇ ರೀತಿ

ಯಲ್ಲಿ ನಿಮ್ಮಲ್ಲಿ ಪ್ರತಿಯೊಬ್ಬನೂ ಸಂಚಾರಮಾಡುವ ಗಾಂಧೀ ಸೇವಾ ಸಂಘವಾಗಿರಬೇಕು. ಈಗ ಪ್ರತಿಯೊಬ್ಬ ಸದಸ್ಯನೂ ಹೆಚ್ಚಾಗಿ ಅಂತರ್ಮುಖಿಯಾಗಿ ಮುಂದೆ ಕಾದಿರುವ ಮಹತ್ಕಾರ್ಯಗಳನ್ನು ಮಾಡಲು ಸಿದ್ಧನಾಗಬೇಕು. ತಾನು ಪ್ರತಿಜ್ಞೆಮಾಡಿರುವ ಧ್ಯೇಯ ಸಾಧನೆ ತನ್ನ ಜೀವನದಲ್ಲಿ ಪೂರ್ಣವಾಗುವಂತೆ ದೃಢ ಸಂಕಲ್ಪವನ್ನು ಕೈಗೊಂಡು—ಅವಶ್ಯವಿದ್ದಲ್ಲಿ ಹರ್ಷ ಚಿತ್ತದಿಂದ ಮರಣವನ್ನು ಎದುರಿಸಲೂ ಸಿದ್ಧನಾಗಬೇಕು. ನೀವು ಹಾಗೆ ಮಾಡುವುದಾದರೆ ನೀವು ನಿಮ್ಮ ಮನೆಗಳಿಗೆ ಹಗುರವಾದ ಹೃದಯದಿಂದ ಹಿಂತಿರುಗುವಿರಿ, ದುಃಖ ಅಥವಾ ವಿಷಣ್ಣತೆಯಿಂದಲ್ಲ. ನಿಜವಾಗಿಯೂ ದುಃಖಕ್ಕಾಗಲಿ ವಿಷಾದಕ್ಕಾಗಲಿ ಕಾರಣವಿಲ್ಲ. ಯಾರು ತಾನು ಅರಿತವನಲ್ಲನೆಂದು ಅರಿಯುವನೋ ಅವನೇ ನಿಜವಾದ ವಿವೇಕಿಯೆಂದು ಹೇಳಲಾಗಿದೆ. ಈಗ ನಮ್ಮ ಧ್ಯೇಯಕ್ಕನುಗುಣವಾಗಿ ನಾವು ಆಚರಿಸುತ್ತಿಲ್ಲವೆಂದು ಅರಿತಿರುವೆವು. ಇದರಿಂದ ನಾವು ಶೀಲವಂತರೆಂಬ ಆತ್ಮ ಪ್ರತಿಷ್ಠೆಯ ಭಾರವನ್ನು ಕಳೆದುಕೊಳ್ಳುತ್ತಿದ್ದೇವೆ. ಈ ಅರಿವು ನಿಮಗೆ ಹೆಚ್ಚು ಶಕ್ತಿಯನ್ನು ಒದಗಿಸಬೇಕು. ಕಾಲಕ್ರಮದಲ್ಲಿ ನಿಮ್ಮ ಹೊಸ ಅಧ್ಯಕ್ಷರಾದ ರಾಜಾಜಿ ಅವರಿಗೆ ನೀವು ಸಂಶೋಧನಾ ಸದಸ್ಯರಾಗಿ ಸೇರಲಿಚ್ಛಿಸುವಿರೆಂದು ಹೇಳುವಿರಿ. ಹೊಸದಾಗಿ ನೇಮಕವಾಗಿರುವ, ಮುಂದೆ ಒಂದು ದಿನ ರೂಪಗೊಳ್ಳಬೇಕೆಂದು ನಾವು ಆಶಿಸುವ, ತಜ್ಞರ ಗೋಷ್ಠಿಯ ಬೀಜರೂಪವಾಗಿದೆ. ಸಂಶೋಧನಾ ಸದಸ್ಯನಾಗಿ ಒಬ್ಬನೇ ಇದ್ದರೂ—ಆತ ತನ್ನ ಕಾರ್ಯವನ್ನು ಶುದ್ಧ ಸಂಕಲ್ಪದಿಂದ ಮಾಡಿದ್ದೇ ಆದರೆ ಈ ಸಂಘದ ಕೆಲಸವನ್ನು ಮುಂದುವರಿಸುವನು. ಈ ದಿನ ನಾವು ಮಾಡಿದ ಕಾರ್ಯ ನಮ್ಮನ್ನು ಶುದ್ಧವನ್ನಾಗಿ ಮಾಡುವುದು ಮಾತ್ರವಲ್ಲದೆ, ನಮ್ಮನ್ನು ಬಲಗೊಳಿಸುವುದು. ಸಂಘದ ನಿಯಮಾವಳಿಯನ್ನು ಕಿಶೋರಲಾಲ್ ಅವರು ನನ್ನೊಡನೆ ಸಮಾಲೋಚಿಸಿ ಅಪಾರ ಶ್ರದ್ಧೆಯಿಂದಲೂ ತಾಳ್ಮೆಯಿಂದಲೂ ರಚಿಸಿದರು. ಪ್ರಾಯಶಃ ನಾನು ಮಾಡಿರುವ ಕಾರ್ಯ ಸೂಕ್ತವಾದದ್ದು. ಹಾಗಾದರೆ—ನಾನಂತೂ ಅದು ಸೂಕ್ತವೆಂದೇ ಭಾವಿಸಿದ್ದೇನೆ—ಸತ್ಯವನ್ನು ಅರಸುವ ಕಾರ್ಯದಲ್ಲಿ ಒಂದು ಹೆಜ್ಜೆಯನ್ನು ಮುಂದೆ ಇಟ್ಟಿದ್ದೇನೆಂದು ನಾನು ನಿಮಗೆ ದೃಢವಾಗಿ ಆಶ್ವಾಸನ ಕೊಡುತ್ತೇನೆ. ೩೦

## ೩೧. ರಾಮಗಡದ ಅ. ಭಾ. ಕಾಂ. ಸಮಿತಿಯಲ್ಲಿ ಭಾಷಣ—ಮಾರ್ಚ್, ೧೯೪೦

[ ಕಾಂಗ್ರೆಸ್ಸಿನಿಂದ ನಿವೃತ್ತರಾದ ಮೇಲೆ, ಆರು ವರ್ಷಗಳ ತರುವಾಯ, ವಿಷಯ ನಿರ್ಧಾರಕ ಸಮಿತಿಯ ಸಭೆಯಲ್ಲಿ, ಪ್ರತಿನಿಧಿಗಳ ಸಮ್ಮೇಳನದಲ್ಲಿ ಮಾತನಾಡುವ ಇಚ್ಛೆಯನ್ನು ಗಾಂಧೀಜೀ ಮೊಟ್ಟಮೊದಲು ತೋರಿಸಿದರು. ಮಾರ್ಚ ೧೮ರ ರಾತ್ರಿ ೧೦ ಗಂಟೆಯ ವೇಳೆಯಲ್ಲಿ ಗಾಂಧೀಜೀ ಭಾಷಣಮಾಡಿದರು. ಸುಮಾರು ೨೦ ಸಾವಿರ ಜನ ಸಂಪೂರ್ಣ ನಿಶ್ಶಬ್ದದಿಂದ ಭಾಷಣ ಕೇಳಿದರು.]

ಬೊಂಬಾಯಿಯಲ್ಲಿ ನಾನು ಕಾಂಗ್ರೆಸ್ಸಿನಿಂದ ನಿವೃತ್ತನಾದಂದಿನಿಂದ ನನಗೂ ಕಾಂಗ್ರೆಸ್ ವರ್ಕಿಂಗ್ ಕಮಿಟಿಗೂ ಈ ಒಂದು ಒಪ್ಪಂದ ಆಗಿದೆ. ಅಖಿಲ ಭಾರತ ಕಾಂಗ್ರೆಸ್ ಸಮಿತಿಯಲ್ಲಾಗಲಿ ವಿಷಯ ನಿರ್ಧಾರಕ ಸಮಿತಿಯಲ್ಲಾಗಲಿ ಬಹಿರಂಗ ಅಧಿವೇಶನದಲ್ಲಾಗಲಿ ನನ್ನನ್ನು ಭಾಷಣ ಮಾಡಲು ಕೇಳಬಾರದು, ನನ್ನಲ್ಲಿ ಉಳಿದಿರುವ ಅಲ್ಪಸ್ವಲ್ಪ ಸಾಮರ್ಥ್ಯವನ್ನು ಕಾಪಾಡಿಕೊಳ್ಳಲು ಬಿಡಬೇಕು ಎಂದು. ಇವತ್ತು ವಿಷಯ ನಿರ್ಧಾರಕ ಸಮಿತಿಯ ಎದುರಿನಲ್ಲಿ, ಪ್ರತಿನಿಧಿಗಳ ಅಧಿವೇಶನದಲ್ಲಿ ಮಾತಾಡುತ್ತೇನೆ. ಎಂದು ನಾನೇ ಸೂಚಿಸಿದೆ. ವರ್ಕಿಂಗ್ ಕಮಿಟಿ ಅದಕ್ಕೆ ಒಪ್ಪಿತು. ನಿರ್ಣಯವನ್ನು ನೀವು ಅಂಗೀಕರಿಸುವ ಮೊದಲೇ ಮಾತಾಡಬೇಕು ಎಂದಿದ್ದೆ. ಆದರೆ ನಿರ್ಣಯ ಆದಮೇಲೆ ನೀವು ಮಾತನಾಡಿ ಎಂದು ವರ್ಕಿಂಗ್ ಕಮಿಟಿ ಸೂಚಿಸಿತು.

ನಿಮ್ಮನ್ನೆಲ್ಲ ನೋಡಬೇಕು, ನೀವೂ ನನ್ನನ್ನು ನೋಡಬೇಕು, ಬೊಂಬಾಯಿಯಲ್ಲಿ ನಾನು ನಿವೃತ್ತನಾದ ಮೇಲೆ ನನ್ನಲ್ಲೇನಾದರೂ ವ್ಯತ್ಯಾಸವಾಗಿದೆಯೇನೋ ತಿಳಿದುಕೊಳ್ಳಲು ನಿಮಗೆ ಅವಕಾಶ ಕೊಡಬೇಕು ಎಂದು ನನಗೆ ಇಚ್ಛೆಯಿತ್ತು. ಐವತ್ತು ವರ್ಷದ ಸಾರ್ವಜನಿಕ ಜೀವನದ ಅನುಭವ ನನ್ನದು. ಅದರಿಂದ ನಿಮ್ಮ ಮುಖಮುದ್ರೆಯಿಂದ ನಿಮ್ಮನ್ನು ಅರಿತುಕೊಳ್ಳಬಲ್ಲೆ. ಈ ಅವಧಿಯಲ್ಲಿ ಅನೇಕ ಸಂಸ್ಥೆಗಳನ್ನು ಕಟ್ಟಿದೇನೆ. ಸಾವಿರಾರು ಜನರನ್ನು ಕಂಡಿದೇನೆ. ಆದ್ದರಿಂದ ನಿಮ್ಮ ಮನಸ್ಸಿನೊಳಗೆ ಏನಿದೆಯೋ

ಅರಿತುಕೊಳ್ಳುವುದು ನನಗೆ ಕಷ್ಟ ಆಗಬಾರದು. ಆದರೆ ನಿಮ್ಮನ್ನು ನಾನು ನೋಡಬಯಸಿದುದು ನನ್ನ ಸ್ಥಾನ ಏನೋ ತಿಳಿದುಕೊಳ್ಳಲು.

ನೀವು ಚರ್ಚೆ ಮಾಡುವುದರಲ್ಲಿ ಸಾಕಷ್ಟು ಪ್ರಗತಿ ಹೊಂದಿದೀರಿ. ನಿಮ್ಮನ್ನು ಅಭಿನಂದಿಸುತ್ತೇನೆ. ಏಕೆಂದರೆ, ಪ್ರಜಾತಂತ್ರ ಪ್ರಧಾನ ಸಂಸ್ಥೆಯಲ್ಲಿ ಇತರರಿಗೆ ಮನದಟ್ಟು ಮಾಡಿಕೊಡುವ ಶಕ್ತಿ, ಉತ್ತಮ ಮಟ್ಟದ ವಾದಸಾಮರ್ಥ್ಯ ಅತ್ಯಗತ್ಯ. ನೀವು ಸೂಚಿಸುವ ತಿದ್ದುಪಡಿಗಳೂ ಹೆಚ್ಚಿವೆ. ಹೊಸ ಹೊಸ ದೃಷ್ಟಿಯನ್ನು ಒತ್ತಾಯ ಮಾಡುವ ನಿಮ್ಮ ಹುಮ್ಮಸ್ಸೂ ಯೋಗ್ಯವೇ. ಕೆಲವು ತಿದ್ದುಪಡಿಗಳು ಹುಡುಗಾಟದ್ದು, ಅರ್ಥವಿಲ್ಲದ್ದು ಆಗಿದ್ದವು. ಅದಕ್ಕೆ ನಿಮ್ಮನ್ನು ಅಭಿನಂದಿಸಲಾರೆ.

ತೀರ್ಮಾನವನ್ನೂ ನೀವು ಸರ್ವಸಮ್ಮತಿಯಿಂದ ಒಪ್ಪಿದೀರಿ ಎನ್ನಬಹುದು. ಎಲ್ಲೋ ಏಳೆಂಟು ಜನ ಮಾತ್ರ ಒಪ್ಪಲಿಲ್ಲ. ಆದರಿಂದ ನನ್ನ ಜವಾಬದಾರಿ ಹೆಚ್ಚಿತು. ನಿಮ್ಮ ಚರ್ಚೆಯನ್ನೂ ಕೇಳಿದೇನೆ. ನಾನು ಇಷ್ಟಪಟ್ಟಿದ್ದರೆ ನೀವು ಮತ ಕೊಡುವ ಮೊದಲೇ ನಿಮ್ಮನ್ನು ಎಚ್ಚರಿಸಬಹುದಾಗಿತ್ತು. ಆದರೆ ತೀರ್ಮಾನ, ಒಪ್ಪಿಗೆ ಆಗುವ ಮೊದಲು ನಾನು ಅಧಿವೇಶನದಲ್ಲಿ ಭಾಷಣ ಮಾಡಬಾರದು ಎಂದು ವರ್ಕಿಂಗ್ ಕಮಿಟಿ ಸೂಚಿಸಿದುದನ್ನು ನಾನು ಒಪ್ಪಿಕೊಂಡೆ.

ಚರ್ಚೆಯಲ್ಲಿ ನೀವು ಕೆಲವರು ಹೇಳಿದುದಕ್ಕೆ ಉತ್ತರ ಕೊಡಬಯಸುವುದಿಲ್ಲ. ಒಂದು ಮಾತು ಹೇಳುತ್ತೇನೆ. ಹಲ ಕೆಲವು ನಿಯಮಗಳ ಪಾಲನೆ ಆಗದಿದ್ದರೂ ಚಳುವಳಿಗಳನ್ನು ನಡೆಸಿದ ಕಾಲವೂ ಒಂದು ಇತ್ತು, ನನ್ನ ಜೀವನದಲ್ಲಿ. ಆದರೆ ಈಗ ನಿಷ್ಠುರನಾಗುತ್ತೇನೆ; ಆದರೆ ಉದ್ದೇಶಪೂರ್ವಕವಾಗಿಯೇ ಅಲ್ಲ. ದಂಡನ್ನು ನಡೆಸಬೇಕಾದ ದಳಪತಿ ತನ್ನ ನಿಯಮಗಳನ್ನು ಮೊದಲೇ ದಂಡಿಗೆ ತಿಳಿಸಬೇಕು.

ಕೂಡಲೇ ಚಳುವಳಿ ಹೂಡಲು ಅನುಕೂಲ ಸ್ಥಿತಿ ನನಗೆ ಕಾಣಬರುತ್ತಿಲ್ಲವೆಂದು ಹೇಳಬಯಸುತ್ತೇನೆ. ಹಿಂದೆ ನಾವು ಎದುರಿಸಿದುದಕ್ಕಿಂತ ಬಲವಾದ ಕಂಟಕಗಳು ಮುತ್ತಿವೆ. ಒಳಗೂ ಇವೆ, ಹೊರಗೂ ಇವೆ. ನಮಗೇನು ಬೇಕೋ ಅದನ್ನು ಸಂಶಯಕ್ಕೆಡೆ ಇಲ್ಲದಂತೆ ಘೋಷಿಸಿದೇವೆ. ಸರಕಾರವೂ ತನ್ನ ಉದ್ದೇಶವನ್ನು ಅದಷ್ಟು ಸ್ಪಷ್ಟವಾಗಿ ಹೇಳಿದೆ. ಇದ

ರಿಂದ ಹೊರಗಿನ ಕಂಟಕ. ಸಾಲದುದಕ್ಕೆ ಬ್ರಿಟಿಷ್ ಸರಕಾರ ಜಗತ್ ಸಂಗ್ರಾಮದಲ್ಲಿ ತೊಡಗಿದೆ. ಆದುದರಿಂದ ನಾವು ಅವರೊಡನೆ ಹೋರಾಟಕ್ಕೆ ನಿಂತರೆ ಸಾಕಷ್ಟು ಸಂಕಟಕ್ಕೆ ಔತಣ ಕೊಟ್ಟಂತೆ.

ಆದರೆ ನನ್ನ ಎದೆಗುಂದಿಸುವುದು ನಮ್ಮ ಒಳಗಿನ ಕಂಟಕ. ಸತ್ಯಾಗ್ರಹಿಗೆ ಹೊರಗಿನ ಕಂಟಕಗಳ ಅಂಜಿಕೆ ಎಂದೂ ಇಲ್ಲ. ತದ್ವಿರುದ್ಧ, ಹೊರಗಿನ ಅಡಚಣೆಗಳು ಬಂದರೆ ಹೆಚ್ಚು ವಿಜೃಂಭಿಸುತ್ತಾನೆ. ದ್ವಿಗುಣಿತ ಉತ್ಸಾಹ ಶೌರ್ಯಗಳಿಂದ ಅವನ್ನು ಎದುರಿಸುತ್ತಾನೆ. ಈಗ ತಿರುಗು ಮುರುಗು ಆಗಿದೆ ಪರಿಸ್ಥಿತಿ. ಹೊರಗಿನ ಅಡಚಣೆಗಳು ನಮ್ಮನ್ನು ಒಟ್ಟುಗೂಡಿಸಿಲ್ಲ, ಬಲಗೊಳಿಸಿಲ್ಲ, ನಮ್ಮ ಒಳಗಿನ ಅಡಚಣೆಗಳಂತೂ ಹೆಚ್ಚುತ್ತಲೇ ಇವೆ. ನಮ್ಮ ಕಾಂಗ್ರೆಸ್ ರಿಜಿಸ್ಟರುಗಳ ತುಂಬಾ ಸುಳ್ಳು ಸದಸ್ಯರೇ, ಖೋಟಾ ಸದಸ್ಯರೇ. ಕಾಂಗ್ರೆಸ್ಸಿಗೆ ಸೇರಿದರೆ ಅಧಿಕಾರಕ್ಕೆ ಮಣೆ ಹಾಕಿಕೊಂಡಂತೆ ಎಂದು ಅವರಿಗೆ ಗೊತ್ತು. ಆದ್ದರಿಂದಲೇ ಇದು. ಎಂದೆಂದೂ ಕಾಂಗ್ರೆಸ್ಸಿಗೆ ಸೇರುವ ಯೋಚನೆ ಮಾಡದವರೆಲ್ಲ ಈಗ ಬಂದು ಸೇರಿ ಅದನ್ನು ಭ್ರಷ್ಟಗೊಳಿಸಿದಾರೆ. ಸ್ವಾರ್ಥದ ಬಯಕೆಯಿಂದ ಬರುವವರನ್ನು ಹೇಗೆ ತಡೆಯಬೇಕು ? ಇದು ಪ್ರಜಾಸತ್ತಾತ್ಮಕ ಸಂಸ್ಥೆ. ನಮ್ಮಲ್ಲಿ ಶಿಸ್ತು ಇಲ್ಲ. ಇಂಥವರನ್ನು ಸೇರದಂತೆ ತಡೆಯುವಷ್ಟು ಬಲವಾದ ಶುದ್ಧವಾದ ಸಾರ್ವಜನಿಕ ಅಭಿಪ್ರಾಯವೂ ಇಲ್ಲ.

ವರ್ಷಕ್ಕೊಮ್ಮೆ ಮಾತ್ರ, ಅದೂ ವೋಟಿಗಾಗಿ ಪ್ರಾಥಮಿಕ ಸದಸ್ಯರನ್ನು ನಾವು ಮಾತಾಡಿಸುವಷ್ಟು ದಿನ ಈ ಬಲ, ಈ ಪರಿಶುದ್ಧತೆ ಬರುವುದಿಲ್ಲ. ನಮ್ಮ ಸದಸ್ಯರಲ್ಲಿ ಶಿಸ್ತು ಇಲ್ಲ. ಗುಂಪುಗಳಾಗಿ ಒಡೆದು ಹೋಗಿದೇವೆ. ಪ್ರತಿ ಗುಂಪೂ ಹೆಚ್ಚುಹೆಚ್ಚು ಅಧಿಕಾರ ಪಡೆಯಲು ಹೆಣಗುತ್ತಿದೆ. ನಮ್ಮ ನಮ್ಮೊಳಗೆ ಅಹಿಂಸೆ ಅಗತ್ಯ ಎನಿಸಿಲ್ಲ. ನಮಗೆ ಗುಂಪುಗಳಿದ್ದರೆ ಇರಲಿ, ಅವು ಸಂಸ್ಥೆಯನ್ನು ಬಲಗೊಳಿಸಬೇಕೇ ವಿನಾ ಬಲಗುಂದಿಸಬಾರದು, ನಾಶ ಮಾಡಬಾರದು.

೧೯೨೦ರಲ್ಲಿ ಪುನರ್ವ್ಯವಸ್ಥೆ ಮಾಡಿದಾಗಿನಿಂದ ನಮ್ಮದು ಪ್ರಜಾಸತ್ತಾತ್ಮಕ ಸಂಸ್ಥೆಯೂ ಹೌದು, ಹೋರಾಟದ ಸಂಘಟನೆಯೂ ಹೌದು. ಅಹಿಂಸೆಯ ಅರ್ಥದಲ್ಲೇ ಆಗಲಿ, ಸೇನೆಯ ಭಾಷೆಯನ್ನು ನಾವು ಬಳಸಿ

ದೇವೆ. ಹಿಂದೆ ಲೆಕ್ಕವಿಲ್ಲದಷ್ಟು ಸಲ ಹೇಳಿದ್ದನ್ನೇ ಮತ್ತೆ ಹೇಳುತ್ತೇನೆ. ನನ್ನ ದಂಡಿನ ಸಿಪಾಯಿಗಳಾಗುತ್ತೀರೋ? ಅದರಲ್ಲಿ ಪ್ರಜಾತಂತ್ರ ಇಲ್ಲ ಎಂಬುದನ್ನು ಅರಿತುಕೊಳ್ಳಿ. ಪ್ರಜಾ ಸತ್ತಾತ್ಮಕ ಸಂಸ್ಥೆಯ ಅಂಗ ಇರ ಬಹುದು ಸೈನ್ಯ. ಆದರೆ ಅವರೊಳಗೆ ಪ್ರಜಾತಂತ್ರ ಇಲ್ಲ. ದಂಡಿನಲ್ಲಿ ಅದು ಸಾಧ್ಯವಿಲ್ಲ. ನಮ್ಮ ಸಂಸ್ಥೆಗಳಲ್ಲಿ—ಅ. ಭಾ. ಚರಖಾ ಸಂಘ, ಅ. ಭಾ. ಗ್ರಾಮೋದ್ಯೋಗ ಸಂಘಗಳಲ್ಲಿ—ಇಲ್ಲ. ದಂಡಿನಲ್ಲಿ ದಳಪತಿಯ ಮಾತೇ ಶಾಸನ. ಅವನ ನಿಯಮಗಳನ್ನು ಸಡಲಿಸಲು ಸಾಧ್ಯವೇ ಇಲ್ಲ.

ನಾನು ನಿಮ್ಮ ದಳಪತಿ ಎನ್ನುತ್ತಾರೆ. ಇದಕ್ಕಿಂತ ದುರ್ಬಲ ದಳಪತಿ ಇತಿಹಾಸದಲ್ಲೇ ಇಲ್ಲ: ನಿಮಗೆ ನನ್ನಲ್ಲಿರುವ ಆದರಾಭಿಮಾನಿಗಳೇ ನನ್ನ ಬಲ, ನನ್ನ ಸತ್ತೆ. ಅದರ ಬಲ ಇದ್ದ ಹಾಗೆಯೆ ದೌರ್ಬಲ್ಯವೂ ಇವೆ. ನಿಮಗೆ ನನ್ನಲ್ಲಿ ಪ್ರೀತಿ ಇವೆ. ಬಲ್ಲೆ. ನಿಮ್ಮ ಪ್ರೀತಿ ಕಾರ್ಯಕಾರಿಯೆ? ಕಾರ್ಯಕಾರಿ ಯಲ್ಲದಿದ್ದರೆ, ದಿನೇ ದಿನೇ ನಿಮ್ಮ ಶಿಸ್ತನ್ನು ಅದು ವೃದ್ಧಿ ಮಾಡದಿದ್ದರೆ, ನಾನು ಹೇಳಿದಂತೆ ಹೆಚ್ಚು ಹೆಚ್ಚು ನಡೆಯದಿದ್ದರೆ, ನಾನು ಸವಿನಯ ಶಾಸನ ಭಂಗವನ್ನು ಪ್ರಾರಂಭಿಸಲಾರೆ ಎಂದು ಘಂಟಾಘೋಷವಾಗಿ ಹೇಳಿ ಬಿಡು ತ್ತೇನೆ. ನೀವು ಬೇರೆ ದಳಪತಿಯನ್ನು ಆರಿಸಿಕೊಳ್ಳಿ. ನಿಮ್ಮ ನಿಯಮಗಳ ಮೇರೆಗೆ ನನ್ನನ್ನು ದಳಪತಿಯಾಗಿ ಮಾಡಲಾರಿರಿ. ಚೆನ್ನಾಗಿ ತಿಳಿದುಕೊಳ್ಳಿ. ನನ್ನ ನಿಯಮಗಳನ್ನೇ ನಾನು ಒತ್ತಾಯಮಾಡುತ್ತೇನೆ. ನನ್ನ ನಿಯಮಗಳು ಅನುಲ್ಲಂಘನೀಯ, ನೀವು ಅದರಂತೆ ನಡೆಯಲಿಲ್ಲವೋ ನಾನು ಹಿಂದಕ್ಕೆ ಸರಿಯುತ್ತೇನೆ.

ದಂಡಿನಲ್ಲಿ ಕಟ್ಟುನಿಟ್ಟಾದ ಶಿಸ್ತು ಬೇಕು ಎಂದು ಒತ್ತಾಯ ಮಾಡು ತ್ತಾನೆ ದಳಪತಿ. ನಾನೇನೋ ನಿಮ್ಮೊಡನೆ ತರ್ಕಮಾಡುತ್ತಿದೇನೆ. ಏಕೆಂದರೆ ಪ್ರೀತಿಯೆ ನನ್ನ ಬಲ. ಆದ್ದರಿಂದ ನೀವು ನನ್ನ ನಿಯಮಗಳನ್ನು ಒಪ್ಪದಿ ದ್ದರೆ, ಅದರಲ್ಲಿ ನಿಮಗೆ ನನ್ನಲ್ಲಿ ಇರುವಷ್ಟು ಶ್ರದ್ಧೆ ಇರದಿದ್ದರೆ ಕಾರಾಗೃಹಕ್ಕೆ ಹೋಗುವ ಯೋಜನೆ ಮಾಡಬೇಡಿ. ತುರಂಗಕ್ಕೆ ಹೋಗಬೇಕಾದರೆ ಅದಕ್ಕೆ ತಕ್ಕಬೆಲೆ ಕೊಡಬೇಕು, ನಮ್ಮದು ಸವಿನಯ ನಾಗರಿಕ ಯುದ್ಧ. ಇದರಲ್ಲಿ ಸೆರೆಯಾಳು ಆಗಬೇಕೆಂದರೆ ಕಾರ್ಯಕ್ರಮವನ್ನೂ ಕಟ್ಟುನಿಟ್ಟಾಗಿ ನಡೆಸಿ ಅದನ್ನು ಸಂಪಾದಿಸಬೇಕು. ಇಲ್ಲದಿದ್ದರೆ, ಕಳ್ಳರು ದರೋಡೆಗಾರರು ತುರಂಗ

ವನ್ನು ತುಂಬಿದ ಹಾಗೆ ಆಗುತ್ತದೆ. ಅವರು ದೇಶಕ್ಕೆ ಸ್ವಾತಂತ್ರ್ಯ ತರಬಲ್ಲರೊ?

೧೯೧೯ರಲ್ಲಿ ನಾನು ಈ ಸರಕಾರಕ್ಕೆ ತಿರುಗಿಬಿದ್ದೆ. ಅದಕ್ಕೆ ಮೊದಲು ಬ್ರಿಟಿಷ್ ಜನರ ಹಾಗೆಯೆ ನಾನೂ ರಾಜಭಕ್ತನಾಗಿದ್ದೆ. ಆ ವಿಶಿಷ್ಟ ರಾಜ ಭಕ್ತಿಯೇ ನನಗೆ ಸವಿನಯ ಶಾಸನಭಂಗದ ವಿಶಿಷ್ಟ ಶಕ್ತಿಯನ್ನೂ ತೀರ ದಂಥ ಶೋಧದಾಸೆಯನ್ನೂ ಕೊಟ್ಟಿತು. ಆದುದರಿಂದ ಪ್ರಯೋಗಗಳನ್ನು ಮಾಡುತ್ತಾ ಹೋಗುತ್ತೇನೆ, ನನಗೆ ಕಂಡುಬಂದಾಗೆಲ್ಲ ನನ್ನ ತಪ್ಪುಗಳನ್ನು ಬಹಿರಂಗವಾಗಿ ಹೇಳುತ್ತೇನೆ. ನಿಮ್ಮ ಹಾಗೆಯೆ ನಾನೂ ತಪ್ಪುಮಾಡುವ ದುರ್ಬಲ ಮನುಷ್ಯ. ಕನಸು ಮನಸ್ಸಿನಲ್ಲೂ ನಾನೊಬ್ಬ ಮಹಾತ್ಮ, ಉಳಿದ ವರು ಅಲ್ಪಾತ್ಮರು ಎಂದು ನಾನು ಎಣಿಸಿಲ್ಲ. ನಮ್ಮ ಕರ್ತನ ಎದುರಿನಲ್ಲಿ ನಾವೆಲ್ಲರೂ, ಹಿಂದೂ ಮುಸ್ಲಿಂ, ಕ್ರಿಸ್ತಾನ, ಪಾರ್ಸೀ ಎಲ್ಲರೂ, ಸಮಾನರು, ಒಬ್ಬನೇ ದೇವರ ಆರಾಧಕರು. ಹೀಗಿದ್ದೂ ನಮ್ಮ ನಮ್ಮೊಳಗೆ ಏಕೆ ಹೊಡೆದಾಡುತ್ತೇವೋ?

ನಾವೆಲ್ಲರೂ ಅಣ್ಣ ತಮ್ಮಂದಿರು. ಕಾಯಿದೆ—ಆಜಂ ಜಿನ್ನಾ ಕೂಡ. ಅವರ ಬಗ್ಗೆ ನಾನು ಹೇಳುವುದೆಲ್ಲ ಪ್ರಾಮಾಣಿಕ. ನಿರರ್ಥಕವಾದ ಒಂದು ಮಾತೂ ನನ್ನ ಬಾಯಿಂದ ಬಂದಿಲ್ಲ. ಅವರನ್ನೂ ಒಲಿಸಿಕೊಳ್ಳಬೇಕು ಎನ್ನುತ್ತೇನೆ. ಅವರನ್ನು ಒಲಿಸಿಕೊಳ್ಳುವವರೆಗೆ ನಾನು ಹೋರಾಡುವುದಿಲ್ಲ ಎಂದ ಒಬ್ಬ ಭಾಷಣಕಾರ. ಅವನು ಹೇಳಿದ್ದು ಸರಿ. ನನ್ನಲ್ಲಿ ವಿಶ್ವಾಸ ಇಡದ ಮುಸ್ಲಿಂ ಒಬ್ಬ ಇರಲಿಲ್ಲ. ಅಂಥ ಕಾಲ ಒಂದಿತ್ತು. ಈಗ ಆ ವಿಶ್ವಾಸವನ್ನು ಕಳೆದುಕೊಂಡಿದ್ದೇನೆ. ಉರ್ದು ಪತ್ರಿಕೆಗಳೆಲ್ಲ ಬಹಳ ಮಟ್ಟಿಗೆ ನನ್ನನ್ನು ಬಯ್ಯುತ್ತವೆ. ನನಗೆ ಅದರಿಂದ ದುಃಖವಿಲ್ಲ. ಮುಸ್ಲಿಮರೊಡನೆ ಪರಿಷ್ಕಾರ ಮಾಡಿಕೊಳ್ಳದೆ ನಮಗೆ ಸ್ವರಾಜ್ಯವಿಲ್ಲ ಎಂಬ ನನ್ನ ನಂಬಿಕೆಯನ್ನು ಇದು ದೃಢಪಡಿಸುತ್ತದೆ.

ಹಾಗಿದ್ದರೆ ಹೋರಾಟದ ಮಾತನ್ನು ಏಕೆ ಆಡುತ್ತೀರಿ ಎಂದು ಕೇಳ ಬಹುದು. ರಾಜ್ಯಾಂಗ ರಚನಾ ಸಭೆಗಾಗಿ ನಾನು ಹೋರಾಡುತ್ತಿದೇನೆ. ಹಾಗೆಂದರೆ ಒಪ್ಪಂದ, ಪರಿಷ್ಕಾರ. ಮುಸಲ್ಮಾನರು ನಮಗದು ಸಂಬಂಧ ವಿಲ್ಲ ಎಂದರೆ ಏನೂ ಪರಿಷ್ಕಾರ ಆಗಲಿಲ್ಲ ಎಂದುಕೊಳ್ಳುತ್ತೇನೆ. ಅವರ

ಹಾಗೆ ನಾನೂ ಕೊರಾನು ಓದುತ್ತೇನೆ. ಕೊರಾನಿನಲ್ಲಿ ಹಿಂದೂ ಮುಸ್ಲಿಂ ಭೇದವಿಲ್ಲ ಎಂದು ಅವರಿಗೆ ಹೇಳುತ್ತೇನೆ. ಆದರೆ ನಮ್ಮ ಸ್ವರ್ಗದಲ್ಲಿ ಹಿಂದೂಗಳಿಗೆ ಎಡೆಯಿಲ್ಲ ಎಂದರೆ ಅವರು, ನನಗೇನೂ ಅಸೂಯೆಯಿಲ್ಲ.

ಇಂಗ್ಲೀಷರ ಜಗ್ಗೆ ನನಗೆ ಅಸದ್‌ಭಾವವಿಲ್ಲ. ಲಾರ್ಡ್ ಜಿಟ್ಲೆಂಡ್‌ಗೆ ಗಾಯವಾಯಿತು ಎಂದು ಕೇಳಿ ನನ್ನ ಹೃದಯಕ್ಕೆ ಗಾಯವಾಯಿತು. ಅದು ನನ್ನ ಮನೋಧರ್ಮ. ಆದ್ದರಿಂದ ನಾನು ಯಾವಾಗಲೂ ಅವರ ಜೊತೆಯಲ್ಲಿ ಅವರ ಸದಭಿಪ್ರಾಯಕ್ಕಾಗಿ ಕೆಲಸಮಾಡುತ್ತೇನೆ. ಬ್ರಿಟಿಷ್ ಸಾಮ್ರಾಜ್ಯ ಷಾಹಿಯನ್ನು ನಾಶಮಾಡಬೇಕೆಂದು ಇದ್ದೇನೆ. ಈ ಮಾತೇ ಬೇರೆ, ಆದಕ್ಕೆ ಸಂಬಂಧಿಸಿದವರನ್ನು ಪರಿವರ್ತನೆಮಾಡಿ ಹಾಗೆ ಮಾಡ ಬೇಕೆನ್ನುತ್ತೇನೆ. ನಾನು ಎಣಿಸಿದಷ್ಟು ಶಕ್ತಿ ಅಹಿಂಸೆಗೆ ಇದ್ದರೆ ಖಂಡಿತ ವಾಗಿಯೂ ಅದು ವಿರೋಧಿಯ ಮೇಲೆ ಪ್ರಭಾವ ಬೀರಲೇ ಬೇಕು, ಬೀರ ದಿದ್ದರೆ ದೋಷ ನನ್ನದು. ಅಹಿಂಸೆಯದಲ್ಲ.

ಆದ್ದರಿಂದ ಬಹಳ ಅಪಾಯಕಾರಿ ಮನುಷ್ಯನೊಡನೆ ನೀವು ಸಾಗ ಬೇಕಾಗಿದೆಯೆಂದು ತಿಳಿದುಕೊಳ್ಳಿ. ಅನಿರೀಕ್ಷಿತ ಪ್ರಸಂಗಗಳಿಗೆ ನಿಮ್ಮನ್ನು ಗುರಿಮಾಡಬಹುದು. ಸಂಧಿ—ಸಮಾಧಾನ ನನ್ನ ಸ್ವಭಾವ. ಹೋಗಬೇಕು ಎನಿಸಿದರೆ ನಾನು ವೈಸರಾಯ್ ಬಳಿಗೆ ಐವತ್ತು ಸಲ ಹೋದೇನು. ಅಸಹ ಕಾರ ನಡೆಯುತ್ತಿದ್ದಾಗಲೇ ಲಾರ್ಡ್ ರೀಡಿಂಗ್ ಬಳಿಗೆ ಹೋಗಿದ್ದೆ. ಕರೆ ಬಂದರಂತೂ ವೈಸರಾಯ್ ಬಳಿಗೆ ಹೋಗುತ್ತೇನೆ. ಅಗತ್ಯವಾದರೆ ನಾನೇ ಹೋಗುವ ಪ್ರಯತ್ನ ಮಾಡುತ್ತೇನೆ. ಒಂದುವೇಳೆ ಹಾಗೆ ಮಾಡಿದರೆ ನಮ್ಮ ಉದ್ಯಮವನ್ನು ಬಲಗೊಳಿಸಲು ಹೋಗುತ್ತೇನೆಯೇ ವಿನಾ ದುರ್ಬಲ ಗೊಳಿಸಲಲ್ಲವೆಂದು ಅರಿತುಕೊಳ್ಳಿ. ಜನರಲ್ ಸ್ಮಟ್ಸ್ ಜೊತೆಯಲ್ಲಿ ಹೀಗೇ ಆಯಿತು. ಕಡೆಯ ಗಳಿಗೆಯಲ್ಲಿ ಅವರಿಗೆ ಟೆಲಿಫೋನ್ ಮಾಡಿದೆ. ಅದರ ಪರಿಣಾಮವಾಗಿ ಅವರು ಸ್ವಲ್ಪ ಸಡಿಲವಾದರು. ನನ್ನ ಸ್ಥಿತಿ ಬಲವಾಯಿತು. ಇವೊತ್ತು ನಾವೆಲ್ಲರೂ ಗೆಳೆಯರು. ನನ್ನ ಹೃದಯದಲ್ಲಿ ಅವರ ಪ್ರೀತಿ, ಸಂಧಿ—ಸಮಾಧಾನ ಸಿದ್ಧತೆ ಇರದಿದ್ದರೆ ನಾನು ಡಚ್ಚರೊಡನೆ ಇಂಗ್ಲಿಷ ರೊಡನೆ ಹೋರಾಡಲು ಸಾಧ್ಯವಾಗುತ್ತಿರಲಿಲ್ಲ. ಆದರೆ ನಾ ಮಾಡುವ ಸಂಧಿ ಎಂದಿಗೂ ದೇಶಕ್ಕೆ, ನಮ್ಮ ಉದ್ಯಮಕ್ಕೆ ನಷ್ಟ ತರುವುದಿಲ್ಲ.

ಸವಿನಯ ಶಾಸನಭಂಗ ಎಂಬುದಕ್ಕೆ ಸಾಮೂಹಿಕ ಶಬ್ದವನ್ನು ಜೋಡಿಸಬೇಕು ಎಂದು ಒಂದು ತಿದ್ದುಪಡಿ ಬಂದಿತ್ತು. ಸಾಮೂಹಿಕ ಅಲ್ಲದಿದ್ದರೇನು ಒಂದು ಹಿಡಿ ಜನರ ಶಾಸನಭಂಗವೆ ಈ ಕಾರ್ಯಕ್ರಮ? ಹಾಗಿದ್ದರೆ ನಿಮ್ಮ ಬಳಿಗೇಕೆ ಬರಲಿ? ನಾನೂ. ಸಾಮೂಹಿಕ ಸವಿನಯ ಶಾಸನಭಂಗದ ಚಿಂತನವೇ ಇಪ್ಪತ್ತುನಾಲ್ಕು ಗಂಟೆ ನನಗೆ. ಇಂಥವರ ಬಗ್ಗೆ ಎಪ್ಪತ್ತರ ಮನುಷ್ಯ ಏಕೆ ಚೆಲ್ಲಾಟ ಆಡಬೇಕು.

ಆದ್ದರಿಂದ ನೀವು ಸಿದ್ಧರಾಗಿದೀರಿ ಎಂದು ನನಗನಿಸುವವರೆಗೆ ಸವಿನಯ ಶಾಸನಭಂಗದ ಪ್ರಸಕ್ತಿ ಇಲ್ಲ. ಆದ್ದರಿಂದ ನಿಮ್ಮ ಕಾಂಗ್ರೆಸ್ ಸಮಿತಿಯನ್ನು ಶುದ್ಧಗೊಳಿಸಿ ಅದನ್ನೊಂದು ಸತ್ಯಾಗ್ರಹಿ ತಂಡವಾಗಿ ಮಾಡಿ. ಅಷ್ಟರಮಟ್ಟಿಗೆ ಅದರಲ್ಲಿ ಪ್ರಜಾತಂತ್ರ ಇರದು. ಏಕೆಂದರೆ ನನ್ನ ಮಾತೇ ಶಾಸನ. ಅದು ಅಂಥ ತಂಡ ಆಗದಿದ್ದರೆ ನಮ್ಮ ದೇಶದ ಕೋಟಿಗಟ್ಟಲೆ ಜನ ಬಲಿ ಆಗುತ್ತಾರೆ. ನನ್ನ ಚಳುವಳಿಗಳಲ್ಲಿ ಯಾವುದೂ ಜನತೆಯನ್ನು ತುಳಿದುಹಾಕಿಲ್ಲ, ನಾಶಮಾಡಿಲ್ಲ. ಅವರ ಮಟ್ಟವನ್ನು ಹೆಚ್ಚಿಸಿದೆ. ಅದನ್ನು ಇನ್ನೂ ಎತ್ತರಿಸಬೇಕೆಂದೇ ನಾನು ಬದುಕಿರುವುದು, ಬದುಕಬಯಸುವುದು. ಮೊದಲಿನ ಚಳುವಳಿಗಳಲ್ಲಿ ಮಾತಿನಲ್ಲಿ ಮನಸ್ಸಿನಲ್ಲಿ ಬೇಕಾದಷ್ಟು ಹಿಂಸೆಯಿತ್ತು. ಆದರೆ ಕೃತಿಯಲ್ಲಿ ಅಹಿಂಸೆ ಇದ್ದುದರಿಂದ ಜನ ಸಾಮಾನ್ಯರು ಬದುಕಿಕೊಂಡರು. ಇವತ್ತು ಲಘು ಮನಸ್ಸಿನಿಂದ ಈ ಜನ ಸಾಮಾನ್ಯರನ್ನು ತೊಂದರೆಗೆ ಈಡು ಮಾಡಲಾರೆ. ಆದ್ದರಿಂದಲೇ ಕಟ್ಟುನಿಟ್ಟು ಅಹಿಂಸೆಬೇಕು, ನನ್ನ ನಿಯಮಗಳ ಸಂಪೂರ್ಣ ಪಾಲನೆ ಬೇಕು ಎಂದು ಆಗ್ರಹ ತೊಡುತ್ತಿದೇನೆ. ಏಕೆಂದರೆ, ಅದೊಂದು ನನ್ನನ್ನೂ ಅವರನ್ನೂ ಒಟ್ಟಿಗೆ ಕೂಡಿಸಿರುವ ಸೂತ್ರ.

ನಾನು ನಿಮ್ಮ ದಳಪತಿಯಾದರೆ ನನ್ನ ಕೈಯಲ್ಲಿರಬೇಕು ನಿಮ್ಮ ನಾಡಿ. ಇಲ್ಲದಿದ್ದರೆ ನಿಮ್ಮ ಮೂಲಕ ನಾ ಹೋರಾಡಲಾರೆ. ನಾನೊಬ್ಬನೇ ಹೋರಾಡಬಹುದು. ಅದಕ್ಕೆ ನಿಮ್ಮ ಮುಂದೆ ಬಂದು ಚರ್ಚೆ ಮಾಡ ಬೇಕಾದ್ದಿಲ್ಲ.

ಮುಕ್ತಾಯಕ್ಕೆ ಮೊದಲು ಒಂದು ಕೊನೆಯ ಮಾತು. ಈ ಕೂಡಲೆ ಹೋರಾಡಬೇಕು ಎನ್ನುವವರಿಗೆ ನಾನು ಅಡ್ಡಿ ಮಾಡುವುದಿಲ್ಲ.

ಆದರೆ ಅವರಿಗೇನಾದರೂ ಮರ್ಯಾದೆ ಇದ್ದರೆ ಕಾಂಗ್ರೆಸ್ಸಿನಿಂದ ಹೊರಗೆ ಹೋಗಿ ಹಾಗೆ ಮಾಡಿ ಎಂದು ಹೇಳುತ್ತೇನೆ. ಒಂದು ವೇಳೆ ಅವರು ಅಹಿಂಸಾತ್ಮಕ ಹೋರಾಟ ನಡೆಸಿ ಅದನ್ನು ಮುಂದುವರಿಸಿದರೆ ನಾನೂ ಅವರನ್ನು ಹಿಂಬಾಲಿಸುತ್ತೇನೆ.

ಕಾಂಗ್ರೆಸ್ಸಿನಲ್ಲಿದ್ದುಕೊಂಡೇ ಅದಕ್ಕೆ ತಿರುಗಿಬೀಳುವ ಅಧಿಕಾರವೂ ಅವರಿಗೆ ಇದೆ. ಆದರೆ ಅದು ಸತ್ಯಾಗ್ರಹ ಆಗುವುದಿಲ್ಲ. ಇವತ್ತು ಆತುರದಲ್ಲಿರುವವರಿಗೆ ಸತ್ಯಾಗ್ರಹದ ಶಕ್ತಿ ಗೊತ್ತಿಲ್ಲ.

ಈ ತೀರ್ಮಾನ ನಿಮ್ಮನ್ನು ಕಟ್ಟಿ ಹಾಕುವುದಿಲ್ಲ. ಈ ನಿಯಮಗಳು ನಿಮಗೆ ಬೇಡವಾದರೆ ಇವನ್ನು ನಾವು ಒಪ್ಪುವುದಿಲ್ಲ. ಎಂದು ಹೇಳಬಹುದು, ತೀರ್ಮಾನವನ್ನು ತಿರುಗು ಮುರುಗು ಮಾಡಬಹುದು. ಅದರಿಂದ ನಿಮಗೂ ಬಿಡುಗಡೆ, ನನಗೂ ಬಿಡುಗಡೆ. ಆದರೆ ನೀವು ಈ ನಿಯಮಗಳನ್ನು ಒಪ್ಪಿ ಪಾಲಿಸಿದರೆ ಹೋರಾಟವನ್ನು ಪ್ರಾರಂಭಿಸಲು ಒಂದು ತಿಂಗಳೂ ಹಿಡಿಯಲಿಕ್ಕಿಲ್ಲ ಎಂಬ ಭರವಸೆ ಇರಲಿ.

## ೩೨. ಬೊಂಬಾಯಿಯ ಅಖಿಲ ಭಾರತ ಕಾಂಗ್ರೆಸ್ ಸಮಿತಿಯಲ್ಲಿ: ೧೯೪೦

[ಅಧ್ಯಕ್ಷರು ಗಾಂಧೀಜೀಯನ್ನು ಭಾಷಣ ಮಾಡಲು ಕೇಳಿದರು : ಹಿಂದುಸ್ತಾನಿಯಲ್ಲಿ ಮಾತಾಡುತ್ತ ಗಾಂಧೀಜೀ ಹೇಳಿದರು : " ಈಗ ನಾನು ವಹಿಸಿಕೊಳ್ಳುತ್ತಿರುವ ಜವಾಬುದಾರಿ ಬಹಳ ಗುರುತರ. ಇಷ್ಟು ಗುರುತರವಾದುದನ್ನು ನಾನು ಎಂದೂ ಹೊತ್ತಿರಲಿಲ್ಲ. ನಿಮ್ಮನ್ನು ತೃಪ್ತಿಗೊಳಿಸಲು, ನನ್ನನ್ನೇ ತೃಪ್ತಿಪಡಿಸಲು ಯಶಸ್ವಿಯಾದೆನೋ ಇಲ್ಲವೋ. ಇದರ ಫಲ ಏನಾದೀತೋ ನನಗೆ ತೀರಾ ಅಸ್ಪಷ್ಟವಾಗಿದೆ. ಆದರೆ ಈ ಐವತ್ತು ವರ್ಷ ನನ್ನನ್ನು ತರಬೇತು ಮಾಡಿಕೊಂಡಿದ್ದೇನೆ ಫಲದ ಚಿಂತೆ ಮಾಡದಿರುವಂತೆ. ನನಗಿರಬೇಕಾದ ಚಿಂತೆ ಸಾಧನದ್ದು. ಸಾಧನ ಶುದ್ಧವಾಗಿದೆ ಎಂದು ಭರವಸೆ ಆಯಿತೋ ನನ್ನನ್ನು ಮುಂದೆ ನಡೆಯಿಸಲು ನನ್ನ ಶ್ರದ್ಧೆ ಸಾಕು. ಆ ಶ್ರದ್ಧೆಯ ಮುಂದೆ ಎಲ್ಲ ಭಯ, ಎಲ್ಲ ನಡುಕ ಕರಗಿ ಹೋಗುತ್ತವೆ. ಒಮ್ಮೆ ಮುಂದೆ ಅಡಿಯಿಟ್ಟೆವೋ ತಿರುಗಿ ನೋಡುವುದೇ ಇಲ್ಲ. ಆಮೇಲೆ ಇಂಗ್ಲಿಷಿನಲ್ಲಿ ಮಾತಾಡಿದರು.]

ಅತ್ಯಂತ ಸಹನೆಯಿಂದ ನನ್ನ ಮಾತು ಕೇಳಿದಿರಿ. ಇವತ್ತು ನಿಮಗೆ ನಾನು ವಿಶೇಷವಾಗಿ ಕೃತಜ್ಞ. ಏಕೆಂದರೆ, ನಿಮಗೆ ಅಸಂತೋಷ ಮಾಡಬಹುದಾದ ಅನೇಕ ಮಾತನ್ನು ಹೇಳಿದೇನೆ. ನಿಮ್ಮ ಮುಂದೆ ನನ್ನ ಮುಂದೆ ಅಗಾಧವಾದ ಕೆಲಸ ಬಿದ್ದಿದೆ. ಅದಕ್ಕೆ ನಿಮ್ಮನ್ನು ತೊಡಗಿಸಬೇಕು ಎಂದಿದೇನೆ. ನಿಮ್ಮನ್ನೆ ಅಸಂತೋಷಗೊಳಿಸುವ ಉದ್ದೇಶ ನನಗೆ ಇದ್ದೀತೇ? ಭಾರವಾದ ಈ ಹೊರೆಯನ್ನು ನಾನು ಹೊರಬೇಕಾಗಿರುವುದರಿಂದ ನಿಮ್ಮೊಡನೆ ದೀರ್ಘವಾಗಿ ಮಾತಾಡಬೇಕಾಗಿದೆ. ಭಾಷಣವನ್ನು ಸಿದ್ಧಮಾಡಿಕೊಂಡು ಬಂದಿಲ್ಲ ನಾನು. ಮುಂದೆ ಸಾಗಿದಂತೆ ವಿಚಾರ ಬರುತ್ತವೆ.

ಕೆಲವು ಕಾಲದಿಂದ ಒಂದು ವಿಚಾರ ನನ್ನನ್ನು ಹಿಡಿದಿದೆ. ಅದನ್ನೆ ಮೊದಲು ಹೇಳುತ್ತೇನೆ. ಯುದ್ಧ ಆರಂಭವಾಗಿ ನಾನು ವೈಸರಾಯನ್ನು ನೋಡಲು ಸಿಮ್ಲಾಕ್ಕೆ ಹೋದಾಗ ಮರುದಿನ ಒಂದು ಹೇಳಿಕೆ ಕೊಟ್ಟೆ. ಪ್ರತಿನಿಧಿಯಾಗಿ ಅಲ್ಲ, ವೈಯಕ್ತಿಕವಾಗಿ. ಕಾಂಗ್ರೆಸ್ಸನ್ನು ನನ್ನ ಜೊತೆಗೆ ಒಯ್ಯುವುದು ಸಾಧ್ಯವಲ್ಲದಿದ್ದರೂ ನಾನು ಆ ಹೇಳಿಕೆಯನ್ನೇ ಗಟ್ಟಿಯಾಗಿ ಹಿಡಿದುಕೊಂಡಿದ್ದರೆ ಚೆನ್ನಾಗಿತ್ತು ಎಂದು ಒಬ್ಬ ಗೆಳೆಯ ನೆನಪು ಕೊಟ್ಟಿದಾನೆ ಈಗ. ಜವಾಬುದಾರಿಯನ್ನು ಹೊರಬೇಕಾದ ಈ ಗಳಿಗೆಯಲ್ಲಿ ನನ್ನ ಆ ನಿಲುವಿಗೆ ನಿಂತು ನಿವೃತ್ತನಾಗುವಂತೆ ದೇವರು ನನಗೆ ದಾರಿ ತೋರಲಿ ಎಂದು ಪ್ರಾರ್ಥಿಸಿದಾನೆ. ಆ ಗೆಳೆಯನಲ್ಲಿ ನನಗೆ ಬಹಳ ಗೌರವವಿದೆ. ಆ ಹೇಳಿಕೆಯನ್ನು ನಾನು ಮರೆತೂ ಇಲ್ಲ. ಅಥವಾ ಈಗ ಪಶ್ಚಾತ್ತಾಪ, ಕ್ಷಮಾಯಾಚನೆ ಮಾಡಬೇಕಾದ್ದೂ ಇಲ್ಲ. ಅಂಥ ಪ್ರಸಂಗ ಮತ್ತೊಮ್ಮೆ ಬಂದರೆ, ನಾನು ಇನ್ನೊಬ್ಬ ವೈಸರಾಯ್ ಬಳಿಗೆ ಹೋದರೆ—ಇತಿಹಾಸದಲ್ಲಿ ಮತ್ತೆ ಮತ್ತೆ ಹಾಗೇ ನಡೆಯುತ್ತದೆಯಲ್ಲ—ಅದೇ ಹೇಳಿಕೆಯನ್ನೇ ಕೊಡುತ್ತೇನೆ.

ನನ್ನ ಮಟ್ಟಿಗೇ ಮಾತಾಡಿದರೂ ನನ್ನೊಳಗಿನ ಕಾಂಗ್ರೆಸಿನ ಮಾತಾಡುತ್ತಿದ್ದ ಒಳಗಡೆ, ನಾನು ಮೋಹನದಾಸ್ ಗಾಂಧೀ ಎಂದು ವೈಸರಾಯ್ ನನಗೆ ಹೇಳಿಕಳಿಸಲಿಲ್ಲ. ಅವರ ಲೆಕ್ಕದಲ್ಲಿ ಗಾಂಧೀಗೆ ಸ್ಥಾನವಿಲ್ಲ. ರಾಜದಂಡವನ್ನು ಹಿಡಿದವನಿಗೆ ವ್ಯಕ್ತಿಗಳಿಂದ ಆಗಬೇಕಾದ್ದೇನು? ನಾನು ಕಾಂಗ್ರೆಸ್ಸಿನ

ಅಭಿಪ್ರಾಯವನ್ನು ಹೇಳಬಲ್ಲೆ. ಕಾಂಗ್ರೆಸಿಗರ ಮನವೊಲಿಸಬಲ್ಲೆ ಎಂದು ನನಗೆ ಹೇಳಿಕಳಿಸಿದರು.

ಆ ಸ್ಥಾನದಿಂದ ನಾನು ಹಿಂದೆ ಸರಿದೆ. ವ್ಯಕ್ತಿಯಾಗಿ ಅಲ್ಲ, ಕಾಂಗ್ರೆಸಿಗನಂತೆ. ಒಬ್ಬ ಕಾಂಗ್ರೆಸಿಗನಿಗಾದರೂ ನಾನು ಮನದಟ್ಟು ಮಾಡಿಕೊಡಲಾರದೆ ಹೋದೆ. ಅದಕ್ಕಾಗಿ, ವರ್ಕಿಂಗ್ ಕಮಿಟಿಯಲ್ಲಿ ಪೂರ್ಣ ಪ್ರಾಮಾಣಿಕರಾದ ಜನ ಇದ್ದಾರೆ. ನಿಮ್ಮ ಭಾಗ್ಯ, ನನ್ನದೇ ಹೇಳಿಕೆ ಆದರೂ ಅದನ್ನು ತಾವು ಒಪ್ಪಲು ಆಗುವುದಿಲ್ಲ ಎಂದರು. ಆ ಧೈರ್ಯ ಅವರಿಗಿತ್ತು. ತಮ್ಮ ಅನುಭವ ಬಹಳ ಕಟು. ಆದ್ದರಿಂದ ಆ ನಿಲುವು ಅವರಿಗೆ ಸಾಧ್ಯವಿಲ್ಲ ಎಂದರು. ಆದ್ದರಿಂದ ಯುದ್ಧ ಆರಂಭವಾದ ಕೂಡಲೆ ಕಾಂಗ್ರೆಸ್ ಮಾಡಿದ ತೀರ್ಮಾನ ನಿಮಗೆ ಗೊತ್ತಿದೆ. ನಿಮಗೆ ಮನದಟ್ಟು ಮಾಡಿಕೊಡಬಲ್ಲೆನಾದರೆ ನನ್ನ ಆ ಮೂಲ ನಿಲುವೇ ಅತ್ಯುತ್ತಮ ಎಂದು ಹೇಳಿಯೂ ಕೂಡ ಪ್ರತಿನಿಧಿಯಂತೆ ಆ ತೀರ್ಮಾನವನ್ನು ಒಪ್ಪಿದೆ. ನನ್ನ ನಿಲುವನ್ನು ಒಪ್ಪಿಕೊಳ್ಳಲು ವರ್ಕಿಂಗ್ ಕಮಿಟಿಯ ಸದಸ್ಯರನ್ನು ನಾನು ಬಲವಂತ ಮಾಡಿದ್ದರೆ ಒಪ್ಪಿಕೊಳ್ಳುತ್ತಿದ್ದರು. ಅದು ಬರೀ ಶಾಸ್ತ್ರ ಆಗುತ್ತಿತ್ತು. ವೈಸರಾಯನ್ನು ಏಕೆ ಒಂದೇ ಒಂದು ಜೀವವನ್ನಾಗಲಿ, ಮೋಸಗೊಳಿಸಲು ಮಾಡಿದುದಲ್ಲ ಆ ಹೇಳಿಕೆ. ಹೃದಯಾಂತರಾಳದಿಂದ ನೇರಾಗಿ ಬಂದದ್ದು ಅದು; ನಾಟಕೀಯ ಪ್ರದರ್ಶನವಲ್ಲ. ಜಗತ್ತಿಗೆ ವೈಸರಾಯ್‌ಗೆ ಕಾಂಗ್ರೆಸ್ಸಿಗೆ ನನ್ನ ಹೃದಯದ ರಹಸ್ಯವನ್ನು ಬಿಚ್ಚಿ ತೋರಿಸಿದೆ. ಅವರ ಹೃದಯಗಳಲ್ಲಿ ಮಾರ್ದನಿ ನುಡಿಸದಿದ್ದರೆ ನನ್ನ ಈ ಮಾತು ವೈಸರಾಯಿಗೆ ಆಗಲಿ, ಇಂಗ್ಲಿಷ್ ಜನಾಂಗಕ್ಕಾಗಲಿ, ಭಾರತಕ್ಕಾಗಲಿ ಅದರಿಂದ ಏನೂ ಪ್ರಯೋಜನವಿಲ್ಲ. ಈಗಲೂ ನನ್ನ ಮನಸ್ಸು ಅದೇ. ನನ್ನ ಮನೋಧರ್ಮವನ್ನು ಕಾಂಗ್ರೆಸಿಗೆ ಮನದಟ್ಟು ಮಾಡಿಕೊಡಲು ಆಗದಿದ್ದರೆ ಮುಂದೆ ದಾರಿಯಿಲ್ಲ. ಇಟ್ಟರೆ ತಪ್ಪು ಹೆಜ್ಜೆ ಆಗುತ್ತಿತ್ತು. ಅಂತೆಯೆ ಇಡಲಿಲ್ಲ. ಆ ಭೂಮಿಕೆಯಿಂದ ಈ ತೀರ್ಮಾನವನ್ನು ನೋಡುತ್ತೇನೆ.

ಪದೇ ಪದೇ ಹೇಳಿದೇನೆ ನಾನು; ಬ್ರಿಟಿಷರ ಅಸ್ತಿತ್ವವೇ ಸಂಶಯಗ್ರಸ್ತವಾಗಿರುವಾಗ ಅವರನ್ನಾಗಲಿ ಅವರ ಸರಕಾರವನ್ನಾಗಲಿ ನಾನು ಇಕ್ಕಟ್ಟಿಗೆ ಸಿಗಿಸುವುದಿಲ್ಲವೆಂದು. ಹಾಗೆ ಮಾಡಿದರೆ ನಾನು, ನನ್ನ

ಸತ್ಯಾಗ್ರಹಕ್ಕೆ, ಅಹಿಂಸೆಗೆ, ನನ್ನ ಇಷ್ಟ ವಸ್ತುವಾದ ಸತ್ಯಕ್ಕೆ ತಪ್ಪಿ ನಡೆದ ಹಾಗೆ ಆದೀತು. ಆದ್ದರಿಂದ ಹಾಗೆ ಮಾಡಲಿಲ್ಲ. ಅದೇ ಮನುಷ್ಯನೇ ನಿಮ್ಮೆದುರಿಗೆ ಈಗ ಸತ್ಯಾಗ್ರಹದ ಭಾರ ಹೊರಲು ನಿಂತಿದಾನೆ. ಏಕೆ? ಮನುಷ್ಯನ ಬಾಳಿನಲ್ಲಿ ಒಂದು ಸಮಯ ಬರುತ್ತದೆ. ಆಗ ತನ್ನ ದುರ್ಬಲತೆಯ ಭಾರದಲ್ಲಿ ಪಾಪವನ್ನೆ ಪುಣ್ಯ ಎಂದುಕೊಳ್ಳುತ್ತಾನೆ. ಪುಣ್ಯವೂ ಕೂಡ, ಅದರ ಸಂದರ್ಭವನ್ನು ತಪ್ಪಿಸಿದರೆ, ಯಾವ ಉದ್ದೇಶಕ್ಕಾಗಿ ಅದು ಸಮರ್ಪಿತವಾಗಿತ್ತೊ ಅದನ್ನು ಬದಲಿಸಿದರೆ, ಪಾಪವಾಗುತ್ತದೆ. ಕಾಂಗ್ರೆಸ್ಸಿಗೆ ನೆರವಾಗಿ ಅದರ ನಾಯಕತ್ವವನ್ನು ವಹಿಸಿಕೊಳ್ಳದಿದ್ದರೆ, ನನಗೆ ನಾನೇ ದ್ರೋಹ ಬಗೆದಂತೆ ಎನಿಸಿತು.

ನಾವು ಈಗ ಇಡುತ್ತಿರುವ ಹೆಜ್ಜೆಯಿಂದ ಕಾಂಗ್ರೆಸ್ಸಿಗೇ ಅಲ್ಲ, ಇಡೀ ಭಾರತಕ್ಕೆ ಒಂದು ಮಹತ್ತರ ಸೇವೆ ಸಲ್ಲಿಸುತ್ತಿದ್ದೇವೆ. ಇಡೀ ಭಾರತಕ್ಕೆ ಮಾತ್ರವೇ ಅಲ್ಲ, ಇಂಗ್ಲಿಷ್ ಜನಾಂಗಕ್ಕೂ ನಾವು ನೆರವಾದೇವು. ನಾವು ತಿಂದ ಉಪ್ಪಿಗೆ ಸತ್ಯವಾಗಿ ನಡೆದೇವು. ಇಂಗ್ಲಿಷರವನು ಯಾವ ಧೈರ್ಯ ನಿರ್ಭಯಗಳಿಗಾಗಿ ಹೆಸರುವಾಸಿ ಆಗಿದಾನೆಯೋ ಯಾವುದರ ಹೆಮ್ಮೆ ಇದೆಯೋ ಅವನಿಗೆ, ನಮಗೂ ಅದೇ ಧೈರ್ಯ ನಿರ್ಭಯಗಳು ಇವೆ—ಈ ಮಾತನ್ನು ಇತಿಹಾಸ ಬರೆದಿಟ್ಟೀತು; ಎಂದಾದರೊಂದು ದಿನ ಇಂಗ್ಲಿಷ್ ಜನ ಇದನ್ನು ಅರ್ಥಮಾಡಿಕೊಂಡಾರು. ಬ್ರಿಟಿಷ್ ಜನರ ದೃಢ ಮಿತ್ರ ಎನ್ನುವ ನಾನು, ಸುಳ್ಳು ಸಂಕೋಚದಿಂದಲೋ ಅಥವಾ ಜನ ಏನೆಂದು ಕೊಂಡಾರೋ, ಇಂಗ್ಲಿಷ್ ಜನ ನನ್ನ ಮೇಲೆ ಸಿಟ್ಟಾದರೇನೋ ಎಂದು ಕೊಂಡರೆ ಸಂಯಮದ ಸದ್ಗುಣ ಈಗ ದುರ್ಗುಣವಾದೀತು, ಕಾಂಗ್ರೆಸ್ಸನ್ನು ನಾಶಮಾಡೀತು. ಈ ಸಂಯಮಕ್ಕೆ ಕಾರಣವಾದ ಮೂಲ ಸತ್ವವೇ ನಾಶವಾದೀತು ಎಂದು ಎಚ್ಚರಿಕೆ ಕೊಡದಿದ್ದರೆ ಸ್ನೇಹ ವಿರುದ್ಧವಾದ ಕೆಲಸವನ್ನು ಮಾಡಿದಂತೆ ಆದೀತು.

ಇದನ್ನು ಹೇಳುವಾಗ ನಾನು ಕೇವಲ ಕಾಂಗ್ರೆಸ್ಸಿನ ಪರವಾಗಿಯೆ ಮಾತಾಡುತ್ತಿಲ್ಲ. ರಾಷ್ಟ್ರೀಯ ಸ್ವಾತಂತ್ರ್ಯವನ್ನು ಕೋರುವ ಮುಸ್ಲಿಂ, ಪಾರಸೀ, ಕ್ರೈಸ್ತ, ಕಾಂಗ್ರೆಸ್ ವಿರೋಧಿಗಳ ಪರವಾಗಿ ಕೂಡ ಮಾತಾಡುತ್ತಿದ್ದೇನೆ. ಭಾರತದ ಆಕಾಂಕ್ಷೆ ಶುದ್ಧ ಸ್ವಾತಂತ್ರ್ಯ. ಅದನ್ನು ಅವರು

ಬಯಸಿದರೆ ಸಾಕು. ಈ ಸಮಯದಲ್ಲಿ 'ಬ್ರಿಟಿಷರನ್ನು ಇಕ್ಕಟ್ಟಿನಲ್ಲಿ ಸಿಗಿಸಲಾರೆ' ಎಂದರೆ ನಾನು ಅವರೆಲ್ಲರಿಗೂ ತಪ್ಪಿ ನಡೆದಂತಾದೀತು. ಗಿಳಿಯು ಹಾಗೆ ಆ ಮಾತನ್ನು ಜಪಿಸಲಾರೆ. ಗಿಳಿ ರಾಮ ರಾಮ ಎಂದು ಪಾಠ ಮಾಡಿದರೆ ಎಷ್ಟು ಫಲವೋ ನನ್ನ ಜಪವೂ ಅಷ್ಟೇ ಪುಣ್ಯಪ್ರದವಾದೀತು. ಗಿಳಿಯ ಪಾಠ ಬರೀ ಯಂತ್ರಿಕವಾಗಿ ಮಾಡಿದ್ದು, ಅದರಲ್ಲಿ ಬುದ್ಧಿ ಎಳ್ಳಷ್ಟೂ ಇಲ್ಲ. ಆದ್ದರಿಂದ ಈ ಗಳಿಗೆಯಲ್ಲಿ ನಾನು ನಿಗ್ರಹ ಮಾಡಿದರೆ, ಮನಸ್ಸನ್ನು ಅದುಮಿಟ್ಟರೆ, ಭಾರತದ ಇತಿಹಾಸದ ಈ ವಿಷಮ ಮುಹೂರ್ತದಲ್ಲಿ, ನಿಷ್ಪ್ರಯೋಜಕವಾದೀತು. ಸೇವಾಗ್ರಾಮದಲ್ಲಿ ಅಡಗಿಕೊಂಡು ಕೂತು, 'ನಾನಾಗಲೇ ಹೇಳಿಲ್ಲವೆ? ಇಕ್ಕಟ್ಟಿಗೆ ಸಿಗಿಸುವುದು ಬೇಡ' ಎಂದರೆ ಸಂಪೂರ್ಣವಾಗಿ ನನಗೆ ನಾನೇ ಅಸತ್ಯವಾಗಿ ನಡೆದಂತೆ.

ಈ ತೀರ್ಮಾನದ ಭಾಷೆಯೂ ಮೂಲದಲ್ಲಿ ಮುಖ್ಯವಾಗಿ ನನ್ನದು. ಪಂಡಿತ ಜವಾಹರಲಾಲ್ ನೆಹರೂಗೆ ಅದು ಹಿಡಿಸಿತು. ಹಿಂದೆ ಕಾಂಗ್ರೆಸ್ಸಿನ ಕರಡುಗಾರ ಆಗಿದ್ದೆ ನಾನು. ಈಗ ನೆಹರೂ ನನ್ನ ಸ್ಥಳಕ್ಕೆ ಬಂದಿದಾರೆ. ಎಷ್ಟು ದೂರ ಹೋಗಬಯಸಿದೆವೋ ನಾವು ಅಹಿಂಸಾತ್ಮಕ ಪ್ರತಿಭಟನೆಯಲ್ಲಿ ಅದಕ್ಕೆ ಸತ್ಯವಾಗಿ ನಡೆಯಬೇಕಾದರೆ ಇದು ಅನಿವಾರ್ಯ ಎಂದು ಅವರಿಗೆ ಕಂಡಿತು. ಈ ಭಾಷೆಯ ಅರ್ಥವ್ಯಾಪ್ತಿಯನ್ನು ಅರಿತೇ ವರ್ಕಿಂಗ್ ಕಮಿಟಿ ಇದನ್ನು ಒಪ್ಪಿತು. ಅದರ ಫಲ ಇದು : ಕಾಂಗ್ರೆಸ್ಸು ಯುದ್ಧ ವಿರೋಧ ಪ್ರಚಾರವನ್ನು ನಡೆಸಬಹುದು, ಸರಕಾರದ ಯುದ್ಧಪ್ರಯತ್ನದಲ್ಲಿ ಸಹಕಾರ ಮಾಡಬೇಡಿ ಎಂಬ ಪ್ರಚಾರ ನಡೆಸಬಹುದು ಎಂದು ಬ್ರಿಟಿಷ್ ಸರಕಾರ ಘೋಷಿಸಿದರೆ ನಾವು ಸವಿನಯ ಶಾಸನಭಂಗವನ್ನು ಮಾಡುವುದಿಲ್ಲ.

ಇಂಗ್ಲೆಂಡಿಗೆ ಸೋಲು ಅಥವಾ ಅವಮಾನ ಆಗಬೇಕು ಎಂದು ನನ್ನ ಬಯಕೆಯಲ್ಲ. ಸೆಂಟ್ ಪಾಲನ ಆರಾಧನಾಮಂದಿರ ನಷ್ಟವಾದುದನ್ನು ನೋಡಿ ನನಗೆ ನೋವಾಗುತ್ತದೆ, ಕಾಶೀ ವಿಶ್ವೇಶ್ವರನ ಗುಡಿ ಅಥವಾ ಜುಮ್ಮಾ ಮಸೀದಿಗೆ ನಷ್ಟ ಆಯಿತೆಂದು ಕೇಳಿದರೆ ಹೇಗೆ ನೋವಾಗುತ್ತದೆಯೋ ಹಾಗೇ. ಕಾಶೀ ವಿಶ್ವೇಶ್ವರನ ಗುಡಿ, ಜುಮ್ಮಾ ಮಸೀದಿ, ಸೆಂಟ್

ಪಾಲನ ಆರಾಧನಾ ಮಂದಿರ ಕೂಡ ಪ್ರಾಣ ಪಣವಿಟ್ಟು ಪ್ರತಿರಕ್ಷಣೆ ಮಾಡಿಯೇನು. ಆದರೆ ಅದಕ್ಕಾಗಿ ಒಂದೇ ಒಂದು ಜೀವವನ್ನೂ ಆಹುತಿ ತೆಗೆದುಕೊಳ್ಳಲಾರೆ. ಬ್ರಿಟಿಷ್ ಜನಕ್ಕೂ ನನಗೂ ಇರುವ ಮೂಲಭೂತ ವ್ಯತ್ಯಾಸ ಇದು. ಆದರೂ ನನ್ನ ಸಹಾನುಭೂತಿ ಇದ್ದೇ ಇದೆ ಅವರಿಗೆ. ನನಗೆ ಯಾರಲ್ಲಿ ಸಹಾನುಭೂತಿ ಎಂಬುದರ ಬಗ್ಗೆ ಇಂಗ್ಲಿಷರಿಗೆ, ಕಾಂಗ್ರೆಸಿನವರಿಗೆ, ನನ್ನ ಮಾತು ಮುಟ್ಟುವ ಎಲ್ಲರಿಗೂ ತಪ್ಪು ತಿಳಿವಳಿಕೆ ಇಲ್ಲದಿರಲಿ. ನನಗೆ ಇಂಗ್ಲಿಷ್ ಜನರಲ್ಲಿ ಪ್ರೀತಿ, ಜರ್ಮನರಲ್ಲಿ ದ್ವೇಷ ಎಂದಲ್ಲ. ಜರ್ಮನ್ ಜನಾಂಗ ಯಾರಿಗಿಂತಲೂ ಕೆಟ್ಟದ್ದೇನೂ ಅಲ್ಲ ಎಂದು ತಿಳಿದಿದ್ದೇನೆ. ಎಲ್ಲರದೂ ಒಂದೇ ಹಣೆಯ ಬರಹ. ಎಲ್ಲರೂ ಒಂದೇ ಮಾನವ ಕುಟುಂಬದವರು, ಭೇದಮಾಡಲು ಒಪ್ಪುವುದಿಲ್ಲ ನಾನು. ಭಾರತೀಯರು ಉಳಿದವರಿಗಿಂತ ಹೆಚ್ಚು ಎನ್ನಲಾರೆ. ಎಲ್ಲರಲ್ಲೂ ಇರುವ ಗುಣ–ದುರ್ಗುಣಗಳೇ ನಮ್ಮಲ್ಲಿಯೂ ಇವೆ. ಮಾನವ ಪ್ರಪಂಚ ಬೇರೆ ಬೇರೆ ಲೋಕಗಳಾಗಿ ಭಾಗವಾಗಿಲ್ಲ, ಒಂದಕ್ಕೊಂದು ಸಂಬಂಧವಿಲ್ಲದಂತೆ. ಸಾವಿರ ಕೊಠಡಿಗಳಿರಬಹುದು. ಎಲ್ಲವೂ ಪರಸ್ಪರ ಸಂಬಂಧ ಹೊಂದಿವೆ. 'ಭಾರತವೇ ಸರ್ವಸ್ವ ಆಗಲಿ, ಜಗತ್ತೆಲ್ಲ ಹಾಳಾಗಲಿ' ಎನ್ನಲಾರೆ. ಅದಲ್ಲ ನನ್ನ ಸಂದೇಶ. ಜಗತ್ತಿನ ಇತರ ರಾಷ್ಟ್ರಗಳ ಯೋಗಕ್ಷೇಮ ಸಾಧಕವಾಗಿ ಭಾರತ ಸರ್ವಸ್ವವಾಗಬೇಕು. ಇಡೀ ಮಾನವ ಲೋಕಕ್ಕೆ ನನ್ನ ಕಲ್ಯಾಣೇಚ್ಛೆ ಪಸರಿಸಬೇಕು. ಭರತ ಖಂಡದ ಈ ಚಿಕ್ಕ ಭೂಭಾಗದಲ್ಲಿ ಇರುವ ಮಾನವ ಕೋಟಿಗೆ ಮಾತ್ರವಲ್ಲ. ಇತರ ಚಿಕ್ಕರಾಷ್ಟ್ರಗಳಿಗೆ ಹೋಲಿಸಿದರೆ ಭಾರತ ದೊಡ್ಡದೇ. ಆದರೆ ಜಗತ್ತಿನಲ್ಲಿ ವಿಶ್ವದಲ್ಲಿ ಭಾರತ ಯಾವ ಲೆಕ್ಕ.

ನನ್ನ ಉದ್ದೇಶದಲ್ಲಿ ತಪ್ಪು ತಿಳಿವಳಿಕೆ ಇಲ್ಲದಿರಲಿ. ನನ್ನ ವ್ಯಕ್ತಿತ್ವ ಮೊಟಕಾಗಬಾರದು. ಅದಕ್ಕೆ ಧಕ್ಕೆ ತಗಲಬಾರದು. ವ್ಯಕ್ತಿತ್ವ ಹೋಯಿತೋ ನನ್ನಿಂದ ಭಾರತಕ್ಕೆ ಏನೂ ಸೇವೆ ಆಗದು. ಬ್ರಿಟಿಷ್ ಜನರಿಗಾಗಲಿ ಮಾನವ ವರ್ಗಕ್ಕಾಗಲಿ ಏನೂ ಸಲ್ಲದು. ವೈಯಕ್ತಿಕ ಸ್ವಾತಂತ್ರ್ಯವೂ ಒಂದೇ, ರಾಷ್ಟ್ರದ ಸ್ವಾತಂತ್ರ್ಯವೂ ಒಂದೇ ನನಗೆ, ರಾಷ್ಟ್ರೀಯ ಸ್ವಾತಂತ್ರ್ಯ —ವ್ಯಕ್ತಿ ಸ್ವಾತಂತ್ರ್ಯ ಎರಡೂ ಒಂದೇ. ನನಗೆ ಸ್ವಂತವಾಗಿ ಹೆಚ್ಚು ಸ್ವಾತಂತ್ರ್ಯವನ್ನು ನಾನು ಬೇಡುವುದಿಲ್ಲ. ನಿಮ್ಮೆಲ್ಲರ ಸ್ವಾತಂತ್ರ್ಯಕ್ಕೆ ಸಮ

ನನ್ನ ಸ್ವಾತಂತ್ರ್ಯ. ಸ್ವಲ್ಪವೂ ಹೆಚ್ಚಿಲ್ಲ. ನನ್ನ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದರೆ ನಿಮ್ಮದಕ್ಕೂ ಧಕ್ಕೆಯೇ ಎನಿಸುತ್ತದೆ. ಈಗ ನಡೆಯುವ ಈ ಯುದ್ಧದಲ್ಲಿ, ಈ ಸೋದರರ ವಧೆಯಲ್ಲಿ ನನಗೆ ನಂಬಿಕೆಯಿಲ್ಲ. ಆದ್ದರಿಂದ ಈ ಯುದ್ಧದಲ್ಲಿ ನನಗೆ ಏನೂ ಸಂಬಂಧವಿಲ್ಲ ಎಂದು ಹೇಳುತ್ತ ಬೊಂಬಾಯಿಯ ಬೀದಿಗಳಲ್ಲಿ ಹೋಗುವ ಸ್ವಾತಂತ್ರ್ಯ ಬೇಕು ನನಗೆ. ವೀರತನವನ್ನು ಮೆಚ್ಚುತ್ತೇನೆ ನಾನು. ಆದರೆ ಈ ವೀರತನದಿಂದ ಏನು ಪ್ರಯೋಜನ? ಈ ಮೂರ್ಖತನ, ಸಂಪೂರ್ಣ ಅಜ್ಞಾನಗಳನ್ನು ಕಂಡು ಮರುಗುತ್ತೇನೆ. ಏಕೆ ಯುದ್ಧ ಮಾಡುತ್ತಿದಾರೋ ಅವರಿಗೇ ಗೊತ್ತಿಲ್ಲ. ಸಮುದ್ರದಾಚೆ ನಡೆಯುತ್ತಿರುವ ಈ ಯುದ್ಧ ನನಗೆ ಇದೇ ರೀತಿ ಕಾಣುತ್ತದೆ. ನಾನು ಇದರಲ್ಲಿ ಭಾಗವಹಿಸಲಾರೆ. ಕಾಂಗ್ರೆಸ್ಸೂ ಭಾಗವಹಿಸಲಾರದೆಂದು ನನ್ನ ಬಯಕೆ.

ನಾನು ವಹಿಸಬಯಸುವ ಪಾತ್ರ ಶಾಂತಿ ಸಂಧಾನದ್ದು. ಕಾಂಗ್ರೆಸಿನದಲ್ಲ, ಇಡಿಯ ಭಾರತದ ಸ್ವಾತಂತ್ರ್ಯವನ್ನು ವಿವೇಕದಿಂದ ಒಪ್ಪಿಕೊಂಡಿದ್ದರೆ ಬ್ರಿಟಿಷರು, ಭಾರತದ ಇತರ ಪಕ್ಷಗಳೂ ನಮ್ಮೊಡನೆ ಸಹಕರಿಸಿದ್ದರೆ, ಈ ರಾಷ್ಟ್ರಗಳ ನಡುವೆ ಶಾಂತಿ ಸಂಧಾನ ಮಾಡುವ ಗೌರವದ ಸ್ಥಾನ ನಮಗೆ ಬರುತ್ತಿತ್ತು. ಇದು ನನ್ನ ಆಕಾಂಕ್ಷೆ, ಇವತ್ತು ಇದು ಬರೀ ಹಗಲುಗನಸೆಂದು ಬಲ್ಲೆ. ಕೆಲವು ಸಲ ಹಗಲುಗನಸೇ ಮನುಷ್ಯನ ಬದುಕು. ನಾನು ನನ್ನ ಕನಸಿನಲ್ಲೆ ಇದೇನೆ. ಜಗತ್ತಿನ ತುಂಬಾ ಸಜ್ಜನರು ಇದಾರೆ, ಸತ್ತ ಜನ ಅಲ್ಲ, ಎಂದು ಕೊಳ್ಳುತ್ತೇನೆ. ಸಮಾಜವಾದಿಗಳ ಭಾಷೆಯಲ್ಲಿ ಹೊಸ ರಚನೆ ಆಗುತ್ತದೆ ಸಮಾಜದ್ದು, ಹೊಸ ವ್ಯವಸ್ಥೆ ಆಗುತ್ತದೆ. ಜಗತ್ತನ್ನೆ ಅಚ್ಚರಿಗೊಳಿಸುವ ಹೊಸ ವ್ಯವಸ್ಥೆಗಾಗಿ ನಾನೂ ಆಶಿಸುತ್ತಿದೇನೆ. ನೀವೂ ಈ ಹಗಲುಗನಸುಗಳನ್ನು ಕಂಡರೆ ನಿಮಗೂ ನನ್ನ ಹಾಗೆ ಪರವಶತೆ ಅನುಭವ ಆಗುತ್ತದೆ.

ಈಗ ನಮ್ಮ 'ಮುರುಕು' ಕಾಂಗ್ರೆಸ್ಸು, ಇತರರ ಲೆಕ್ಕದಲ್ಲಿ ಮುರುಕು, ನನ್ನ ಲೆಕ್ಕದಲ್ಲಿ ಅಲ್ಲ. ನಾವು ಎಚ್ಚರಗೊಳ್ಳದಿದ್ದರೆ ಕಾಂಗ್ರೆಸ್ಸು ಅಳಿದು ಹೋಗುತ್ತದೆ. ಕಾಂಗ್ರೆಸ್ಸು ಹೋದರೆ ರಾಷ್ಟ್ರೀಯ ವೃತ್ತಿಯೆ ಹೋಗುತ್ತದೆ. ಒಬ್ಬರಾದ ಮೇಲೆ ಒಬ್ಬರನ್ನು ಕಾಂಗ್ರೆಸ್ಸಿಗರನ್ನು ಆರಿಸಿ

ಸೆರೆಗೆ ಕಳಿಸುತ್ತಿದ್ದಾರೆ. ಜನರನ್ನು ಹೀಗೆ ಹೊತ್ತುಕೊಂಡು ಹೋಗುತ್ತಿದ್ದರೆ ನೋಡುತ್ತಾ ಕೂಡುವುದು ಸತ್ಯಾಗ್ರಹವಲ್ಲ. ವಿರೋಧಿಯ ಬಾಯೊಳಕ್ಕೆ ನಾವೆಲ್ಲರೂ ನುಗ್ಗುವುದೇ ಒಳ್ಳೆಯದು. ಹಾಗೆ ನೋಡಿದರೆ, ಮೌಲಾನಾ ಸಾಹೇಬರು ಒಮ್ಮೆ ಹೇಳಿದಂತೆ, ಭಾರತ ಒಂದು ವಿಶಾಲ ಕಾರಾಗೃಹ, ಕಾರಾಗೃಹದ ಕಂಬಿಗಳನ್ನು ಮುರಿದು ಈ ಗುಲಾಮಗಿರಿಯ ಸೆರೆಮನೆಯಿಂದ ಹೊರಬೀಳೋಣ. ಖಾನ್‌ಖಾನಾ ಸಾಹೇಬ್ ದುರಂತದ ವೇಳೆಯಲ್ಲಿ ಹೀಗೆ ಹೇಳಿದರು: 'ಒಂದು ಗುರುದ್ವಾರವನ್ನು ನೀವು ಕಾಪಾಡಬಹುದು, ಆದರೆ ಭಾರತವೆ ಒಂದು ವಿಶಾಲ ಗುರುದ್ವಾರ. ಅದನ್ನು ಬಿಡುಗಡೆ ಮಾಡಬೇಕು.' ಆ ಮಾತು ಇವತ್ತಿಗೂ ನನ್ನ ಕಿವಿಯಲ್ಲಿ ಸತ್ಯವಾಗಿ ಘೋರ್ಗರೆಯುತ್ತಿವೆ. ರಾಷ್ಟ್ರದ ಈ ಸ್ವಾತಂತ್ರ್ಯ ಅಥವಾ ಸ್ವಾತಂತ್ರ್ಯ ಚಳುವಳಿಗೆ ಉಸಿರುಗಟ್ಟಿಸುವುದಾದರೆ, ಸದ್ಗುಣವಾದ ಸಂಯಮ ದುರ್ಗುಣ ಆದೀತು. ರಾಷ್ಟ್ರೀಯ ವೃತ್ತಿ ಎಲ್ಲೇ ಇರಲಿ, ಕಾಂಗ್ರೆಸ್ಸಿಗರಲ್ಲಿ ಅಥವಾ ಕಾಂಗ್ರೆಸೇತರರಲ್ಲಿ, ಅದನ್ನು ನಾಶಮಾಡಲು ಸಾಧಕವಾಗಬಾರದು ಸಂಶಯದ ಸದ್ಗುಣ.

ಸರಕಾರದ ಚರ್ಯೆಗಳಿಗೆ ನನ್ನ ಅರ್ಥವೇನೋ ಸ್ಪಷ್ಟಗೊಳಿಸದೆ ಸವಿನಯ ಶಾಸನಭಂಗವನ್ನಾಗಲಿ ಮತ್ತೊಂದನ್ನಾಗಲಿ ಸರಕಾರದ ಮುಖಕ್ಕೆ ಎಸೆಯಲಾರೆ ನಾನು. ಮೊಟ್ಟಮೊದಲು ವೈಸರಾಯ್ ಘೋಷಣೆ, ಆಮೇಲೆ ಭಾರತ ಕಾರ್ಯದರ್ಶಿಯ ಹೇಳಿಕೆ, ಅಲ್ಲಿಂದ ಮುಂದೆ ಸರಕಾರ ಹಿಡಿದ ಹೊರಗೆ, ಕೈಗೊಂಡ ಚರ್ಯೆ. ಇವೆಲ್ಲದರ ಒಟ್ಟು ಪರಿಣಾಮ ನನ್ನ ಮನಸ್ಸಿನ ಮೇಲೆ ಆದದ್ದು ಹೀಗೆ. ಏನೋ ಅನ್ಯಾಯ ಆಗಿದೆ, ಇಡಿಯ ರಾಷ್ಟ್ರದ ವಿರುದ್ಧ ಅನ್ಯಾಯ ಆಗುತ್ತಿದೆ. ಸ್ವಾತಂತ್ರ್ಯದ ವಾಣಿಯನ್ನು ಹಿಸುಕಿಹಾಕಲಿದ್ದಾರೆ. ತೀರ್ಮಾನದಲ್ಲಿ ಈ ಅರ್ಥ ಇದೆ. ಈಗ ನಾನು ಹೇಳುವ ಭಾಷೆ ಇಲ್ಲದಿರಬಹುದು. ಅರ್ಥವೇನೋ ಹಗಲಿನ ಬೆಳಕಿನ ಹಾಗೆ ಸ್ಪಷ್ಟ.

ನಮ್ಮ ನಿಲುವನ್ನು ಪೂರ ವಿಶದಪಡಿಸಲು ನನಗೆ ದರ್ಶನದ ಕೃತಿ ತೋರಬೇಕೆಂದು ವೈಸರಾಯರನ್ನು ಪ್ರಾರ್ಥಿಸುತ್ತೇನೆ. ಅವರು ಒಪ್ಪುತ್ತಾರೆ. ನನಗೆ ಸಂದೇಹವಿಲ್ಲ. ನನ್ನ ಅಡಚಣೆಗಳನ್ನು ಕಾಂಗ್ರೆಸಿನ ಅಡಚಣೆಗಳನ್ನು ಅವರಿಗೆ ವಿವರಿಸುತ್ತೇನೆ, ನಿಮ್ಮ ಹೆಸರಿನಲ್ಲಿ ಅವರನ್ನು ನೋಡುತ್ತೇನೆ. ನಾವು ಬಂದು ನಿಂತ ನಿಲವು ಇದು ಎಂದು ಹೇಳುತ್ತೇನೆ. ಯುದ್ಧ

ಪ್ರಯತ್ನದಲ್ಲಿ ನಿಮಗೆ ಅಡ್ಡಿಮಾಡಲು ಅಥವಾ ಭಂಗಗೊಳಿಸಲು ನಮಗೆ ಇಷ್ಟವಿಲ್ಲ. ನಿಮ್ಮ ದಾರಿ ನಿಮಗೆ, ನಮ್ಮ ದಾರಿ ನಮಗೆ, ಬಾಧಕ ಬೇಡ. ಎಲ್ಲರಿಗೂ ಸಮಾನ ಧರ್ಮ ಅಹಿಂಸೆ. ನಮ್ಮ ಜನರನ್ನೂ ನಮ್ಮ ಕಡೆ ಎಳೆದುಕೊಂಡರೆ ನಮ್ಮ ಜನರ ಪರವಾಗಿ ಯುದ್ಧ ಪ್ರಯತ್ನ ನಡೆಯದು. ಹಾಗಲ್ಲದೆ, ನೀವು ನೀತಿಬಲವಲ್ಲದೆ ಬೇರೆ ಯಾವ ಒತ್ತಾಯವನ್ನೂ ಹಾಕದೆಯೆ ನಮ್ಮ ಜನ ಯುದ್ಧ ಪ್ರಯತ್ನಕ್ಕೆ ನೆರವು ನೀಡಿದರೆ, ನಮ್ಮ ಆಕ್ಷೇಪಣೆಗೆ ಅವಕಾಶವೆ ಇಲ್ಲ. ರಾಜ ಮಹಾರಾಜರಿಂದ, ಜಮೀನುದಾರರಿಂದ, ಉಚ್ಚ—ನೀಚ ಯಾರಿಂದಲೇ ಆಗಲಿ ನಿಮಗೆ ಸಹಾಯ ದೊರೆತರೆ ಮಹಾರಾಯರ ಹಾಗೆ ತೆಗೆದುಕೊಳ್ಳಿ. ನಮ್ಮ ಧ್ವನಿಯೂ ಕೇಳಿಸಲಿ. ನನ್ನ ಸಲಹೆಗೆ ಒಪ್ಪಿದರೆ ನಿಮಗೆ ಗೌರವ, ನಿಮ್ಮ ಕಿರೀಟಕ್ಕೆ ಇನ್ನೊಂದು ಮಣಿ ಸೇರಿದಂತೆ. ನೀವು ಬದುಕು—ಸಾವಿನ ಹೋರಾಟದಲ್ಲಿ ಇದೀರಿ. ಆದರೂ ನಮಗೆ ಈ ಸ್ವಾತಂತ್ರ್ಯ ಕೊಟ್ಟಿರಿ ಎಂಬುದು ನಮಗೆ ಗೌರವ. ನಮ್ಮ ಧ್ವನಿಯನ್ನು ಅಡಗಿಸಲು ನಿಮಗಿರುವ ಅಧಿಕಾರ ಅಪಾರ. ಆದರೂ ನೀವು ಈ ಹೆಜ್ಜೆ ಹಾಕಿದಿರೆಂದರೆ, ಅಹಿಂಸೆಯನ್ನು ಬಿಡದೆ ಯುದ್ಧ ಪ್ರಯತ್ನಕ್ಕೆ ಸೇರಬೇಡಿ. ಭಾರತದ ಜನರಿಗೆ ಹೇಳುವ ಸ್ವಾತಂತ್ರ್ಯ ಕೊಟ್ಟರೆ, ನಿಮಗೆ ಕೀರ್ತಿ ಬರುತ್ತದೆ.

ಯುದ್ಧ ಪ್ರಯತ್ನದಲ್ಲಿ ನೆರವಾಗದಿರಲು ಜನ ಏನಾದರೂ ತರ್ಕ ಉಪಯೋಗಿಸಲಿ ಕಾಂಗ್ರೆಸಿಗರ ಬಾಯಲ್ಲಿ ಬರಬೇಕಾದ್ದು ನನ್ನ ತರ್ಕ ಒಂದೇ. ಎಲ್ಲರೂ ಅಷ್ಟನ್ನೇ ಹೇಳಬೇಕು ಎನ್ನುವುದಿಲ್ಲ. ನನ್ನ ಹಾಗೆ ತಾತ್ವಿಕ ವಿರೋಧ ಇದ್ದವರು ನನ್ನ ತರ್ಕವನ್ನು ಬಳಸಲಿ. ಬ್ರಿಟಿಷ್ ಸಾಮ್ರಾಜ್ಯಶಾಹಿ ಸಾಕಾಗಿದೆ ಎಂಬವರು ಅದನ್ನು ಹೇಳಲಿ. ಬೇರೆ ಕಾರಣ ಇರುವವರೂ ಇದ್ದಾರು. ಇವೆಲ್ಲಕ್ಕೂ ವಾಕ್ ಸ್ವಾತಂತ್ರ್ಯದಲ್ಲಿ ಅವಕಾಶ ಇರಬೇಕು. ಆದರೆ ಎಲ್ಲರೂ ಅಹಿಂಸೆಯನ್ನು ಒಪ್ಪಬೇಕು. ತಾವು ಹೇಳುವುದನ್ನು ಕದ್ದು ಮುಚ್ಚಿ ಹೇಳಬಾರದು. ಬಹಿರಂಗವಾಗಿಯೇ ಹೇಳಬೇಕು. ನನ್ನ ದಳಪತಿತನದ ನಿಯಮ ಇವು. ಇವು ನಿಮಗೆ ಸಮಾಧಾನ ಇಲ್ಲದಿದ್ದರೆ ಈ ತೀರ್ಮಾನವನ್ನು ತಿರಸ್ಕರಿಸಿಬಿಡಿ. ಯುದ್ಧ ಪ್ರಯತ್ನಕ್ಕೆ ಧನ ಜನ ಸಹಾಯ ಮಾಡಬಾರದು. ಅಸಹಕಾರಮಾಡ

ಬೇಕು ಎಂದು ಪ್ರಚಾರ ಮಾಡಲು ಅವಕಾಶ ಇರುವವರೆಗೆ ಸವಿನಯ ಶಾಸನಭಂಗ ಇಲ್ಲ. ಆ ಸ್ವಾತಂತ್ರ್ಯ ಇಲ್ಲದಿದ್ದರೆ ಸ್ವರಾಜ್ಯವೇ ಇಲ್ಲ. ಶಾಶ್ವತ ಗುಲಾಮಗಿರಿಯೇ ಭಾರತದ ಜನನಾಯಕರಿಗೆ. ತಮ್ಮ ಜನಕ್ಕೆ ಏನು ಬೇಕಾದರೂ ಹೇಳುವ ಸ್ವಾತಂತ್ರ್ಯ ಕೊಟ್ಟಿದ್ದೇವೆ ಎಂದು ವೈಸ ರಾಯರೂ ಬ್ರಿಟಿಷ್ ಜನರೂ ಜಗತ್ತಿಗೆ ಹೇಳುವಂತಾಗಬೇಕು. ಆಗ ಬ್ರಿಟಿಷರು ಜಗತ್ತಿಗೆ ಹೇಳಬಹುದು. "ನಮ್ಮ ಕೃತಿ ನಡೆಸೋಣ ತೀರ್ಮಾನಿಸಿ, ಭಾರತದಲ್ಲಿ ನಾವು ಸರಿಯಾಗಿ ವ್ಯವಹರಿಸುತ್ತಿದ್ದೇವೆ."

ಬ್ರಿಟಿಷರು ಡಿಲ್ಲಿ ತೀರ್ಮಾನಕ್ಕೆ ಒಕೊಡದಿದ್ದರೆ ಚಿಂತೆಯಿಲ್ಲ. "ಈಗ ಇರುವ ವ್ಯವಸ್ಥೆಯಲ್ಲಿ ನೀವು ಕೈ ಹಾಕುವಂತಿಲ್ಲ. ಬರುವ ಕಾಲಕ್ಕೆ ಬಿಡುಗಡೆ ಬಂದೇ ಬರುತ್ತದೆ. ಈ ವಿಷಮ ಸಂಧಿಯಲ್ಲಿ ನಮ್ಮನ್ನು ಕಾಡಬೇಡಿ" ಎಂದಾರು ಅವರು. ಆ ವಾದವನ್ನು ಅರ್ಥ ಮಾಡಿಕೊಳ್ಳು ತ್ತೇನೆ. ಸಹಾನುಭೂತಿಯಿಂದ ನೋಡುತ್ತೇನೆ. ಅವರು ಹೇಳುವ ಮಾತಿನಲ್ಲಿ ಸುಳ್ಳು ಮೋಸ ಇಲ್ಲದಿರುವವರೆಗೆ ನಾನೂ ನನ್ನ ಕೈ ತಡೆಯು ತ್ತೇನೆ. ನಮಗೆ ಅವರು ಸ್ವಾತಂತ್ರ್ಯ ಕೊಡಲು ಸಾಧ್ಯವಿಲ್ಲ. ನಮ್ಮ ಆಂತರಿಕ ಬಲದಿಂದಲೇ ಸ್ವಾತಂತ್ರ್ಯ ಬರಬೇಕಾದರೆ ನಮ್ಮ ಭೇದಗಳನ್ನು ಮರೆತು ಐಕಮತ್ಯವನ್ನು ಸಾಧಿಸಿದರೇನೇ. ಮೇಲಿನಿಂದ ಇಳಿದು ಬರು ವುದು ಇಲ್ಲ. ಇನ್ನೊಬ್ಬರು ದಾನ ಕೊಡುವುದೂ ಅಲ್ಲ. ನಾನು ವರ್ಕಿಂಗ್ ಕಮಿಟಿ ಸದಸ್ಯರ ಭಾವನೆಗಳನ್ನು ಪ್ರತಿನಿಧಿಸುತ್ತಿದೇನೋ ಇಲ್ಲವೋ ಅವರೊಡನೆ ನಾನು ಇದನ್ನು ಚರ್ಚಿಸಿರಲಿಲ್ಲ. ಆದರೆ ನನ್ನ ಪರಿಮಿತಿ, ನನ್ನ ಮನೋಧರ್ಮ ನಿಮಗೆ ತಿಳಿಯಬೇಕು.

ನೀನು ಕನಸುಗಾರ ಎನ್ನಬಹುದು ವೈಸರಾಯ್. ನನ್ನ ಯತ್ನ ವಿಫಲ ವಾದೀತು. ಆದರೆ ಜಗಳ ಮಾಡಲಾರೆ. ನಾನೇನೂ ಮಾಡಲಾರೆ. ನಾನೇನು ಮಾಡಲಿ, ನಾನು ಅಸಹಾಯ ಎಂದರೆ ಅವರು, ನಾನು ಅಸಹಾಯ ಎಂದುಕೊಳ್ಳುವುದಿಲ್ಲ. ನನ್ನ ಹೊಣೆಯನ್ನು ನಿರ್ವಹಿಸುತ್ತೇನೆ. ರಾಮ ಮನೋಹರ ಲೋಹಿಯಾ, ಜಯಪ್ರಕಾಶರು, ಸೆರೆಯಲ್ಲಿರಬೇಕಾದರೆ ನಾನು ಸುಮ್ಮನೆ ಕೊಡಲಾರೆ. ಅವರು ಹಿಂಸಾ ಪ್ರಚಾರ ಮಾಡಲಿಲ್ಲ. ರಾಮಗಡದ

ತೀರ್ಮಾನದ ಪ್ರಕಾರ ನಡೆದಿದ್ದಾರೆ. ಮಾನ ಮರ್ಯಾದೆಯ ಮಾತು ಅವರಿಗೆ ಅದು.

ಬಹಳ ತಡೆದುಕೊಂಡಿದೇನೆ. ಇನ್ನೂ ತಡೆಯುತ್ತೇನೆ. ಕಾರಾಗೃಹಕ್ಕೆ ಹೋಗಲು ಯತ್ನಿಸುವುದಿಲ್ಲ. ಸವಿನಯ ಶಾಸನ ಭಂಗವನ್ನು ನಾನು ಮಾಡುವುದಿಲ್ಲ. ಅಪಾಯಕ್ಕೆ ಸಿಗುವುದಿಲ್ಲ. ಈ ಯುದ್ಧದಲ್ಲಿ ನಾನು ಸೆರೆಮನೆಗೆ ಹೋಗುವಂಥದನ್ನು ಮಾಡುವುದಿಲ್ಲ. ಆದರೆ ಸರಕಾರ ಬಯಸಿದರೆ ನನ್ನನ್ನು ಹಿಡಿದೊಯ್ಯಲು ಅವರಿಗೆ ಕಷ್ಟ ಆಗುವುದಿಲ್ಲ. ಬಾಯಿ ಮುಚ್ಚಿಕೊಳ್ಳಲಾರೆ. ಲೇಖನಿಯನ್ನೂ ಬಿಗಿ ಹಿಡಿಯಲಾರೆ. ಭಾರತ ದಂಗೆ ಮಾಡೀತು ಎಂದು ಅವರಿಗೆ ನನ್ನನ್ನು ಸೆರೆಯಲ್ಲಿಡುವುದು ಕಷ್ಟ ಆಗುವುದಿಲ್ಲ. ಭಾರತ ಹಾಗೆ ಮಾಡಿದರೆ ತಪ್ಪಾದೀತು. ನನ್ನನ್ನು ಸೆರೆಯಲ್ಲಿಡಲಾರರು ಅವರು ಎನಿಸುತ್ತಿದೆ ನನಗೆ.

ವೈಸರಾಯರ ಮುಂದೆ ನನ್ನ ವಾದವನ್ನು ಮಂಡಿಸುತ್ತೇನೆ. ನನ್ನ ಪ್ರಯತ್ನ ವಿಫಲವಾಗಬಹುದು. ಆದರೆ ಮೊದಲೇ ಹತಾಶನಾಗಿ ನಾನು ಎಂದೂ ಯತ್ನ ಮಾಡಿಲ್ಲ. ನನ್ನ ಎದುರಿಗೆ ಕಣ್ಣಿಲ್ಲದ ಗೋಡೆ ಇದೆ ಎಂದು ತಿಳಿದೂ ನಾನು ಪ್ರಯತ್ನಿಸಿದ್ದೇನು. ಇಂಥ ಕುರುಡು ಗೋಡೆಗಳನ್ನೂ ಸೀಳಿಕೊಂಡು ಒಳಹೊಕ್ಕಿದೇನೆ ಅನೇಕ ವೇಳೆ, ' ಯುದ್ಧ ಇಲ್ಲ ' ಎಂದು ಭಾರತದಲ್ಲಿ ಪ್ರಚಾರ ಮಾಡಲು ಕಾಂಗ್ರೆಸ್ಸಿನ ಬೇಡಿಕೆಯನ್ನೂ ಅವರ ತರ್ಕಶುದ್ಧಿಯನ್ನೂ ವೈಸರಾಯ್ ಅರ್ಥ ಮಾಡಿಕೊಂಡಾರು ಎಂಬ ಆಸೆ, ನಂಬಿಕೆ ಇಟ್ಟುಕೊಂಡು ಅವರ ಬಳಿಗೆ ಹೋಗುತ್ತೇನೆ. ಬರಹದ ಮೂಲಕ ಬಾಯಿಯ ಮೂಲಕ ನಾವು ಸಾಮ್ರಾಜ್ಯಶಾಹಿಗೆ ಸಹಾಯ ಮಾಡಲಾರೆವು, ಸುಲಿಗೆಗೆ ನೆರವಾಗಲಾರೆವು ಎಂದು ಪ್ರಚಾರಮಾಡಲು ಪ್ರತಿಯೊಬ್ಬರಿಗೂ ಪೂರ್ಣ ಸ್ವಾತಂತ್ರ್ಯ ಇರಬೇಕು.

ನಿಮ್ಮ ಹೆಸರಿನಲ್ಲಿ ಸತ್ಯಾಗ್ರಹ ಆಗದಂತೆ ಸರ್ವ ಪ್ರಯತ್ನವನ್ನೂ ಮಾಡುತ್ತೇನೆ. ಒಂದು ವೇಳೆ ಬಂದರೆ ಯಾವ ರೂಪದಲ್ಲಿ ಬರುತ್ತದೆಯೋ ನನಗೆ ತಿಳಿಯದು. ಆದರೆ ಸಾಮೂಹಿಕ ಸವಿನಯ ಶಾಸನಭಂಗ ಆಗದು ಎಂಬುದನ್ನು ಬಲ್ಲೆ. ಈ ಸಂದರ್ಭಕ್ಕೆ ಸಾಮೂಹಿಕ ಸವಿನಯ ಶಾಸನಭಂಗ ಅಗತ್ಯವಲ್ಲ. ನನ್ನ ಮುಂದಿನ ಹೆಜ್ಜೆಯೇನೋ ನನಗೆ ಕಂಡಿಲ್ಲ. ಎಮಗೆ

ಗಾಢ ಅಂಧಕಾರ ಕವಿದಿದೆ. ಏನೇ ಮಾಡಲಿ, ಕಾಂಗ್ರೆಸ್ ಸಂಪ್ರದಾಯಾನು ಗುಣ, ಸಂದರ್ಭಯೋಗ್ಯ ಆಗಿದ್ದೀತು ಎಂದು ಆಶಿಸುತ್ತೇನೆ.

ನಾನು ಸೇವಾಗ್ರಾಮದಲ್ಲಿ ಮುಳುಗಿ ಹೋಗಿದೇನೆ, ಕಾಂಗ್ರೆಸ್ಸಿನ ಮನಸ್ಸು ನನಗೆ ತಿಳಿಯದು ಎಂದು ಹಲವು ಬಾರಿ ಹೇಳಿದೇನೆ. ಕಾಂಗ್ರೆಸ್ಸಿನ ಈ ತೊಡಕಿನಿಂದಾಗಿ ಬೊಂಬಾಯಿಗೆ ಎಳೆದುಕೊಂಡು ಬಂದಿದೇನೆ ನನ್ನನ್ನು. ಈ ಕೆಲಸ ಮುಗಿದ ಕೂಡಲೇ, ಇಲ್ಲಿಂದ ಬಿಡುಗಡೆಯಾದ ಕೂಡಲೇ ಸೇವಾಗ್ರಾಮದಲ್ಲಿ ನೋಡುತ್ತೀರಿ ನನ್ನನ್ನು. ಅಲ್ಲೇ ಹುಗಿದುಕೊಂಡಿದ್ದರೂ ಈ ಯುದ್ಧವನ್ನು ನಡೆಸುವ ಶಕ್ತಿ, ಸಲಕರಣೆ ಇದೆ. ಬೇರೆ ಯಾವ ಸ್ಥಳಕ್ಕಿಂತಲೂ ಸೇವಾಗ್ರಾಮದಲ್ಲಿ ಉತ್ತಮ ವಿಚಾರ, ಸ್ಪಷ್ಟ ವಿಚಾರ ಮಾಡಬಲ್ಲೆ ನಾನು, ಅಲ್ಲಿ ನನ್ನ ಬೆಳವಣಿಗೆಗೆ ಬೇಕಾದ ವಾತಾವರಣವನ್ನು ನಿರ್ಮಿಸಿಕೊಂಡಿರುವುದೇ ಕಾರಣ. ವಯಸ್ಸು ಆದಹಾಗೆ ನನ್ನ ದೇಹವು ಕ್ಷೀಣ ಆಗಬಹುದು. ನನ್ನ ವಿವೇಕವೂ ಕ್ಷೀಣ ಆಗಲಾರದೆಂದು ನಂಬಿದೇನೆ. ವಯಸ್ಸು ಆದಹಾಗೆ ಎಲ್ಲವೂ ಹೆಚ್ಚು ಸ್ಪಷ್ಟವಾಗಿ ಕಾಣುತ್ತಿವೆ. ಆತ್ಮ ವಂಚನೆ ಇದ್ದೀತು ಇದು. ಕಪಟ ಅಲ್ಲ. ಒಮ್ಮೊಮ್ಮೆ ಆತ್ಮವಂಚನೆ ಒಳ್ಳೆಯದು. ನಿರಾಸೆಯಿಂದ ಹತವೀರ್ಯ ಆಗದಂತೆ ಸಂತೋಷವಾಗಿ ಇರುವಂತೆ ಮಾಡುತ್ತದೆ. ಆದ್ದರಿಂದ, ನನ್ನನ್ನು ನೀವು ಸೇವಾಗ್ರಾಮ ದಿಂದ ಹೊರಕ್ಕೆಳೆದರೆ ತಪ್ಪು. ನನ್ನ ಯಾಜಮಾನ್ಯವನ್ನು ಸರಿಯಾಗಿ ನಿರ್ವಹಿಸುತ್ತೇನೆ ಎಂದು ಮಾತು ಕೊಡುತ್ತೇನೆ ನಿಮಗೆ.

ಕಾಂಗ್ರೆಸಿನಲ್ಲಿ ಅನೇಕ ಪಕ್ಷಗಳಿವೆ. ನಮ್ಮೆಲ್ಲರಿಗೂ ಒಂದೇ ಅಭಿಪ್ರಾಯ ವಿಲ್ಲ. ಅಶಿಸ್ತು ಇದೆ ಕಾಂಗ್ರೆಸ್ಸಿನಲ್ಲಿ, ದಿನೇ ದಿನೇ ಬೆಳೆಯುತ್ತಿರುವ ಬೃಹತ್ ಜನತಾ ಸಂಸ್ಥೆಯಲ್ಲಿ ಅನಿವಾರ್ಯವೇ ಅದೆಲ್ಲ ಎಂದು ಬಲ್ಲೆ. ಶಿಸ್ತೇ ಇಲ್ಲ, ಬರೀ ಅಶಿಸ್ತೇ ಇದೆ ಎಂದರೆ ಸಂಸ್ಥೆ ಅಧೋಗತಿಗೆ ಇಳಿಯುತ್ತಿದೆ. ಅಹಿಂಸೆಯಲ್ಲಿ ನಂಬಿಕೆ ಇಲ್ಲದಿದ್ದರೂ ಕಾಂಗ್ರೆಸ್ಸಿಗೆ ಸೇರಿದೀರಿ ಎನ್ನುವ ಮಾತಿಗೆ ಎಡೆ ಕೊಡಬೇಡಿ. ಮನಸ್ಸಿನಲ್ಲಿ ಹಿಂಸೆ ಇಟ್ಟುಕೊಂಡು ಕಾಂಗ್ರೆ ಸ್ಸಿನ ಪ್ರತಿಜ್ಞೆಗೆ ಹೇಗೆತಾನೆ ಸಹಿ ಮಾಡಬಲ್ಲಿರು? ಅಹಿಂಸೆಯ ಧೋರಣೆ ಯನ್ನೂ ಸಂಪೂರ್ಣವಾಗಿ ಅನುಸರಿಸಬೇಕು ನೀವು. ಧೋರಣೆಯೇ ಆದರೂ, ಅದು ಇರುವಷ್ಟು ದಿನ ಶ್ರದ್ಧೆಯ ವಿಷಯ ಎಂದೇ ತಿಳಿಯ

ಬೇಕು. ನನ್ನದು ಯಾವಜ್ಜೀವ ಶ್ರದ್ಧೆ, ನಿಮ್ಮದು ಈ ಧೋರಣೆ ಇರುವವರೆಗೆ. ಇಷ್ಟವಿಲ್ಲದಿದ್ದರೆ ಕಾಂಗ್ರೆಸ್ಸನ್ನು ಬಿಡಿ. ಸ್ವತಂತ್ರರು ನೀವು. ನಾವು ಆಡುವ ಭಾಷೆ, ನಮ್ಮಲ್ಲಿ ಮೂಡುವ ವಿಚಾರಗಳ ಬಗ್ಗೆ ಸ್ಪಷ್ಟವಾಗಿ ಇರೋಣ. ಒಳಗಿನ ವಿಚಾರದ ಹೊರಗಿನ ರೂಪುತಾನೆ ಭಾಷೆ? ನಿಮ್ಮ ವಿಚಾರ ಸತ್ಯವಾಗಿರಲಿ, ನಿರ್ದಿಷ್ಟವಾಗಿರಲಿ. ಇಡಿಯ ಜಗತ್ತೇ ನಿಮಗೆ ವಿರುದ್ಧವಾಗಿದ್ದರೂ ಸ್ವರಾಜ್ಯ ಬೇಗ ಬರುವಂತೆ ಮಾಡಿರಿ. ದಿನಕ್ಕೆ ತೊಂಬತ್ತು ಲಕ್ಷ ಪೌಂಡು ವೆಚ್ಚಮಾಡದೆಯೆ, ಒಂದು ಮನೆಯನ್ನೂ ಸುಡದೆಯೆ ಸ್ವರಾಜ್ಯ ಗಳಿಸಿರಿ. ನಿಮ್ಮ ನೀತಿಗೆ ನೀವು ಸತ್ಯವಾಗಿ ನಡೆದರೆ ಇದು ಯಾವುದನ್ನೂ ಮಾಡದೆಯೆ ಭವ್ಯವಾದ ಸ್ವಾತಂತ್ರ್ಯ ಸೌಧವನ್ನು ನೀವು ಕಟ್ಟುತ್ತೀರಿ.

ಇನ್ನು ಹಿಂಸೆಯ ಪಕ್ಷದವರಿಗೆ, ಸಾಧ್ಯವಿದ್ದರೆ ಪದ್ಧತಿಗಳನ್ನು ಬೇರೆ ಮಾಡಬೇಡಿ. ಕೆಲವು ವರ್ಷಗಳಿಂದ ನಿಮ್ಮ ಕೈ ತಡೆದಿದೀರಿ. ಇನ್ನೂ ಕೆಲವು ವರ್ಷ ತಡೆದುಕೊಳ್ಳಿ. ನಮ್ಮದು ಚಿಕ್ಕಪುಟ್ಟ ಯುದ್ಧವಲ್ಲ. ತಡೆದು ಕೊಂಡಿರೋ ನೀವು, ನಿಮಗೆ ಏನೂ ನಷ್ಟವಿಲ್ಲ.

ವಾಕ್ ಸ್ವಾತಂತ್ರ್ಯ, ಲೇಖನ ಸ್ವಾತಂತ್ರ್ಯಗಳೇ ಸ್ವರಾಜ್ಯದ ತಳಹದಿ. ತಳಗಲ್ಲೇ ಅಪಾಯಕ್ಕೆ ಈಡಾದರೆ ಸರ್ವಶಕ್ತಿಯನ್ನೂ ವಿನಿಯೋಗಿಸಿ ಆದೊಂದೇ ಕಲ್ಲನ್ನು ಕಾಪಾಡಿಕೊಳ್ಳಬೇಕು. ದೇವರು ನಿಮಗೆ ನೆರವಾಗಲಿ.

*　　*　　*　　*

ಈ ವಿಚಾರವನ್ನು ಮುಕ್ತಾಯ ಭಾಷಣದಲ್ಲಿ ಮತ್ತಷ್ಟು ಸ್ಪಷ್ಟಗೊಳಿಸಿದರು, ಮರುದಿನ. (೧೬ ಸೆಪ್ಟೆಂಬರ್)

ನಿನ್ನೆ ನಾನು ಹೇಳಿದ ಒಂದು ಬಹಳ ಮುಖ್ಯವಾದ ಸರಳವಾದ ಅಂಶವನ್ನು ನಿಮ್ಮ ಮನಸ್ಸು ಗ್ರಹಿಸಲಿಲ್ಲ. ವಾಕ್‌ಸ್ವಾತಂತ್ರ್ಯವೇ ಸ್ವರಾಜ್ಯದ ತಳಹದಿ ಎಂದೆ. ಸ್ವಲ್ಪ ವಿವರಿಸುತ್ತೇನೆ. ಸ್ವರಾಜ್ಯದ ಸಂಪೂರ್ಣ ವಿವರಣೆಯನ್ನು ನಾನು ಇನ್ನೂ ನೋಡಿಲ್ಲ. ನನಗೇ ವಿವರಣೆ ಕೊಡಲು ಸಾಧ್ಯವಾಗಿಲ್ಲ. ಜವಾಹರ್‌ಲಾಲ್ ಕೂಡ ಎಂದೂ ಕೊಟ್ಟಂತಿಲ್ಲ. ನಿಮ್ಮಲ್ಲಿ ಯಾರಾದರೂ ಕೊಟ್ಟರೂ ಕೊಡಿರಿ. ಎಷ್ಟೋಸಲ ಹೀಗೆ ಆಗಿದೆ. ನಾನು ಯಾವುದಕ್ಕಾಗಿ ಕಷ್ಟಪಡುತ್ತಿದ್ದೆನೋ ಅದನ್ನು ಇತರರು

ವರ್ಣಿಸಿದಾರೆ. ಯಾರಾದರೂ ಇದನ್ನು ವರ್ಣಿಸಿದರೆ ಅವರನ್ನು ಗುರು ಆಗಿ ಮಾಡಿಕೊಳ್ಳುತ್ತೇನೆ. ಈ ತೀರ್ಮಾನದಲ್ಲಿ ಸ್ವರಾಜ್ಯದ ಬೀಜ ಇದೆ. ಇದನ್ನು ನೀವು ದೃಢವಾಗಿ ನಂಬಿದರೆ ಹಲವು ತಿದ್ದುಪಡಿಗಳನ್ನು ಸೂಚಿಸಿದವರ ಬಯಕೆಯೆಲ್ಲ ತಾನಾಗಿಯೇ ಪೂರ್ಣ ಆಗುತ್ತದೆ. ಹೋರಾಡಿಯೋ ಸಂಧಾನ ಮಾಡಿಯೋ ವಾಕ್ಸ್ವಾತಂತ್ರ್ಯವನ್ನುಗಳಿಸಿದರೆ ಎಲ್ಲವನ್ನೂ ಗಳಿಸಿದಂತೆಯೆ, ಸಾಮ್ಯವಾದಿ ಡಾ. ಅಷ್ರಫ್‌ಗೆ, ಫಾರ್ವರ್ಡ್ ಬ್ಲಾಕಿನ ಸರದಾರ್ ಶಾರ್ದೂಲ ಸಿಂಹರಿಗೆ, ಇಬ್ಬರಿಗೂ ವಾಕ್ಸ್ವಾತಂತ್ರ್ಯ. ಇದಕ್ಕೆ ಮತಧರ್ಮದ ಬಣ್ಣ ಬಳಿದರೆ ಧರ್ಮ ಸ್ವಾತಂತ್ರ್ಯ ಎಂದೇನು ಅವನ್ನೇ; ಧಾರ್ಮಿಕ--ಸಾಂಸ್ಕೃತಿಕ ಸ್ವಾತಂತ್ರ್ಯ ಎಂದು ಮುಸ್ಲಿಮರು ಕೇಳುತ್ತಿರುವುದೂ ಇದೇ. ನಿಮಗೆ ಅಪರಾಧೀನತೆ ಬೇಕು ಎನ್ನುತ್ತೀರಿ. ನಮಗೆ ಅದನ್ನು ಕೊಡಲು ಅವರಿಗೆ ಶಕ್ತಿಯಿಲ್ಲ ಎಂಬುದನ್ನು ಮರೆಯುತ್ತೀರಿ. ನಾವು ಪರಾಧೀನರಲ್ಲ ಎಂದು ಹೇಳಿದರೂ ಸ್ವತಂತ್ರರಾಗುವುದಿಲ್ಲ. ಅದ್ದರಿಂದಲೇ ಬ್ರಿಟಿಷರು ಹೊರಟು ಹೋದ ಮೇಲೆ ನಿರ್ಭಯವಾಗಿ, ಜಪಾನ್, ಜರ್ಮನಿ, ರಷ್ಯಾ, ಅಫ್‌ಘನಿಸ್ತಾನ, ಯಾವ ವಿದೇಶೀ ರಾಷ್ಟ್ರಕ್ಕೂ ಹೆದರದೆ ನಮ್ಮನ್ನು ನಾವೇ ಪರಿಪಾಲಿಸಿಕೊಳ್ಳಬಲ್ಲೆವಾದರೆ ಆಗ ಸ್ವತಂತ್ರರಾದಂತೆ, ಈಗ ಸ್ವಾತಂತ್ರ್ಯಕ್ಕಾಗಿ ಸವಿನಯ ಶಾಸನಭಂಗ ಹೂಡುವುದು ಅಸಂಗತ. ಯಾರ ಸ್ವಾತಂತ್ರ್ಯವೇ ಗಂಡಾಂತರಕ್ಕೆ ಸಿಕ್ಕಿದೆಯೋ ಅವರೊಡನೆ ಸ್ವಾತಂತ್ರ್ಯಕ್ಕಾಗಿ ನಾವು ಹೊಡೆದಾಡೋಣವೆ? ಒಂದು ರಾಷ್ಟ್ರ ಇನ್ನೊಂದಕ್ಕೆ ಸ್ವಾತಂತ್ರ್ಯವನ್ನು ಕೊಡಬಹುದು ಎಂದರೂ ಇಂಗ್ಲಿಷರಿಗೆ ಅದು ಸಾಧ್ಯವಲ್ಲ. ತಾವೇ ವಿಪತ್ತಿನಲ್ಲಿರುವವರು ಇತರರನ್ನು ಏನು ಕಾಪಾಡಿಯಾರು? ಆದರೆ ತಮ್ಮ ಸ್ವಾತಂತ್ರ್ಯಕ್ಕಾಗಿ ಸಾಯುವವರೆಗೆ ಅವರು ಹೊಡೆದಾಡುವುದಾದರೆ, ವಿಚಾರಗ್ರಾಹಿಗಳಾಗಿದ್ದರೆ, ವಾಕ್‌ಸ್ವಾತಂತ್ರ್ಯದ ಅಧಿಕಾರವನ್ನು ಅವರು ಒಪ್ಪಿಕೊಳ್ಳಲೇಬೇಕು. ಖಂಡಿತವಾಗಿಯೂ ಇದನ್ನು ಅವರು ಮಾಡಬಹುದು. ಆ ಅಧಿಕಾರಕ್ಕಾಗಿ ಹೊಡೆದಾಡುವುದು ನಮ್ಮ ಕರ್ತವ್ಯ. ಅವರು ಅದನ್ನು ವಿರೋಧಿಸಿದರೆ ಆ ಅಧಿಕಾರಕ್ಕಾಗಿ ನಾವು ಹೊಡೆದಾಡಬೇಕು. ಅದರಿಂದ ಅವರಿಗೆ ಕಿರಿಕಿರಿ ಎನಿಸಿದರೆ ಅದು ಅವರೇ ತಂದಿಟ್ಟುಕೊಂಡದ್ದು.

ಈ ಸ್ವಾತಂತ್ರ್ಯ ಒಂದು ವಾಸ್ತವಿಕ ಅಂಶ. ಇದನ್ನು ವಿವರಿಸುವ ಅಗತ್ಯವಿಲ್ಲ. ಸ್ವಾತಂತ್ರ್ಯದ ಆಧಾರ ಇದು. ಅದರಲ್ಲೂ ಅಹಿಂಸೆಯಿಂದ ಅದನ್ನು ಪಡೆಯುವಾಗ, ಇದನ್ನು ಬಿಟ್ಟುಕೊಟ್ಟರೆ ಸ್ವಾತಂತ್ರ್ಯ ಸಂಪಾದನೆಗೆ ಇರುವ ಏಕೈಕ ಸಾಧನವನ್ನು ಬಿಟ್ಟುಕೊಟ್ಟಂತೆ.

ನನ್ನ ಸಲಹೆಗಿಂತ ತಮ್ಮ ಸಲಹೆಯೆ ಬ್ರಿಟಿಷರಿಗೆ ಒಪ್ಪಿಕೊಳ್ಳಲು ಸುಲಭ ಎಂದು ರಾಜಾಜೀ ನನಗೆ ಹೇಳಿದರು. ಅದು ಅರ್ಧ ಸತ್ಯ. ನಮ್ಮ ಸ್ವಾತಂತ್ರ್ಯವನ್ನು ಒಪ್ಪಿಕೊಳ್ಳುವುದು ಅವರಿಗೆ ಸುಲಭವಿರಬಹುದು. ಯುದ್ಧ ಕಾಲದಲ್ಲಿ ಕೇಂದ್ರದಲ್ಲಿ ಜವಾಬುದಾರಿ ಸರಕಾರವನ್ನು ಕೊಡಲು ಅವರು ಹಿಂದೆಗೆದಾರೆಂಬುದು ನನಗೆ ತಿಳಿಯುತ್ತದೆ. ಒಮ್ಮೆ ಕೊಟ್ಟು ಬಿಟ್ಟರೆ ನಮ್ಮ ಮೂಲಕ ನಡೆಸಬೇಕಲ್ಲ. ಇವತ್ತು ರಾಜಾಜೀ, ನಾಳೆ ಜವಹರಲಾಲ್, ನಾಡಿದ್ದು ದಾಮೋದರ ಮೆನನ್. ನಾವು ವಾಗ್ದಾನಮಾಡುವ ಸಹಕಾರಕ್ಕೆ ಅವರಿಗೆ ಬೆಲೆ ಇಲ್ಲ. ನಮ್ಮನ್ನು ನಂಬುವುದಿಲ್ಲವಲ್ಲ. ವೈಸರಾಯರ ಸ್ಥಾನದಲ್ಲಿ ನಾನೇ ಇದ್ದಿದ್ದರೆ ಆತನ ಅನುಮಾನ ನನಗೆ ಅರ್ಥ ಆಗುತ್ತಿತ್ತಲ್ಲಾ. ತಮಗೆ ನಂಬಿಕೆ ಇಲ್ಲದವರ ಮೂಲಕ ಯುದ್ಧ ನಡೆಸುವುದು ಅಪಾಯಕಾರಿ. ಆದರೆ ಯುದ್ಧಕ್ಕೆ ನಾನು ನೆರವಾಗುವುದಿಲ್ಲ ಎಂದು ಹೇಳಲು, ಎದುರಿಗೆ ಬಂದವರಿಗೆ ಅಸಹಕಾರವನ್ನು ಉಪದೇಶಿಸಲು ಎಲ್ಲರಿಗೂ ಅವಕಾಶಕೊಟ್ಟರೆ, ಅದರಲ್ಲಿ ಏನಿದೆ ಅಪಾಯ? ಕೋವಿ ತೋರಿಸಿ ಬಲತ್ಕಾರವಾಗಿ ಸಹಕಾರ ಪಡೆಯಬೇಕೆಂದಿದ್ದರೆ ವಿಷಯವೇ ಬೇರೆ.

ನಾವು ನಡಸಬೇಕೆನ್ನುವ ಈ ಹಕ್ಕಿಗೆ ಒಂದು ನಿಯಮ ಇದೆ. ನಾವು ಅಹಿಂಸೆಯನ್ನು ಪಾಲಿಸಬೇಕೆಂಬ ನಿಯಮ. ಈ ನಿಯಮ ಅಗತ್ಯ. ಏಕೆಂದರೆ, ಹಿಂಸೆಯನ್ನು ಅವಲಂಬಿಸಿದ ಸರಕಾರ ಹಿಂಸೆಯನ್ನು ಸಹಿಸದು. ಹಿಂಸೆಯ ಪರಂಪರೆಯೆ ಹಾಗೆ, ಅನಿವಾರ್ಯ. ಆದರೆ ಹಿಂಸೆಯನ್ನು ಹಿಡಿದವರೂ ಕೂಡ ನಿರಾಶರಾಗಬೇಕಾದ್ದಿಲ್ಲ. ಇವತ್ತೂ ನನ್ನ ಮಾತಿನಂತೆ ನಡೆದರೆ, ಅಹಿಂಸೆಯಿಂದ ನಾವು ಸ್ವರಾಜ್ಯಗಳಿಸಿದರೆ, ಯಾರಾದರೂ ಹಿಂಸಾವಾದಿಗಳು ಈಗ ಇದ್ದರೆ ಹಿಂಸಾ ಪ್ರಚಾರಮಾಡಬಹುದು. ಹಿಂಸೆಯನ್ನೆ ಮಾಡಬಹುದು. ಅವರಿಗೆ ಆ ಸ್ವಾತಂತ್ರ್ಯ ಇರುತ್ತದೆ. ದಂಡು ಇರುವುದಿಲ್ಲ. ಆದರೆ ಸಿಖ್ಖರಾಗಲಿ ಖಾಕಸಾರರಾಗಲಿ ಕತ್ತಿ ಇಟ್ಟುಕೊಳ್ಳಲು ಅಡ್ಡಿ

ಯಿಲ್ಲ. ಉಳಿದವರೆಲ್ಲ ಅಹಿಂಸಾ ಪಂಥಿಗಳಾದರೆ ಇವರು ಏನು ಹಿಂಸೆ ಮಾಡಿಯಾರು? ಬಹು ಜನ ಮಾತಿನಲ್ಲಿ ಕೃತಿಯಲ್ಲಿ ತೋರುವ ಸಂಯಮ ತಾನಾಗಿಯೆ ವಿರುದ್ಧಾಭಿಪ್ರಾಯದವರಿಗೂ ಇಂಥ ಸಂಯಮವನ್ನು ತೊಡಿಸುತ್ತದೆ. ಏನೇ ಇರಲಿ. ಅಹಿಂಸಕ ಭಾರತ ಗಣರಾಜ್ಯಕ್ಕೆ ನಾನು ಅಧ್ಯಕ್ಷನಾಗಿದ್ದರೆ ಹಿಂಸಾಪರಾಧಗಳಿಗೆ ಪಾಣಿಯ ಹಿಂಸಾ ಸ್ವಾತಂತ್ರ್ಯವನ್ನು ಕೊಡಲು ಹಿಂಜರಿಯುತ್ತಿರಲಿಲ್ಲ. ಅದೇ ಹಿಂಸಾವಲಂಬಿ ರಾಜ್ಯದಲ್ಲಿ ಅವರಿಗೆ ಆ ಸ್ವಾತಂತ್ರ್ಯ ಸಿಗದು ಎಂದು ಹೇಳುತ್ತೇನೆ ಅವರಿಗೆ.

ಸಾಮೂಹಿಕ ಸವಿನಯ ಶಾಸನಭಂಗ, ಮುಷ್ಕರ, ಕರನಿರಾಕರಣ ಚಳುವಳಿ ಬೇಕು ಎನ್ನುವವರಿಗೆ ಹೇಳುತ್ತೇನೆ. ೧೯೨೦ರ ಹಳೆಯ ತೀರ್ಮಾನದಲ್ಲಿ ಎಲ್ಲವೂ ಇವೆ. ಇಷ್ಟು ವರ್ಷವೂ ನನ್ನ ಪ್ರಯಾಸವೆಲ್ಲವೂ ದೇಶವನ್ನು ಅವಕ್ಕೆ ಸಿದ್ಧಮಾಡಲಿಕ್ಕಾಗಿಯೆ. ಅದರ ನಿಯಮಗಳನ್ನು ನಾವು ನಡೆಸಿದ್ದರೆ ಇವೆಲ್ಲವನ್ನೂ ಮೀರಿ ಹೊಸ ಸಮಾಜ ವ್ಯವಸ್ಥೆಯನ್ನು ಈ ವೇಳೆಗೆ ತರಬಹುದಾಗಿತ್ತು. ಆದರೆ ನಾವು ಸಿದ್ಧವಾಗಿಲ್ಲ. ತಪ್ಪು ನಮ್ಮದೇ. ಬೇರೆ ಯಾರದೂ ಅಲ್ಲ.

ನಿಮಗೆ ಇಷ್ಟವಿದ್ದರೆ ಸಾಮೂಹಿಕ ಸವಿನಯ ಶಾಸನಭಂಗವನ್ನು ನಡೆಸಲು ನೀವು ಸ್ವತಂತ್ರರು. ಆಗ ಆಶಿಸ್ತಿನ ತಪ್ಪು ಆಗುತ್ತದೆ ನಿಮ್ಮದು. ಸುಭಾಷ್ ಬಾಬು ನನಗೆ ಈ ಪ್ರಶ್ನೆ ಹಾಕಿದರು. ಅವರಿಗೆ ಹೇಳಿದ್ದನ್ನೆ ನಿಮಗೂ ಹೇಳುತ್ತೇನೆ. ನೀವು ಗೆದ್ದರೆ ನಿಮ್ಮನ್ನು ಅಭಿನಂದಿಸುತ್ತೇನೆ. ನಿಮ್ಮನ್ನು ಆಶೀರ್ವದಿಸಿ ಶುಭಾಶಯ ಕೋರಲಾರೆ. ಆಗ ನಿಮಗೆ ಮರ್ಯಾದೆಯ ದಾರಿ ಕಾಂಗ್ರೆಸ್ಸನ್ನು ಬಿಡುವುದು.

ಆದರೆ ಹಿಂಸೆ ಇಲ್ಲದೆ ಸಾಮೂಹಿಕ ಸವಿನಯ ಶಾಸನಭಂಗವನ್ನು ಈಗಿನ ಪರಿಸ್ಥಿತಿಯಲ್ಲಿ ನೀವು ನಡೆಸಲಾರಿರಿ. ನಾ ಬಲ್ಲೆ. ಇದೇ ಕಾರಣಕ್ಕಾಗಿ ವಿದ್ಯಾರ್ಥಿಗಳನ್ನು ಸತ್ಯಾಗ್ರಹಕ್ಕೆ ಸೇರಲು ಕಾಲೇಜು ಬಿಟ್ಟು ಬರಬೇಡಿ ಎನ್ನುತ್ತಿದೇನೆ. ಒಂದೇ ಸಲ ಕಾಲೇಜನ್ನು ಬಿಡುವುದಾದರೆ ಬೇರೆ. ಮುಷ್ಕರಗಳ ವಿಷಯವೂ ಅಷ್ಟೇ. ಡಾ. ಸುರೇಶ ಬ್ಯಾನರ್ಜಿ ಹಿಂದೆ ನನ್ನ ಸಂಗಾತಿ ಆಗಿದ್ದರು. ಕೆಲವು ವರ್ಷಗಳಿಂದ ನನ್ನನ್ನು ಬಿಟ್ಟು ಹೋದರು. ಈಗ ಮತ್ತೆ ಬರುವ ಹಾಗೆ ಇದೆ. ಕೆಲವು ಕಾಲದ ಹಿಂದೆ

ಅವರು ಹೇಳಿದರು: 'ನೀವೊಬ್ಬರೇ ಕೂಲಿಕಾರರ ಮುಷ್ಕರವನ್ನು ಯಶಸ್ವಿಯಾಗಿ ಕೊನೆಯುವರೆಗೆ ನಡೆಸಬಲ್ಲವರು? ಇವನ್ನೆಲ್ಲ ನಾ ಮಾಡಬಲ್ಲೆ. ನಿಮ್ಮ ಸಂಪೂರ್ಣ ಸಹಕಾರ, ಸಂಪೂರ್ಣ ಶಿಸ್ತು ಇದ್ದರೆ ಮಾತ್ರ.'

## ೩೩. ಸೇವಾಗ್ರಾಮದಿಂದ ಕೊಟ್ಟ ಹೇಳಿಕೆ

[ಸೇವಾಗ್ರಾಮದಿಂದ ಗಾಂಧೀಜೀ ಸಂಧಾನ ಮುರಿದುದರ ಬಗ್ಗೆ ಒಂದು ಹೇಳಿಕೆ ಕೊಟ್ಟರು:]

ನ್ಯಾಯವಾದುದನ್ನು ಈಗ ಬಹಳ ಸುಲಭವಾಗಿ ಮಾಡಬಹುದಾಗಿತ್ತು. ಬ್ರಿಟಿಷ್ ಮುತ್ಸದ್ದಿಗಳು ವಿಫಲರಾದರೆಂದು ನನ್ನ ದೃಢ ಅಭಿಪ್ರಾಯ. ಭಾರತ ಯುದ್ಧಪ್ರಯತ್ನಕ್ಕೆ ಪೂರ್ತಿಯಾಗಿ ಪರವಾಗಿದ್ದರೆ ವಿರುದ್ಧ ಪ್ರಚಾರಕ್ಕೆ ಬೆಲೆಯನ್ನು ಕೊಡದೆ ಬಿಟ್ಟುಬಿಡಬಹುದಾಗಿತ್ತು. ಹಿಂಸೆ ಲವಲೇಶವೂ ಇಲ್ಲದ ಅಭಿಪ್ರಾಯ ಪ್ರಕಟನೆಯ ಸ್ವಾತಂತ್ರ್ಯವನ್ನು ನಿರಾಕರಿಸುವ ಸ್ಪಷ್ಟ ಯುದ್ಧದಲ್ಲಿ ಸ್ವೇಚ್ಛೆಯಿಂದ ಭಾರತ ಭಾಗವಹಿಸುತ್ತಿದೆ ಎಂದು ಬ್ರಿಟನ್ ಹೇಳುತ್ತಿರುವದನ್ನೂ ಅಲ್ಲಗಳೆಯುತ್ತಿದ್ದೆ. ಕಾಂಗ್ರೆಸ್ ಸಲಹೆಯನ್ನು ಒಪ್ಪಿಕೊಂಡಿದ್ದರೆ ಭಾರತದಿಂದ ಸಿಗುತ್ತಿದ್ದ ಸಹಾಯ ಅಮೂಲ್ಯವಾಗುತ್ತಿತ್ತು. ಎಂದಾದರೊಂದು ದಿನ ಶಾಂತಿ ಆಗಲೇಬೇಕಲ್ಲ. ಅದಕ್ಕೆ ಕಾಲ ಬಂದಾಗ ಗೌರವಯುತ ಶಾಂತಿಯನ್ನು ಸಾಧಿಸಲು ಅಹಿಂಸಕ ಪಕ್ಷ ಪರಿಣಾಮಕಾರಿಯಾದ ಪಾತ್ರವನ್ನು ವಹಿಸುತ್ತಿತ್ತು. ಸಂಧಾನಭಂಗದ ಬಗ್ಗೆ ಟೈಮ್ಸ್ ಆಫ್ ಇಂಡಿಯಾ ಮಾಡಿದ ವಿಮರ್ಶೆಯನ್ನೂ ತೋರಿಸಿದ್ದಾರೆ. ನನ್ನ ಉಪಾಯ ಕೌಶಲದ ಬಗ್ಗೆ ಅಲ್ಲಿ ಮಾಡಿದ ಪ್ರಶಂಸೆಯನ್ನು ಒಪ್ಪುತ್ತೇನೆ. ಎಷ್ಟೋ ಹೆಚ್ಚು ಇದ್ದರೂ ಅದಕ್ಕೂ ಮಿತಿ ಇದೆ. ಎದುರುಗಡೆಯಲ್ಲಿ ಸಮ್ಮತಿಸುವ ಮನಸ್ಸು ಇರಬೇಕು. ಭೇಟಿಯಲ್ಲಿ ನನಗೆ ಅದು ಏನೇನೂ ಕಾಣಬರಲಿಲ್ಲವೆಂದು ಹೇಳಬೇಕಾಗಿ ಬಂದುದಕ್ಕೆ ನನಗೆ ದುಃಖವಾಗುತ್ತದೆ. ವೈಸರಾಯ್ ಪೂರಾ ಆದರ ತೋರಿದರು. ಆದರೆ ಸ್ವಲ್ಪವೂ ಬಳುಕಲಿಲ್ಲ, ಬಾಗಲಿಲ್ಲ.

ಎಂದಿನಂತೆ ತಮ್ಮ ತೀರ್ಮಾನವೇ ಸರಿ, ರಾಷ್ಟ್ರೀಯ ಭಾರತವನ್ನು ನಂಬಲಾಗದು ಎಂದು ಇದ್ದರು. ಬ್ರಿಟಿಷ್ ಜನ ರಣರಂಗದಲ್ಲಿ ಅತ್ಯದ್ಭುತ ರೀತಿಯ ವಿಶೇಷ ಧೈರ್ಯ–ಸಾಹಸಗಳನ್ನು ತೋರುತ್ತಿದ್ದಾರೆ. ಆದರೆ ನೀತಿಯ ರಂಗದಲ್ಲಿ ಸಾಹಸ ಮಾಡಲು ಅವರಿಗೆ ಧೈರ್ಯ ಸಾಲದು. ಬ್ರಿಟಿಷರ ರಾಜಕೀಯದಲ್ಲಿ ನೀತಿಗೆ ಏನಾದರೂ ಸ್ಥಾನವಿದೆಯೇ ಎಂದು ಅನೇಕ ವೇಳೆ ಆಶ್ಚರ್ಯಗೊಂಡಿದ್ದೇನೆ.

(ಅಕ್ಟೋಬರ್ ೫ರಲ್ಲಿ ಮೂರನೆ ಹೇಳಿಕೆ ಕೊಟ್ಟರು :)

ಸಂಧಾನ ವಿಫಲ ಆದುದನ್ನು ತಿಳಿಸಲು ನಾನೂ ವೈಸರಾಯರೂ ನಡೆಸಿದ ಪತ್ರ ವ್ಯವಹಾರದಲ್ಲಿ ನನ್ನ ಪತ್ರದಲ್ಲಿ ಸೂಚಿತವಾಗದಿರುವ ಸಂಗತಿಗಳ ಬಗ್ಗೆ ಒಂದು ಹೇಳಿಕೆ ಕೊಡುವುದಾಗಿ ಬರೆದಿದೇನೆ.

ಅದನ್ನು ಮಾಡುವ ಮೊದಲು ಲಾರ್ಡ್ ಲಿನ್‌ಲಿತ್‌ಗೋ ಬಗ್ಗೆ ಒಂದೆರಡು ಮಾತು ಹೇಳಬೇಕಾದುದು ನನ್ನ ಉದ್ದೇಶಕ್ಕೆ ಅವಶ್ಯಕ. ನೆಹರೂ ಬಹಳ ಮಿತಭಾಷಿ; ವಿಚಾರಮಾಡದೆ ಮಾತಾಡರು. ಮಾತಿನಲ್ಲಿ ಅಸಂದಿಗ್ಧ. ಅವರ ಅರ್ಥದ ಬಗ್ಗೆ ಸಂಶಯ ಉಳಿಯುವುದಿಲ್ಲ. ಅತ್ಯಂತ ಅಪ್ರಿಯವಾದ ತೀರ್ಮಾನಗಳನ್ನೂ ಶಾಂತವಾಗಿ ಸೌಜನ್ಯದಿಂದ ತಿಳಿಸಬಲ್ಲರು. ಎಷ್ಟು ದೌರ್ಜನ್ಯ ಬಂದರೆ ಆ ಗಳಿಗೆಯಲ್ಲಿ ಅಪ್ರಿಯವಾದ ನಿಷ್ಠುರವಾದ ತೀರ್ಮಾನವನ್ನು ಕೇಳಿದೆವೆಂದು ಎನಿಸುವುದೇ ಇಲ್ಲ. ಬೇರೆ ಯಾವ ವೈಸರಾಯಾಗಲಿ ಮತ್ತೊಬ್ಬರಾಗಲಿ ಇಷ್ಟು ಸಹನೆಯಿಂದ ಹೀಗೆ ಮನಸ್ಸು ಕೊಟ್ಟು ನಿಮ್ಮ ವಾದವನ್ನು ಕೇಳಿದುದಿಲ್ಲ. ಗಡಿಬಿಡಿ ಇಲ್ಲ. ಸಮಾಧಾನ ಕೊಡುವುದಿಲ್ಲ ಎಂದು ಸೌಜನ್ಯರಹಿತವಾಗಿ ನಡೆಯುವುದಿಲ್ಲ. ಇಷ್ಟೆಲ್ಲಾ ಇದ್ದರೂ ತನ್ನ ಪಟ್ಟನ್ನು ಬಿಡುವುದಿಲ್ಲ ಸುಲಭವಾಗಿ. ನಡೆಯುತ್ತಿರುವ ಚರ್ಚೆಯ ವಿಷಯದಲ್ಲಿ ಅವರ ತೀರ್ಮಾನ ಮೊದಲೇ ಮಾಡಿಕೊಂಡಿದಾರೆ. ನಿಮಗೆ ಹಾಗೆನಿಸಬಾರದೆಂದು ಬಹಳ ಜಾಗರೂಕತೆ ವಹಿಸುತ್ತಾರೆ. ಆದರೆ ಅವರ ನಿಶ್ಚಯವನ್ನು ಬದಲಾಯಿಸರು; ಸಂದೇಹವಿಲ್ಲ. ಇತರರ ಮಾತಿಗೆ ಕಿವಿಗೊಡುವುದೇ ಇಲ್ಲ. ತಮ್ಮ ತಿರ್ಮಾನವೇ ಸರಿ ಎಂದು ಅವರಿಗಿರುವ ವಿಶ್ವಾಸ, ಅತ್ಯಾಶ್ಚರ್ಯಕರ. ಸಜ್ಜನರ ವಚನ

ಅಥವಾ ಒಪ್ಪಂದಗಳಲ್ಲಿ ಅವರಿಗೆ ನಾಚಿಕೆ ಇಲ್ಲ. ಗಾಂಧೀ — ಇರ್ವಿನ್ ಒಪ್ಪಂದ ಆದ ಮೇಲೆ ಇನ್ನು ಯಾವ ಒಪ್ಪಂದವನ್ನೂ ಮಾಡಿಕೊಳ್ಳ ಕೂಡದೆಂದು ಬ್ರಿಟಿಷ್ ಪಾಳೆಯಗಾರರು ತೀರ್ಮಾನಿಸಿಕೊಂಡಿದ್ದಾರೆ ಎಂದು ನನಗೆ ಯಾವಾಗಲೂ ಎನಿಸಿದೆ. ತಾವು ಮಾಡಬೇಕೆಂಬುದನ್ನು ಸ್ವತಂತ್ರ ವಾಗಿಯೆ ಮಾಡಬೇಕು. ಇದು ಉಚ್ಚ ರೀತಿಯ ನ್ಯಾಯಬುದ್ಧಿ ಅಥವಾ ಅಪರಿಮಿತ ಆತ್ಮ ವಿಶ್ವಾಸ. ಎರಡನೆಯದೇ ಇರಬೇಕು. ನಮ್ಮ ಅಭಿ ಪ್ರಾಯಭೇದ ಎಷ್ಟೇ ಇದ್ದರೂ ನಾವು ಗೆಳೆಯರಾಗಿದೇವೆ, ಎಂದೆಂದಿಗೂ ಅಗಲಲಾರದ ಗೆಳೆಯರಾಗಿದೇವೆ.

ವೈಸರಾಯ್ ಬಗ್ಗೆ ಇಂಥ ಅಭಿಪ್ರಾಯ ಇಟ್ಟುಕೊಂಡು ಆ ಸಂಭಾ ಷಣೆಯ ಪ್ರಭಾವ ಏನಾಯಿತೋ ನನ್ನಮೇಲೆ ಅದನ್ನು ಹೇಳಬೇಕಲ್ಲ ಎಂದು ನೋವಾಗುತ್ತಿದೆ. ನಮ್ಮ ಮಾತುಕತೆ ಭಿನ್ನತೆಯಲ್ಲಿ ಪರ್ಯವಸಾನ ವಾಯಿತು. ಅದು ಅನಿವಾರ್ಯವಾಗಿರಲಿಲ್ಲ. ನನ್ನ ಸೂಚನೆಯನ್ನು ಒಪ್ಪಿದ್ದರೆ ಭಾರತಕ್ಕೆ ಆಗುವುದಕ್ಕಿಂತ ಕಡಮೆ ಲಾಭ ಆಗುತ್ತಿರಲಿಲ್ಲ ಇಂಗ್ಲೆಂಡಿಗೆ.

ಒಬ್ಬ ಪ್ರತಿನಿಧಿಯಂತೆ, ಒಬ್ಬ ಗೆಳೆಯನಂತೆ ನಾನು ಸಿಮ್ಲಾಕ್ಕೆ ಹೋದೆ. ಗೆಳೆಯನಂತೆ ಬ್ರಿಟಿಷ್ ಸರಕಾರದ ಕೆಲವು ಕೃತಿಗಳ ಬಗ್ಗೆ ಸಂದೇಹವನ್ನು ತಿಳಿಸಿದೆ. ಅದನ್ನು ನಿವಾರಣೆ ಮಾಡಿಕೊಳ್ಳುವುದು ನನ್ನ ಮನೋಧರ್ಮವನ್ನು ನಿರ್ಧರಿಸಿಕೊಳ್ಳಲು ಅಗತ್ಯವಾಗಿತ್ತು. ಪ್ರತ್ಯಕ್ಷ ಕೃತಿಗಿಂತ ನನಗೆ ಇದೇ ಮುಖ್ಯ. ಕಾಂಗ್ರೆಸ್ಸಿಗೂ ರಾಜರಿಗೂ, ಮುಸ್ಲಿಂ ಲೀಗಿಗೂ ಏಕಾಭಿಪ್ರಾಯವಿಲ್ಲ, ಪರಿಶಿಷ್ಟ ವರ್ಗಗಳವರದೂ ಅಷ್ಟೆ. ಭಾರತದ ಸ್ವಾತಂತ್ರ್ಯದ ಹಕ್ಕಿಗೆ ಇದು ಆತಂಕ ಎಂಬುದು ಕಾಂಗ್ರೆಸ್ಸಿಗೂ ಅಪಮಾನಕರ, ಭಾರತದ ಜನತೆಗೂ ಅಪಮಾನಕರ. ಇವುಗಳ ಜೊತೆಗೆ ವರ್ಗಹಿತ ಅಥವಾ ಜಾತೀಯ ಹಿತಗಳ ಪ್ರತಿನಿಧಿಗಳು ಇವು ಮೂರೂ ಎಂದು ವೈಸರಾಯರಿಗೆ ನಾನು ಹೇಳಿದೆ. ಕಾಂಗ್ರೆಸ್ಸು ಯಾವ ಒಂದು ಪ್ರತಿನಿಧಿಯೂ ವರ್ಗದ ಅಲ್ಲ. ಇಡಿಯ ಭಾರತವನ್ನು ಪ್ರತಿನಿಧಿಸಲು ಯತ್ನಿಸುತ್ತಿರುವ ರಾಷ್ಟ್ರೀಯ ಸಂಸ್ಥೆ ಅದು. ಆದ್ದರಿಂದ ಅತ್ಯಂತ ವಿಶಾಲ ಮತದಾನದಲ್ಲಿ ಆರಿಸಿಬಂದ ರಾಷ್ಟ್ರೀಯ ಸಭೆಯ ತೀರ್ಪಿಗೆ ಸದಾ ಅದು ತಲೆ ಬಾಗುತ್ತದೆ. ಮುಸ್ಲಿಮರ ಪ್ರತ್ಯೇಕ ಹಕ್ಕುಗಳ ಬಗ್ಗೆ ಮುಸ್ಲಿಮರ ವಿಶೇಷ

ಮತದಾನದ ಫಲದಂತೆ ನಡೆಯಲು ಸಿದ್ಧವೆಂದೂ ಅದು ಘೋಷಿಸಿದೆ. ಆದ್ದರಿಂದ ಕಾಂಗ್ರೆಸ್ಸಿಗೆ ವಿರುದ್ಧವಾಗಿ ಮುಸ್ಲಿಮರಿಗೆ ಏನೋ ವಿಶೇಷ ರಕ್ಷಣೆ ಬೇಕು ಎಂಬ ಹಾಗೆ ಮಾತಾಡುವುದು ತಪ್ಪು. ಸಿಖ್ಖರ ಮಾತೂ ಇದೇ.

ತಮ್ಮ ಹಿತರಕ್ಷಣೆಗಾಗಿ ಬ್ರಿಟಿಷ್ ಸರಕಾರ ಸೃಷ್ಟಿಸಿದವರು ಇಂದಿನ ರಾಜ ಮಹಾರಾಜರು. ಬ್ರಿಟಿಷರು ಇವರೊಡನೆ ಮಾಡಿಕೊಂಡ ಪ್ರತ್ಯೇಕ ಒಪ್ಪಂದಗಳಿಗೆ ಬದ್ಧರಾಗಿರಬೇಕು ಎಂಬ ವಾದಕ್ಕೆ ಬದಲಾಗಿ ಬ್ರಿಟಿಷ್ ಸರಕಾರ ಅದನ್ನು ಕಡೆಗಣಿಸಬೇಕೆಂದು ಕಾಂಗ್ರೆಸ್ಸು ಕೇಳಿಯೆ ಇಲ್ಲವಲ್ಲ ಎಂದೆ. ಇಷ್ಟೇ. ಭಾರತದ ಪ್ರಗತಿಗೆ ಅಡ್ಡಿಯಾಗಿ ಅವರನ್ನೂ ಬಳಸಬಾರದು. ಕಾಂಗ್ರೆಸ್ಸನ್ನು ಅದರೊಡನೆ ಒಪ್ಪಂದ ಮಾಡಿಕೊಳ್ಳಿ ಎಂಬುದೂ ತಪ್ಪು. ಅವರಿಗೆ ಇಷ್ಟವಿದ್ದರೂ ಕಾಂಗ್ರೆಸ್ಸಿನೊಡನೆ ಒಪ್ಪಂದ ಮಾಡಿಕೊಳ್ಳಲು ಅವರು ಸ್ವತಂತ್ರರಲ್ಲ. ಇತರರ ಹಾಗೆ. ರಾಜರನ್ನು ರಕ್ಷಿಸುವ ಭಾರ ಬ್ರಿಟಿಷರಿಗೆ ಇದ್ದರೆ ಆ ಒಪ್ಪಂದಗಳಲ್ಲಿ ಜನರ ಹಕ್ಕುಗಳನ್ನು ರಕ್ಷಿಸುವ ಭಾರವೂ ರಾಜರ ತಲೆಯ ಮೇಲೆ ಇದೆ. ಆದರೆ ಜನಗಳ ಪರವಾಗಿ ಬ್ರಿಟಿಷರು ರಾಜರ ವ್ಯವಹಾರಗಳಲ್ಲಿ ನಡುವೆ ಕೈಹಾಕಿದುದು ಅತಿ ಅಪರೂಪ ಎಂದು ವಿಪುಲವಾಗಿ ಸಿದ್ಧವಾಗಿದೆ. ಆ ಒಪ್ಪಂದಗಳಲ್ಲಿ ತಿಳಿಸಿದಷ್ಟು ಅವರು ಜನತೆಯ ಹಕ್ಕುಗಳ ಬಗ್ಗೆ ಜಾಗರೂಕರಾಗಿದ್ದರೆ, ಜನರ ಸ್ಥಿತಿ ಇಂದಿನಷ್ಟು ಸಂಕಟಮಯವಾಗಿ ಇರುತ್ತಿರಲಿಲ್ಲ. ತಾವೇ ಮಾಡಿದ ಒಪ್ಪಂದಗಳಂತೆ ಸತ್ಯವಾಗಿ ನಡೆದಿದ್ದರೆ, ಭಾರತದ ಸಂಸ್ಥಾನಗಳ ಪ್ರಜೆ ಬ್ರಿಟಿಷ್ ಭಾರತದ ಪ್ರಜೆಗಿಂತ ಹೆಚ್ಚು ಪ್ರಗತಿಗೊಂಡಿರಬೇಕಾಗಿತ್ತು. ಈ ಕರ್ತವ್ಯ ಲೋಪದ ಉದಾಹರಣೆ ಕೆಲವನ್ನು ತಿಳಿಸಿದೆ.

ಈ ವಿವಾದದಲ್ಲಿ ಪರಿಶಿಷ್ಟ ವರ್ಗಗಳನ್ನು ತಂದು ತುರುಕಿದುದಂತೂ ಬ್ರಿಟಿಷ್ ಸರಕಾರದ ವಾದದ ಅಸತ್ಯವನ್ನು ಇಮ್ಮಡಿ ಮಾಡಿದೆ. ಕಾಂಗ್ರೆಸ್ಸಿನ ವಿಶೇಷ ಜವಾಬದಾರಿ ಇವರದು, ಬ್ರಿಟಿಷ್ ಸರಕಾರಕ್ಕಿಂತ ಲೆಕ್ಕವಿಲ್ಲದಷ್ಟು ಪಾಲು ಹೆಚ್ಚು ಸಮರ್ಥ ಕಾಂಗ್ರೆಸ್ಸು ಅವರ ಹಿತವನ್ನು ಕಾಯುವುದಿಲ್ಲ. ಇದು ಅವರಿಗೆ ಗೊತ್ತು. ಪರಿಶಿಷ್ಟ ವರ್ಗಗಳಲ್ಲಿ ಹಿಂದೂ ಜನರಲ್ಲಿ ಇರುವಷ್ಟು ಜಾತಿಗಳಿವೆ. ಯಾವ ಒಂದು ದಲಿತವರ್ಗದ ಸದಸ್ಯನೂ ಈ ಅಸಂಖ್ಯ ಜಾತಿಗಳನ್ನು ಸತ್ಯವಾಗಿ ಪ್ರತಿನಿಧಿಸಲಾರ, ಅಶಕ್ಯ.

ಬ್ರಿಟಿಷರ ವಾದಕ್ಕೆ ನಾನು ಮಾಡಿದ ಅರ್ಥದಲ್ಲಿ ಏನಾದರೂ ದೋಷ ಇದೆಯೇನೋ ನೋಡೋಣ ಎಂದು ವೈಸರಾಯರ ಭೇಟಿ ಮಾಡಿದೆ. ಎತ್ತಿ ಚರ್ಚಿಸಿದ ವಿಷಯಗಳ ಬಗ್ಗೆ ನನಗೆ ಸಮಾಧಾನ ಆಗಲಿಲ್ಲ. ವೈಸರಾಯರು ಚರ್ಚೆಗೇ ಇಳಿಯಲಿಲ್ಲ. ವಾದಿಸಲು ಅವರಿಗೆ ಇಷ್ಟ ಇಲ್ಲದಿದ್ದರೆ ನನ್ನ ಆಕ್ಷೇಪಣೆಯಿಲ್ಲ. ಇದು ವಾದದ ವಿಷಯವಲ್ಲ, ಉಚ್ಚ ಮಟ್ಟದ ನೀತಿಯ ಪ್ರಶ್ನೆ ಎಂಬ ಮಾತನ್ನು ಅವಲಂಬಿಸಲು ಅವರಿಗೆ ಅಧಿಕಾರವಿತ್ತು. ಬ್ರಿಟಿಷ್ ಅಧಿಕಾರಿಗಳಲ್ಲಿ ಸಲಿಗೆ ತೋರದ ಗಾಂಭೀರ್ಯ ಮುದ್ರೆ ಒಂದು ಇರುತ್ತದೆ. ಅವರನ್ನು ನೆರೆಹೊರೆಯಿಂದ ನಿಜಸಂಗತಿಗಳಿಂದ ದೂರಮಾಡಿ ಪ್ರತ್ಯೇಕ ಮಾಡುವುದೂ ಅದೇ. ಅತಿ ಸ್ಪಷ್ಟವಾಗಿ ಮನಬಿಚ್ಚಿ ಮಾತಾಡಲು ಅವರು ಬಯಸುವುದಿಲ್ಲ. ವಾದ ಬಿಕ್ಕಟ್ಟಾಯಿತೋ ಮರ್ಯಾದೆಯಾಗಿ ಚರ್ಚೆಯಿಂದ ವಿಮುಖರಾಗುತ್ತಾರೆ. ನಿಮಗೆ ಇಷ್ಟ ಬಂದಂತೆ ಅರ್ಥ ಮಾಡಿಕೊಳ್ಳಬಹುದು. ಅವರೇನೋ ಅಚಲ, ದೃಢ. ಬಹುಶಃ ಉಕ್ಕಿನ ಚೌಕಟ್ಟು ಎಂದರೆ ಇದೇ ಏನೋ. ನನಗಂತೂ ಬ್ರಿಟಿಷರ ಧೋರಣೆಯ ಆಕರ್ಷಣೆ ಎಳ್ಳಷ್ಟೂ ಇಲ್ಲ. ಗೆಳೆಯರು ಎಚ್ಚರಿಕೆ ಕೊಟ್ಟಿದ್ದರೂ ಈ ಅಸಂಪರ್ಕದ ಉಕ್ಕಿನ ಕೋಟೆಯನ್ನು ಭೇದಿಸಿ ಸತ್ಯವನ್ನು ನಿಜವಾಗಿ ಕಂಡೇನು ಎಂದು ಆಶಿಸಿದ್ದೆ. ಆದರೆ ಸಾಮ್ರಾಜ್ಯವಾದಿ ಬ್ರಿಟಿಷ ತನ್ನ ಪೀಠದಲ್ಲಿ ಭದ್ರವಾಗಿ ಕೂತಿದ್ದಾನೆ.

ಆದರೂ ನಾನು ಸೋಲನ್ನು ಒಪ್ಪಿಕೊಳ್ಳುವುದಿಲ್ಲ. ಬ್ರಿಟಿಷರು ಸತ್ಯವನ್ನು ಒಪ್ಪುವಂತೆ ಮಾಡಲು ನಾನು ಹೋಗಬೇಕು. ಭಾರತದ ಸ್ವಾತಂತ್ರ್ಯಕ್ಕೆ ಅಡ್ಡಿಯಾಗಿರುವುದು ಕಾಂಗ್ರೆಸ್ಸಿಗೆ ಅಥವಾ ಇನ್ನೊಂದು ಪಕ್ಷಕ್ಕೆ ಒಂದು ಒಪ್ಪಂದಕ್ಕೆ ಬರಲು ಆಗಿಲ್ಲ ಎಂಬುದಲ್ಲ; ಅದು ಸಾಧ್ಯವೇ ಇಲ್ಲ; ನ್ಯಾಯವೆಂದು ಕಾಣುವುದನ್ನು ಕೂಡ ಮಾಡಲು ಬ್ರಿಟಿಷರಿಗೆ ಇಷ್ಟವಿಲ್ಲವಿರುವುದೇ ಕಾರಣ.

ಭಾರತವನ್ನು ಸ್ವತಂತ್ರ ರಾಷ್ಟ್ರ ಎಂದು ಕಾಣಲು ಬ್ರಿಟಿಷರು ಒಪ್ಪದುದಕ್ಕೆ ಅವರು ಕೊಟ್ಟ ಕಾರಣಗಳ ವಾಸ್ತವತೆ ಒಂದೇ ಅಲ್ಲ. ನನ್ನ ಅನೇಕ ಯುದ್ಧ ನೀತಿಯ ನಿರ್ವಹಣದಲ್ಲಿ ನಡೆದ ಕೆಲವು ಅಕ್ರಮಗಳನ್ನು ವೈಸರಾಯರ ಗಮನಕ್ಕೆ ನಾನು ತಂದೆ. ಯುದ್ಧ ನಿಧಿಗೆ ಹಣ ಸಂಗ್ರಹಿಸು

ವುದರಲ್ಲಿ ಬಲಾತ್ಕಾರ ಇರಕೂಡದೆಂದು ಇಬ್ಬರೂ ಒಪ್ಪಿದೆವು. ಉಳಿದ ಕಷ್ಟ ಕಿರುಕುಳಗಳ ಮಾತನ್ನು ವಿಚಾರಿಸುವುದಾಗಿ ವೈಸರಾಯ್ ಮಾತು ಕೊಟ್ಟಿದ್ದಾರೆ. ತಪ್ಪು ತಿಳಿವಳಿಕೆಗೆ ಅವಕಾಶ ಕೊಡಬಾರದು, ಹೋರಾಡಲೇ ಬೇಕಾಗಿ ಬಂದರೆ ನಿರ್ದಿಷ್ಟ ಅಂಶಗಳ ಬಗ್ಗೆ ಕಹಿ ಇಲ್ಲದೆ ಹೋರಾಡಬೇಕು ಎಂದು ನನ್ನ ಉದ್ದೇಶ. ನಮ್ಮ ಹೋರಾಟದ ನ್ಯಾಯ-ನೀತಿಗಳೇ ಭಾರತಕ್ಕೆ ಉತ್ತಮ ಗೌರವ ದೊರಕಿಸಬೇಕು—ಬ್ರಿಟಿಷರಿಂದಲೇ ಅಲ್ಲ, ಜಗತ್ತಿನ ಎಲ್ಲ ರಾಷ್ಟ್ರಗಳಿಂದಲೂ ಎಂದು ಒಪ್ಪಿಕೊಳ್ಳುವಂತೆ ಒತ್ತಾಯ ಮಾಡಿ ಯಾವುದು ಎಂಬ ನಿರೀಕ್ಷೆಯಿಂದ ನಾನು ಹೋರಾಟ ಪ್ರಾರಂಭಿಸುತ್ತೇನೆ.

ಕಾಂಗ್ರೆಸ್ಸು ತನಗೆ ಅಧಿಕಾರ ಬೇಕು ಎಂದು ಹೊಡೆದಾಡುತ್ತಿದೆ ಎಂದಾರು. ಆದಕ್ಕಾಗಿಯೆ ನಾನು ವೈಸರಾಯರಿಗೆ ಹೇಳಿದೆ. ರಾಷ್ಟ್ರೀಯ ಹಿತ ಯಾವುದನ್ನು ತಳ್ಳಿಹಾಕಿ ಅಧಿಕಾರಕ್ಕೆ ಬರುವ ಅಪೇಕ್ಷೆ ಕಾಂಗ್ರೆಸ್ಸಿಗೆ ಇಲ್ಲ ಎಂದು ಸ್ಪಷ್ಟಾತಿಸ್ಪಷ್ಟವಾಗಿ ಅವರಿಗೆ ತಿಳಿಸಿದೆ. ಇಡೀ ರಾಷ್ಟ್ರಕ್ಕಲ್ಲದೆ ತನಗಾಗಿ ಅಧಿಕಾರ ಪ್ರತಿನಿಧಿಗಳನ್ನು ಕೋರುವುದಿಲ್ಲ ಕಾಂಗ್ರೆಸ್ಸು. ಆದ್ದರಿಂದ ಬೇರೆ ಬೇರೆ ಪಕ್ಷಗಳ ಮಂತ್ರಿಮಂಡಲವನ್ನು ಅವರು ರಚಿಸಿದರೆ ಕಾಂಗ್ರೆಸ್ ವಿರೋಧಿಸದು ಎಂದೆ. ಯುದ್ಧ ಪ್ರಯತ್ನಕ್ಕೆ ಮಾತ್ರ ಸರಕಾರ ಸಾಮ್ರಾಜ್ಯಷಾಹಿಯ ಉದ್ದೇಶಗಳ ಕೈಗೊಂಬೆ ಆಗಿರುವವರೆಗೆ ಕಾಂಗ್ರೆಸ್ಸು ವಿರೋಧ ಪಕ್ಷದಲ್ಲಿದ್ದೀತು. ತತ್‌ಕ್ಷಣಕ್ಕೆ ಸ್ವಾತಂತ್ರ್ಯದ ಪ್ರಶ್ನೆ ಇಲ್ಲ. ಸದ್ಯದ್ದು ಅಸ್ತಿತ್ವದ ಪ್ರಶ್ನೆ ಎಂದರೆ ಆತ್ಮ ಪ್ರಕಟನೆಯ ಹಕ್ಕು ಎಂದರೆ ವಾಕ್ ಸ್ವಾತಂತ್ರ್ಯದ ಹಕ್ಕು. ತನಗಾಗಿ ಮಾತ್ರವಲ್ಲ, ಎಲ್ಲರಿಗೂ ಇದು ಬೇಕು ಎಂದು ಕೋರುತ್ತಿದೆ ಕಾಂಗ್ರೆಸ್ಸು. ಅದಕ್ಕೆ ಒಂದೇ ಅವಕಾಶ— ಅಹಿಂಸೆಯ ಆಚರಣೆ. ಆ ನಿಯಮ ಒಂದಿದ್ದರೆ ಯಾರೇ ಏನೇ ತೊಡಕನ್ನು ಒಡ್ಡಲಿ, ಅದು ಉತ್ತರ ಕೊಡುತ್ತದೆ ಎಂದು ನನ್ನ ದೃಢ ವಿಶ್ವಾಸ.೩೩

## ೩೪. ವೈಯಕ್ತಿಕ ಸತ್ಯಾಗ್ರಹ ಯೋಜನೆ

[೧೩. ಅಕ್ಟೋಬರ್. ೧೯೪೦. ವರ್ಕಿಂಗ್ ಕಮಿಟಿ ವರ್ಧಾದಲ್ಲಿ ಸೇರಿತ್ತು. ಗಾಂಧೀಜೀ ತಮ್ಮ ಕಾರ್ಯಕ್ರಮದ ಯೋಜನೆಯನ್ನು ವಿಶದೀಕರಿಸಿದರು. ಎರಡು ದಿನಗಳ ತರುವಾಯ ಸೇವಾಗ್ರಾಮದಿಂದ ಒಂದು ಹೇಳಿಕೆ ಹೊರಡಿಸಿದರು :]

ವರ್ಕಿಂಗ್ ಕಮಿಟಿಯ ಸಂಗಡ ಮೂರು ದಿನ ಚರ್ಚೆ ಮಾಡಿದೇನೆ. ನನಗೆ ಕಂಡಮಟ್ಟಿಗೆ ಸವಿನಯ ಶಾಸನಭಂಗದ ಯೋಜನೆಯನ್ನು ವಿಶದೀಕರಿಸಿದೇನೆ. ಚಳುವಳಿಯ ಸಮಸ್ತ ಭಾರವೂ ನನ್ನೊಬ್ಬನ ಮೇಲೆಯೆ ಇದ್ದರೂ ವರ್ಕಿಂಗ್ ಕಮಿಟಿಯ ಸದಸ್ಯರೊಡನೆ ಸಮಾಲೋಚನೆ ಮಾಡದೆ ಮೊದಲ ಹೆಜ್ಜೆ ಇಡಲು ನನಗೆ ಇಷ್ಟವಿರಲಿಲ್ಲ. ಅಹಿಂಸಕ ಕ್ರಿಯೆಯಲ್ಲಿ ಸಂಗಾತಿಗಳ ಮನ ಒಪ್ಪಿಸಿ, ಮನ ಒಲಿಸಿ ಮುಂದೆ ಸಾಗಬೇಕು. ಶಿಸ್ತನ್ನು ಸಾಧಿಸಲು, ಸೂಚನೆಗಳಿಗೆ ವಿಧೇಯತೆ ಪಡೆಯಲು ಬೇರೆ ದಾರಿಯಿಲ್ಲ. ಸುಗಮವಾಗಿ ಇರಲಿಲ್ಲ ಈ ಕೆಲಸ ಎಂದು ಒಪ್ಪಿಕೊಳ್ಳಬೇಕು. ಸದಸ್ಯರಿಬ್ಬರು ಬಲವಾಗಿ ವಿರೋಧಿಸಿದರು. ಅವರಿಗೆ ಮನದಟ್ಟು ಮಾಡಿಕೊಡಲು ಬಹಳ ಪ್ರಯತ್ನಿಸಿದೆ. ಆದರೆ ವಿಫಲನಾದೆ ಎಂಬ ಅಂಜಿಕೆ ನನಗೆ. ಶಿಸ್ತಿಗಾಗಿ ಎಷ್ಟು ವಿಧೇಯರಾಗಿರಬೇಕೋ ಅಷ್ಟಂತೂ ಅವರು ಮಾಡಿಯೇ ಮಾಡುತ್ತಾರೆ. ಸವಿನಯ ಶಾಸನಭಂಗದ ಗುಣ ವಿಶೇಷ, ಅದಕ್ಕೆ ಹಾಕಿದ ನಿರ್ಬಂಧ—ಇವುಗಳ ಬಗ್ಗೆಯೇ ಮತ ಭೇದ ಇದ್ದದ್ದು.

ಚರ್ಚೆಯ ಈ ಅಂಶವನ್ನು ಏಕೆ ಹೇಳುತ್ತಿದೇನೆ ಎಂದರೆ, ಈ ಅಸಮ್ಮತಿ ತೋರಿದವರು ಯಾರ ಪರವಾಗಿ ಮಾತಾಡಿದರೋ ಅವರ ನಿರೀಕ್ಷೆಗೆ ಇದು ಕಡಮೆಯಾಗಬಹುದು. ಅವರಿಗೆ ಇಷ್ಟೇ ಹೇಳುತ್ತೇನೆ. ಸಹನೆಯಿಂದ ಕಾದು ನೋಡಿ. ಯಥಾಶಕ್ತಿ ಆಜ್ಞಾಪಾಲನೆ ಮಾಡಿ ಯೋಜನೆಯನ್ನು ಭಂಗಗೊಳಿಸಲು ಏನನ್ನೂ ಮಾಡಬೇಡಿ. ನಿಮ್ಮ ಬುದ್ಧಿ, ತರ್ಕ ಇದನ್ನು ವಿರೋಧಿಸಿದರೆ ಹೊರಗೆ ಹೋಗಿ ನಿಮ್ಮ ವಿಚಾರದಂತೆ ಜನರನ್ನು ಸಿದ್ಧಮಾಡಿ. ಆದರಿಂದ ಮೂಲೋದ್ದೇಶಕ್ಕೆ ಅನುಕೂಲವಾದೀತು. ಸರಳ, ಧೀರ, ಉತ್ಸಾಹವರ್ಧಕ ದಾರಿ ಅದು. ಆಗ ಬೇರೆ

ಬೇರೆ ಮಾರ್ಗಗಳ ಬೆಲೆಯನ್ನು ಕಟ್ಟಲು ಜನರು ಕಲಿತಾರು. ಕಾಂಗ್ರೆಸ್ ವೇದಿಕೆಯಿಂದಲೇ ಅಧಿಕೃತ ಕಾರ್ಯಕ್ರಮಕ್ಕೆ ವಿರುದ್ಧವಾಗಿ ಪ್ರಚಾರ ಮಾಡಿ ಗೊಂದಲ ಹುಟ್ಟಿಸೀರಿ. ಅದೂ ಇಡೀ ಸಂಸ್ಥೆ ಒಂದು ಸೇನೆ ಯಂತೆ ಆಗಿರುವಾಗ, ಸವಿನಯ ಶಾಸನಭಂಗವನ್ನು ಒಬ್ಬರು ಮಾಡಿದರೂ ಅಷ್ಟೇ, ಅನೇಕರು ಮಾಡಿದರೂ ಅಷ್ಟೇ. ಉಳಿದವರು ಅವರಿಗೆ ಹೇಳಿದ ರೀತಿಯಲ್ಲಿ ನೆರವಾದರಾಯಿತು.

ಯೋಜನೆ ಇಷ್ಟೇ. ವಿನೋಬಾ ಭಾವೆ ಪ್ರತ್ಯಕ್ಷ ಕಾರ್ಯಕ್ರಮವನ್ನು ಪ್ರಾರಂಭಿಸುತ್ತಾನೆ. ಸದ್ಯಕ್ಕೆ ಅವನೊಬ್ಬನೇ. ಇದು ವೈಯಕ್ತಿಕ ಸತ್ಯಾಗ್ರಹ, ಅವನೊಬ್ಬನೇ ಮಾಡಬೇಕಾದ್ದು, ಆದ್ದರಿಂದ ಪ್ರತ್ಯಕ್ಷ ಪರೋಕ್ಷ ಯಾವ ರೀತಿಯಲ್ಲೂ ಇತರರಿಗೆ ಸಂಬಂಧವಿಲ್ಲದಂತೆ ನಡೆಸು ತ್ತಾನೆ. ಆದರೆ ಇದು ವಾಕ್ ಸ್ವಾತಂತ್ರ್ಯದ ವಿಷಯವಾದ್ದರಿಂದ ಅಷ್ಟು ಮಟ್ಟಿಗೆ ಸಾರ್ವಜನಿಕರನ್ನೂ ಆಹ್ವಾನಿಸುತ್ತಾರೆ. ಅವರಿಗೆ ಇಷ್ಟವಿದ್ದರೆ ಅವನ ಮಾತನ್ನು ಕೇಳಬಹುದು. ಇಲ್ಲದಿದ್ದರೆ ಬಿಡಬಹುದು.

ಆದರೆ ಸರಕಾರ ಏನು ಮಾಡಬೇಕೆಂದಿದೆಯೋ ಅದನ್ನು ಹೆಚ್ಚಾಗಿ ಅವಲಂಬಿಸಿದೆ ಇದು. ವ್ಯಕ್ತಿಗಳಿಗೆ ಮಾತ್ರ, ತತ್ಕಾಲಕ್ಕೆ ಒಬ್ಬನಿಗೇ, ಸತ್ಯಾಗ್ರಹವನ್ನು ನಿರ್ಬಂಧಗೊಳಿಸುವ ಪ್ರಯತ್ನ ಎಷ್ಟೇ ಮಾಡಿದರೂ, ಅವನ ಭಾಷಣ ಕೇಳುವುದನ್ನು ಅವನು ಬರೆದುದನ್ನು ಓದುವುದನ್ನು ಅಪರಾಧ ಎಂದು ಸಾರಿ ಸರಕಾರ ಈಗಲೇ ಒಂದು ಬಿಕ್ಕಟ್ಟನ್ನು ತಂದಿಡ ಬಹುದು. ಆದರೆ ಯಾವ ತೊಂದರೆಯನ್ನೂ ತಂದಿಟ್ಟುಕೊಳ್ಳುವ ಇಷ್ಟ ಇಲ್ಲ ಅವರಿಗೆ, ಏನೇ ತೊಂದರೆಬಂದರೂ ಎದುರಿಸುವ ಸನ್ನಾಹ—ಸಿದ್ಧತೆ ಇದ್ದರೂ ಕೂಡ, ಎಂದು ನಾನು ನಂಬಿದೇನೆ.

ಅನಾವಶ್ಯಕ ಘರ್ಷಣೆ, ಆಪತ್ತುಗಳನ್ನು ತಪ್ಪಿಸಲು ವಿನೋಬಾ ಸಂಗಡ ಹಲವು ವಿಧಾನಗಳನ್ನೂ ಚರ್ಚಿಸಿದೇನೆ. ಮನುಷ್ಯ ಮಾತ್ರನಿಗೆ ಸಾಧ್ಯವಿದ್ದಷ್ಟು ಅಹಿಂಸಾತ್ಮಕವಾಗಿ ಮಾಡಬೇಕು ಪ್ರಕ್ರಿಯೆಯನ್ನು ಎಂಬುದು ಉದ್ದೇಶ. ಒಬ್ಬ ಮನುಷ್ಯ ಗುಟ್ಟಾಗಿಯೋ ರಟ್ಟಾಗಿಯೋ ಹಿಂಸೆ ಒಂದು ಮಿತಿ—ಮೇರೆಯನ್ನು ದಾಟ ಹೋಗಲಾರದು. ಆ ಪರಿಮಿತಿಯಲ್ಲಿ ಪರಿಣಾಮಕಾರಿ ಆದೀತು. ಒಬ್ಬ ಮನುಷ್ಯನ ಅಹಿಂಸಕ ಕ್ರಿಯೆಯನ್ನು

ಶ್ರದ್ಧಾಹೀನರು ಗೇಲಿ ಮಾಡಿಯಾರು, ತುಚ್ಛವಾಗಿ ಕಂಡಾರು. ಒಂದು ನಿರ್ದಿಷ್ಟ ಹಿಂಸಾಕೃತ್ಯಕ್ಕೆ ಇಷ್ಟುಫಲ ಎಂದು ಗಣಿತದ ಲೆಕ್ಕಮಾಡಿ ಹೇಳಿ ಬಿಡಬಹುದು. ಅಹಿಂಸಕ ಕೃತ್ಯ ಲೆಕ್ಕಕ್ಕೇ ಸಿಗದು, ಹಾಕಿದ ಲೆಕ್ಕಾಚಾರ ವನ್ನೆಲ್ಲ ಸುಳ್ಳುಮಾಡಿಟ್ಟದೆ. ಅಶುದ್ಧವಲ್ಲದ ಅಹಿಂಸೆಯ ಉದಾಹರಣೆ ಯನ್ನು ಎಷ್ಟರ ಮಟ್ಟಿಗೆ ಕೊಡಬಲ್ಲೆನೋ ನಾನು—ಕಾದು ನೋಡಬೇಕು.

ಈ ವಿನೋಬಾ ಯಾರು ? ನಾನು ಈ ಸತ್ಯಾಗ್ರಹಕ್ಕೆ ಅವನನ್ನೇ ಆರಿಸಿ ದುದುದೇಕೆ? ಬೇರೆ ಯಾರನ್ನೂ ಆರಿಸಲಿಲ್ಲವೇಕೆ? ನಾನು ಭಾರತಕ್ಕೆ ಮರಳಿದ ಮೇಲೆ ೧೯೧೬ರಲ್ಲಿ ಅವನು ಕಾಲೇಜ್ ಬಿಟ್ಟಿದ್ದನು. ಅವನು ಸಂಸ್ಕೃತ ಪಂಡಿತನು. ಪ್ರಾರಂಭದಿಂದಲೇ ಆಶ್ರಮಕ್ಕೆ ಸೇರಿಕೊಂಡಿದ್ದನು. ಆಶ್ರಮದ ಪ್ರಪ್ರಥಮ ಸದಸ್ಯರಲ್ಲಿ ಅವನೊಬ್ಬನು. ತನ್ನ ಸಂಸ್ಕೃತದ ಅಧ್ಯಯನವನ್ನು ಮುಂಬರಿಸಲಿಕ್ಕೆಂದು ಒಂದು ವರುಷ ರಜಾ ತೆಗೆದು ಕೊಂಡು ಹೊರಟನು. ಒಂದು ವರುಷದ ನಂತರ—ಒಂದು ವರುಷದ ಹಿಂದೆ ಆಶ್ರಮ ಬಿಟ್ಟುಹೋಗಿದ್ದ ಗಳಿಗೆಗೇ ಸರಿಯಾಗಿ—ಸದ್ದಿಲ್ಲದೆ ಆಶ್ರ ಮಕ್ಕೆ ಮರಳಿದನು. ಆ ದಿನ ಅವನು ಆಶ್ರಮಕ್ಕೆ ವಾಪಸು ಬರಬೇಕಾ ಗಿದ್ದಿತೆಂಬುದನ್ನು ನಾನು ಮರೆತೇಬಿಟ್ಟಿದ್ದೆ. ಅವನು ಆಶ್ರಮದ ಎಲ್ಲ ಬಗೆಯ ಸೇವಾವೃತ್ತಿಗಳಲ್ಲಿ – ಅಡಿಗೆ ಮಾಡುವುದರಿಂದ ಹಿಡಿದು ಕಕ್ಕಸು ಸ್ವಚ್ಛ ಮಾಡುವುದರವರೆಗೆ — ಭಾಗವಹಿಸಿದಾನೆ. ಅವನ ಸ್ಮರಣಶಕ್ತಿ ಆಶ್ಚರ್ಯಜನಕವಾದುದು. ಅವನು ಸ್ವಭಾವತಃ ಅಧ್ಯಯನಶೀಲನು. ತನ್ನ ಕಾಲದಲ್ಲಿ ಹೆಚ್ಚೆಚ್ಚು ಭಾಗವನ್ನು ನೂಲುವುದರಲ್ಲೇ ಕಳೆಯುತ್ತಾನೆ; ಅದರಲ್ಲಿ ಒಳ್ಳೆ ನಿಷ್ಣಾತನೂ ಆಗಿದಾನೆ. ಆ ವಿಷಯದಲ್ಲಿ ಅವನಿಗೆ ಸರಿಗಟ್ಟ ಬಲ್ಲವರು ಬಹಳ ಕಡಮೆ. ನೂಲುವುದನ್ನು ಇಡಿಯ ಕಾರ್ಯಕ್ರಮದ ಕೇಂದ್ರವಾಗಿ ಮಾಡಿಕೊಳ್ಳುವುದರಿಂದಲೇ ಗ್ರಾಮಗಳ ಬಡತನ ದೂರ ವಾಗುವುದೆಂದು ಅವನ ನಂಬಿಕೆ. ಸ್ವಭಾವತಃ ಶಿಕ್ಷಕನಾಗಿರುವುದರಿಂದ, ಕೈಕಸಬಿನ ಮೂಲಕ ಮೂಲ ಶಿಕ್ಷಣದ ಯೋಜನೆಯನ್ನು ವಿಕಾಸಗೊಳಿಸು ವುದರಲ್ಲಿ ಶ್ರೀಮತಿ ಆಶಾದೇವಿಯವರಿಗೆ ಬಹಳ ನೆರವು ನೀಡಿದಾನೆ. ಈ ವಿನೋಬಾ ನೂಲುವುದನ್ನೇ ಮೂಲ ಕೈಕಸಬಾಗಿ ಪರಿಗಣಿಸಿ ಒಂದು ಪುಸ್ತಕವನ್ನು ಬರೆದಿದಾನೆ. ಅದು ಪೂರ್ಣ ಮೌಲಿಕ ಗ್ರಂಥ. ನೂಲು

ವುದು ಮೂಲಶಿಕ್ಷಣದಲ್ಲಿ ಪರಿಪೂರ್ಣವಾಗಿ ಉಪಯೋಗಮಾಡಿಕೊಳ್ಳಲು ಬರುವಂಥ ಉತ್ತಮವಾದ ಕೈಕಸಬು ಎಂಬುದನ್ನು ಅವನು ಪರಿಹಾಸ್ಯ ಮಾಡುವವರಿಗೂ ಸಿದ್ಧಪಡಿಸಿ, ತೋರಿದ್ದಾನೆ; ತಕಲಿಯಿಂದ ನೂಲು ವುದರಲ್ಲಿ ಅವನು ಕ್ರಾಂತಿಯನ್ನೇ ಮಾಡಿದ್ದಾನೆ; ಅದರಲ್ಲಿ ಅಡಗಿರುವ ಸಮಸ್ತ ಶಕ್ತಿಯನ್ನು ಶೋಧಿಸಿಬಿಟ್ಟಿದ್ದಾನೆ. ಹಿಂದೂಸ್ಥಾನದಲ್ಲಿ ಕೈ ನೂಲಿಕೆಯಲ್ಲಿ ಇವನು ಸಾಧಿಸಿರುವಷ್ಟು ಪರಿಪೂರ್ಣತೆಯನ್ನು ಬೇರೆ ಯಾರೂ ಸಾಧಿಸಿಲ್ಲ.

ಅವನ ಹೃದಯದಲ್ಲಿ ಸ್ಪೃಶ್ಯಾಸ್ಪೃಶ್ಯತೆಯ ಗಂಧ ಸಹ ಇಲ್ಲ. ಸಾಂಪ್ರದಾಯಿಕ ಐಕ್ಯತೆಯಲ್ಲಿ ನನಗಿರುವಷ್ಟೇ ವಿಶ್ವಾಸ ಅವನಿಗೂ ಇದೆ. ಇಸ್ಲಾಂ ಧರ್ಮದ 'ಗುಣ ವೈಶಿಷ್ಟ್ಯ'ವನ್ನು ಅರಿತುಕೊಳ್ಳಲಿಕ್ಕಾಗಿ ಒಂದು ವರುಷ ಕಾಲ 'ಕೊರಾನ್ ಶರೀಫ'ನ್ನು ಅರಬ್ಬೀ ಮೂಲದಲ್ಲಿಯೇ ಅಭ್ಯಾಸ ಮಾಡಿದ್ದಾನೆ. ಅದರ ಸಲುವಾಗಿಯೇ ಅರಬ್ಬೀ ಭಾಷೆಯನ್ನು ಕಲಿತನು. ತನ್ನ ನೆರೆಯ ಮುಸಲ್ಮಾನ ಸೋದರರೊಡನೆ ಸಜೀವ ಸಂಪರ್ಕ ಬೆಳೆಸಿ ಕೊಳ್ಳಲು ಅದು ಆವಶ್ಯಕವೆಂದು ಅವನಿಗೆ ಅನಿಸಿತು.

ಅವನ ಬಳಿ ಶಿಷ್ಯರ, ಕಾರ್ಯಕರ್ತರ ಒಂದು ತಂಡವೇ ಇದೆ. ಅವನು ಸಂಜ್ಞೆಮಾಡಿದರೆ ಸಾಕು, ಯಾವ ರೀತಿಯ ಬಲಿದಾನ ಮಾಡುವುದಕ್ಕೂ ತಯಾರಾಗಿರುವಂಥವರ ತಂಡ ಅದು! ಒಬ್ಬ ಯುವಕ ಕುಷ್ಠರೋಗಿಗಳ ಸೇವೆಗಾಗಿಯೇ ತನ್ನ ಜೀವನವನ್ನು ಸಮರ್ಪಣೆ ಮಾಡಿದ್ದಾನೆ. ಆತನನ್ನು ಆ ಕಾರ್ಯಕ್ಕೆ ತಯಾರು ಮಾಡಿದ ಕೀರ್ತಿ ಶ್ರೀ ವಿನೋಬಾ ಅವನಿಗೇ ಸಲ್ಲ ತಕ್ಕದು. ಔಷಧಿಗಳ ಜ್ಞಾನ ಸ್ವಲ್ಪವೂ ಇರದಿದ್ದರೂ, ತನ್ನ ಕಾರ್ಯದಲ್ಲಿ ಅಚಲ ಶ್ರದ್ಧೆ ಇರುವುದರಿಂದ ಆತ ಕುಷ್ಠರೋಗದ ಚಿಕಿತ್ಸೆಯನ್ನು ಸಂಪೂರ್ಣವಾಗಿ ತಿಳಿದುಕೊಂಡಿದ್ದಾನೆ. ಅವನು ಸೇವೆಗಾಗಿ ಅನೇಕ ಚಿಕಿತ್ಸಾ ಲಯಗಳನ್ನು ತೆರೆದಿದ್ದಾನೆ. ಆತನ ಪರಿಶ್ರಮದಿಂದ ನೂರಾರು ಮಂದಿ ಕುಷ್ಠರೋಗಿಗಳು ಗುಣ ಹೊಂದಿದ್ದಾರೆ. ಈಚೆಗೆ ಕುಷ್ಠರೋಗಿಗಳ ಚಿಕಿತ್ಸೆಯ ವಿಷಯದಲ್ಲಿ ಮರಾಠಿಯಲ್ಲಿ ಒಂದು ಪುಸ್ತಕವನ್ನು ಬರೆದಿದ್ದಾನೆ.

ವಿನೋಬಾ ಅನೇಕ ವರುಷಗಳ ಕಾಲ ಮಹಿಳಾಶ್ರಮದ ಸಂಚಾಲಕ ನಾಗಿಯೂ ಇದ್ದನು. ದರಿದ್ರನಾರಾಯಣನ ಸೇವೆಯ ಮೇಲಿನ ಪ್ರೇಮ

ಅವನನ್ನು ವರ್ಧಾ ಸಮೀಪದಲ್ಲಿರುವ ಹಳ್ಳಿಯೊಂದಕ್ಕೆ ಒಯ್ದಿತು. ಈಗ ವರ್ಧಾಕ್ಕೆ ಐದು ಮೈಲಿ ದೂರವಲ್ಲಿರುವ ಪವನಾರ್ ಎಂಬ ಗ್ರಾಮಕ್ಕೆ ಹೋಗಿ ನೆಲೆಸಿದಾನೆ. ಅಲ್ಲಿ ತಾನು ತಯಾರಿಸಿರುವ ಶಿಷ್ಯರ ಮೂಲಕ ಗ್ರಾಮಸ್ಥರೊಡನೆ ಸಂಪರ್ಕ ಸ್ಥಾಪಿಸಿಕೊಂಡಿದಾನೆ. ಹಿಂದೂ ಸ್ಥಾನಕ್ಕೆ ರಾಜಕೀಯ ಸ್ವಾತಂತ್ರ್ಯ ಆವಶ್ಯಕ ಎಂಬುದನ್ನು ಅವನು ಒಪ್ಪುತ್ತಾನೆ. ಅವನು ಪಕ್ಷಪಾತರಹಿತನಾದ ಇತಿಹಾಸದ ವಿದ್ವಾಂಸನು. ರಚನಾತ್ಮಕ ಕಾರ್ಯಕ್ರಮದ ಹೊರತು ಗ್ರಾಮಸ್ಥರಿಗೆ ನಿಜವಾದ ಸ್ವಾತಂತ್ರ್ಯ ದೊರೆಯುವುದಿಲ್ಲವೆಂಬುದೂ, ರಚನಾತ್ಮಕ ಕಾರ್ಯಕ್ರಮದ ಕೇಂದ್ರ ಖಾದಿಯೇ ಎಂಬುದೂ ಅವನ ನಿಶ್ಚಿತ ಅಭಿಪ್ರಾಯ. ಚರಖಾ ಅಹಿಂಸೆಯ ಬಹಳ ಉಪಯುಕ್ತವಾದ ಬಾಹ್ಯಚಿಹ್ನೆ ಎಂಬುದು ಅವನ ವಿಶ್ವಾಸ. ಚರಖಾ ಅವನ ಜೀವನದ ಅಂಗವೇ ಆಗಿಬಿಟ್ಟಿದೆ. ಅವನು ಹಿಂದಿನ ಸತ್ಯಾಗ್ರಹ ಸಮರಗಳಲ್ಲಿ ಸಕ್ರಿಯ ಪಾತ್ರ ವಹಿಸಿದ್ದನು. ಅವನು ರಾಜನೀತಿಯ ವೇದಿಕೆಯಲ್ಲಿ ಎಲ್ಲರ ಮುಂದೆ ಬಂದವನಲ್ಲ. ಮೊದಲೇ ರಾಜನೈತಿಕ ಭಾಷಣಗಳ ಅಖಂಡ ಪ್ರವಾಹ ಸಾಗಿರುವಲ್ಲಿ ಹೋಗಿ ಇನ್ನೂ ಅಷ್ಟು ಭಾಷಣ ಬಿಗಿದು ಬರುವುದರಿಂದ ಶಾಂತಿಭಂಗದ ಪ್ರಯೋಗ ಹೆಚ್ಚು ಪ್ರಭಾವಶಾಲಿಯಾಗುವುದೆಂಬುದು ಇತರ ಹಲವು ಸಂಗಾತಿಗಳ ಹಾಗೆ ಇವನ ವಿಶ್ವಾಸವೂ ಆಗಿದೆ. ಚರಖಾದಲ್ಲಿ ಹಾರ್ದಿಕ ಶ್ರದ್ಧೆ ಇಟ್ಟಿಲ್ಲದೆ, ರಚನಾತ್ಮಕ ಕಾರ್ಯದಲ್ಲಿ ಸಕ್ರಿಯ ಪಾತ್ರ ವಹಿಸದೆ, ಅಹಿಂಸಕ ಪ್ರತೀಕಾರ ಸಾಧ್ಯವಿಲ್ಲವೆಂಬುದು ಅವನ ಸಂಪೂರ್ಣ ವಿಶ್ವಾಸ.

ನನ್ನ ಆಯ್ಕೆಯನ್ನು ಸಮರ್ಥಿಸಲು ಸುದೀರ್ಘವಾಗಿ ವಿನೋಬಾ ಭಾವೆಯ ಪರಿಚಯ ಮಾಡಿಕೊಡಬೇಕಾಯಿತು. ಬಹುಶಃ ಇದೇ ಕಟ್ಟಕಡೆಯದಾಗಬಹುದು ನಾನು ನಡೆಸುವ ಸವಿನಯ ಶಾಸನಭಂಗ. ಆದ್ದರಿಂದ ಅದಷ್ಟು ನಿರ್ದೋಷವಾಗಿರಬೇಕು ಇದು ಎಂದು ನಾನು ಬಯಸುವುದು ಸಹಜ. ತನ್ನ ಅಸ್ತಿತ್ವಕ್ಕೆ ಧಕ್ಕೆ ಬಾರದಿದ್ದರೆ ಸರಕಾರಕ್ಕೆ ಯಾವ ಬಗೆಯ ಬಿಕ್ಕಟ್ಟನ್ನೂ ಉಂಟುಮಾಡದಂತೆ ನಡೆಯುತ್ತೇವೆ ಎಂದಿದೆ ಕಾಂಗ್ರೆಸ್ಸು. ಆ ಕಾರಣಕ್ಕಾಗಿಯೂ ಅತ್ಯುತ್ತಮವಾದುದನ್ನೇ, ಎಷ್ಟಾದರೂ ಆಗಲಿ, ನೀಡಲು ನಾನು ಯತ್ನಿಸಬೇಕಾಯಿತು.

ಆದರೆ ವಿನೋಬಾ, ನಾನೂ, ಸೋಲಲೇಬೇಕು, ಇಡಿಯ ರಾಷ್ಟ್ರ ಹಾಗಿರಲಿ, ಕಾಂಗ್ರೆಸ್ಸನ್ನಾದರೂ ಪ್ರತಿ ನಿಧಿಸದಿದ್ದರೆ. ಅವರು ನಮಗೆ ನಿರಂತರ ಸಹಕಾರ ಕೊಡದಿದ್ದರೆ ಯಾರನ್ನೂ ಪ್ರತಿನಿಧಿಸುವಂತಿಲ್ಲ ನಾವು. ರಚನಾತ್ಮಕ ಕಾರ್ಯದ ನಿರ್ವಹಣವೇ ಆ ಸಹಕಾರ. ಬೇಕಾದ್ದು ಬರೀ ಬಾಯಿ ಮಾತಿನ ಸಹಕಾರವಲ್ಲ. ಕೆಲಸದಲ್ಲಿ ಬೇಕು ಸಹಕಾರ. ನೂಲುವುದರಲ್ಲಿ ಅತ್ಯತಿಶಯ ಪ್ರಗತಿ, ಅಸ್ಪೃಶ್ಯತೆಯ ಸಂಪೂರ್ಣ ನಿರ್ಮೂಲನ, ಭಿನ್ನ ಮತ ಪಂಥಗಳಲ್ಲಿ ಸ್ನೇಹವರ್ಧನ, ಜೀವನದ ಪ್ರತಿ ಕ್ಷೇತ್ರದಲ್ಲೂ ನ್ಯಾಯ ಪ್ರತಿಷ್ಠೆ—ಇವೇ ಆ ಸಹಕಾರದ ಲಕ್ಷಣ. ಮೂಲಭೂತ ನ್ಯಾಯ ಸಮತೆ ಗಳು ವ್ಯಾಪಿಸದಿದ್ದರೆ ಸಮಾಜದಲ್ಲಿ ಖಂಡಿತವಾಗಿಯೂ ಅಹಿಂಸಕ ವಾತಾ ವರಣ ಇಲ್ಲ ಎನ್ನಬೇಕು. ಎಲ್ಲಕ್ಕಿಂತ ಮುಖ್ಯವಾಗಿ, ನಾನು ಸಮ್ಮತಿಸದ ಯಾವ ಸವಿನಯ ಶಾಸನಭಂಗವೂ ಇರಬಾರದು. ಪ್ರತಿಯೊಬ್ಬ ಕಾಂಗ್ರೆಸ್ಸಿಗನಿಗೂ ಇದು ಅಪರಿಹಾರ್ಯ ವಿಧಿ. ಇದನ್ನೂ ಕಡೆಗಣಿಸಿದರೆ ಸಹಕಾರ ಇಲ್ಲ. ಆಗ ವಿನೋಬಾನ, ನನ್ನ, ಪ್ರತಿನಿಧಿಕ ಸ್ವರೂಪವನ್ನೆ ಪ್ರಶ್ನಿಸಬಹುದು. ಮನಃಪೂರ್ಣವಾದ ಸಹಕಾರ ದೊರೆತರೆ ವಾಕ್ಸ್ವಾತಂತ್ರ್ಯದ ಅಂಶವೊಂದೇ ಅಲ್ಲ ನಮ್ಮ ಪರವಾಗಿ ತೀರ್ಮಾನವಾಗುವುದು, ಸ್ವಾತಂತ್ರ್ಯದ ಹತ್ತಿರಕ್ಕೇ ಹೋಗುತ್ತೇವೆ—ಭರವಸೆಯಿಂದ ಹೇಳಬಲ್ಲೆ. ನನ್ನ ಮಾತನ್ನು ನಂಬುವವರು ನಂಬಿ. ಅವರಿಗೆ ಏನೂ ನಷ್ಟವಿಲ್ಲ. ಸತ್ಯ—ಅಹಿಂಸೆಗಳ ಮೂಲಕ ಸ್ವಾತಂತ್ರ್ಯ ಚಳುವಳಿಗೆ ದೊಡ್ಡದಾಗಿ ಕಾಣಿಕೆ ನೀಡಿದೇವೆ ತಾವು ಎಂದು ಅವರಿಗೇ ತಿಳಿಯುತ್ತದೆ.

ವಿಷಯುವನ್ನು ಮತ್ತೆ ಹೇಳುತ್ತೇನೆ. ಮೇಲೆ ನೋಡಲು ತುಂಬಾ ಚಿಕ್ಕದು ಯುದ್ಧ ವಿರೋಧ ಪ್ರಚಾರ, ಈಗಿನ ಯುದ್ಧದಲ್ಲಿ ನಮ್ಮ ಪಾಲು. ಉಭಯ ಪಕ್ಷಗಳವರಿಗೂ ಇವೆರಡೂ ಅಂತಃಸಾಕ್ಷಿಯ ಮಾತು. ಎರಡೂ ವಾಸ್ತವವಾದ ಹಕ್ಕುಗಳೇ. ಅದನ್ನು ನಡಸಿದರೆ ಬ್ರಿಟಿಷರಿಗೇನೂ ಬಾಧಕ ವಿಲ್ಲ. ಎಲ್ಲ ವಿಧದಲ್ಲೂ ಭಾರತ ಸ್ವತಂತ್ರ ದೇಶವೇ ಎಂದು ಅವರು ಮಾಡುತ್ತಿರುವ ನಾಟಕ ನಿಜವಾದರೆ ಕಾನೂನಿನ ಪ್ರಕಾರ ಇರುವಂತೆಯೆ ನಿಜವಾಗಿಯೂ ಭಾರತ ಆಶ್ರಿತ ರಾಜ್ಯ ಆಗಿದ್ದರೆ ಭಾರತದಿಂದ ಬ್ರಿಟಿಷರಿಗೆ ದೊರೆತದ್ದು ಯಾವುದೂ ಸ್ವಯಂಪ್ರೇರಣೆಯದಲ್ಲ, ಬಲಾತ್ಕಾರದ್ದು

ಎನ್ನಬೇಕು. ಎಷ್ಟೇ ಭಾರಿ ಪ್ರಮಾಣದ್ದಾದರೂ ಬಲಾತ್ಕಾರದ ತೆರಿಗೆಯಿಂದ ಇಂಥ ಸಾವು ಬದುಕಿನ ಯುದ್ಧವನ್ನು ಗೆಲ್ಲಲಾದೀತೆ? ನಿಜವಾಗಿಯೂ ಸ್ವತಂತ್ರವೆಂದು ಭಾವಿಸಿದ ಭಾರತದ ನೈತಿಕ ಬೆಂಬಲವಿದ್ದರೆ ಗೆಲ್ಲಬಹುದು. ಅಹಿಂಸಕ ಕಾಂಗ್ರೆಸ್ಸು ಬ್ರಿಟನ್ನಿಗೆ ಅಮಂಗಳವನ್ನು ಕೋರಲಾರದು. ಶಸ್ತ್ರಗಳ ಮೂಲಕ ನೆರವನ್ನೂ ನೀಡಲಾರದು. ಏಕೆಂದರೆ, ತನ್ನ ಸ್ವಾತಂತ್ರ್ಯವನ್ನೇ ಶಸ್ತ್ರಗಳ ಮೂಲಕ ಸಾಧಿಸುತ್ತಿಲ್ಲ. ಶುದ್ಧ ಅಹಿಂಸೆಯ ಮೂಲಕ ಆಗಬಹುದಾದ ಪರಿಣಾಮಕ್ಕೆ ಅಂಜಿಯೋ ಬೇರೆ ಕಾರಣಗಳಿಗಾಗಿಯೋ ಈ ವಿಷ ಮುಹೂರ್ತದಲ್ಲಿ ಅಹಿಂಸಕ ಮಾರ್ಗದಿಂದ ಅಹಿಂಸೆಯ ಪ್ರಚಾರಮಾಡದೆ ಆತ್ಮದಮನ ಮಾಡಿಕೊಂಡರೆ ಕಾಂಗ್ರೆಸ್ಸು ಅಳಿದು ಹೋಗುತ್ತದೆ. ಹೀಗೆ ಆಳವಾಗಿ ಮಥಿಸಿ ನೋಡಿದರೆ ನಮಗೆ ಇದು ಅಳಿವು–ಉಳಿವುಗಳ ವಿಷಯ. ಆ ಅಧಿಕಾರವನ್ನು ಎತ್ತಿ ಹಿಡಿದರೆ ನಮಗೆ ಕಲ್ಯಾಣ. ಇಲ್ಲದಿದ್ದರೆ ಸರ್ವ ನಾಶ. ಆಮೇಲೆ ಅಹಿಂಸೆಯ ಮೂಲಕ ಸ್ವರಾಜ್ಯವನ್ನು ಗಳಿಸಲಾರೆವು.

ಭಾರತಕ್ಕೆ ಏಕ ವಾಕ್ಯತೆಯಿಲ್ಲ, ಬಲ್ಲೆ. ಭಾರತದ ಒಂದು ಭಾಗ ರಣ ಕುತೂಹಲದ್ದು. ಬ್ರಿಟಿಷರಿಗೆ ಸಹಾಯಮಾಡಿ ಯುದ್ಧ ವಿದ್ಯೆಯನ್ನು ಕಲಿಯಬೇಕೆನ್ನುತ್ತದೆ ಅದು. ಆದ್ದರಿಂದ ಮದ್ದುಗುಂಡಿನ ಕಾರ್ಖಾನೆಗಳನ್ನು ಕೋಠಿಗಳನ್ನು ಮುತ್ತಿ ಜನರು ತಮ್ಮ ಮನಸ್ಸಿಗೆ ಬಂದದ್ದನ್ನು ಮಾಡದಂತೆ ತಡೆಯಲು ಕಾಂಗ್ರೆಸ್ಸಿಗೆ ಇಷ್ಟವಿಲ್ಲ. ಅಹಿಂಸೆಯಿಂದ ಸ್ವರಾಜ್ಯ ಗಳಿಸಬೇಕೋ, ಹಾಗಾದರೆ ಯುದ್ಧ ಕಾರ್ಯದಲ್ಲಿ ಬ್ರಿಟನ್ನಿಗೆ ಸೈನಿಕ ಸಹಕಾರ ನೀಡಬೇಡಿ ಎಂದು ಭಾರತದ ಜನತೆಗೆ ಹೇಳಬಯಸುತ್ತೇನೆ.

ಯುದ್ಧದಲ್ಲಿ ಪಾಲುಗೊಳ್ಳಬೇಡಿ ಎಂದು ಪ್ರಚಾರಮಾಡುವ ನಮ್ಮ ಅಧಿಕಾರವನ್ನು ನಿರಾಕರಿಸಿದಾರೆ. ಈ ನಿರಾಕರಣೆಯ ವಿರುದ್ಧ ನಾವು ಹೋರಾಡಬೇಕು. ಆದ್ದರಿಂದ ಈ ಉದ್ದೇಶಕ್ಕಾಗಿ ನಾನು ಆರಿಸಿದವರು ಮಾತ್ರವೇ ಆ ಅಧಿಕಾರವನ್ನು ನಡಸಿಯಾರು. ಉಳಿದ ಕಾಂಗ್ರೆಸ್ ಕಾರ್ಯಕ್ರಮಗಳೆಲ್ಲ ಸರಕಾರ ಅಡ್ಡಿ ಮಾಡದಿದ್ದರೆ ಎಂದಿನಂತೆ ನಡೆದಾವು.

ಗುಣಕ್ಕೆ ಇಷ್ಟು ಮಹತ್ವ ಕೊಡುತ್ತೀರಲ್ಲ, ನೀವೇ ಏಕೆ ಸತ್ಯಾಗ್ರಹ ಮಾಡಬಾರದು ಎಂದು ಕೇಳುತ್ತಾರೆ. ಆಗಲೇ ಹೇಳಿದೇನೆ. ಹಿಂದಿನ ಹಾಗಲ್ಲ, ಈ ಸಲ ನಾನು ಹಾಗೆ ಮಾಡಬಯಸುವುದಿಲ್ಲ. ಏಕೆಂದರೆ, ಅವರಿಂದ ಸರಕಾರಕ್ಕೆ ಆಗುವ ಕಕ್ಕಾಬಿಕ್ಕಿ, ಕಾಂಗ್ರೆಸ್ಸು ಏನೇ ಮಾಡಲಿ ಅದಕ್ಕಿಂತ ಬಹಳ ಹೆಚ್ಚು. ಅಲ್ಲದೆ ಏನು ಪ್ರಸಂಗ ಬರುತ್ತದೆಯೋ, ಅದನ್ನು ಎದುರಿಸಲು ನಾನು ಹೊರಗೇ ಇರಬಯಸುತ್ತೇನೆ. ನಾನು ಕಾರಾಗೃಹಕ್ಕೆ ಹೋದೆನೆಂದರೆ ಕಾಂಗ್ರೆಸಿಗರಿಗೆಲ್ಲ ನನ್ನನ್ನು ಹಿಂಬಾಲಿಸಲು ಔತಣ ಕೊಟ್ಟಂತೆ ಆಗಬಹುದು. ನನ್ನ ಮಾತು ಬೇರೆ, ಕೃತಿ ಬೇರೆ ಎಂದು ಸುಲಭವಾಗಿ ಅವರು ತಿಳಿಯಬಾರದು. ಕಡೆಯದಾಗಿ, ಯಾವುದು ಹೇಗೆ ರೂಪುಗೊಳ್ಳುತ್ತದೆಯೋ ನಾನರಿಯೆ. ಮುಂದಿನ ಹೆಜ್ಜೆ ಏನೋ ನನಗೇ ತಿಳಿಯದು. ಸರಕಾರದ ಯೋಚನೆ ಏನಿದೆಯೋ ನನಗೆ ಗೊತ್ತಿಲ್ಲ. ನಾನು ಶ್ರದ್ಧಾವಂತ. ನನ್ನ ಆಲಂಬನ ಒಂದೇ ಒಂದು, ದೇವರು. ನನಗೆ ಒಂದು ಹೆಜ್ಜೆ ಸಾಕು. ಸಮಯ ಬಂದಾಗ ಮುಂದಿನ ಹೆಜ್ಜೆಯನ್ನು ಅವನೇ ಸ್ಪಷ್ಟವಾಗಿ ತೋರಿಸುತ್ತಾನೆ. ಭಾರತ ಬ್ರಿಟನ್ನುಗಳ ನಡುವೆ ಮಾತ್ರವೇ ಅಲ್ಲ, ಇವತ್ತು ಭೂಮಿಯ ಮೇಲೆ ಯುದ್ಧ ಮಾಡುತ್ತಿರುವ ರಾಷ್ಟ್ರಗಳ ನಡುವೆಯೂ ಶಾಂತಿ ಸ್ಥಾಪನೆಯ ನಿಮಿತ್ತ ನಾನು ಆಗಲಿಕ್ಕಿಲ್ಲವೆಂದು ಯಾರು ಬಲ್ಲರು? ನನ್ನ ಶ್ರದ್ಧೆ ಬರೀ ಸೋಗು ಅಲ್ಲ. ನಾನು ಈ ಪಂಕ್ತಿಗಳನ್ನು ಬರೆಯುತ್ತಿದೇನೆ ಎಂಬ ಸಂಗತಿಗಿಂತಲೂ ವಾಸ್ತವ ಸತ್ಯ ಎಂಬ ನಂಬಿಕೆ ಇರುವವರು ನನ್ನ ಈ ಕಟ್ಟಕಡೆಯ ಬಯಕೆಯನ್ನು ಜಂಬ ಎನ್ನಲಾರರು. [೩೪]

## ೩೫. ಹೇಳಿಕೆ (೨೪—೧೦—೧೯೪೦)

[ ೧೯೪೦, ಅಕ್ಟೋಬರ್ ೧೭. ವರ್ಧಾದ ಬಳಿ ಪೌನಾರ್ ಗ್ರಾಮದಲ್ಲಿ ಯುದ್ಧ-ವಿರೋಧಿ ಭಾಷಣವೊಂದನ್ನು ಮಾಡಿ ವಿನೋಬಾ ವೈಯುಕ್ತಿಕ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಹಳ್ಳಿಯಿಂದ ಹಳ್ಳಿಗೆ ಪಾದಯಾತ್ರೆ ಮಾಡಿ ಮುಂದೆ ಮೂರು ದಿನ ಭಾಷಣ ಮಾಡಿದರು. ಅಕ್ಟೋಬರ್ ೨೧ ರಂದು ಅವರನ್ನು ಹಿಡಿದು ಕಾರಾಗೃಹ ವಾಸದ ಶಿಕ್ಷೆ ವಿಧಿಸಿದರು.

ವಿನೋಬಾ ಭಾಷಣಗಳನ್ನಾಗಲಿ ಯಾತ್ರೆಯ ವಿವರಗಳನ್ನಾಗಲಿ ಪ್ರಕಟಿಸಬಾರದೆಂದು ಪತ್ರಿಕೆಗಳಿಗೆ ಸುಗ್ರೀವಾಜ್ಞೆ ಮಾಡಿ ಸರಕಾರ ಯುದ್ಧ ವಿರೋಧಿ ಚಳುವಳಿಯ ಸುದ್ದಿಯನ್ನು ತಡೆಗಟ್ಟಿತು. ವಿನೋಬಾ ಭಾವೆಯ ಸತ್ಯಾಗ್ರಹಕ್ಕೆ ಸಂಬಂಧಿಸಿದ ಸುದ್ದಿ, ಅವರ ಭಾಷಣ ಯಾವುದನ್ನೂ ದಿಲ್ಲಿಯ ಮುಖ್ಯ ಪತ್ರಿಕಾ ಸಲಹೆಗಾರರನ್ನು ಮೊದಲು ಕೇಳದೆ ಪ್ರಕಟಿಸಲಾಗದೆಂದು 'ಹರಿಜನ' ಸಂಪಾದಕನಿಗೆ ಅಕ್ಟೋಬರ್ ೧೮ರಲ್ಲಿ ಒಂದು ತಿಳಿವಳಿಕೆ ಬಂತು. ಅಕ್ಟೋಬರ್ ೨೪ರಂದು ಗಾಂಧೀಜೀ ಒಂದು ಹೇಳಿಕೆಯಲ್ಲಿ ಹೀಗೆಂದರು : ]

ಸತ್ಯಾಗ್ರಹದ ಬಗ್ಗೆ ನಾನು ಬರೆದ ಪ್ರತಿ ಪಂಗ್ತಿಯನ್ನೂ ದಿಲ್ಲಿಗೆ ಪತ್ರಿಕಾ ಸಲಹೆಗಾರರಿಗೆ ಕಳಿಸಬೇಕು ಎಂದರೆ ನಾನು ಅನಿರ್ಬಂಧವಾಗಿ ಕೆಲಸಮಾಡಲು ಸಾಧ್ಯವಿಲ್ಲ. ಈ ಮೂರೂ ವಾರಪತ್ರಿಕೆ (ಹರಿಜನ, ಹರಿಜನ ಸೇವಕ, ಹರಿಜನ ಬಂಧು) ಸತ್ಯಕ್ಕಾಗಿ, ಆದ್ದರಿಂದ ಎಲ್ಲ ಪಕ್ಷಗಳಿಗಾಗಿ, ನಡೆಯುತ್ತಿವೆ. ಆದರೆ ಕಾನೂನಿನ ಕ್ರಮದ ಬೆದರಿಕೆ ಇದ್ದರೆ ಪತ್ರಿಕಾ ಸಂಪಾದನೆ ಸತ್ಯವನ್ನು ಎತ್ತಿ ಹಿಡಿಯುವ ಕೆಲಸವಾಗಲಾರದು. ಸವಿನಯ ಶಾಸನಭಂಗ ಸರಿಯೋ ತಪ್ಪೋ ಪತ್ರಿಕಾ ಸ್ವಾತಂತ್ರ್ಯವಂತೂ ಬಹಳ ಪ್ರಿಯವಾದ ಅಧಿಕಾರ. ಶ್ರೀ ವಿನೋಬಾ ಭಾವೆಯ ಮೇಲೆ ಮೊಕದ್ದಮೆ ಹೂಡಿ ಸರಕಾರ ತನ್ನ ಉದ್ದೇಶವನ್ನು ಸ್ಪಷ್ಟಗೊಳಿಸಿದೆ. ಆ ವಿಷಯದಲ್ಲಿ ನನ್ನ ಮಾತು ಏನೂ ಇಲ್ಲ. ಭಾರತ ಸಂರಕ್ಷಣಾ ನಿಯಮಗಳ ಅನಿವಾರ್ಯ ಫಲ ಅದು. ಆದರೆ ಪತ್ರಿಕಾ ಸ್ವಾತಂತ್ರ್ಯದ ನಿಲುವೇ ಬೇರೆ. ಈ ತಿಳುವಳಿಕೆ ಸೂಚನೆಯ ಹಾಗೆ ಇದ್ದರೂ ವಸ್ತುತಃ ಅದು ಆಜ್ಞೆಯೇ, ಅದಕ್ಕೆ ತಪ್ಪಿ ನಡೆದರೆ ತಕ್ಕ ಫಲ ಇದ್ದೇ ಇದೆ. ಈ ಸೂಚನೆಯನ್ನು ನಾನು ಒಪ್ಪಿಕೊಳ್ಳಲಾರೆ.

ಮೂರು ವಾರ ಪತ್ರಿಕೆಗಳ ಓದುಗರನ್ನೂ ನಿರಾಶೆಗೊಳಿಸಲು ನನಗೆ ದುಃಖವಾಗುತ್ತದೆ. ಇದು ಬರೀ ತಾತ್ಕಾಲಿಕವೋ ಇಲ್ಲವೆ ವಾರಪತ್ರಿಕೆಗಳನ್ನು ಪೂರ್ತಿಯಾಗಿ ನಿಲ್ಲಿಸಿಯೇ ಬಿಡುವುದೊ ಮುಂದಿನ ವಾರ ಸಾರ್ವಜನಿಕರಿಗೆ ತಿಳಿಸುತ್ತೇನೆ. ಇದು ಬರೀ ತಾತ್ಕಾಲಿಕ. ನನ್ನ ಅಂಜಿಕೆಗೆ ಆಧಾರವಿಲ್ಲ ಎಂದು ಇನ್ನೂ ನಂಬಿದೇನೆ. ಒಂದುವೇಳೆ ತದ್ವಿರುದ್ಧವಾದರೆ ಸಾರ್ವಜನಿಕರಿಗೆ ತಿಳಿಸಿಯೇನು. ಸತ್ಯಾಗ್ರಹ ಪತ್ರಿಕಾ ಪ್ರಕಟನೆಯನ್ನು ಅವಲಂಬಿಸಿ ನಡೆಯದು. ಸತ್ಯವಾಗಿದ್ದರೆ ಅದಕ್ಕೆ ಸ್ವಯಂ ಗತಿ ಇದೆ. ಈಗಿನ ಸತ್ಯಾಗ್ರಹ ಬಹಳ ಸತ್ಯವಾದುದೆಂದು ನಂಬಿದೇನೆ. ಅದು ಸಾಗಿ ತೀರುತ್ತದೆ. ಅವಸರದಲ್ಲಿ ಏನಾದರೂ ಮಾಡಿಸುವಂಥ ಪ್ರಚೋದನೆಗೆ ನಾನು ಒಳಗಾಗುವುದಿಲ್ಲ. ಮುಂದಿನ ಹೆಜ್ಜೆಯನ್ನು ನಾನಿನ್ನೂ ಸಿದ್ಧಪಡಿಸಿಕೊಂಡಿಲ್ಲ. ಹಿಂದಿನ ನನ್ನ ಹೇಳಿಕೆಯಲ್ಲಿ ತಿಳಿಸಿದಂತೆ ಸವಿನಯ ಶಾಸನ ಭಂಗದ ಪ್ರತಿಯೊಂದೂ ಕ್ರಿಯೆ ಸ್ವಯಂಪೂರ್ಣ, ಪತ್ರಿಕೆಗೆ ಬಂದಿರುವ ಈ ಎಚ್ಚರಿಕೆಯೇ ಶಾಸನಭಂಗ ಎಷ್ಟು ಪರಿಣಾಮಕಾರಿಯಾಗಿದೆಯೋ ತಿಳಿಸುತ್ತದೆ. ದಬ್ಬಾಳಿಕೆಯ ಒಂದೊಂದು ಕೆಲಸವೂ ವಸ್ತುಸ್ಥಿತಿಗೆ ಪೋಷಕವಾಗುತ್ತದೆ. ದಬ್ಬಾಳಿಕೆ ಹೆಚ್ಚಿದಷ್ಟೂ ಸತ್ಯಾಗ್ರಹ ಬಲಗೊಳ್ಳುತ್ತದೆ. ಕಟ್ಟಕಡೆಗೆ ದಬ್ಬಾಳಿಕೆ ಮಾಡುವವನೇ ಬಳಲಿ ಹೋಗುತ್ತಾನೆ. ಸತ್ಯಾಗ್ರಹದ ಉದ್ದೇಶ ಸಫಲವಾಗುತ್ತದೆ. ಆದ್ದರಿಂದ ನಾನು ಮುಂದಿನ ಹೆಜ್ಜೆ ಹಾಕಲಿ ಬಿಡಲಿ, ನಾನು ಕೊಟ್ಟ ನಿರ್ದೇಶಗಳನ್ನು ಚಾಚೂ ತಪ್ಪದಂತೆ ಪಾಲಿಸಿ, ಚಿಂತನಮಾಡಿ ಬಂದ ವಿಚಾರವನ್ನು ನಿಗ್ರಹಿಸಿದರೆ ಅದು ಮಾತಿಗಿಂತ ಬರಹಕ್ಕಿಂತ ಹೆಚ್ಚು ಬಲಶಾಲಿ; ಶಿಕ್ಷಿಸಿ ನಿಯಂತ್ರಿಸಿದ ಅವಿಯು ಶಕ್ತಿಗಿಂತಲೂ ಬಲಶಾಲಿ. ಇದು ನನ್ನ ನಂಬಿಕೆ. ಈ ನಂಬಿಕೆ ಪದೇ ಪದೇ ಪರೀಕ್ಷೆಗೊಳಗಾಗಿ ಸಫಲವಾಗಿದೆ. ಕಡಿದಾದ ಏರಿಕೆಗಳಲ್ಲಿ ಕೂಡ ನಂಬಲು ಸಾಧ್ಯವಿಲ್ಲದಷ್ಟು ಭಾರವನ್ನು ಸಾಗಿಸಿಕೊಂಡು ಹೋಗುತ್ತದೆ ದಿನವೂ ಆವಿಯ ಶಕ್ತಿ. ವಿಚಾರಶಕ್ತಿ ಇನ್ನೂ ಹೆಚ್ಚಿನ ಅಡಚಣೆಗಳನ್ನು ದಾಟುತ್ತದೆ, ಸುಲಭವಾಗಿ ಇನ್ನೂ ಹೆಚ್ಚಿನ ಭಾರಗಳನ್ನು ಹೊರುತ್ತದೆ. ಚಿಂತನಮಾಡಿ ನಿಗ್ರಹಿಸಿದ ವಿಚಾರದ ಬಲದಲ್ಲಿ ನಂಬಿಕೆ ಇಲ್ಲದವರಿಗೆ ಒಂದು ವ್ಯಾವಹಾರಿಕ ಸೂಚನೆ ಕೊಡುತ್ತೇನೆ. ಪ್ರತಿಯೊಬ್ಬನೂ ಓಡಾಡುವ ವೃತ್ತ ಪತ್ರಿಕೆ

ಯಾಗಲಿ, ಶುಭ ಸಮಾಚಾರವನ್ನು ಬಾಯಿಂದ ಬಾಯಿಗೆ ಹರಡಲಿ. ಹುಡುಗರು ಹಿಂದೆ ಮಾಡುತ್ತಿದ್ದರಲ್ಲ, ತುತ್ತೂರಿಯನ್ನು ಊದಿ ಸುದ್ದಿ ಸಾರುವುದು; ಅದಲ್ಲ ಇದು, ನಾನು ವಿಶ್ವಸನೀಯವಾಗಿ ಕೇಳಿದುದನ್ನು ನನ್ನ ನೆರೆಯವರಿಗೆ ಹೇಳಬೇಕು. ಇದನ್ನು ಯಾವ ಸರಕಾರವೂ ತಡೆಗಟ್ಟಲಾರದು, ಅದುಮಿ ಹಾಕಲಾರದು, ಇದುವರೆಗೆ ಕಂಡುಹಿಡಿದ ವೃತ್ತ ಪತ್ರಿಕೆಗಳಿಗಿಂತ ಬಲು ಅಗ್ಗ. ಎಂಥ ಜಾಣ ಸರಕಾರಕ್ಕಾದರೂ ಮತಿ ಕೆಡಿಸುತ್ತವೆ. ಈ ಓಡಾಡುವ ಪತ್ರಿಕೆಗಳು, ತಾವು ಕೊಡುವ ಸುದ್ದಿ ನಿಜ ಎಂಬುದನ್ನು ಭದ್ರ ಮಾಡಿಕೊಳ್ಳಬೇಕು. ಹಾಳು ಹರಟೆಯಲ್ಲಿ ತೊಡಗಬಾರದು. ತಮಗೆ ಸುದ್ದಿ ಬಂದ ಮೂಲದ ಬಗ್ಗೆ ನಂಬಿಕೆ ಮಾಡಿಕೊಳ್ಳಬೇಕು. ತಮ್ಮ ಬೆಳಗಿನ ಪತ್ರಿಕೆಯನ್ನು ಮುಟ್ಟದೆಯೆ ತಮಗೆ ಬೇಕಾದ ಸುದ್ದಿಯೆಲ್ಲ ಸಾರ್ವಜನಿಕರಿಗೆ ಸಿಗುತ್ತವೆ. ವೃತ್ತ ಪತ್ರಿಕೆಗಳ ಸುದ್ದಿ ಏಕಪಕ್ಷೀಯ ವಿಕೃತ ಸಮಾಚಾರ, ಓದುವ ಕಷ್ಟಪಡಲೂ ಬೇಕಾದ್ದಿಲ್ಲ. ಈಗ ನಾನು ಕೊಡುತ್ತಿರುವ ಇಂಥಾ ಬಹಿರಂಗ ಹೇಳಿಕೆಗಳನ್ನೂ ನಿಲ್ಲಿಸಬಹುದು, ವಿದೇಶಿಯಾಗಲಿ ಸ್ವದೇಶಿಯಾಗಲಿ ಎಲ್ಲ ನಿರಂಕುಶ ಪ್ರಭುತ್ವಗಳಲ್ಲೂ ಜೀವನದ ಸ್ಥಿತಿ ಇದೇ?[೩೫]

## ೩೬. ಹೇಳಿಕೆ

[ಡಿಸೆಂಬರ್ ೨೪ರಿಂದ ಜನವರಿ ೪ರ ವರೆಗೆ ಕ್ರಿಸ್‌ಮಸ್ ಸಂದರ್ಭದ ಸದ್ಭಾವನೆಗಾಗಿ ಗಾಂಧೀಜೀ ಚಳುವಳಿಯನ್ನು ನಿಲ್ಲಿಸಿದರು. ೧೯೪೦ರ ಕೊನೆಯ ವೇಳೆಗೆ ೧೧ ಜನ ಕಾಂಗ್ರೆಸ್ ವರ್ಕಿಂಗ್ ಕಮಿಟಿ ಸದಸ್ಯರು, ಅ. ಭಾ. ಕಾಂ. ಸಮಿತಿಯ ೧೭೬ ಮಂದಿ ಸದಸ್ಯರು, ೨೯ ಜನ ಮಾಜಿ ಮಂತ್ರಿಗಳು, ಕೇಂದ್ರ ಹಾಗೂ ಪ್ರಾಂತೀಯ ಶಾಸನ ಸಭೆಗಳ ಸದಸ್ಯರು ೪೦೦ ಜನಕ್ಕಿಂತ ಹೆಚ್ಚು, ಸೆರೆಮನೆಯಲ್ಲಿದ್ದರು. ಹೊಸ ವರ್ಷದ ಮುನ್ನಾ ಸಂಜೆ ಆಜಾದರನ್ನು ಹಿಡಿದು ಒಂದು ತಿಂಗಳು ಶಿಕ್ಷೆ ವಿಧಿಸಿದರು. ಸಾಮೂಹಿಕ ಚಳುವಳಿ ತನಗೆ ಇಷ್ಟವಾಗಿದ್ದರೂ ಗಾಂಧೀಜೀಯ ಮಾತಿಗೆ ಕಟ್ಟುಬಿದ್ದೆ ಎಂದರು.]

ಗಾಂಧೀಜೀ ಈ ಹೇಳಿಕೆಯನ್ನು ಹೊರಡಿಸಿದರು :

ತಮ್ಮನ್ನು ಹೀಗೆ ಅನಿರೀಕ್ಷಿತವಾಗಿ ಹಿಡಿಯುವುದಕ್ಕೆ ಎಷ್ಟೋ ದಿನಗಳ ಮೊದಲೇ ಮೌಲಾನಾ ಅಜಾದ್ ನನಗೆ ತಿಳಿಸಿದ್ದರು, ಸವಿನಯ ಶಾಸನ ಭಂಗ ಮಾಡುವ ಮೊದಲು ಸೇವಾ ಗ್ರಾಮಕ್ಕೆ ಬರುತ್ತೇನೆಂದು. ಮತ್ತೀಯ ವಿಷಯಗಳಿಗೆ ಸಂಬಂಧಿಸಿದ ಮುಖ್ಯ ವಿಷಯವನ್ನೂ ಉಳಿದವನ್ನೂ ಚರ್ಚಿಸಲು ಬರೆದಿದ್ದರು. ಆದರೆ ಹಾಗೆ ನಡೆಯಲಿಲ್ಲ. ಜನಪ್ರಿಯರಲ್ಲದ ಆಳರಸರು ತಮ್ಮ ಉದ್ದೇಶಗಳನ್ನು ಜನರಿಗೆ ತಿಳಿಸುವುದಿಲ್ಲ, ತಮ್ಮ ಕೃತಿಗಳಿಂದ ಊಹಿಸಿಕೊಳ್ಳಲು ಬಿಡುತ್ತಾರೆ. ಮೌಲಾನಾ ಸಾಹೇಬರ ಅಕಾಲಿಕ ದಸ್ತಗಿರಿ (ಕಾಂಗ್ರೆಸ್ ದೃಷ್ಟಿಯಲ್ಲಿ)ಯಿಂದ ಅವರು ನನ್ನನ್ನೂ ಭೇಟಿಮಾಡುವುದು ಪ್ರಭುತ್ವಕ್ಕೆ ಇಷ್ಟವಿರಲಿಲ್ಲ ಎಂದು ಊಹಿಸುವುದು ನ್ಯಾಯವೇ. ಇದನ್ನು ಆಕ್ಷೇಪಿಸಬೇಕಾದ್ದಿಲ್ಲ. ಕಾಂಗ್ರೆಸ್ಸಿಗೆ ಯಾವುದು ಅನುಕೂಲವೋ ಅವರು ತಿಳಿದುಕೊಳ್ಳಬೇಕೆಂದು ಅಪೇಕ್ಷಿಸುವ ಅಗತ್ಯವಿಲ್ಲ. ಆದರೆ ಕಾಂಗ್ರೆಸ್ಸಿನ ಅಹಿಂಸೆಯಲ್ಲಿ ಆಡಳಿತಗಾರರಿಗೆ ನಂಬಿಕೆಯಿಲ್ಲ ಎಂಬುದನ್ನು ಕಾಂಗ್ರೆಸಿಗರು ತಿಳಿದುಕೊಳ್ಳುವುದು ಅಗತ್ಯ. ನನ್ನನ್ನೂ ಅವರು ಮೋಸಗಾರ ಎಂದು ತಿಳಿದಿರಲಾರರು. ಆದರೆ ಮೂರ್ಖ ಎಂದು ತಿಳಿದಿದ್ದಾರೆ. ಕಾಂಗ್ರೆಸಿಗರು ನನ್ನನ್ನೂ ಮೋಸಗೊಳಿಸುತ್ತಿದ್ದಾರೆ, ಅವರ ಅಹಿಂಸೆ ಬರೀ ಕಪಟ, ಹಿಂಸೆಗೆ ಸಿದ್ಧತೆ, ಅಲ್ಲದಿದ್ದರೂ ಹಿಂಸೆಗೆ ತೊಡಿಸಿದ ಮುಖವಾಡ ಎನ್ನುತ್ತಾರೆ ಅನೇಕರು. ಇವರೂ ಅವರ ಹಾಗೆಯೇ. ಆದ್ದರಿಂದ ನಮ್ಮ ಅಹಿಂಸೆ ಹಿಂಸೆಯನ್ನು ಮುಚ್ಚಿಕೊಳ್ಳುವ ಮುಖವಾಡವೂ ಅಲ್ಲ, ಇಂದಿಗಾಗಲಿ ಎಂದಿಗೇ ಆಗಲಿ ಹಿಂಸೆಯ ಸಿದ್ಧತೆಯೂ ಅಲ್ಲ ಎಂಬುದನ್ನು ತೋರಿಸಿಕೊಡುವುದೇ ನಮ್ಮ ಹೋರಾಟದ ತಿರುಳು. ಆದ್ದರಿಂದ ಹೆಚ್ಚು ಜನ ಕಾರಾಗೃಹಕ್ಕೆ ಹೋಗುವುದರಲ್ಲಿ ಇಲ್ಲ ನಮ್ಮ ಯಶಸ್ಸು, ನಮ್ಮ ಕಾರ್ಯಕಲಾಪಗಳಲ್ಲಿ ನಾವು ತೋರಿಸುವ ಪರಿಶುದ್ಧತೆ, ಅಹಿಂಸೆಗಳಲ್ಲಿ ಇವೆ. ಯೋಗ್ಯರಾದ ಜನ ಇದ್ದರೆ ಸಂಖ್ಯೆಗೆ ಮಹತ್ವ. ಅಯೋಗ್ಯರಾದರೆ ಖಂಡಿತವಾಗಿ ಹಾನಿಯೆ.

ಸತ್ಯಾಗ್ರಹಿಗಳು ಕೆಲವರು ಇರಲಿ ಬಹಳ ಇರಲಿ, ಹಿಂದಿರುಗುವುದಂತೂ ನನಗಿಲ್ಲ. ನನ್ನನ್ನು ಮೂರ್ಖ, ಬಲಶಾಲಿ ಎಂದರೂ ಚಿಂತೆಯಿಲ್ಲ, ಮೋಸಗಾರ, ಹೇಡಿ ಎನ್ನಲಾಗದು. ಇಡಿಯ ಜಗತ್ತೇ ನನ್ನ

ಮಾತನ್ನು ಅಲ್ಲಗಳೆದರೂ ನಾನೇನೋ ಹೇಳಿ ತೀರಬೇಕು ಮತ್ತೆ; ಈ ಹೋರಾಟಕ್ಕೆ ದೇವರೇ ಮಾರ್ಗದರ್ಶಕ. ಅವನ ಕೈಯೊಳಗಿನ ಕ್ಷುದ್ರ ನಿಮಿತ್ತ ನಾನು. ವಾಸ್ತವವೋ ಕಲ್ಪಿತವೋ ಅಂತೂ ಅವನ ಮಾರ್ಗದರ್ಶನವಿಲ್ಲದೆ ನಾನು ಈಗ ಹೊರುತ್ತಿದೇನೆ ಎನ್ನುವ ಭಾರವನ್ನು ಹೊರಲು ತೀರ ಅಶಕ್ತನಾದೇನು.

ನನ್ನ ಕಣ್ಣಿಗೆ ಈ ಹೋರಾಟವನ್ನು ಹೇಗೆ ಕಟ್ಟಿಕೊಂಡಿದೇನೋ ಹೇಳುತ್ತೇನೆ. ಮೌಲಾನಾ ಸಾಹೇಬರು ಹೊರಟು ಹೋದ ತರುವಾಯ ಅವರ ಸ್ಥಾನಕ್ಕೆ ಯಾರೂ ನೇಮಕವಾಗುವುದಿಲ್ಲ. ಪ್ರಾಂತದಲ್ಲಿ ಪ್ರತಿಯೊಬ್ಬ ತಾತ್ಕಾಲಿಕ ಅಧ್ಯಕ್ಷನೂ ನನ್ನ ಅನುಮತಿ ಪಡೆಯಬೇಕು. ಹಾಗೆ ಒಬ್ಬರು ಇದ್ದೇ ಇರಬೇಕು ಎಂಬ ನಿಯಮವಿಲ್ಲ. ಕಾಂಗ್ರೆಸ್ಸಿನ ಗ್ರಾಮ ಸಮಿತಿಗಳಿಂದ ಹಿಡಿದು ಪ್ರಾಂತೀಯ ಸಮಿತಿಗಳವರೆಗೆ ಎಲ್ಲ ಪ್ರತಿನಿಧಿಗಳೂ ನನ್ನ ಒಪ್ಪಿಗೆ ದೊರೆತರೆ ಅರ್ಹರಾಗಿದ್ದರೆ ಸೆರೆಮನೆಗೆ ಹೋಗಬೇಕು. ಅರೋಗ್ಯ ಅಥವಾ ಬೇರೆ ಕಾರಣಗಳಿಂದ ಅವರು ಅರ್ಹರಲ್ಲದಿದ್ದರೆ, ಅಂಥವರು ಕೆಲಸ ಮಾಡಬೇಕಾದರೂ ಬಹಳ ಅಪರೂಪವಾದ ಸಂದರ್ಭದಲ್ಲಿ. ಅದೂ ನನ್ನ ಒಪ್ಪಿಗೆ ಪಡೆದ ಮೇಲೆ. ಸೆರೆಗೆ ಹೋದವರ ಸ್ಥಾನಕ್ಕೆ ಹೊಸ ಚುನಾವಣೆಗಳು ನಡೆಯುವುದಿಲ್ಲ. ಕಟ್ಟಕಡೆಗೆ ಪ್ರತಿಯೊಬ್ಬ ಕಾಂಗ್ರೆಸ್ಸಿಗನೂ ತನ್ನ ಬಲದಿಂದಲೇ ಕೆಲಸ ಮಾಡಬೇಕು, ತನಗೆ ತಾನೇ—ಬೇರೆ ಯಾರಿಗೂ ಅಲ್ಲ—ಅಧ್ಯಕ್ಷನಾಗಬೇಕು ಎಂಬುದು ವಿಚಾರ. ಸಂಪೂರ್ಣ ಅಹಿಂಸಕ ಸಂಸ್ಥೆ ಅಥವಾ ಸಮಾಜದ ವರ್ಣನೆ ಅದು. ಕಷ್ಟವನ್ನು ಸೈರಿಸಲು ಕಲಿತವರಿಗೆ ಹೆಚ್ಚು ಮಾರ್ಗದರ್ಶನ ಅಗತ್ಯವಿಲ್ಲ. ಸವಿನಯ ಕಾನೂನಭಂಗ ಮಾಡಲು ಅರ್ಹತೆಯನ್ನು ಗಳಿಸಲು ಯಾವ ನಿಯಮಗಳನ್ನು ಪಾಲಿಸಬೇಕೋ ಎಲ್ಲರಿಗೂ ಗೊತ್ತಿದೆ. ಆರೋಗ್ಯವಂತ ದೇಹ—ಮನಸ್ಸು ಇದ್ದರೆ ಸಾಕು, ಎಲ್ಲಾ ವಯಸ್ಕರೂ ನಿಯಮಗಳನ್ನು ಸುಲಭವಾಗಿ ಪಾಲಿಸಬಹುದು. ನನ್ನನ್ನು ನಿರ್ಬಂಧಿಸುವವರೆಗೆ ಕಾರ್ಯದ ಬಗ್ಗೆ ತೊಡಕು ಹುಟ್ಟುವುದಿಲ್ಲ. ನನ್ನ ಸಮ್ಮತಿಯಿಲ್ಲದೆ ಯಾರೂ ಪ್ರತ್ಯಕ್ಷ ಕಾರ್ಯಕ್ರಮವನ್ನು ನಡೆಸಲಾಗದು. ದಸ್ತಗಿರಿ ಆಗಲು ಯತ್ನಿಸಬಾರದು ಎಂಬ ನನ್ನ ಸಂಕಲ್ಪ ದೃಢವಾಗಿದೆ. ಆದರೆ ಆಡಳಿತಗಾರರ ಆಲೋಚನೆ ಬೇರೆ ಇರ

ಬಹುದು. ಒಂದು ವೇಳೆ ಆ ಸನ್ನಿವೇಶ ಬಂದರೆ ಬಾಹ್ಯ ನಿಯಂತ್ರಣದ ಬಿಡುಗಡೆಯ ಸಮಯ ಅದು. ಎಷ್ಟೇ ಅಹಿಂಸಕವಾದರೂ ನಿಯಂತ್ರವೇ ಅದು. ಅದೇ ಪ್ರತಿಯೊಬ್ಬರಿಗೂ ಪರೀಕ್ಷಾ ಸಮಯ. ನನ್ನ ತರುವಾಯ ಯಾರನ್ನೂ ನನ್ನ ಸ್ಥಾನಕ್ಕೆ ನೇಮಿಸಬಾರದು ನಾನು. ನಾನು ಬಂಧಿತನಾದರೆ ಪ್ರತಿಯೊಬ್ಬರೂ ತಮ್ಮ ತಮ್ಮ ಅಂತಃಸ್ಸಾಕ್ಷಿಯ ಶಿಸ್ತಿನಿಂದ ನಡೆಯಬೇಕು. ಆದ್ದರಿಂದ ಕೋಟ್ಯಂತರ ಜನ ಸತ್ಯಾಗ್ರಹ ಮಾಡಲು ತಮ್ಮ ತಮ್ಮ ಅರ್ಹತೆಯನ್ನು ತಾವೇ ನಿರ್ಣಯಿಸಿಕೊಳ್ಳುವ ಸಂದರ್ಭವೂ ಬರಬಹುದು.

ಬೇಗ ಮುಗಿಸಬಹುದಾದ ಹೋರಾಟ ಅಲ್ಲ ಇದು. ತಾನೇ ತನ್ನ ಜೀವಕ್ಕಾಗಿ ಒಬ್ಬ ಗಡುಸು ಹಗೆಯೊಡನೆ ಹೋರಾಡುತ್ತಿದೆ ಈ ಪ್ರಭುತ್ವ. ಅದನ್ನು ಪ್ರತಿಭಟಿಸುತ್ತಿದೇವೆ ನಾವು. ಸೋಲನ್ನರಿಯದ ರಾಷ್ಟ್ರದ್ದು ಈ ಪ್ರಭುತ್ವ. ಪ್ರಾಣಾಪಾಯವಿದ್ದವರು ಗೌಣ ಎಂದು ತಾವು ತಿಳಿದುದನ್ನು ಸುಲಭವಾಗಿ ಬಿಟ್ಟುಕೊಡುತ್ತಾರೆ, ಮುಖ್ಯ ಎಂದು ಭಾವಿಸಿಕೊಂಡುದಕ್ಕಾಗಿ ಕಡೆಯವರೆಗೂ ಹೋರಾಡುತ್ತಾರೆ. ನಮ್ಮ ಬೇಡಿಕೆಯನ್ನು ಅವರು ಒಪ್ಪದಿರುವುದನ್ನು ನೋಡಿದರೆ ನಮ್ಮ ಹೋರಾಟ ಎರಡನೆ ರೀತಿಯದು ಎಂದು ಅವರು ತಿಳಿದಂತೆ ಕಾಣುತ್ತದೆ. ಆದ್ದರಿಂದ ನಮ್ಮ ಹೋರಾಟಕ್ಕೆ ಕನಿಷ್ಠ ಪಕ್ಷ ಯೂರೋಪಿನ ಹೋರಾಟ ಮುಗಿದಾಗಲೇ ಮುಕ್ತಾಯ. ಆದ್ದರಿಂದ ಸತ್ಯಾಗ್ರಹ ಮಾಡಿ ಅಲ್ಪಕಾಲದ ಶಿಕ್ಷೆಗೆ ಗುರಿಯಾದವರು ಹೋರಾಟ ಕೊನೆಗಾಣುವವರೆಗೂ ಬಿಡುಗಡೆ ಆದಂತೆಲ್ಲ ಮತ್ತೆ ಮತ್ತೆ ಸತ್ಯಾಗ್ರಹ ಮಾಡಬೇಕು.

ಎರಡು ತಂತ್ರಗಳನ್ನು ಗಮನಿಸಬೇಕಾಗಿದೆ. ಕಾರಾಗೃಹವಾಸದ ಬದಲು ಇಲ್ಲದ ಬೇರೆ ದಂಡ, ಇನ್ನೊಂದು, ಸತ್ಯಾಗ್ರಹಿಗಳನ್ನು ಬಂಧಿಸದೆ ಬಿಡುವುದು. ಎರಡೂ ಸನ್ನಿವೇಶಗಳಲ್ಲಿ ಸತ್ಯಾಗ್ರಹಿಗಳು ಸುಲಭವಾದ ಮಜಲುಗಳಲ್ಲಿ ದಿಲ್ಲಿಯ ಕಡೆ ಹೊರಡಬೇಕು, ದಿನಕ್ಕೆ ಎರಡು ಮೂರೇ ಮೈಲಿ ಆದರೂ ಸರಿ. ಹಳ್ಳಿಯವರು ನೀಡಿದ ಆಹಾರವನ್ನೆ ತೆಗೆದುಕೊಂಡು ಪ್ರಯಾಣಮಾಡಬೇಕು.[೩೬]

# ೩೭. ಅಮೆರಿಗೆ* ಉತ್ತರ

[ ಏಪ್ರಿಲ್ ೨೨ರಂದು ಅಮೆರಿ ಹಿಂದೆ ಹೇಳಿದ್ದನ್ನೆ ಮತ್ತೆ ಹೇಳಿದ. ಸತ್ಯಾಗ್ರಹ ಚಳುವಳಿಯ ಬಗ್ಗೆ ಹೀಗೆಂದ: 'ಈ ಕಂತಿನ ಸತ್ಯಾಗ್ರಹ ಪ್ರಾರಂಭವಾಗಿ ಆರು ತಿಂಗಳಾಯಿತು. ಈಗ ಸಿಪಾಯಿಗಳ ಸರದಿ, ನ್ಯಾಯವನ್ನೂ ಎತ್ತಿ ಹಿಡಿಯುವಾಗ ನ್ಯಾಯಾಧೀಶರು ವ್ಯವಹಾರಿಕ ಪ್ರಜ್ಞೆ ತೋರಿಸಿದಾರೆ. ಅಗಸ್ತ್ಯ ಭ್ರಾತರನ್ನು ಲೆಕ್ಕಕ್ಕೇ ಹಿಡಿದಿಲ್ಲ. ಕಾರಾಗೃಹಕ್ಕೆ ಹೋಗುವ ಐಚ್ಛಿಕ ಅವಕಾಶವನ್ನು ಕೊಡದೆ ಬರೀ ದಂಡವನ್ನು ವಿಧಿಸಿದಾರೆ. ಸೆರೆಮನೆಯ ಶಿಕ್ಷೆ ಯಾರಿಗೆ ಚುನಾವಣೆಯ ಬಂಡವಾಳವ್ರೋ ಮುಂದೆ ಚುನಾವಣೆಗಳಲ್ಲಿ ಅಂಥವರಿಗೆ ಪ್ರಧಾನ ಪ್ರೇರಣೆಯ ಮಾಯುವಾಗಿ ಈ ವಿಧಾನ ಬಹಳ ನಿರಾಶಾದಾಯಕವಾಗಿದೆ. ದಂಡ ತೆರುವುದೂ ಸೆರೆಮನೆಯ ವಾಸದಷ್ಟೇ ತ್ಯಾಗ ಎಂದು ಗಾಂಧೀಜೀ ಹೇಳಬೇಕಾಗಿ ಬಂದಿದೆ. ಒಟ್ಟಾರೆ, ಚಳುವಳಿ ಮಂದವಾಗಿ ಸಾಗಿದೆ. ಆಸಕ್ತಿ ಕೆರಳಿಸಿಲ್ಲ. ಇಡೀ ವ್ಯವಹಾರವೇ ಎಷ್ಟು ಬುದ್ಧಿಶೂನ್ಯವೋ ಅಷ್ಟು ಶೋಚನೀಯ. ಆದರೆ ಸರಕಾರಕ್ಕೆ ಶಾಸನ ಪಾಲನೆಯ ಹೊರತು ಬೇರೆ ದಾರಿ ಇರಲಿಲ್ಲ. ಘಟನಾತ್ಮಕ ಭವಿಷ್ಯದ ಬಗ್ಗೆ ಸರಕಾರದ ಘೋಷಣೆ ಕಾಂಗ್ರೆಸ್ ಹೊರತು ಭಾರತದ ರಾಷ್ಟ್ರೀಯ ರಚನೆಯ ಭಿನ್ನ ಭಿನ್ನ ತತ್ವಗಳಿಗೆ ಸಮಾಧಾನ ನೀಡಿವೆ ಎನ್ನಬಹುದು.'

ಗಾಂಧೀಜೀಯಿಂದ ಏಪ್ರಿಲ್ ೨೭ರಂದು ಒಂದು ಉತ್ತರ ಪಡೆಯಿತು ಇದು.]

ಹೌಸ್ ಆಫ್ ಕಾಮನ್ಸ್‌ನಲ್ಲಿ ಭಾರತದ ಬಗ್ಗೆ ನಡೆದ ವಿಪುಲ ಚರ್ಚೆಯನ್ನು ಬಹಳ ಸಂಕಟದಿಂದ ಓದಿದೇನೆ. ಸಂಕಟ ಮನುಷ್ಯರ ಮನಸ್ಸನ್ನು ಮೆದುವಾಗಿಸುತ್ತದೆ. ಅವರಿಗೆ ನಿಜ ಸಂಗತಿಗಳ ಅರಿವನ್ನು ಕೊಡುತ್ತದೆ. ಆದರೆ ಬ್ರಿಟನ್ನಿನ ಸಂಕಟ ಅಮೆರಿಯನ್ನು ಕಲಕಿದಂತಿಲ್ಲ. ತನಗೆ ಏನೂ ಆಗದವರ ಹಾಗೆ ಇದಾರೆ ಮಹಾರಾಯ. ಈ ಕಲ್ಲೆದೆಯ ಕಾಠಿಣ್ಯ ನನ್ನ ಅಭಿಪ್ರಾಯವನ್ನು ಮತ್ತಿಷ್ಟು ದೃಢಪಡಿಸುತ್ತಿದೆ. ಎಷ್ಟೇ ಅಡ್ಡಿ-ಆತಂಕಗಳಿರಲಿ ಕಾಂಗ್ರೆಸ್ಸು ತನ್ನ ಅಹಿಂಸಾ ನೀತಿಯನ್ನೇ ದೃಢವಾಗಿ ಹಿಡಿಯಬೇಕು,

ಭಾರತದಲ್ಲಿರುವ ಸನ್ನಿವೇಶವನ್ನು ತುಚ್ಛವಾಗಿ ಕಡೆಗಂಡು, ಎದುರಿಗೆ ನಿಂತು ದುರುಗುಟ್ಟುವ ಸಂಗತಿಗಳನ್ನು ನಿರ್ಲಕ್ಷ್ಯ ಮಾಡಿ ಅಮೆರಿ

---

* ಸೆಕ್ರೆಟರಿ ಆಫ್ ಸ್ಟೇಟ್ ಫಾರ್ ಇಂಡಿಯಾ ಆಗಿದ್ದರು.

ಬ್ರಿಟನ್ನಿನ ಸೇವೆಮಾಡಲಿಲ್ಲ. ಬ್ರಿಟಿಷ್ ಆಡಳಿತ ಭಾರತಕ್ಕೆ ಶಾಂತಿ ಕೊಟ್ಟಿತೆಂದು ಬಡಾಯಿಯ ಮಾತನ್ನು ಆಡಿದಾರೆ. ಢಾಕಾದಲ್ಲೂ ಅಹಮದಾಬಾದಿನಲ್ಲೂ ಏನು ಆಗುತ್ತಿದೆಯೋ ಗೊತ್ತಿಲ್ಲವೆ? ಈ ಸ್ಥಳ ಗಳಲ್ಲಿ ಯಾರು ಶಾಂತಿ ಸಂರಕ್ಷಣೆ ಮಾಡಿದವರು? ಬಂಗಾಳದಲ್ಲಿ ಸ್ವಪರಿ ಪಾಲನೆ ಇದೆ ಎಂದು ನನ್ನ ಮುಖಕ್ಕೆ ಆ ಸಂಗತಿಯನ್ನು ಬಿಸಾಡಲಿಕ್ಕಿಲ್ಲ ಎಂದು ಆಶಿಸುತ್ತೇನೆ. ಆ ಸ್ವಪರಿಪಾಲನೆ ಎಂಥ ಅಣಕವೋ ಅವರಿಗೇ ಗೊತ್ತಿದೆ. ಈ ಗೊಂಬೆ ಮಂತ್ರಿಗಳಿಗೆ ಇಂಥ ತುರ್ತು ಪರಿಸ್ಥಿಯಲ್ಲಿ ಎಷ್ಟು ಅಧಿಕಾರ ಇದೆಯೋ ಕಾಂಗ್ರೆಸ್ ಪಟ್ಟಿ ಅಂಟಿಸಿಕೊಂಡಿರಲಿ ಲೀಗಿನದಿರಲಿ, ಅವರಿಗೆ ಗೊತ್ತು.

ಬಹಳ ಸುಸಂಗತ ಪ್ರಶ್ನೆ ಒಂದನ್ನು ಕೇಳುತ್ತೇನೆ. ಇಷ್ಟು ದೀರ್ಘ ಕಾಲ ರಾಜ್ಯಮಾಡಿದರಲ್ಲ ಬ್ರಿಟಿಷರು, ಜನ ಏಕೆ ನಿರ್ವೀರ್ಯರಾಗಿದಾರೆ? ಒಂದುನೂರು ಜನ ಪುಂಡರನ್ನು ಎದುರಿಸಲಾರರಲ್ಲ? ಎಂಥ ನಾಚಿಕೆ ಗೇಡಿನ ಪ್ರಸಂಗ! ನಮಗಿಂತ ಬ್ರಿಟಿಷರಿಗೇ ಹೆಚ್ಚು. ಕೆಲವರು ಗೂಂಡಾ ಗಳಿಗೆ ಬೆಂಕಿ ಹಚ್ಚಿ ಕೊಳ್ಳೆ ಮಾಡಿ ಕೊಳ್ಳೆ ಹೊಡೆಯಲು ಒಳ್ಳೆ ಅವಕಾಶ ಸಿಕ್ಕಿದೆ ಎಂದು ಸಾವಿರಾರು ಜನ ಮನೆಮಾರು ಬಿಟ್ಟು ಓಡಿಹೋಗಬೇಕೆ ಅಂಜಿಕೊಂಡು? ಇದನ್ನು ನೋಡುತ್ತ ಕೂಡಬೇಕೆ ಅವರು? ಸರಕಾರ ಎಂಬ ಹೆಸರಿನ ಜೆಲೆ ಇದ್ದರೆ ಮೊದಲು ಜನರಿಗೆ ಆತ್ಮಸಂರಕ್ಷಣೆಯ ವಿದ್ಯೆ ಯನ್ನು ಕಲಿಸಬೇಕು. ಆದರೆ ವಿದೇಶೀ ಸರಕಾರಕ್ಕೆ ಭಾರತದ ನಾಗರಿಕರ ಈ ಮೂಲಭೂತ ಯೋಗಕ್ಷೇಮದ ಚಿಂತೆ ಎಳ್ಳಷ್ಟು ಇರಲಿಲ್ಲ. ಆದ್ದರಿಂದ ಜನರಿಗೆ ಶಸ್ತ್ರ ಹಿಡಿಯಲು ಅವಕಾಶವಿಲ್ಲದಂತೆ ಮಾಡಿತು.

ಭಾರತದ ಯೋಧರನ್ನು ಅಮೆರಿ ಬೇಕಾದಷ್ಟು ಪ್ರಶಂಸೆ ಮಾಡ ಬಹುದು. ಆದರೆ ಭಾರತದ ಭೂಮಿಯಲ್ಲಿ ಅದಕ್ಕೆ ಕಿವಿಗೊಡುವ ಹಾಗೆಯೇ ಇಲ್ಲ. ಸದ್ಯಕ್ಕೆ ಕಾಂಗ್ರೆಸಿನ ಅಹಿಂಸೆಯ ಮಾತಿರಲಿ. ಭಾರತ ವನ್ನು ಆತ್ಮಸಂರಕ್ಷಣೆಗೆ ಸನ್ನದ್ಧವಾಗಿಸಿ ತರಬೇತಿ ಮಾಡಿದ್ದರೆ, ಭಾರತ ಸ್ವೇಚ್ಛೆಯಿಂದ ಬ್ರಿಟನ್ನಿನ ಮಿತ್ರ ಆಗಿದ್ದರೆ, ಯುರೋಪಿನ ಎಲ್ಲ ಶಕ್ತಿಗಳೂ ಸೇರಿದರೂ ವಿನಾಶಕ್ಕೆ ಬ್ರಿಟನ್ನಿನ ಕೂದಲು ಕೊಂಕಿಸಲಾಗುತ್ತಿರಲಿಲ್ಲ.

ಭಾರತದ ರಾಜಕೀಯ ಪಕ್ಷಗಳು ಒಂದಾದರೆ ಸಾಕು. ಭಾರತದ ಏಕ ಮತ್ಯಕ್ಕೆ ಬ್ರಿಟನ್ ಬೆಲೆ ಕೊಡುತ್ತದೆ ಎಂದು ಹಳೆಯ ಹಾಡನ್ನೆ ಹಾಡಿ ಕಿಸಿಬಾಯಿ ದಾಸನ ಹಾಗೆ ಭಾರತದ ಬುದ್ಧಿವಂತ ವರ್ಗಕ್ಕೆ ಅಪಮಾನ ಮಾಡಿದರೆ ಅಮೆರಿ, ಪಕ್ಷಗಳು ಒಂದುಗೂಡದಂತೆ ದೂರಮಾಡುವುದೇ ಬ್ರಿಟನ್ನಿನ ಸಂಪ್ರದಾಯ ಎಂಬುದನ್ನು ಪದೇ ಪದೇ ತೋರಿಸಿ ಕೊಟ್ಟಿದೇನೆ. 'ಭೇದ ಹುಟ್ಟಿಸಿ ಆಳು' ಎಂಬುದು ಬ್ರಿಟನ್ನಿನ ಹೆಮ್ಮೆಯ ಮಹಾ ವಾಕ್ಯ. ಭಾರತದ ಜನತೆಯಲ್ಲಿ ಒಡಕು ಇದ್ದರೆ ಅದಕ್ಕೆ ಬ್ರಿಟಿಷ್ ರಾಜಕಾರಣಿಗಳೇ ಕಾರಣ. ಬ್ರಿಟಿಷ್ ಖಡ್ಗ ಭಾರತವನ್ನು ಅಧೀನದಲ್ಲಿಟ್ಟುಕೊಂಡಿರುವ ವರೆಗೂ ಈ ಭೇದಗಳು ಇದ್ದೇ ಇರುತ್ತವೆ, ತಪ್ಪಿದ್ದಲ್ಲ.

ಕಾಂಗ್ರೆಸಿಗೂ ಮುಸ್ಲಿಂ ಲೀಗಿಗೂ ನಡುವೆ ಸೇತುವೆ ಕಟ್ಟಲು ಸಾಧ್ಯ ವಿಲ್ಲದಷ್ಟು ಅಗಲವಾದ ಕಂದರ ಇದೆ. ದುರ್ದೈವ. ಒಪ್ಪಿಕೊಳ್ಳುತ್ತೇನೆ. ಅದು ಏನೇ ಇದ್ದರೂ ಗೃಹ ಕಲಹ ಎನ್ನಬಾರದೇಕೆ ಬ್ರಿಟಿಷ್ ಮುತ್ಸದ್ದಿ ಗಳು? ಭಾರತದಿಂದ ಅವರು ಹೊರಟುಹೋಗಲಿ. ನಾನು ಮಾತು ಕೊಡುತ್ತೇನೆ. ಕಾಂಗ್ರೆಸ್ಸೂ ಮುಸ್ಲಿಂ ಲೀಗೂ ಇತರ ಪಕ್ಷಗಳೂ ಒಟ್ಟಿಗೆ ಸೇರಿ ಭಾರತದ ಸರಕಾರವನ್ನು ನಡೆಸಲು ಏನಾದರೊಂದು ಉಪಾಯವನ್ನು ಹುಡುಕುವುದೇ ತಮಗೆ ಹಿತ ಎಂದುಕೊಂಡಾವು. ಅದು ವೈಜ್ಞಾನಿಕ ಆಗಿರಲಿಕ್ಕಿಲ್ಲ. ಪಶ್ಚಿಮದ ಯಾವ ಮಾದರಿಯಲ್ಲೂ ಇರಲಿಕ್ಕಿಲ್ಲ. ಆದರೆ ಕೆಲವು ಕಾಲ ತಡೆದೀತು. ಅಂಥ ಸಂತೋಷದ ಸ್ಥಿತಿಯನ್ನು ಮುಟ್ಟುವ ಮೊದಲು ನಮ್ಮನಮ್ಮೊಳಗೆ ಹೊಡೆದಾಡಬೇಕಾದೀತು. ಆದರೆ ಹೊರಗಿನ ಪ್ರಭುತ್ವವನ್ನು ಸಹಾಯಕ್ಕೆ ಕರೆಯುವುದಿಲ್ಲ ಎಂದು ಒಪ್ಪಿಕೊಂಡರೆ ನಾವು ನಮ್ಮ ಜಗಳ ಹದಿನೈದು ದಿನ ನಡೆದೀತು. ಆದರೆ ಇವತ್ತೂ ಯುರೋಪಿನಲ್ಲಿ ಆಗುತ್ತಿರುವ ನರಮೇಧದ ಒಂದೇ ದಿನವಷ್ಟು ಕೂಡ ಇಲ್ಲಿ ಆಗದು. ಏಕೆಂದರೆ ಬ್ರಿಟಿಷ್ ಪ್ರಭುತ್ವದ ಪುಣ್ಯದಿಂದ ನಾವು ಪೂರ್ಣ ನಿರಾಯುಧರು.

ಸತ್ಯವನ್ನು ಪೂರಾ ಗಾಳಿಗೆ ತೂರಿ, ಕಾಂಗ್ರೆಸ್ಸು 'ಕೊಡುವುದಾದರೆ ಎಲ್ಲಾ ಕೊಡಿ, ಇಲ್ಲದಿದ್ದರೆ ಏನೂ ಬೇಡ' ಎನ್ನುತ್ತಿದೆ ಎಂದು ತನ್ನ ಶ್ರೋತೃಗಳನ್ನು ವಂಚಿಸಲು ಯತ್ನಿಸಿದಾರೆ ಅಮೆರಿ. ಅವರಿಗೆ ನೆನಪು

ಕೊಡುತ್ತೇನೆ. ಬ್ರಿಟಿಷರ ಭಾವನೆಯನ್ನು ಗೌರವಿಸಲು ಕಾಂಗ್ರೆಸ್ಸು ಪೂನಾ ತೀರ್ಮಾನಕ್ಕೆ ಇಳಿಯಿತು. ಬೊಂಬಾಯಿಯಲ್ಲಿ ಅದನ್ನು ಅಳಿಸಿದಾಗ ಅಧಿಕಾರಯುತವಾಗಿ ನಾನು ಹೇಳಿದೆ: ಬ್ರಿಟಿಷ್ ಸರಕಾರ ಸದ್ಯಕ್ಕೆ ಭಾರತ ಸ್ವಾತಂತ್ರ್ಯವನ್ನು ಘೋಷಿಸಲಾರದು ಅಥವಾ ಕೊಡಲಾರದು, ಆದ್ದರಿಂದ ಪ್ರಕೃತಕ್ಕೆ ಸಂಪೂರ್ಣ ವಾಕ್ ಸ್ವಾತಂತ್ರ್ಯ ಲೇಖನ ಸ್ವಾತಂತ್ರ್ಯಗಳಿಂದಲೇ ನಾವು ತೃಪ್ತರಾಗಬೇಕು. 'ಎಲ್ಲಾ ಕೊಡಿ, ಇಲ್ಲದಿದ್ದರೆ ಏನೂ ಬೇಡ' ಎಂಬ ಮಾತೆ ಅದು? ಆ ಮೇರೆಯ ಮನೋವೃತ್ತಿಗೆ ಕಾಂಗ್ರೆಸ್ಸು ಉದ್ದೇಶಪೂರ್ವಕವಾಗಿ ತನ್ನ ಬೇಡಿಕೆಯನ್ನು ಮಂದವಾಗಿಸಿ, ಬ್ರಿಟಿಷರು ತಮ್ಮ ಅಸ್ತಿತ್ವಕ್ಕೇ ತಾವು ಹೋರಾಡುತ್ತಿರುವಾಗ ಅವರಿಗೆ ಬಿಕ್ಕಟ್ಟು ಉಂಟುಮಾಡಬಾರದು ಎಂದು ಎಣಿಸಿರುವುದು ಅರ್ಥವಾಗದೇನು? ಅದನ್ನು ಒಪ್ಪಿಕೊಳ್ಳುವ ಸೌಜನ್ಯವಾದರೂ ಬೇಡವೆ? ಆ ಸೌಜನ್ಯ ಇಲ್ಲದುದಕ್ಕೆ ಕಾಂಗ್ರೆಸ್ಸಿನ ಮಿತವಾದವನ್ನು ಅದರ ವಿರುದ್ಧವಾಗಿಯೆ ತಿರುಗಿಸಿ ಕಾಂಗ್ರೆಸ್ಸಿನ ಸತ್ಯಾಗ್ರಹ ತಣ್ಣಗಾಗಿದೆ ಎನ್ನುವುದೆ?

ಭಾರತದ ಸಂಪದಭಿವೃದ್ಧಿಯ ಬಗ್ಗೆ ಅವರು ಹೇಳಿರುವುದನ್ನು ಓದಿ ನನಗೆ ಉಸಿರು ಕಟ್ಟಿದ ಹಾಗೆ ಆಯಿತು. ಇದು ಬರೀ ಕಟ್ಟುಕತೆ ಎಂದು ಅನುಭವದಿಂದ ಹೇಳುತ್ತೇನೆ. ಭಾರತದ ಜನಕೋಟಿ ದಿನೇ ದಿನೇ ದಿವಾಳಿಯಾಗುತ್ತಿದ್ದಾರೆ. ಮೈ ತುಂಬ ಬಟ್ಟೆಯಿಲ್ಲ, ಹೊಟ್ಟೆ ತುಂಬ ಊಟವಿಲ್ಲ. ಒಬ್ಬ ಮನುಷ್ಯನ ರಾಜ್ಯಭಾರವಾದ್ದರಿಂದ ಕೋಟಿಕೋಟಿಯ ಅಂದಾಜು ಪಟ್ಟಿ ಮಾಡಬಹುದು. ಆದರೆ ಕಂಗಾಲರಾಗಿ ಸಾಯುತ್ತಿರುವ ಜನಸ್ತೋಮದ ಸಂಪದಭಿವೃದ್ಧಿಯ ಕುರುಹು ಅಲ್ಲ ಅದು. ಬ್ರಿಟಿಷರ ಕಾಲಿನ ಕೆಳಗೆ ಹುಡಿಹುಡಿಯಾಗುತ್ತಿವೆ, ಭಾರತ ಎನ್ನಲು ಸ್ಪಷ್ಟ ಸಾಕ್ಷ್ಯ ಎಂದು ಹೇಳುವ ಧೈರ್ಯ ಮಾಡುತ್ತೇನೆ. ರೈತರ ದೌರ್ಭಾಗ್ಯದ ಬಗ್ಗೆ ಎಳ್ಳಷ್ಟು ಗೊತ್ತಿದ್ದರೂ ಈ ನಿರಂಕುಶ ಪ್ರಭುತ್ವದ ವಿರುದ್ಧ ತಿರುಗಿ ಬೀಳುವುದು ಪ್ರತಿಯೊಬ್ಬ ಭಾರತೀಯನ ಕರ್ತವ್ಯ. ಮಾನವ ಜಾತಿಯ ಅದೃಷ್ಟ. ಭಾರತದ ವಿಪ್ಲವ ಶಾಂತಿಮಯ. ಶಾಂತಿಮಯ ಪ್ರಯತ್ನದಿಂದಲೇ ಭಾರತ ತನ್ನ ಸಹಜ ಭವಿಷ್ಯವನ್ನು ಸಾಧಿಸಿಕೊಂಡೀತು ಎಂದು ಆಶಿಸುತ್ತೇನೆ.

ಅಮೆರಿಯ ಪ್ರಕಟನೆಯನ್ನು ವಿಮರ್ಶಿಸುವ ಸಂಕಟಕರ ಕಾರ್ಯವನ್ನು ಇನ್ನು ಸಾಗಿಸಲಾರೆ. ಅವರ ಭಾಷಣವನ್ನು ಇಷ್ಟು ಸಂಕ್ಷೇಪವಾಗಿ ಯಾದರೂ ವಿಮರ್ಶಿಸಬೇಕಾಯಿತಲ್ಲ ಎಂದು ನೋವಾಗುತ್ತಿದೆ. ಅವರೆ ಅದರ ಅಪಪ್ರಾರ್ಗ ಅತ್ಯಾಶ್ಚರ್ಯಕರ. ಆದ್ದರಿಂದ ಆ ದುರದೃಷ್ಟಪೂರ್ಣ ಹೇಳಿಕೆಯಲ್ಲಿನ ತೀರ ಎದ್ದು ಕಾಣುವ ದೋಷಗಳನ್ನಾದರೂ ಎತ್ತಿ ತೋರಿಸದಿದ್ದರೆ ನಾನು ಕರ್ತವ್ಯ ಭ್ರಷ್ಟನಾದೇನು ಎನಿಸಿತು. ನಲವತ್ತು ಕೋಟಿ ಜನರ ಮೇಲೆ ನಿರ್ವಿವಾದ ಪ್ರಭುತ್ವ ನಡೆಸುತ್ತಿರುವುದು ಸಾಲದೆ? ಅಷ್ಟರಿಂದಲೇ ತೃಪ್ತರಾಗಬಹುದಿತ್ತಲ್ಲ.[೩೭]

## ೩೮. ಬನಾರಸ್ ಹಿಂದೂ ವಿಶ್ವವಿದ್ಯಾಲಯದ ರಜತೋತ್ಸವ ಪ್ರಶಸ್ತಿ ಪ್ರದಾನೋತ್ಸವ ಭಾಷಣ

### ( ಜನವರಿ ೨೧, ೧೯೪೨ )

ಪಂಡಿತ ಮಾಲವೀಯರು ದೇಶಕ್ಕೆ ಸಲ್ಲಿಸಿದ ಸೇವೆ ಅಮೋಘ. ಅದರಲ್ಲಿ ಹಿಂದೂ ವಿಶ್ವವಿದ್ಯಾಲಯ ಅವರ ಮಹತ್ತರ ಸಾಧನೆ, ಶ್ರೇಷ್ಠ ಕಾಣಿಕೆ. ತಮಗೆ ಪ್ರಾಣದಷ್ಟೆ ಪ್ರಿಯವಾದ ಈ ಕೆಲಸಕ್ಕಾಗಿ ತಮ್ಮನ್ನೆ ಸವೆಸಿದರು ಮಾಲವೀಯರು. ನನಗೆ ಅವರಲ್ಲಿದ್ದ ವಿಶೇಷ ಆದರದ ದೆಸೆಯಿಂದ ಇಪ್ಪತ್ತೈದು ವರ್ಷಗಳ ಕೆಳಗೆ ಈ ವಿಶ್ವವಿದ್ಯಾಲಯದ ಶಂಕುಸ್ಥಾಪನೆಯ ಉತ್ಸವದ ಆಹ್ವಾನವನ್ನು ಅಂಗೀಕರಿಸಿದ್ದೆ. ವೈಸರಾಯರು, ಭಾರತದ ರಾಜ ಮಹಾರಾಜರು ಬರುವ ಆ ಸಮಾರಂಭದಲ್ಲಿ ನನ್ನಂಥ ದರಿದ್ರನಿಗೆ ಸ್ಥಳವಿಲ್ಲ ಎಂದು ನನಗೆ ಗೊತ್ತಿತ್ತು. ಆಗ ನಾನಿನ್ನೂ ಮಹಾತ್ಮಾ ಆಗಿರಲಿಲ್ಲ. ಹಾಗೆ ಯಾರಾದರೂ ನನ್ನನ್ನು ಕರೆದರೆ ಮಹಾತ್ಮಾ ಮುನ್ಷೀ ರಾಮರನ್ನು ತಪ್ಪು ತಿಳಿದುಕೊಂಡ ಎಂದು ಹೇಳುತ್ತಿದ್ದೆ. ದಿವಂಗತ ಸ್ವಾಮಿ ಶ್ರದ್ಧಾನಂದರನ್ನು ಆಗ ಹಾಗೆ ಕರೆಯುತ್ತಿದ್ದರು. ಒಂದೇ ಸಲ ಹಲವಾರು ಮಹಾತ್ಮರು ಇರಲಾರರು. ನಾನು ದಕ್ಷಿಣ ಆಫ್ರಿಕಾದಲ್ಲಿದ್ದಾಗಲೇ ಮುನ್ಷೀರಾಮರ ಮಹಾಕಾರ್ಯ ಅವರಿಗೆ ಆ ಬಿರುದನ್ನು ತಂದುಕೊಟ್ಟಿದ್ದು

ದನ್ನು ಬಲ್ಲೆ. ಆದರೆ ಎಷ್ಟೋ ಅಪರಿಚಿತ ಮೂಲೆಯಲ್ಲಿದ್ದರೂ ಜನ ಸೇವಕರನ್ನು ಹುಡುಕುವ ಚಪಲ ಮಾಲವೀಯರಿಗೆ ಇತ್ತು.

ಮಾಲವೀಯರಿಗಿಂತ ಹೆಚ್ಚಿನ ಭಿಕ್ಷುಕ ಈ ಭೂಮಿಯಲ್ಲೇ ಇಲ್ಲ ಎಂಬುದನ್ನು ಎಲ್ಲರೂ ಬಲ್ಲರು. ತಮಗಾಗಿ ಎಂದೂ ಅವರು ಬೇಡಲಿಲ್ಲ. ದೇವರ ಕೃಪೆಯಿಂದ ಅವರಿಗೆ ಯಾವ ಕೊರತೆಯೂ ಇರಲಿಲ್ಲ. ಆದರೆ ತಮ್ಮದೆಂದು ತಾವು ಆರಿಸಿಕೊಂಡ ಕಾರ್ಯಕ್ಕಾಗಿ ಸ್ವೇಚ್ಛೆಯಿಂದ ಭಿಕ್ಷುಕ ರಾದರು. ದೇವರು ಅವರ ಭಿಕ್ಷಾಪಾತ್ರೆಯು ತುಳುಕಿ ಚೆಲ್ಲುವಂತೆ ಸದಾ ತುಂಬಿಸಿದ. ಆದರೆ ಅವರದು ಹಿಂಗುವ ಹಸಿವೇ ಅಲ್ಲ. ತಮಗೆ ಬೇಕಾದ ಹಲವು ಕೋಟಿ ರೂಪಾಯಿ ಸಿಕ್ಕರೂ ಇನ್ನೂ ಬೇಡುತ್ತಿದ್ದಾರೆ. ಈಗ ಕೂಡ ನಮ್ಮ ಅಧ್ಯಕ್ಷರಾದ ದರ್ಭಾಂಗಾ ಮಹಾರಾಜರಿಂದ ಒಳ್ಳೆಯ ದಾನ ಪಡೆದೆ ಎಂದು ನನ್ನ ಕಿವಿಯಲ್ಲಿ ಹೇಳಿದರು.

ಪರಿಶುದ್ಧ ಸರಳ ಜೀವನ, ಉನ್ನತ ವಿಚಾರಗಳ ಸಜೀವ ದೃಷ್ಟಾಂತ ವಾಗಿ ಇನ್ನೂ ನಮ್ಮ ನಡುವೆ ಅವರು ಇರುವುದು ನಮ್ಮ ಭಾಗ್ಯ. ದೈಹಿಕ ವಾಗಿ ನಮ್ಮ ನಡುವೆಯೇನೋ ಅವರು ಇದ್ದಾರೆ. ಅವರ ಶ್ರೇಷ್ಠಾತಿಶ್ರೇಷ್ಠ ಉದಾಹರಣೆಯ ಸ್ಪರ್ಶಮಾತ್ರ ನಮಗೆ ಆಗಿಲ್ಲ. ಆ ತಪ್ಪು ಸಂಪೂರ್ಣ ವಾಗಿ ನಿಮ್ಮದೇ. ಅವರದಲ್ಲ. ಭೂಮಿಯ ಮೇಲೆ ಎಲ್ಲರಿಗೂ ಸೂರ್ಯ ಬೆಳಕು, ಶಾಖಕೊಡುತ್ತಾನೆ, ಆದರೆ ಬಾಗಿಲು ಬಿಗಿದು ಕೊಂಡವರಿಗೆ ಸೂರ್ಯ ಏನು ಸಹಾಯ ಮಾಡಬಲ್ಲ? ಮಾಲವೀಯರನ್ನು ಹೊಗಳಲು ನಾನು ಇಲ್ಲಿಗೆ ಬಂದಿಲ್ಲ. ಈ ವೇದಿಕೆ ಹೊಗಳಿಕೆಯಿಂದ ಪ್ರತಿಧ್ವನಿಸುತ್ತಿದೆ. ಆ ಹೊಗಳಿಕೆ ಎಲ್ಲಕ್ಕೂ ಅವರು ಪಾತ್ರರು. ನಾನು ಈಗ ಈ ವಿಶ್ವವಿದ್ಯಾ ಲಯದ ಪ್ರಾಧ್ಯಾಪಕರು, ವಿದ್ಯಾರ್ಥಿಗಳಿಗೆ ಒಂದೆರಡು ಮಾತು ಹೇಳ ಬೇಕು. ಶ್ರೀ ರಾಧಾಕೃಷ್ಣನ್ ಅವರ ಆಮಂತ್ರಣವನ್ನು ಒಪ್ಪಿಕೊಂಡ ಮೇಲೆ ನನ್ನ ಭಾಷಣದ ಪ್ರತಿ ಒಂದನ್ನು ಕಳಿಸಿಕೊಡುವಂತೆ ಕೇಳಿದರು. 'ನನಗೆ ಬರೆಯಲು ಬಿಡುವಿಲ್ಲ, ಏನು ಹೇಳಬೇಕೋ ಗೊತ್ತಿಲ್ಲ' ಎಂದು ಅವರಿಗೆ ಹೇಳಿದೆ. ವಿದ್ವಾಂಸರ ನಡುವೆ ಇದ್ದಾಗ ನನಗೆ ಅಂಜಿಕೆ ಹುಟ್ಟು ತ್ತದೆ. ಭಾರತಕ್ಕೆ ಹಿಂದಿರುಗಿ ಬಂದಾಗಿನಿಂದ ದೀನ ದಲಿತರ ನಡುವೆ ಸೇರಿ ಕೊಂಡಿದೇನೆ. ಕಾಂಗ್ರೆಸ್ ಪ್ರತಿನಿಧಿಸುವುದು ಅವರನ್ನು. ಬಡವರ ನಡುವೆ

ಇದೇನೆ. ಅವರ ನಡುವೆ ನನಗೆ ಯಾವ ಸಂಕೋಚವೂ ಇಲ್ಲ, ಸಂದೇಹವೂ ಇಲ್ಲ. ನಿಮ್ಮ ನಡುವೆ ನನ್ನ ಬಾಯಿಗೆ ಬೀಗ ಮುದ್ರೆಹಾಕಿದಂತೆ ಇರುತ್ತದೆ. ನಾನು ರಾಧಾಕೃಷ್ಣನ್‌ಗೆ ಇಷ್ಟೇ ಹೇಳಿದೆ. ನಿಜವಾಗಿ ನಿಮ್ಮ ನಡುವೆ ನನಗೆ ಬಾಯಿ ಕೆಡುತ್ತದೆ. ಆ ಗಳಿಗೆಯಲ್ಲಿ ಏನು ಸ್ಫೂರ್ತಿ ಬರುತ್ತದೆಯೋ ನೋಡೋಣ ಎಂದೆ. ಸ್ಫೂರ್ತಿಯೇನೋ ಬಂತು. ಆದರೆ ನನ್ನಸ್ಪಷ್ಟ ಅಲಂಕಾರರಹಿತ ಭಾಷೆಯನ್ನು ನೀವು ಹೇಗೆ ಸ್ವಾಗತಿಸುತ್ತೀರೋ!

ಒಬ್ಬರಾದ ಮೇಲೆ ಒಬ್ಬರು ಭಾಷಣ ಮಾಡಿ ವೇದಿಕೆಯಿಂದ ಇಳಿದಾಗ ಯಾರಾದರೂ ಹಿಂದೀ ಅಥವಾ ಉರ್ದು ಅಥವಾ ಹಿಂದೂಸ್ಥಾನಿಯಲ್ಲಿ ಹೋಗಲಿ ಸಂಸ್ಕೃತದಲ್ಲಿ ಅಥವಾ ಮರಾಠಿಯಲ್ಲಿ ಯಾವುದಾದರೂ ಭಾರತೀಯ ಭಾಷೆಯಲ್ಲಿ ಮಾತಾಡುವವರು ಬಂದಾರೇನೋ ಎಂದು ತವಕಗೊಂಡು ಎದುರು ನೋಡಿದೆ. ಆದರೆ ನನಗೂ ನಿಮಗೂ ಅಂಥ ಭಾಗ್ಯ ಲಭಿಸಲಿಲ್ಲ. ಏಕೆ? ನಾವು ಗುಲಾಮರು. ನಮ್ಮನ್ನು ಗುಲಾಮಗಿರಿಯಲ್ಲಿಟ್ಟಿರುವವರ ಭಾಷೆಯನ್ನು ಅಪ್ಪಿಕೊಂಡಿದೇವೆ. ನಮ್ಮ ದೋಷ ಪ್ರತಿಯೊಂದಕ್ಕೂ ಇಂಗ್ಲಿಷರನ್ನು ನಿಂದಿಸುವುದು ಒಂದು ಸಂಪ್ರದಾಯವಾಗಿ ಬಿಟ್ಟಿದೆ. ಅವರು ಮಾಡಿದ ಅನೇಕ ಕೆಲಸಗಳಿಗಾಗಿ ಅವರನ್ನು ನಿಂದಿಸಲು ನಾನು ಹಿಂದೆ–ಮುಂದೆ ನೋಡಿಲ್ಲ. ಆದರೆ ಇಂಗ್ಲಿಷನ್ನೆ ಪ್ರಕಟಣೆಯ ಮಾಧ್ಯಮವಾಗಿ ಮಾಡುವಂತೆ ಬಲಾತ್ಕಾರ ಮಾಡಿದಾರೆ ಎಂದು ಯಾವಾಗಲೂ ನಿಂದಿಸಿಲ್ಲ. ನಮ್ಮ ಬಾಳಿನ ಅಮೂಲ್ಯ ಕಾಲವನ್ನು ಇಂಗ್ಲಿಷ್ ಭಾಷೆ ಕಲಿಯಲು ವಿನಿಯೋಗಿಸುತ್ತೇವೆ. ಇಂಗ್ಲಿಷರವನು ಮಾತಾಡಿದ ಹಾಗೆ ಇಂಗ್ಲಿಷ್ ಮಾತಾಡಬೇಕು ಎಂಬುದೇ ನಮ್ಮ ಹಿರಿಯಾಸೆ. ನಿರ್ದೋಷವಾಗಿ ಇಂಗ್ಲಿಷನ್ನು ಮಾತಾಡಿದೆ ಎಂದು ಇಂಗ್ಲಿಷರವನು ನಮ್ಮ ಬೆನ್ನು ತಟ್ಟಿದರೆ ಹೆಮ್ಮೆಯಿಂದ ನಮ್ಮ ಎದೆ ಉಬ್ಬುತ್ತದೆ. ಇಂಗ್ಲಿಷ್ ಭಾಷೆ ಕಲಿಯಲು ನಾವು ಕಳೆಯುವ ಕಾಲ ನಮ್ಮ ಯೌವನಗಳನ್ನು ಯೋಚಿಸಿ. ಅದೇನು ನಮ್ಮ ತಾಯಿ ನುಡಿಯೆ? ಸಾಮಾನ್ಯ ಗುಣಕಾರದಿಂದ ಲೆಕ್ಕ ಹಾಕಿ, ರಾಷ್ಟ್ರಕ್ಕೆ ಎಷ್ಟು ವರ್ಷ ನಷ್ಟವಾಗುತ್ತದೆಯೋ ಎಷ್ಟು ಶಕ್ತಿ ಕ್ಷಯವಾಗುತ್ತದೆಯೋ ಇದರಿಂದ.

ಆದರೂ ಇಷ್ಟೆಲ್ಲ ಈ ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿದೆ. ಭಾರತೀಯ ಸಂಸ್ಕೃತಿಯ ಮೂರ್ತಿವಂತ ಸ್ವರೂಪ ಎಂದು ಇವತ್ತು ಹೊಗಳಿಸಿಕೊಂಡಿದೆ ಇದು. ಆಕರ್ಷಕ ಸಂಭಾವನೆ ಗಳನ್ನು ಕೊಟ್ಟು ಅತ್ಯುತ್ತಮ ಶಿಕ್ಷಕರನ್ನು ಸೆಳೆತರಬೇಕೆಂದು ಮಾಲವೀಯರು ಕೈಲಾದ್ದೆಲ್ಲ ಮಾಡಿದಾರೆ. ಉಳಿದುದನ್ನು ಮಾಡಲು ಆಗಲಿಲ್ಲ ಅವರಿಗೆ. ಅವರ ತಪ್ಪಲ್ಲ. ಹಿಂದೀ ಇಂಗ್ಲಿಷಿನ ಸ್ಥಾನಕ್ಕೆ ಬರಲಿಲ್ಲ. ಶಿಕ್ಷಕರು ತಾವು ಪಡೆದು ತಂದ ಸಂಪ್ರದಾಯದ ಫಲ. ಅವರು ಏನು ಕೊಟ್ಟರೆ ಅದರಲ್ಲೇ ತೃಪ್ತಿ ವಿದ್ಯಾರ್ಥಿಗಳಿಗೆ. ಹಾಗಿರಬೇಕಾದ್ದಿಲ್ಲ. ಬೇರೆ ಚಿಲ್ಲರೆ ಕಾರಣಗಳಿಗಾಗಿ ವಿದ್ಯಾರ್ಥಿಗಳು ಆಗಾಗ ಬಹಿಷ್ಕರ ಹೂಡುತ್ತಾರೆ, ಉಪವಾಸವನ್ನೂ ಮಾಡುತ್ತಾರೆ. ರಾಷ್ಟ್ರಭಾಷೆಯಲ್ಲಿಯೇ ಪಾಠ ನಡೆಯಬೇಕು ಎಂದು ಏಕೆ ಒತ್ತಾಯ ಮಾಡುವುದಿಲ್ಲ? ಅಂಧ್ರಪ್ರಾಂತದಿಂದ ೨೫೦ ಜನ ವಿದ್ಯಾರ್ಥಿಗಳು ಬಂದಿದಾರಂತೆ. ಅವರು ರಾಧಾಕೃಷ್ಣನ್ ಬಳಿಗೆ ಹೋಗಿ, ಒಂದು ಆಂಧ್ರವಿಭಾಗ ತೆರೆದು ನಮಗೆ ತೆಲುಗಿನಲ್ಲಿ ಪಾಠ ಹೇಳಿ ಎಂದು ಕೇಳಲಿ, ರಾಷ್ಟ್ರಭಾಷೆಯನ್ನು ಕಲಿಯುವುದಿಲ್ಲವಾದರೆ.

ಜಪಾನೇನು ಅಂಥ ಶ್ರೇಷ್ಠ ರಾಷ್ಟ್ರವೆಂದು ನಾನು ತಿಳಿದಿಲ್ಲ. ಆದರೆ ಏಷ್ಯಾದಲ್ಲಿ ಶ್ರೇಷ್ಠ ಎನ್ನುತ್ತಾರೆ ಅದನ್ನು ಏಕೆ? ಪಶ್ಚಿಮದ ರಾಷ್ಟ್ರಗಳ ಆಧಿಪತ್ಯವನ್ನು ಯಶಸ್ವಿಯಾಗಿ ಎದುರಿಸಿದೆ. ಜಪಾನಿನಲ್ಲಿ ಏನಾಗಿದೆ ಗೊತ್ತೆ? ಅಲ್ಲಿ ಶಾಲೆ ಕಾಲೇಜುಗಳಲ್ಲಿ ಸಾವಿರಾರು ಜನ ಮಕ್ಕಳು ಇಂಗ್ಲಿಷಿನಲ್ಲಿ ಕಲಿಯುವುದಿಲ್ಲ, ಜಪಾನೀ ಭಾಷೆಯ ಮೂಲಕ. ಅವರ ಲಿಪಿ ಬೇರೆ. ಆದರೆ ಅದು ಅವರ ಕಲಿತಕ್ಕೆ ಅಡಚಣೆ ಆಗಿಲ್ಲ, ರೋಮನ್ ಲಿಪಿಗಾಗಿ ಅವರು ಅದನ್ನು ಬಿಟ್ಟು ಕೊಟ್ಟಿಲ್ಲ. ಇಂಗ್ಲಿಷನ್ನು ಇತರ ಭಾಷೆಗಳನ್ನು ಅವರು ಬಹಿಷ್ಕರಿಸಿಲ್ಲ. ತಮ್ಮ ಶಕ್ತಿಯನ್ನು ದುಂದು ಮಾಡರು. ಪರಭಾಷೆಗಳನ್ನು ಕಲಿಯುವ ಅಗತ್ಯ ಇದ್ದವರು ತಮ್ಮ ಜಪಾನೀ ವಿಚಾರ—ಜ್ಞಾನಗಳನ್ನು, ಪಶ್ಚಿಮದಿಂದಲೇ ತಂದುಕೊಳ್ಳಬೇಕಾದುದರಿಂದ ತಂದುಕೊಟ್ಟು, ಸಂಪನ್ನಗೊಳಿಸಲು ಕಲಿಯುತ್ತಾರೆ. ಏಕೆಂದರೆ, ಜಪಾನೀ ತರುಣರ ಮನಸ್ಸು ನವೋನವ ಆಗಿದೆ. ಚುರುಕು ಆಗಿದೆ.

ಹಾಗೆ ಲಭಿಸಿದ ಜ್ಞಾನ ರಾಷ್ಟ್ರದ ಸೊತ್ತು. ನಮಗೋ, ಸರಕಾರಿ ಕಚೇರಿಯಲ್ಲಿ ಗುಮಾಸ್ತೆ, ವಕೀಲ, ಬ್ಯಾರಿಸ್ಟರು, ನ್ಯಾಯಾಧಿಪತಿ ಆಗುವುದೇ ಮಹಾದಾಕಾಂಕ್ಷೆ, ಯಾವುದನ್ನು ಹೊಡೆದೋಡಿಸಬೇಕು ಎನ್ನುತ್ತೇವೋ ಅದಕ್ಕೇ ನಮ್ಮ ಅಸಹಾಯಕ ಸೇವೆ—ಸಹಕಾರ. ಹೋಗಲಿ, ಇಂಗ್ಲಿಷಿನ ಮೇಲೆ ಪ್ರಭುತ್ವವಾದರೂ ಬಂತೆ? ಇಲ್ಲ. ಎಷ್ಟೋ ಪತ್ರ ಬರುತ್ತವೆ, ನನಗೆ ಇಂಗ್ಲಿಷು ಕಲಿತವರಿಂದ, ಅವರಲ್ಲಿ ಕೆಲವರಿಗೆ ನಮ್ಮ ವಿಶ್ವವಿದ್ಯಾಲಯಗಳ ಉನ್ನತೋನ್ನತ ಪದವಿಗಳಿವೆ. ಅದರಲ್ಲಿ ಕಾಣುವ ಇಂಗ್ಲಿಷು ಭಾಷೆಯ ಅಜ್ಞಾನ ಶೋಚನೀಯ. ಇದಕ್ಕೆ ಕಾರಣ ಸರಳ. ಮಾಲವೀಯರು ರಾಧಾಕೃಷ್ಣನ್‌ರು ಕೋಟಿಗೊಬ್ಬರು. ಅವರು ಮಾಡಿದುದನ್ನು ಜನ ಸಹಸ್ರ ಮಾಡಲಾರರು.

ಇಂಗ್ಲಿಷ್ ಭಾಷಣಗಳನ್ನು ಕೇಳುತ್ತಿದ್ದಾಗ ನಮ್ಮ ಜನರ ಸ್ಥೈರ್ಯ—ಸಹಜ ಸೌಜನ್ಯಗಳನ್ನು ನೋಡಿ ಆಶ್ಚರ್ಯಗೊಂಡೆ, ಬೆರಗಾದೆ. ಇಲ್ಲಿ ಹೇಳಿದ ಒಂದು ಮಾತೂ ಅವರಿಗೆ ಅರ್ಥ ಆಗದಿದ್ದರೂ ನಮ್ಮ ಮೇಲೆ ಬಂದು ಬೀಳಲಿಲ್ಲ. ಬಿದ್ದರೆ ಬೀಳಬಹುದಾಗಿತ್ತು. ಈ ವಿಷಯದಲ್ಲಿ ನಿಮಗೇನಾದರೂ ಸಂದೇಹ ಇದ್ದರೆ ವಿದ್ಯಾರ್ಥಿಗಳಲ್ಲಿ ಕೂಡ ಇದನ್ನು ಅರ್ಥ ಮಾಡಿ ಕೊಂಡವರು ಕೆಲವರೇ ಎಂದು ಕೈಯೆತ್ತಿಸಿ ತೋರಿಸುತ್ತೇನೆ.

ಇನ್ನೊಂದು ವಿಷಯದ ಕಡೆ ನಿಮ್ಮ ಗಮನ ಸೆಳೆಯಲು ಮನಸ್ಸಾಗುತ್ತಿದೆ. ಇಲ್ಲಿ ನಾನು ನಿರೀಕ್ಷಿಸದಿದ್ದ ಒಂದು ದೃಶ್ಯವನ್ನು ಬೆಳಗ್ಗೆ ನೋಡಿದೆ. ಬೆಳಗ್ಗೆ ವಸಂತ ಪಂಚಮಿ ಮೆರವಣಿಗೆ. ಹುಡುಗರು ಮಾಲವೀಯರ ಮನೆಯ ಮುಂದೆ ಹಾದು ಹೋಗಬೇಕಾಗಿತ್ತು. ಅವರ ನಿಶ್ಶಬ್ದ ಆಶೀರ್ವಾದ ಪಡೆದು, ಅವರು ನಡೆಯುತ್ತಿದ್ದ ರೀತಿಯಲ್ಲಿ ಶೀರ ಪ್ರಾಥಮಿಕ ಶರೀರ ಶಿಕ್ಷಣವೂ ಅವರಿಗೆ ಇಲ್ಲ ಎನಿಸುತ್ತಿತ್ತು. ನೆಟ್ಟಗೆ ನಿಂತು, ಕ್ರಮವಾಗಿ ಹೆಜ್ಜೆ ಹಾಕುತ್ತಾ ಮುಂದುವರಿಯುವ ಸಿಪಾಯಿಗಳಂತೆ ಹೋಗದೆ ಚೆಲ್ಲಾಪಿಲ್ಲಿಯಾಗಿ ಹೋದರು.

ವಿಶ್ವವಿದ್ಯಾಲಯದ ಮಹಾದ್ವಾರಕ್ಕೆ ಬಂದಾಗಲೇ ನಿಮ್ಮನ್ನು ಎದುರುಗೊಳ್ಳುವ ದೃಶ್ಯದ ಬಗ್ಗೆ ಒಂದು ಮಾತನ್ನು ಹೇಳದಿರಲಾರೆ. ಜೀವಿದರೆ ಸಾಕು ಹಣ ಸಿಗುತ್ತದೆ ಮಾಲವೀಯರಿಗೆ. ಈ ಭವ್ಯ ಸೌಧಕ್ಕೆ ಸರಿ

ಯಾಗಿದೆ ವೈಭವದಲ್ಲಿ ಮಹಾದ್ವಾರ. ಆ ದ್ವಾರದ ತಲೆಯ ಮೇಲೆ ನಾನು ಕಂಡದ್ದೇನು? ಆ ಸ್ಥಳವೆಲ್ಲ ಮುಕ್ಕಾಲು ಪಾಲು ‘ಬನಾರಸ್ ಹಿಂದೂ ಯೂನಿವರ್ಸಿಟಿ’ ಎಂಬ ಇಂಗ್ಲಿಷು ಅಕ್ಷರಗಳಿಗೆ ಮೀಸಲು. ಹಿಂದೀಗೆ ಕೊಟ್ಟಿರುವುದು ಕಾಲುಭಾಗ. ಅದರ ಮೂಲಕ ನಿಮಗೆ ಜ್ಞಾನ ಸಂಪಾದನೆ ಆಗಬೇಕು. ಇಂಗ್ಲೀಷ್ ಭಾಷೆ ಏಕೆ ಬೇಕಾಗಿತ್ತೋ? ಈ ವಿಷಯಗಳ ಮೇಲ್ವಿಚಾರಕರಾಗಿದ್ದವರು ಕೊಂಚ ಯೋಚನೆಮಾಡಿದ್ದರೆ ಅಲ್ಲಿ ಬೇಕಾಗಿದ್ದುದು ದೇವನಾಗರಿಯಲ್ಲಿ ಹೆಸರು, ಪರ್ಷಿಯನ್ ಲಿಪಿಯಲ್ಲೂ. ಮಾಲವೀಯರ ವಿಶ್ವವಿದ್ಯಾಲಯ, ರಾಧಾಕೃಷ್ಣನ್—ಇವರ ಮತೀಯ ಸಾಮರಸ್ಯದ ಆಸೆಗೆ ಕುರುಹಾಗುತ್ತಿತ್ತು ಅದು. ಈ ಭಾಗದಲ್ಲಿ ಹಿಂದೀ, ಉರ್ದು ಎರಡೂ ಅರ್ಥವಾಗುತ್ತವೆ. ಇಂಗ್ಲಿಷು ಕಲಿಯಲು ನಾವು ವ್ಯರ್ಥ ಮಾಡಿದ ವರ್ಷಗಟ್ಟಲೆ ಕಾಲ ನಮ್ಮ ಬುದ್ಧಿಗೆ ಮಂಕು ಮುಚ್ಚಿದೆ ನಮ್ಮ ನೆನಪನ್ನು ಭಾವನಾಬಲವನ್ನು ತೊಡಕು ಮಾಡಿದೆ.

ಹಿಂದೀ ಭಾಷೆ ಇಲ್ಲದವನಿಗೆ ಹಿಂದೀ ಅಥವಾ ಹಿಂದೂಸ್ತಾನಿ ಕಲಿಯುವುದು ಕಷ್ಟವೇನಲ್ಲ. ಗುಜರಾತೀ, ಬಂಗಾಳೀ, ಮರಾಠೀ ಗೊತ್ತಿದ್ದವರಿಗೆ ನಾನು ಬೇಕಾದರೆ ಮೂರು ತಿಂಗಳಲ್ಲಿ ಹಿಂದೀ ಕಲಿಸುತ್ತೇನೆ. ದಕ್ಷಿಣ ಭಾರತದ ಭಾಷೆಗಳಲ್ಲಿ ಕೂಡಾ — ತಮಿಳು ತೆಲುಗು ಮಲೆಯಾಳಿ ಕನ್ನಡ ಸಂಸ್ಕೃತಮಯ, ನಮ್ಮಲ್ಲಿ ಸ್ವಲ್ಪ ಹುರುಪು, ದೇಶಾಭಿಮಾನ ಇದ್ದಿದ್ದರೆ ಸಂಸ್ಕೃತಜನ್ಯ ಭಾಷೆಗಳನ್ನೆಲ್ಲ ಮತ್ತು ದಕ್ಷಿಣ ಭಾಷೆಗಳನ್ನೆಲ್ಲ ದೇವನಾಗರಿ ಲಿಪಿಯಲ್ಲಿ ಬರೆಯಲು ನಿರ್ಧರಿಸಬಹುದಾಗಿತ್ತು. ಈ ಭಾಷೆಗಳಿಗೆ ಸರ್ವಸಾಮಾನ್ಯ ಶಬ್ದ ಭಾಂಡಾರವೇ ಅಲ್ಲದೆ ಲಿಪಿಗಳಲ್ಲಿ ಎದ್ದು ಕಾಣುವ ಸಾಮ್ಯವೂ ಇದೆ. ನಮ್ಮ ಮನಸ್ಸು ಬಳಲಿ ಬೇಸತ್ತಿರದಿದ್ದರೆ ಸುಲಭವಾಗಿ ಐದಾರು ಭಾರತೀಯ ಭಾಷೆಗಳನ್ನು ಕಲಿಯಬಹುದು. ಉರ್ದು ಕೂಡ ಕಲಿಯಲು ಕಷ್ಟವಲ್ಲ, ಉರ್ದು ಪಂಡಿತರು ಅದರಲ್ಲಿ ಅರಬ್ಬೀ ಫಾರಸೀ ಶಬ್ದಗಳನ್ನು ತುರುಕುವುದೊಂದು ಅಗ್ಗಳಿಕೆ ಎಂದುಕೊಳ್ಳದಿದ್ದರೆ, ಹಿಂದೀ ಪಂಡಿತರು ಸಂಸ್ಕೃತವನ್ನು ತುರುಕುವಂತೆ.

ಇನ್ನೊಂದು ವಿಚಾರವನ್ನು ಹೇಳಬಯಸುತ್ತೇನೆ. ಪ್ರತಿಯೊಂದು ವಿಶ್ವವಿದ್ಯಾಲಯಕ್ಕೂ ಅದರದರ ಸಂಪ್ರದಾಯ ಪರಂಪರೆ, ವಿಶಿಷ್ಟ ಲಕ್ಷಣ

ಇರುತ್ತವೆ. ಆಕ್ಸ್‌ಫಡ್–ಕೇಂಬ್ರಿಜ್ ಹಾಗೆ ಕಾಯ್ದುಕೊಂಡಿವೆ. ಆದರೆ ನಮ್ಮ ವಿಶ್ವವಿದ್ಯಾನಿಲಯಗಳು ಪಶ್ಚಿಮದಲ್ಲಿರುವುದರ ಒತ್ತುವ ಕಾಗದ ಆಗಿವೆ. ಪಶ್ಚಿಮದ ವಿಶ್ವವಿದ್ಯಾಲಯಗಳ ಬಾಹ್ಯ ಲಕ್ಷಣಗಳನ್ನು ಮಾತ್ರ ನಾವು ಅನುಕರಿಸಿದ್ದೇವೆ. ಇಲ್ಲಿ ಜೀವಂತ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಿದ್ದೇವೆ ಎಂದು ಆತ್ಮಪ್ರಶಂಸೆ ಮಾಡಿಕೊಂಡಿದ್ದೇವೆ. ನಮ್ಮ ಜನತೆಯ ಆವಶ್ಯಕತೆಗಳನ್ನು ಪ್ರತಿಬಿಂಬಿಸುತ್ತವೆಯೆ ಇವು? ಅವಕ್ಕೆ ಉತ್ತರಕೊಡುತ್ತವೆಯೆ? ಭಾರತದಲ್ಲಿ ಬೇರೆಲ್ಲಿಯೂ ಇಲ್ಲದ ರೀತಿಯಲ್ಲಿ ನಿಮ್ಮಲ್ಲಿ ಶಿಲ್ಪಿವಿದ್ಯೆ, ತಂತ್ರವಿದ್ಯೆ ಹೇಳಿಕೊಡುತ್ತಾರಂತೆ. ಅದು ನಿಮ್ಮ ವಿಶೇಷ ಲಕ್ಷಣ ಎಂದು ಹೇಳುತ್ತೀರಿ. ಇದು ವಿಶೇಷ ಲಕ್ಷಣ ಎನ್ನುವುದಿಲ್ಲ ನಾನು. ಬೇರೆ ಒಂದನ್ನು ಸೂಚಿಸುತ್ತೇನೆ ನಿಮಗೆ. ನಿಮ್ಮ ವಿಶ್ವವಿದ್ಯಾನಿಲಯಕ್ಕೆ ಅಲೀಗಢದ ತರುಣರನ್ನು ಆಕರ್ಷಿಸಿದೀರಾ? ಅವರೊಡನೆ ಏಕರೂಪವನ್ನು ಸಾಧಿಸಿದೀರಾ? ಅದು ನಿಮ್ಮ ವಿಶೇಷ ಕಾರ್ಯ, ನಿಮ್ಮ ವಿಶ್ವವಿದ್ಯಾನಿಲಯದ ವಿಶಿಷ್ಟ ಕಾಣಿಕೆ. ಹಣ ಬಂದಿದೆ, ದೇವರ ದಯೆಯಿಂದ ಮಾಲವೀಯರು ಇನ್ನೂ ಕೆಲವು ಕಾಲ ನಮ್ಮ ನಾಡಿನಲ್ಲಿದ್ದರೆ ಹಣ ಬರುತ್ತದೆ. ಎಷ್ಟು ಹಣ ಬಂದರೂ ನಾವು ಬಯಸುವ ಪವಾಡ–ಹಿಂದೂ ಮುಸ್ಲಿಂ ಸೌಹಾರ್ದ ಅದರಿಂದ ಆಗುವುದಿಲ್ಲ. ಇಲ್ಲಿಗೆ ಬನ್ನಿ ಎಂದು ಮುಸ್ಲಿಮರನ್ನು ಕರೆಯಿರಿ. ಅವರು ನಿಮ್ಮ ಕೋರಿಕೆಯನ್ನು ತಿರಸ್ಕರಿಸಿದರೆ ಕಾಳಜಿ ಮಾಡಬೇಡಿ. ನೀವು ಅತ್ಯಮೋಘ ನಾಗರಿಕತೆಯೊಂದರ ಪ್ರತಿನಿಧಿಗಳು. ಲೋಕಮಾನ್ಯ ತಿಲಕರ ಪ್ರಕಾರ ಹತ್ತುಸಾವಿರ ವರ್ಷ ಹಿಂದಿನದು ಇದು. ಈಗಿನ ವಿದ್ವಾಂಸರ ಪ್ರಕಾರ ಇನ್ನೂ ಹಿಂದಿನದು. ಆ ನಾಗರಿಕತೆಯ ವಿಶಿಷ್ಟ ಲಕ್ಷಣ ಜಗತ್ತಿನಲ್ಲಿ ಮೈತ್ರೀ ಬೆಳಸುವುದು, ಶತ್ರು ಎಂದುಕೊಂಡವರನ್ನು ಮಿತ್ರರನ್ನಾಗಿ ಮಾಡುವುದು. ಪವಿತ್ರ ಗಂಗಾನದಿಯಂತೆ ನಮ್ಮ ನಾಗರಿಕತೆ ಹೊರಗಿನ ಎಷ್ಟೋ ಹೊಳೆಗಳನ್ನು ಬೆರೆಸಿಕೊಂಡಿದೆ. ಹಿಂದೂ ಸಂಸ್ಕೃತಿಯನ್ನು ಪ್ರತಿನಿಧಿಸಲು ಪ್ರಯತ್ನಿಸುತ್ತಿರುವ ಹಿಂದೂ ವಿಶ್ವವಿದ್ಯಾನಿಲಯ ಇತರ ಸಂಸ್ಕೃತಿಗಳಲ್ಲಿರುವ ಉತ್ತಮವಾದ ಅಂಶವನ್ನೆಲ್ಲ ಆಹ್ವಾನಿಸಿ ತನ್ನೊಳಗೆ ಕೂಡಿಸಿಕೊಂಡು ಜಾತೀಯಮತೀಯ ಐಕಮತ್ಯ ಸಾಮರಸ್ಯಗಳಿಗೆ ಮೇಲ್ಪಂಕ್ತಿಯಾಗಲಿ ಎಂದು ನನ್ನ ಪ್ರಾರ್ಥನೆ. ಇದು ಅದರ ವಿಶಿಷ್ಟ ಲಕ್ಷಣ ಆಗಬೇಕು.

ಇದನ್ನು ರೂಪಿಸಲು ಇಂಗ್ಲಿಷ್ ಭಾಷೆ ನಿಮಗೆ ನೆರವಾಗದು. ನಮ್ಮ ಪುರಾತನ ವಿದ್ಯೆ ಇದನ್ನು ಕಲಿಸೀತು. ಸರಿಯಾದ ರೀತಿಯಲ್ಲಿ ಕಲಿತು ಅರ್ಥಮಾಡಿಕೊಂಡ ನಮ್ಮ ಧರ್ಮ ಗ್ರಂಥಗಳು ಇದನ್ನು ಮಾಡಿಯಾವು.

ಒಂದೇ ಮಾತು. ಮುಗಿಸುತ್ತೇನೆ. ಅರಮನೆಯಂಥ ವಿದ್ಯಾರ್ಥಿ ಭವನಗಳಲ್ಲಿ ವಾಸವಾಗಿದೀರಿ ನೀವು. ಅದೇ ಪಂಡಿತ್ ಮಾಲವೀಯರು ಸರಳತನದ ಪರಾಕಾಷ್ಠೆಯಲ್ಲಿ ವಾಸಮಾಡುತ್ತಿರುವ ಆ ಚಿಕ್ಕ ಕುಟೀರವನ್ನು ನೋಡಿ. ಎಳ್ಳಷ್ಟೂ ವೈಭವವಿಲ್ಲ. ಅವರ ಕೊಠಡಿಯೊಳಗೆ ಹೋಗಿ. ಅಲಂಕಾರದ ಮಾತೇ ಇಲ್ಲ. ಆವಶ್ಯಕವಿದ್ದಷ್ಟು ಸಲಕರಣೆ–ಸಾಮಗ್ರಿ, ಅವರ ಉತ್ತರಾಧಿಕಾರಿಗಳು ನೀವು. ಅವರಂತೆ ಬಾಳುವುದನ್ನು ಕಲಿಯಬೇಕು. ನಿಮ್ಮಲ್ಲಿ ಎಷ್ಟೋ ಜನ ಬಡ ತಂದೆ ತಾಯಿಯ ಮಕ್ಕಳು. ಬಡವರನ್ನು ಪ್ರತಿನಿಧಿಸಬೇಕು ನೀವು ಎಂಬುದನ್ನು ಮರೆಯಬೇಡಿ. ಸುಖ–ವಿಲಾಸಗಳ ಜೀವನ ನಮ್ಮ ದೇಶದ ಬಡತನಕ್ಕೆ ಅಸಂಗತ. ನೀವೆಲ್ಲರೂ ಸರಳ ಜೀವನ ಉನ್ನತ ಭಾವನೆಗಳ ಪುತ್ಥಳಿಗಳಾಗಿ, ಮಾಲವೀಯರಂತೆ. ನಿಮಗೆ ದೇವರು ದೀರ್ಘಾಯುಸ್ಸನ್ನೂ ನಿಮ್ಮ ಮನಸ್ಸಿಗೆ ಹಿಡಿಸಿದ್ದರೆ ನಾನು ಹೇಳಿದುದನ್ನೂ ನಡೆಸುವ ವಿವೇಕವನ್ನೂ ನೀಡಲಿ.[೪೮]

## ೩೯. ಅಖಿಲ ಭಾರತ ಕಾಂಗ್ರೆಸ್ ಸಮಿತಿಯಲ್ಲಿ
## (೧೯೪೨, ಜನವರಿ)

[ಜನವರಿ ಮಧ್ಯೆ ಹೊಸ ಸನ್ನಿವೇಶವನ್ನು ಪರಿಶೀಲಿಸಲು ಅ. ಭಾ. ಕಾಂ. ಸಮಿತಿ ವರ್ಧಾದಲ್ಲಿ ಸೇರಿತು. ಬ್ರಿಟಿಷರ ಮನಸ್ಸು ಸ್ವಲ್ಪವೂ ಬದಲಾಗಿರಲಿಲ್ಲ. ಡಿಸೆಂಬರ್ ಕೊನೆಯಲ್ಲಿ ರಾಜಕೀಯ ಪಕ್ಷಗಳ ನಾಯಕರು ಮಾಡಿದ ತೀರ್ಮಾನಗಳನ್ನೂ ರಾಜಕೀಯ ನಾಯಕರು ತತ್ಸಂಬಂಧವಾಗಿ ಕೊಟ್ಟ ಹಲವು ಹೇಳಿಕೆಗಳನ್ನೂ ಗಮನಿಸಿದೇನೆ. ಆದರೆ ಈ ಸರ್ವಸಮಾನ ವಿಪತ್ತಿನ ಸಮಯದಲ್ಲಿ ಎಲ್ಲರೂ ಒಗ್ಗಟ್ಟಾಗಿ ಸಹಕರಿಸಬೇಕು ಎಂದು ವೈಸರಾಯರು ಈಚೆಗೆ ಮಾಡಿದ ವಿನಂತಿಗೆ ತೃಪ್ತಿಕರ, ಪ್ರತಿಕ್ರಿಯೆ ಅವುಗಳಲ್ಲಿ ನನಗೆ ಕಾಣಲಿಲ್ಲವೆನ್ನಲು ವಿಷಾದ. ಹೀಗೆಂದರು ಅವರು. ಅ. ಭಾ. ಕಾಂ. ಸಮಿತಿಯ

ಕಾರ್ಯಕಲಾಪಗಳನ್ನು ಪ್ರಾರಂಭಿಸುತ್ತ ಮೌಲಾನಾ ಆಜಾದರು ೧೯೪೦ರ ಬೊಂಬಾಯಿ ತೀರ್ಮಾನಕ್ಕೆ ಕಾರಣವಾದ ಘಟನೆಗಳನ್ನೂ ಮಹಾತ್ಮಾ ಗಾಂಧೀಜೀಯು ನೇತೃತ್ವದಲ್ಲಿ ನಡೆದ ವೈಯುಕ್ತಿಕ ಸತ್ಯಾಗ್ರಹ ಚಳುವಳಿಯನ್ನೂ ವಿಮರ್ಶಿಸಿದರು. ಈಚಿನ ಬಾರ್ದೋಲಿ ತೀರ್ಮಾನವನ್ನು ಪ್ರಸ್ತಾಪಿಸಿ ತಾವೂ ವರ್ಕಿಂಗ್ ಕಮಿಟಿಯ ಇತರ ಸದಸ್ಯರೂ ಎಲ್ಲಿ ಮತಭೇದ ತಾಳಿದರೋ, ಅದರಿಂದ ಗಾಂಧೀಜೀ ಕಾಂಗ್ರೆಸ್ಸಿನ ಅಧಿಕೃತ ನಾಯಕತ್ವದಿಂದ ಬಿಡುಗಡೆ ಪಡೆಯಲು ಹೇಗೆ ತೀರ್ಮಾನಿಸಿದರೋ ತಿಳಿಸಿದರು. ಅಹಿಂಸೆಯ ಆಧಾರದ ಮೇಲೆ ಗಾಂಧೀಜೀ ಯುದ್ಧದಲ್ಲಿ ಭಾಗ ವಹಿಸಲು ವಿರುದ್ಧ. ರಾಜಕೀಯ ಕಾರಣಗಳಿಗಾಗಿ ತಾವು ವಿರುದ್ಧ. ಬಾರ್ದೋಲಿ ತೀರ್ಮಾನ ಬೇರೇನೂ ಅಲ್ಲ. ಕಾಂಗ್ರೆಸ್ಸಿನ ಸುಪ್ರಸಿದ್ಧ ನಿಲುವಿನ ಪುನರುಚ್ಚಾರವದು. ಗಾಂಧೀಜೀಗೂ ಕಾಂಗ್ರೆಸ್ಸಿಗೂ ಇರುವ ಸಂಬಂಧ ಅಂತವಿಲ್ಲದುದು. ಸಾವು ಒಂದೇ ಅದನ್ನು ಕೊನೆಗಾಣಿಸಬಲ್ಲದ್ದು.

ಆಮೇಲೆ ಆಜಾದರು ಗಾಂಧೀಜೀಯನ್ನು ಭಾಷಣ ಮಾಡಲು ಪ್ರಾರ್ಥಿಸಿದರು. ಹಿಂದಿಯಲ್ಲಿ ಭಾಷಣ ಮಾಡಿದರು ಗಾಂಧೀಜೀ.]

ಮೌಲಾನಾ ನನ್ನನ್ನು ಮುಗಿಲಿಗೆ ಏರಿಸಿದಾಗ ಬಹಳ ಗಾಬರಿ ಆಯಿತು. ನಾನು ಗಾಳಿಯಲ್ಲಿ ಜೀವಿಸುವುದಿಲ್ಲ. ಮಣ್ಣಿನ ಮೇಲೆ ಇದೇನೆ. ಮಣ್ಣಿನಂತವನು. ವಿಮಾನದಲ್ಲಿ ಎಂದೂ ಕೂತಿಲ್ಲ ನಾನು. ನಿಮ್ಮ ಹಾಗೆಯೆ ಸಾಮಾನ್ಯ ಮಣ್ಣಿನಿಂದ ಆದ ಸಾಧಾರಣ ಮರ್ತ್ಯ.

ಬಾರ್ದೋಲಿಯಲ್ಲಿ ವರ್ಕಿಂಗ್ ಕಮಿಟಿಯ ಮುಂದೆ ಬಂದಿರದಿದ್ದರೆ ಅಹಿಂಸೆಯ ಪ್ರಶ್ನೆ, ಈಗ ನಿಮ್ಮ ಎದುರಿಗೆ ಬರುತ್ತಿರಲಿಲ್ಲ. ಬಂದದ್ದೂ ಒಳಿತೇ ಆಯಿತು. ಪರಿಣಾಮ ಒಳ್ಳೆಯದೇ ಆಯಿತು, ಕೆಟ್ಟದಾಗಲಿಲ್ಲ. ಈ ವಿಷಯವಾಗಿ ಏನಾದರೂ ಹೇಳುವ ಮೊದಲು ಒಂದೆರಡು ಮಾತನ್ನು ಸ್ಪಷ್ಟೀಕರಿಸುತ್ತೇನೆ.

ನಿಮ್ಮ ಹಾಗೆಯೆ ನಾನೂ ಸಾಮಾನ್ಯ ಮನುಷ್ಯ. ಹಾಗಿಲ್ಲದಿದ್ದರೆ ಇಪ್ಪತ್ತು ವರ್ಷ ನಾವು ಕೂಡಿ ಕೆಲಸ ಮಾಡುತ್ತಿರಲಿಲ್ಲ. ನನಗೆ ಅಹಿಂಸೆ ಒಂದು ಶ್ರದ್ಧೆ, ನನ್ನ ಬಾಳಿನ ಉಸಿರು. ಆದರೆ ಒಂದು ಶ್ರದ್ಧೆಯಾಗಿ ಭಾರತದ ಮುಂದೆ ನಾನು ಅದನ್ನು ಮಂಡಿಸಿಲ್ಲ. ಖಾಸಗಿ ಅನೌಪಚಾರಿಕ ಮಾತುಕತೆಯ ಹೊರತು ಯಾರ ಮುಂದೆಯೂ ಹಾಗೆ ಮಂಡಿಸಿಲ್ಲ.

ಒಂದು ರಾಜಕೀಯ ಮಾರ್ಗ ಎಂದು ಕಾಂಗ್ರೆಸ್ಸಿನ ಮುಂದೆ ಇಟ್ಟೆ. ರಾಜಕೀಯ ಪ್ರಶ್ನೆಗಳನ್ನು ಇದರಿಂದ ಬಿಡಿಸಿ ಎಂದೆ. ಹೊಸ ದಾರಿ ಇರಬಹುದು. ಅಷ್ಟರಿಂದಲೇ ಅದರ ರಾಜಕೀಯ ಗುಣ ಅಳಿಯುವುದಿಲ್ಲ. ಕಾಂಗ್ರೆಸ್ ಕೆಲಸದಿಂದ ಭಾರತದಲ್ಲಿ ನನಗೆ ಪರಿಚಯವಾಗಿದ್ದ ಎಲ್ಲ ಬಗೆಯ ಘಟನಾತ್ಮಕ—ಶಾಸನಬದ್ಧ ಉಪಾಯಗಳೂ ವಿಫಲವಾದ ಮೇಲೆ ದಕ್ಷಿಣ ಆಫ್ರಿಕಾದಲ್ಲಿ ಮೊಟ್ಟ ಮೊದಲು ಈ ಸಾಧನವನ್ನು ಪ್ರಯೋಗಿಸಿದೆ. ವರ್ತಕರಾಗಿಯೋ ತಲೆಯ ಮೇಲೆ ಹೊತ್ತು ಮಾರುವ ಕೋರಿಸೆಟ್ಟಿಯಾಗಿಯೋ ದಕ್ಷಿಣ ಆಫ್ರಿಕಾದಲ್ಲಿ ನೆಲೆಸಿದ ಭಾರತೀಯರ ರಾಜಕೀಯ ಅಸ್ತಿತ್ವದ ಪ್ರಶ್ನೆ ಅದು. ಅವರಿಗೆ ಅದು ಸಾವು ಬದುಕಿನ ಪ್ರಶ್ನೆ. ಅದನ್ನು ಬಿಡಿಸುವಾಗ ಅಹಿಂಸೆ ಹೊಳೆಯಿತು ನನಗೆ. ಅಲ್ಲಿ ನಾನು ಅವಲಂಬಿಸಿದ ನಾನಾ ವಿಧಾನಗಳು ಒಬ್ಬ ಕನಸುಗಾರ, ಭಾವನಾಜೀವಿಯ ಕೆಲಸವಲ್ಲ. ಮುಖ್ಯತಃ ವ್ಯಾವಹಾರಿಕನಾದ ಮನುಷ್ಯ ವ್ಯಾವಹಾರಿಕ ಪ್ರಶ್ನೆಗಳನ್ನು ಬಿಡಿಸುವಾಗ ಮಾಡಿದ ಕೆಲಸ. ರಾಜಕೀಯ ಮಾರ್ಗ ಎಂಬ ದೃಷ್ಟಿಯಿಂದ ಅದನ್ನು ಯಾವಾಗಲೂ ಬದಲಾಯಿಸಬಹುದು, ತಿದ್ದಬಹುದು, ಬೇರೆ ಮಾಡಬಹುದು. ಇನ್ನೊಂದಕ್ಕಾಗಿ ಅದನ್ನು ಕೈಬಿಡಲೂಬಹುದು. ಆದ್ದರಿಂದ ನಮ್ಮ ನೀತಿಯನ್ನು ಬಿಡಬಾರದು ಎಂದು ಇವತ್ತು ನಾನು ಹೇಳಿದರೆ ರಾಜಕೀಯ ವಿವೇಕವನ್ನೆ ನಾನು ಹೇಳುತ್ತಿದೇನೆ. ಇದು ರಾಜಕೀಯ ಸೂಕ್ಷ್ಮದೃಷ್ಟಿ. ಹಿಂದೆ ನಮಗೆ ಅದರಿಂದ ಪ್ರಯೋಜನವಾಗಿದೆ. ಸ್ವಾತಂತ್ರ್ಯದ ಕಡೆಗೆ ಅನೇಕ ಮಜಲುಗಳನ್ನು ದಾಟಿಸಿದೆ. ಅದನ್ನು ಕೈ ಬಿಡುವ ಯೋಚನೆ ಬಹಳ ಘೋರತರ ದೋಷವಾದೀತು ಎಂದು ರಾಜಕಾರಣಿಯಂತೆ ಹೇಳುತ್ತೇನೆ. ಇಷ್ಟು ವರ್ಷ ಕಾಂಗ್ರೆಸ್ಸನ್ನು ನನ್ನ ಮಾತಿನಂತೆ ನಡೆಸಿದ್ದರೆ ರಾಜಕಾರಣಿಯ ಸಾಮರ್ಥ್ಯದಿಂದ. ಹೊಸ ದಾದ್ದರಿಂದ ನನ್ನ ಮಾರ್ಗವನ್ನು ಧಾರ್ಮಿಕ ಎನ್ನುವುದು ಸರಿಯಲ್ಲ.

ಮೌಲಾನಾ ಪ್ರೀತಿಯಿಂದ ನನ್ನನ್ನು ಬಹಳ ಹೊಗಳಿದಾರೆ. ಆದರೆ ನಾನು ಅದನ್ನು ಒಪ್ಪುವುದಿಲ್ಲ. ಬನಿಯಾ ಎಂದು ನನ್ನನ್ನು ಮೂದಲಿಸಿದಾರೆ. ಅದು ಯೋಗ್ಯತೆಗೆ ಒಂದು ಪ್ರಶಸ್ತಿ ಎಂದು ನಾನು ಭಾವಿಸಿದೇನೆ. ನನ್ನ ಬಳಿ ಇರುವ ವಸ್ತು ಅಮೂಲ್ಯವಾದ ಮುತ್ತು. ಅದನ್ನು ಸರಿಯಾದ

ತಕ್ಕಡಿಯಲ್ಲಿ ತೂಗಬೇಕು. ಸರಿಯಾದ ಬೆಲೆ ಕೊಟ್ಟವರಿಗೆ ಅದು ಸಿಗುತ್ತದೆ. ಸ್ವಾತಂತ್ರ್ಯಕ್ಕಾಗಿ ಕೂಡ ಅದನ್ನು ವಿನಿಮಯ ಮಾಡುವಂತಿಲ್ಲ.

ಅಹಿಂಸೆ ತಮ್ಮನ್ನು ಸ್ವರಾಜ್ಯಕ್ಕೆ ಹಿಂದೆ ಎಂದೂ ಇಲ್ಲದಷ್ಟು ಹತ್ತಿರಕ್ಕೆ ತಂದಿದೆ. ಸ್ವರಾಜ್ಯಕ್ಕೂ ಕೂಡ ಅದನ್ನು ಅದಲು ಬದಲು ಮಾಡುವ ಧೈರ್ಯ ಇಲ್ಲ ನಮಗೆ. ಹಾಗೆ ಮಾಡಿ ಗಳಿಸಿದ ಸ್ವರಾಜ್ಯ ನಿಜವಾದ ಸ್ವರಾಜ್ಯ ಆಗುವುದಿಲ್ಲ. ಸ್ವರಾಜ್ಯ ಬಂದ ಮೇಲೆ ಏನು ಮಾಡುತ್ತೇವೆ ಎಂಬುದಲ್ಲ ಪ್ರಶ್ನೆ. ಕೆಲವು ಸನ್ನಿವೇಶಗಳಲ್ಲಿ ಸ್ವರಾಜ್ಯ ಗಳಿಸಲು ಅಹಿಂಸೆಯನ್ನು ಕೈ ಬಿಡುತ್ತೇವೆಯೆ? ಸ್ವಾತಂತ್ರ್ಯ ಎಂದರೆ ಕಡು ಬಡವನಿಗೂ ದೀನರಲ್ಲಿ ಅತಿ ದೀನನಿಗೂ ಸ್ವಾತಂತ್ರ್ಯ. ಯುದ್ಧಕ್ಕೆ ಸೇರಿದರೆ ಅದು ಬರುವುದಿಲ್ಲ. ಸಂಪೂರ್ಣ ಸ್ವರಾಜ್ಯ ಬರುವ ಮೊದಲೇ ಕಾಂಗ್ರೆಸ್ಸು ಯುದ್ಧಕ್ಕೆ ಸೇರಿದರೆ ಈಗ ಇಪ್ಪತ್ತು ವರ್ಷಗಳಿಂದ ಮಾಡಿದ ಕೆಲಸವೆಲ್ಲ ಮಣ್ಣುಪಾಲು ಆಗುತ್ತದೆ.

ಇಷ್ಟಾದರೂ ಈ ತೀರ್ಮಾನವನ್ನು ಒಪ್ಪಿಕೊಳ್ಳಿ ಎಂದು ನಿಮ್ಮನ್ನು ಕೇಳಲು ಏಕೆ ನಿಂತಿದೇನೆ? ಸಭೆಯಲ್ಲಿ ಒಡಕು ಹುಟ್ಟಿಸುವುದೂ ಬೇಡ ವೇಕೆ? ಇಷ್ಟೇ ಕಾರಣ: ಈ ತೀರ್ಮಾನ ಕಾಂಗ್ರೆಸ್ ಮನೋಧರ್ಮಕ್ಕೆ ಕನ್ನಡಿ. ಒಂದು ಹೆಜ್ಜೆ ಹಿಂದಕ್ಕೇ ಇದು, ಸಂದೇಹವಿಲ್ಲ. ನಮಗೆ ಬರೆಯಲು ನಿಷ್ಕಳಂಕವಾದ ಹಲಗೆ ಇಲ್ಲ. ನಮ್ಮ ಹಿರಿಯರು ಹಾಕಿದ ಹೆಜ್ಜೆ ಜಗದ್ವ್ಯಾಪಿ ಪ್ರತಿಕ್ರಿಯೆಗಳನ್ನು ಮೂಡಿಸಿದೆ. ಈ ತೀರ್ಮಾನವನ್ನು ವಿರೂಪವಾಗುವಂತೆ ತಿದ್ದಿದರೆ ಈ ಪ್ರತಿಕ್ರಿಯೆಗಳನ್ನು ಗಮನಿಸುವುದಿಲ್ಲ ಎಂದಂತೆ. ವರ್ಕಿಂಗ್ ಕಮಿಟಿ ಹಿಡಿದ ಧೋರಣೆಯನ್ನು ಬದಲಾಯಿಸುವುದು ಅವಿವೇಕವಾದೀತು. ವರ್ಕಿಂಗ್ ಕಮಿಟಿಯ ಧೋರಣೆಯನ್ನು ನೀವು ಅಂಗೀಕರಿಸುತ್ತೀರಿ ಎಂದು ನಿರೀಕ್ಷಿಸಲು ಜಗತ್ತಿಗೆ ಅಧಿಕಾರ ಇದೆ. ಅ. ಭಾ. ಕಾಂ. ಸಮಿತಿಯಲ್ಲಿ ಭಾಗ ಮಾಡಿಸೋಣ ಎಂದು ಒಮ್ಮೆ ಯೋಚಿಸಿದ್ದೆ. ಹಾಗೆ ಮಾಡುವುದು ಹಿಂಸೆ ಮಾಡಿದ ಹಾಗೆಯೆ ಎಂಬುದು ಕಾಣಿಸಿತು. ಅಹಿಂಸೆ ಸಾಧಾರಣ ರೀತಿಯಲ್ಲಿ ಕೆಲಸ ಮಾಡುವುದಿಲ್ಲ.

ಒಮ್ಮೊಮ್ಮೆ ಹಿಂದಿಟ್ಟ ಹೆಜ್ಜೆ ಮುಂದೆ ನುಗ್ಗುವ ಹೆಜ್ಜೆಗೆ ಪೀಠಿಕೆ. ನಮ್ಮ ಹೆಜ್ಜೆ ಅಂಥದೇ ಆದೀತು.

ಠೀವರ್ಮಾನ ಒಂದು ಕನ್ನಡಿ. ಎಲ್ಲ ಗುಂಪಿನವರೂ ತಮ್ಮನ್ನು ಅದರಲ್ಲಿ ನೋಡಿಕೊಳ್ಳಬಹುದು. ಜವಾಹರಲಾಲರದು ಮೂಲ ಬರೆವಣಿಗೆ. ಅದನ್ನು ಒಂದು ಉಪ ಸಮಿತಿಗೆ ಒಪ್ಪಿಸಿದರು. ಅದರ ಕೈಯಲ್ಲಿ ಮುಖ್ಯವಾದ ಪರಿವರ್ತನೆಗಳಾಗಿವೆ. ಮೂಲ ಗೊತ್ತುವಳಿಯಲ್ಲಿ ರಾಜಾಜಿಗೆ ಕೆಲಸ ಮಾಡಲು ಅವಕಾಶವೇ ಇರಲಿಲ್ಲ. ಅವರು ದೂರಿ ಕೊಳ್ಳಲು ಚಿಕ್ಕ ಗವಾಕ್ಷ ಒಂದನ್ನು ಉಪ ಸಮಿತಿ ಮಾಡಿತು. ಯುದ್ಧ ಪ್ರಯತ್ನದಲ್ಲಿ ಭಾಗವಹಿಸುವುದನ್ನು ಜವಾಹರಲಾಲರೂ ನನ್ನಷ್ಟೇ ಬಲವಾಗಿ ವಿರೋಧಿಸುತ್ತಾರೆ. ಆದರೆ ಅವರ ಕಾರಣಗಳು ಬೇರೆ. ಕಾಂಗ್ರೆಸ್ಸಿಗೆ ಒಪ್ಪಿಗೆಯಾದ ಕೆಲವು ಕರಾರನ್ನು ನಡೆಸಿಕೊಟ್ಟರೆ ರಾಜಾಜಿ ಭಾಗವಹಿಸುತ್ತಾರೆ. ರಾಜೇಂದ್ರಬಾಬುಗಳಂಥ ಅಹಿಂಸಕ ಅಸಹಕಾರವಾದಿಗಳಿಗೂ ಸ್ಥಳ ಇದೆ. ಏಕೆಂದರೆ ಅಘಟಿತ ಘಟನೆ ನಡೆಯುವವರೆಗೆ ಅಹಿಂಸೆಯದೇ ಪರಮಾಧಿಕಾರ.

ಅಸಾಧ್ಯವಾದ ಅಥವಾ ರಾಜಕೀಯವಲ್ಲದ ಅಹಿಂಸೆಯ ಕಾರಣದಿಂದ ಕಾಂಗ್ರೆಸ್ಸು ಸಂಧಾನದ ಬಾಗಿಲನ್ನೆ ಮುಚ್ಚಿದೆ ಎನ್ನಲು ಇನ್ನು ಮುಂದೆ ಸರಕಾರಕ್ಕಾಗಲಿ ಕಾಂಗ್ರೆಸ್ ಟೀಕಾಕಾರರಿಗಾಗಲಿ ಅವಕಾಶವಿಲ್ಲ. ಯುದ್ಧ ಪ್ರಯತ್ನದಲ್ಲಿ ಭಾಗ ವಹಿಸುವ ಕರಾರಿನ ಮೇಲೆ ಕಾಂಗ್ರೆಸ್ಸಿನ ಮನವೊಲಿಸುವ ಭಾರವನ್ನು ಸರಕಾರದ ತಲೆಯ ಮೇಲೆ ಹೊರಿಸಿದೆ ಈ ಠೀವರ್ಮಾನ. ಸರಕಾರದಿಂದ ಏನನ್ನೂ ನಿರೀಕ್ಷಿಸಲಾಗದು ಎಂಬುದು ಬಹುಶಃ ಪೂರ ನಿಜ ಇರಬೇಕು. ಜಗತ್ತು ನಿರೀಕ್ಷಿಸುತ್ತಲಿದೆ. ಅವರು ಕಾಂಗ್ರೆಸ್ಸಿನದು ಸರಿ ಎನ್ನುವಂತೆ ಮಾಡುತ್ತದೆ ಈ ಠೀವರ್ಮಾನ. ಎಂಥ ಕಠಿನ ಪರೀಕ್ಷೆಗೂ ಸಮಾಧಾನ ಕೊಡುವ ಒಂದು ಗೌರವಪೂರ್ಣ ಸಂಧಾನ ಸೂಚನೆ ಬೇಕು ಎನ್ನುವ ಒಂದು ಗುಂಪು ಇದೆ ಕಾಂಗ್ರೆಸ್ಸಿನಲ್ಲಿ. ಈ ಠೀವಮಾನ ಆ ಗುಂಪಿಗೂ ಸಮಾಧಾನ ಕೊಡುತ್ತದೆ. ಕಟ್ಟಕಡೆಗೆ ಎಲ್ಲರನ್ನೂ ಒಂದೇ ಅಭಿಪ್ರಾಯಕ್ಕೆ ತಂದೀತು. ರಾಜಕೀಯ ಅಹಿಂಸೆಯಲ್ಲಿ ಪೂರ್ಣ ಶ್ರದ್ಧೆಯುಳ್ಳವರಿಗೆ ಇಡೀ ಕ್ಷೇತ್ರವೇ ಇದೆ ಅವರ ಎದುರಿಗೆ.

ಅಖಿಲ ಭಾರತ ಕಾಂಗ್ರೆಸ್ ಸಮಿತಿಯಲ್ಲಿ ಅಭಿಪ್ರಾಯ ಭೇದ ಕಾಣಬಹುದು ಎಂಬ ಮಾತು ಬಂದಾಗ, ಗಾಂಧೀಯ ನಾಯಕತ್ವವನ್ನು

ಉಳಿಸಿಕೊಳ್ಳಲು ಕಾಂಗ್ರೆಸ್ಸು ಈ ಹುಚ್ಚನ ಮಾತಿಗೆ ಎಲ್ಲಿ ತಾಳ ಕುಟ್ಟೀತೋ ಇಷ್ಟು ವರ್ಷ ಕಾಲ ರಾಜಕೀಯ ಸಂಸ್ಥೆಯಾಗಿದ್ದುದು ಎಲ್ಲಿ ಧಾರ್ಮಿಕ ಸಂಸ್ಥೆಯಾಗಿಬಿಡುತ್ತದೆಯೋ ಎಂದು ಮತಭೇದದ ಸಂಭವಕ್ಕೆ ಗಾಬರಿಗೊಂಡರು ಕೆಲವರು. ಅಂಥ ಅಂಜಿಕೆ ಬೇಡ ಎಂದು ಅವರಿಗೆ ಹೇಳುತ್ತೇನೆ. ಕಾಂಗ್ರೆಸ್ಸು ಅಂಥದೇನನ್ನೂ ಮಾಡದು, ನಾವು ಈ ಇಪ್ಪತ್ತು ವರ್ಷ ವ್ಯರ್ಥವಾಗಿ ಕಳೆದಿಲ್ಲ ಎಂದು ಹೇಳುತ್ತೇನೆ. ಕಾಂಗ್ರೆಸ್ಸು ಮಾಡಿರುವುದು ಇಷ್ಟು. ಜಗತ್ತಿಗೆ ಅರ್ಥ ಆಗುವ ರೀತಿಯಲ್ಲಿ ತನ್ನೊಡನೆ ಜಗತ್ತು ವ್ಯವಹರಿಸಲಿ, ಆ ರೀತಿ ಯೋಗ್ಯವಾಗಿದ್ದರೆ ಒಪ್ಪಿಕೊಳ್ಳೋಣ ಎಂದಿದೆ. ಕಾಂಗ್ರೆಸ್ಸು ಸುಲಭವಾಗಿ ಒಪ್ಪುವುದಿಲ್ಲ ಎಂದು ನಿಮಗೆ ಭರವಸೆ ಇರಲಿ. ಇದಲ್ಲ, ಇದಲ್ಲ—'ನೇತಿ ನೇತಿ—ಎಂದು ತನಗೆ ಬೇಕಾದ ನಿಜವಾದ ವಸ್ತು ಸಿಗುವವರೆಗೂ ಹೇಳುತ್ತಲಿದ್ದಿತು ಕಾಂಗ್ರೆಸ್ಸು. ಆದ್ದರಿಂದ ನಿಮಗೇನು ಬೇಕೋ ನೀವೂ ಖಚಿತವಾಗಿ ಹೇಳಿ, ನನಗೇನು ಬೇಕೋ ನಾನೂ ಹೇಳುತ್ತೇನೆ. ಆದ್ದರಿಂದಲೇ ಮೂರು ವಾರ ಪತ್ರಿಕೆಗಳನ್ನೂ ಪ್ರಕಟಿಸಲು ನಿಶ್ಚಯಿಸಿದೇನೆ. ಅದರಲ್ಲಿ ನನ್ನ ಅಭಿಪ್ರಾಯಗಳನ್ನು ಅನಿರ್ಬಂಧವಾಗಿ ಪೂರ್ಣ ಸ್ವತಂತ್ರವಾಗಿ ಪ್ರಕಟಿಸುತ್ತೇನೆ. ಹಾಗೆ ನನಗೆ ಅವಕಾಶ ಕೊಡುವವರೆಗೂ, ಈ ಮಧ್ಯೆ ನಿಮಗೆ ಬೇಕಾದ್ದು ದೊರೆತರೆ ವ್ಯಾಪಾರ ಮುಗಿಸಿಬಿಡಿ. ಒಂದು ಹನಿ ಕಣ್ಣೀರನ್ನೂ ನಾನು ಸುರಿಸುವುದಿಲ್ಲ, ನಂಬಿಕೆಯಿರಲಿ. ಆದ್ದರಿಂದ ಈ ಠೀರ್ಮಾನದಿಂದ ಜಗತ್ತಿಗೆ ಆಗುವ ಸಂತೋಷವನ್ನು ತಪ್ಪಿಸಲು ನಾನು ಬಯಸಿಲ್ಲ. ಕಾಂಗ್ರೆಸ್ಸು ಜಗತ್ತಿನ ಅಪಹಾಸ್ಯಕ್ಕೆ ಗುರಿಯಾಗುವುದು ನನಗೆ ಬೇಡ. ನನ್ನ ನಾಯಕತ್ವವನ್ನು ಉಳಿಸಿಕೊಳ್ಳಲು ನೀವು ನಿಶ್ಚಯಗಳನ್ನೆ ಕೈಬಿಟ್ಟರಿ ಎನ್ನುವುದು ಬೇಡ.

ಠೀರ್ಮಾನದಲ್ಲಿ ಕ್ರಿಯೆಯ ವಾಕ್ಯವೇ ಇಲ್ಲ ಎಂದು ಕೆಲವರು ಗೆಳೆಯರು ಆಕ್ಷೇಪಿಸಿದಾರೆ. ಠೀಮಾನದ ವಿಷಯದಲ್ಲಿ ಅದು ನಿಜ. ಕೇವಲ ವಿವರಣಾತ್ಮಕ ಆಗಬೇಕಿತ್ತು ಠೀರ್ಮಾನ. ಕಾಂಗ್ರೆಸಿಗರಿಗಿಂತ ಹೆಚ್ಚಾಗಿ ಜಗತ್ತನ್ನು ಕುರಿತದ್ದು ಅದು. ಸರಕಾರಕ್ಕೆ ಹೇಳಿದ್ದು ಕೂಡ ಅಲ್ಲ.

ಆದರೆ ಕಾಂಗ್ರೆಸಿಗರಿಗೆ ರಚನಾತ್ಮಕ ಕಾರ್ಯದ ಆದೇಶ ಇದೆ. ಅದೇ ಕ್ರಿಯಾತ್ಮಕ ಭಾಗ. ಸವಿನಯ ಶಾಸನಭಂಗ, ವೈಧಾನಿಕ ಕಾರ್ಯಕ್ರಮ

ಗಳಿಗೆ ಬದಲು ಆದು. ಸತ್ಯಾಗ್ರಹದ ಶಾಸ್ತ್ರಜ್ಞ ನಾನು ಎಂದು ನನಗೇ ಬಿಟ್ಟಿದೆ ಬುದ್ಧಿವಂತಿಕೆಯಿಂದ. ನಾನು ಬದುಕಿರುವವರೆಗೆ, ನನ್ನ ಬುದ್ಧಿ ಚೆನ್ನಾಗಿರುವವರೆಗೆ, ಹಾಗೆ ಮೀಸಲಾಗಿಡುವುದೇ ಸರಿ. ನನ್ನ ಮಟ್ಟಿಗೆ ಸರಕಾರ 'ಹರಿಜನ'ಕ್ಕೆ ಅಡ್ಡಬರದಿದ್ದರೆ ಸತ್ಯಾಗ್ರಹವಿಲ್ಲ, ಏಕೆಂದರೆ, ಈ ವಾರ ಪತ್ರಿಕೆ ಯುದ್ಧಕ್ಕೆ ವಿರುದ್ಧವಾಗಿ ಸಾಕಷ್ಟು ಪ್ರಚಾರ ಮಾಡ ಬಲ್ಲದು. ಬ್ರಿಟಿಷರ ಮೇಲೆ ನನಗೆ ದ್ವೇಷವಿಲ್ಲ. ಹಾಗೆ ಜರ್ಮನರು, ಇಟಾಲಿಯನ್ನರು, ಜಪಾನೀಗಳು ಯಾರ ಮೇಲೂ ಇಲ್ಲ. ರಷ್ಯನರು ಕಾರ್ಮಿಕರಿಗಾಗಿ ಮಹತ್ತರ ಕೆಲಸಗಳನ್ನು ಮಾಡಿದಾರೆ. ಅವರ ಮೇಲೂ ಇರಲಾಗದು. ಚೀನೀ ಜನ ನಮ್ಮ ಹಾಗೇ. ನನ್ನ ಅಹಿಂಸೆಯ ಮೂಲಕ ಭಾರತ ಇಡೀ ಜಗತ್ತಿಗೇ ಶಾಂತಿದೂತನಾದೀತು ಎಂದು ಭಾವಿಸ ಬಯಸು ತ್ತೇನೆ. ರಾಜಕೀಯ ಅಹಿಂಸೆಗೂ ಶಕ್ತಿಯಿದೆ. ನಮಗೆ ಅದರ ಕಲ್ಪನೆ ಇಲ್ಲ. ವಾರವಾರವೂ ಹರಿಜನ ಶಾಂತಿ ಸಂದೇಶವನ್ನು ಕೊಟ್ಟೀತು. ಇದಕ್ಕೆ ಅವಕಾಶ ಕೊಡದಿದ್ದರೆ ಸಾಂಕೇತಿಕವಾಗಿ ಸತ್ಯಾಗ್ರಹಕ್ಕೆ ಪ್ರಸಂಗ ಬಂದೀತು. ಪ್ರತಿಯೊಬ್ಬ ಕೆಲಸಗಾರನೂ ರಚನಾತ್ಮಕ ಕಾರ್ಯಕ್ಕೆ ಹೋಗಡ ಬೇಕು. ನನ್ನ ಲೇಖನಿ ನಿಲ್ಲುವಂತೆ ಮಾಡಿದರೆ ನಾನೊಬ್ಬನೇ ಸತ್ಯಾಗ್ರಹಿ. ನನಗೆ ಯಾವುದೂ ನಿಶ್ಚಿತ ಯೋಜನೆ ಇಲ್ಲ. ಘಟನೆಗಳೇ ದಾರಿ ತೋರು ತ್ತವೆ.

ಸತ್ಯಾಗ್ರಹದ ಬಗ್ಗೆ ಇಷ್ಟು.

ಶಾಸನ ಸಭೆಗಳ ಮನೋವೃತ್ತಿ ದೃಢಗೊಂಡಿದ್ದರೂ ಯುದ್ಧ ನಡೆಯುವ ಶಾಸನ ಸಭಾ ಕಾರ್ಯಕ್ರಮಕ್ಕೆ ಕಾಂಗ್ರೆಸಿನಲ್ಲಿ ಅವಕಾಶವಿಲ್ಲ ಎಂದು ನನ್ನ ಅಭಿಪ್ರಾಯ. ಯುದ್ಧ ಪ್ರಯತ್ನದೊಡನೆ ಏಕೀಭವಿಸದೆ ಕಾಂಗ್ರೆಸ್ಸು ಅವನ್ನು ನಡೆಸಲಾರದು. ರಾಷ್ಟ್ರದ ಕಾರ್ಯಕಲಾಪಗಳಲ್ಲಿ ತೀರಾ ಕನಿಷ್ಠ ಭಾಗ ಎಂದು ಯಾವಾಗಲೂ ಅಭಿಪ್ರಾಯ ಪಟ್ಟಿದೇನೆ. ಅತಿ ಮುಖ್ಯವಾದ ಶಾಶ್ವತ ಕಾರ್ಯ ನಡೆಯುವುದು ಹೊರಗಡೆಯೇ. ಶಾಸನ ಸಭಾ ಸದಸ್ಯರು ಪ್ರಭುಗಳಲ್ಲ, ತಮ್ಮನ್ನು ಆರಿಸಿದವರ—ರಾಷ್ಟ್ರದ— ಸೇವಕರು. ಆದ್ದರಿಂದ ಪಾರ್ಲಿಮೆಂಟಿನ ಕಡೆ ನೋಡಿ ಅದನ್ನು ಅವ ಲಂಬಿಸುವುದು ಎಷ್ಟು ಕಡಮೆಯಾದರೆ ಅಷ್ಟು ಒಳ್ಳೆಯದು, ಶಾಸ್ತ್ರ

ಬಲವೋ ಸತ್ಯಾಗ್ರಹ ಬಲವೋ ಅಥವಾ ಅಹಿಂಸಕ ಅಸಹಕಾರದ ಬಲವೋ ಅಂತೂ ಜನತೆಯಲ್ಲಿ ನೆಲೆಗೊಂಡಿವೆ ಶಕ್ತಿ—ಸತ್ತೆ. ಆದರೆ ಅಸಹಕಾರದ ಬಲ ಬರಬೇಕಾದರೆ ದೃಢವಾದ ನಿರಂತರವಾದ ರಚನಾತ್ಮಕ ಕಾರ್ಯದಿಂದಲೇ. ಅಹಿಂಸಕ ಬಲ ನಿರ್ಮಾಣದಿಂದ ಬರುತ್ತದೆ, ಶಾಸನ ದಿಂದ ಅಲ್ಲ. ಆದ್ದರಿಂದ ಇವತ್ತು ಕಾಂಗ್ರೆಸ್ಸಿನ ಮುಂದೆ ರಚನಾತ್ಮಕ ಕಾರ್ಯ ಒಂದೇ. ಇದರಲ್ಲಿ ಎಲ್ಲ ಪಕ್ಷಗಳೂ ಒಂದೇ.

ಕಾಂಗ್ರೆಸ್ಸಿನಲ್ಲಿ ಏನೋ ಒಡಕು ಹುಟ್ಟಿದೆ ಎಂದುಕೊಂಡು ಹೋಗ ಬೇಡಿ. ವರ್ಕಿಂಗ್ ಕಮಿಟಿ ಒಂದು ಸಂತೋಷ ಪೂರ್ಣ ಕುಟುಂಬದಂತೆ ಕೆಲಸ ಮಾಡಿದೆ. ನನಗೂ ಪಂಡಿತ ಜವಾಹರಲಾಲರಿಗೂ ಮನಸ್ತಾಪ ಬಂತೆಂದು ಯಾರೋ ಹೇಳಿದರು. ನಮ್ಮೊಳಗೆ ಮನಸ್ತಾಪ ಬರಲು ಬರೀ ಮತಭೇದ ಸಾಲದು; ಇನ್ನೇನಾದರೂ ಆಗಬೇಕು. ನಾವು ಸಹಕಾರ್ಯ ಕರ್ತರಾದ ಗಳಿಗೆಯಿಂದಲೇ ನಮ್ಮಲ್ಲಿ ಮತಭೇದ ಇವೆ. ಆದರೂ ನಾನು ಹಿಂದೆ ಹೇಳಿದೇನೆ, ಈಗ ಹೇಳುತ್ತೇನೆ—ರಾಜಾಜಿ ಅಲ್ಲ, ಜವಾಹರಲಾಲ್ ನನ್ನ ಉತ್ತರಾಧಿಕಾರಿ ಆಗುತ್ತಾರೆ. ನನ್ನ ಭಾಷೆ ಆತನಿಗೆ ಅರ್ಥ ಆಗು ವುದಿಲ್ಲವಂತೆ, ತಾನು ನನಗೆ ತಿಳಿಯದ ಭಾಷೆ ಆಡುತ್ತಾನಂತೆ. ಹೀಗೆ ಹೇಳುತ್ತಾನೆ. ಇದು ನಿಜ ಇದ್ದೀತು, ಇಲ್ಲದೆ ಇದ್ದೀತು. ಭಾಷೆ ಅಡ್ಡ ವಲ್ಲವಲ್ಲ ಮಾನವರ ಹೃದಯಗಳ ಮಿಲನಕ್ಕೆ. ನನಗೆ ಇಷ್ಟು ಗೊತ್ತು-— ನಾನು ಹೋದ ಮೇಲೆ ನನ್ನ ಭಾಷೆಯನ್ನೆ ಆತ ಆಡುತ್ತಾನೆ.

ಕಾಂಗ್ರೆಸ್ಸಿಗರಲ್ಲಿ ತಿಳಿವಳಿಕೆ, ಉತ್ಸಾಹಗಳಿಗೆ ಕೊರತೆ ಬೇಡ. ಜವಾಹರಲಾಲ್ ಆಗಲಿ ರಾಜಾಜೀ ಆಗಲಿ ನಿಮ್ಮನ್ನು ಸುಮ್ಮನೆ ಕೂಡ ಗೊಡುವುದಿಲ್ಲ. ನಾನಂತೂ ಖಂಡಿತ ಬಿಡುವುದಿಲ್ಲ. ಕಡೆಯದಾಗಿ, ರಚನಾತ್ಮಕ ಕಾರ್ಯಕ್ರಮ ಬರೀ ಸಪ್ಪೆ ಎನ್ನುವವರು ಅರಿತುಕೊಳ್ಳಲಿ. ಕಾಂಗ್ರೆಸ್ಸಿಗರು ತಮ್ಮ ಜವಾಬದಾರಿಯ ಮೇಲೆ ವೈಯಕ್ತಿಕ ಅಥವಾ ಸಾಮೂಹಿಕ ಸತ್ಯಾಗ್ರಹ ಮಾಡಲು ಕಾಂಗ್ರೆಸ್ ಠರಾವು ಅಡ್ಡಿ ಬರು ವುದಿಲ್ಲ. ಅದರಲ್ಲಿ ಅವರು ಯಶಸ್ವಿಗಳಾದರೆ ಎಲ್ಲರ ಪ್ರಶಂಸೆಗೂ ಪಾತ್ರ ರಾಗುತ್ತಾರೆ. ಆದರೆ ಹುರುಪುಗಾರರಿಗೆ ಎಚ್ಚರಿಕೆ ಕೊಡುತ್ತೇನೆ ನಾನು. ಅವರು ಈ ಆಯುಧವನ್ನು ಯಶಸ್ವಿಯಾಗಿ ಉಪಯೋಗಿಸಲಾರರು.

ಆತುರದ ಅಥವಾ ಅಜ್ಞಾನದ ಕೃತಿಯಿಂದ ತಮಗೂ ಚಳುವಳಿಗೂ ನಷ್ಟ ಉಂಟು ಮಾಡುತ್ತಾರೆ. ನಿಮ್ಮ ತಜ್ಞ ಎಂದು ಹೇಳುತ್ತೇನೆ—ರಚನಾತ್ಮಕ ಕಾರ್ಯ ನೀರಸ ಎಂಬವರಿಗೆ ಅಹಿಂಸೆ ಎಂದರೇನೋ ಅದು ಹೇಗೆ ಕೆಲಸ ಮಾಡುತ್ತದೆಯೋ ತಿಳಿಯದು.

ನಾನು ಕಾಂಗ್ರೆಸ್ಸಿನ ನಾಯಕತನವನ್ನು ಬಿಟ್ಟೆ ಎಂದು ಕೆಲವರು ಕಾಂಗ್ರೆಸ್ಸಿಗರಿಗೆ ಅಸಮಾಧಾನವಾಗಿದೆ. ನನ್ನನ್ನು ಕಳೆದುಕೊಂಡಿಲ್ಲ ನೀವು. ನಾನು ಕಾಂಗ್ರೆಸ್ಸಿಗೆ ವಿಧೇಯನಾಗದೆ ಹೋದಾಗ ನೀವು ನನ್ನನ್ನು ಕಳೆದುಕೊಳ್ಳುತ್ತೀರಿ. ನಾನು ವ್ಯಾವಹಾರಿಕ ಆಗಿರುವುದನ್ನು ಬಿಟ್ಟರೆ ಕಳೆದುಕೊಳ್ಳುತ್ತೀರಿ. ಬಾರ್ದೋಲಿಯಲ್ಲಿ ನಾನು ಕಾಂಗ್ರೆಸ್ಸನ್ನು ಬಿಡಲಿಲ್ಲ. ಏಳು ವರ್ಷದ ಕೆಳಗೆ ಬೊಂಬಾಯಿಯಲ್ಲಿ ಬಿಟ್ಟೆ. ದೇಶಕ್ಕೂ ಕಾಂಗ್ರೆಸ್ಸಿಗೂ ಹೆಚ್ಚು ಸೇವೆ ಮಾಡಲು ಅನುಕೂಲವಾಗಲಿ ಎಂದು ಬಿಟ್ಟೆ. ನನ್ನ ಸಂಗಾತಿಗಳು, ಸರದಾರರು, ರಾಜೇಂದ್ರ ಬಾಬುಗಳು, ತೀರ್ಮಾನದಿಂದ ಸಂತುಷ್ಟರಾಗಿಲ್ಲ. ಆದರೆ ವರ್ಕಿಂಗ್ ಕಮಿಟಿಯನ್ನು ಬಿಡಬೇಡಿ ಎಂದು ಅವರಿಗೆ ಹೇಳಿದೇನೆ. ಅವರು ಕಾಂಗ್ರೆಸ್ಸನ್ನು ಬಿಟ್ಟರೂ ಕಾಂಗ್ರೆಸ್ಸಿನ ಕೆಲಸ ನಿಂತುಹೋಗುವುದಿಲ್ಲ. ಅವರು ಇರಲಿ ಬಿಡಲಿ, ಕಾಂಗ್ರೆಸ್ಸಿನ ಕೆಲಸ ಸಾಗಿ ತೀರುತ್ತದೆ. ಎಷ್ಟೇ ದೊಡ್ಡವನಾದರೂ ಯಾವ ವ್ಯಕ್ತಿಯೂ ಕಾಂಗ್ರೆಸ್ಸಿಗೆ ಅನಿವಾರ್ಯವಲ್ಲ. ಕಾಂಗ್ರೆಸ್ಸನ್ನು ಕಟ್ಟಿದ ದಾದಾಭಾಯಿ, ಫಿರೋಜ್‌ಷಾ, ತಿಲಕರು ಈಗ ಇಲ್ಲ. ಆದರೆ ಕಾಂಗ್ರೆಸ್ಸೇನೋ ನಡೆಯುತ್ತಲೇ ಇದೆ. ಅವರು ನಮಗೆ ಒಂದು ಸೌಧವನ್ನು ಕಟ್ಟಿಕೊಟ್ಟಿದಾರೆ. ಅದರಲ್ಲಿ ನಾವು ಕೆಲಸ ಮಾಡಬಹುದು. ಅದನ್ನು ಬೆಳೆಸಬಹುದು. ಆ ನಾಯಕರ ನಿರ್ಯಾಣದಿಂದ ಏನೂ ವ್ಯತ್ಯಾಸ ಆಗಿರದಿದ್ದರೆ ಇತರ ನಾಯಕರ ನಿರ್ಗಮನದಿಂದ ಏಕೆ ವ್ಯತ್ಯಾಸ ಆಗಬೇಕು ? ೪೯

# ೩೦. "ಭಾರತ ಬಿಟ್ಟು ತೊಲಗಿ"—ಅ. ಭಾ. ಕಾಂ. ಸ. ಅಧಿವೇಶನ

[೧೯೪೨ ಆಗಸ್ಟ್ ೭ ರಂದು ಬೊಂಬಾಯಿಯಲ್ಲಿ ಅ. ಭಾ. ಕಾಂ. ಸಮಿತಿಯ ಕಾರ್ಯಕಲಾಪಗಳನ್ನು ಪ್ರಾರಂಭಿಸುತ್ತ ಕ್ರಿಪ್ಸ್ ಸಂಧಾನ ವಿಫಲವಾದ ನಂತರ ಸಮಿತಿಗೆ ಅಲಹಾಬಾದಿನ ತೀರ್ಮಾನ ಒಂದೇ ದಾರಿ ಎಂದು ಕಾಂಗ್ರೆಸ್ ಅಧ್ಯಕ್ಷರು ತಿಳಿಸಿದರು.

ಭಾರತದ ಮೇಲೆ ದಾಳಿಯ ಆಪತ್ತು ಹೆಚ್ಚಾಗುತ್ತಿದೆ, ಕೆಲವು ತಿಂಗಳ ಕೆಳಗೆ ಬಹಳ ದೂರದ ಮಾತು ಎನಿಸಿದ್ದುದು ಈಗ ತೀರಾ ಹತ್ತಿರಕ್ಕೇ ಬಂದಿದೆ. ಇಂಥ ಗಂಡಾಂತರದ ಸಮಯದಲ್ಲಿ ಜನ ಹತಾಶರೂ ನಿರುತ್ಸಾಹಿಗಳೂ ಆದರೆ ಪ್ರಮಾದವಾದೀತು. ಪ್ರತಿಯೊಬ್ಬ ಭಾರತೀಯ ತರುಣನೂ ಈ ಆಕ್ರಮಣವನ್ನು ಎದುರಿಸಲು ಸಿದ್ಧನಾಗಬೇಕೆಂದು ಕಾಂಗ್ರೆಸ್ಸಿನ ಆಶಯ. ಜನ ಉದಾಸೀನರೂ ಉತ್ಸಾಹರಹಿತರೂ ಆಗಿದ್ದರೆ ಅದರ ಹೊಣೆ ಕಾಂಗ್ರೆಸ್ಸಿನದಲ್ಲ, ಬ್ರಿಟಿಷ್ ಸರಕಾರದ್ದು.

"ಭಾರತದಿಂದ ತೊಲಗಿ ಎಂದರೆ ಬ್ರಿಟಿಷರೆಲ್ಲರೂ ಇಲ್ಲಿಂದ ಹೊರಟುಹೋಗಬೇಕೆಂದಲ್ಲ. ರಾಜಕೀಯಾಧಿಕಾರ ಬ್ರಿಟಿಷರಿಂದ ಭಾರತೀಯರ ಕೈಗೆ ಬರಬೇಕು ಎಂದು ಅರ್ಥ" ಎಂದು ಅಧ್ಯಕ್ಷರು ಹೇಳಿದರು.

ತರುವಾಯ ಗಾಂಧೀಜೀ ಹಿಂದೂಸ್ತಾನಿಯಲ್ಲಿ ಮಾತಾಡಿ ತಮ್ಮ ಕಾರ್ಯ ಯೋಜನೆಯನ್ನು ವಿವರಿಸಿದರು.]

ತೀರ್ಮಾನವನ್ನು ನೀವು ಚರ್ಚಿಸುವ ಮೊದಲು ಒಂದೆರಡು ಮಾತನ್ನು ಹೇಳುತ್ತೇನೆ. ಎರಡು ಮಾತನ್ನು ಸ್ಪಷ್ಟವಾಗಿ ಅರಿತುಕೊಳ್ಳಿ, ನಾನು ನಿಮ್ಮ ಮುಂದೆ ಮಂಡಿಸುವ ದೃಷ್ಟಿಯಿಂದಲೇ ವಿಚಾರ ಮಾಡಿ. ನನ್ನ ದೃಷ್ಟಿಯಿಂದ ವಿಚಾರ ಮಾಡಿ ಎನ್ನಲು ಕಾರಣ, ನೀವು ಅದನ್ನು ಒಪ್ಪಿದರೆ ನಾನು ಹೇಳಿದುದನ್ನೆಲ್ಲ ಮಾಡಬೇಕು. ಇದು ದೊಡ್ಡ ಜವಾಬದಾರಿ. ನೀವು ೧೯೨೦ರಲ್ಲಿ ಇದ್ದ ವ್ಯಕ್ತಿಯೋ ಅಥವಾ ನಿಮ್ಮಲ್ಲಿ ಏನಾದರೂ ಪರಿವರ್ತನೆ ಆಗಿದೆಯೋ ಎಂದು ನನ್ನನ್ನು ಕೇಳುವವರಿದಾರೆ. ಆ ಪ್ರಶ್ನೆ ಸರಿ.

ಭರವಸೆ ಕೊಡುತ್ತೇನೆ — ೧೯೨೦ರಲ್ಲಿದ್ದ ಗಾಂಧಿಯೇ ನಾನು. ಮೂಲಭೂತವಾದ ಬದಲಾವಣೆ ಏನೂ ಆಗಿಲ್ಲ ನನ್ನಲ್ಲಿ. ಆಗ ಎಷ್ಟು

ಪ್ರಾಧಾನ್ಯ ಕೊಟ್ಟೆನೋ ಅಹಿಂಸೆಗೆ ಈಗಲೂ ಅಷ್ಟೇ. ಏನಾದರೂ ಆಗಿದ್ದರೆ ಮೊದಲಿಗಿಂತ ಅದರ ಮೇಲೆ ಭಾರ ಹೆಚ್ಚು. ಈಗಿನ ತೀರ್ಮಾನಕ್ಕೂ ನನ್ನ ಹಿಂದಿನ ಬರಹ ಭಾಷಣಗಳಿಗೂ ಏನೂ ವಿರೋಧವಿಲ್ಲ.

ಇಂಥ ಪ್ರಸಂಗ ಪ್ರತಿಯೊಬ್ಬನ ಬಾಳಿನಲ್ಲೂ ಬರುವುದಿಲ್ಲ. ಬಂದರೂ ಬಹಳ ಅಪರೂಪ. ಇವತ್ತು ನಾನು ಹೇಳುತ್ತಿರುವುದರಲ್ಲಿ ಮಾಡುತ್ತಿರುವುದರಲ್ಲಿ ಶುದ್ಧತಮ ಅಹಿಂಸೆಯಲ್ಲದೆ ಬೇರೇನೂ ಇಲ್ಲ ಎಂಬುದನ್ನು ತಿಳಿದುಕೊಳ್ಳಿ. ನಿಮಗೆ ಹಾಗೆ ಎನಿಸಬೇಕು. ವರ್ಕಿಂಗ್ ಕಮಿಟಿಯ ಗೊತ್ತುವಳಿ ಅಹಿಂಸೆಯ ಮೇಲೆ ಆಧಾರಗೊಂಡಿದೆ. ಮುಂದೆ ಯೋಚಿಸಿರುವ ಹೋರಾಟವೂ ಅಹಿಂಸೆಯನ್ನೆ ಅವಲಂಬಿಸಿದೆ. ನಿಮ್ಮಲ್ಲಿ ಯಾರಿಗಾದರೂ ಅಹಿಂಸೆಯಲ್ಲಿ ಶ್ರದ್ಧೆ ಹೋಗಿದ್ದರೆ, ಅದರಿಂದ ಬೇಸರವಾಗಿದ್ದರೆ, ಅವರು ಈ ತೀರ್ಮಾನಕ್ಕೆ ಮತ ಕೊಡಬೇಕಾಗಿಲ್ಲ.

ನನ್ನ ನಿಲುವನ್ನು ವಿಶದೀಕರಿಸುತ್ತೇನೆ. ಅಹಿಂಸೆಯ ಆಯುಧವನ್ನು ಅಮೂಲ್ಯ ದಾನವಾಗಿ ನನಗೆ ಕೊಟ್ಟದಾನೆ ದೇವರು. ಈಗ ನನ್ನದೂ ನನ್ನ ಅಹಿಂಸೆಯದೂ ಪರೀಕ್ಷೆ. ಹಿಂಸೆಯ ಜ್ವಾಲೆಗೆ ಸುಟ್ಟು ಬೂದಿಯಾಗುತ್ತಿರುವ ಭೂಮಿ ಬಿಡುಗಡೆಗಾಗಿ ಗೋಳಾಡುತ್ತಿದ್ದರೂ ಈಗಿನ ವಿಷಮ ಸಮಯದಲ್ಲಿ ದೇವರು ಕೊಟ್ಟ ಸಾಮರ್ಥ್ಯವನ್ನು ಉಪಯೋಗಿಸಿಕೊಳ್ಳದಿದ್ದರೆ, ದೇವರು ನನ್ನನ್ನು ಕ್ಷಮಿಸುವುದಿಲ್ಲ. ಈ ಮಹಾ ಸಂಗ್ರಾಮಕ್ಕೆ ನಾನು ಅರ್ಹ ಎನಿಸಿಕೊಳ್ಳಲಾರೆ. ನಾನು ಈಗ ಕಾರ್ಯಕ್ಕೆ ಇಳಿಯಬೇಕು. ಮೀನ ಮೇಷ ಮಾಡುತ್ತ, ರಷ್ಯಾ ಚೀನಾಗಳಿಗೆ ಆಕ್ರಮಣದ ಅಂಜಿಕೆ ಬಂದಿರುವಾಗ ನಾನು ಸಂಕೋಚಪಟ್ಟು ಸುಮ್ಮನೆ ನೋಡುತ್ತಿದ್ದರೆ ಆಗದು.

ನಮ್ಮದು ಸತ್ತೆಯ ಹೋರಾಟವಲ್ಲ. ಭಾರತದ ಸ್ವಾತಂತ್ರ್ಯಕ್ಕಾಗಿ ಶುದ್ಧ ಅಹಿಂಸಕ ಯುದ್ಧ. ಹಿಂಸಕ ಕದನದಲ್ಲಿ ಯಶಸ್ವಿಯಾದ ದಳಪತಿ ಥಟ್ಟನೆ ಆಕ್ರಮಣ ಮಾಡಿ ಸರ್ವಾಧಿಕಾರಿತನವನ್ನು ಸ್ಥಾಪಿಸುತ್ತಾನೆ. ಮೂಲತಃ ಅಹಿಂಸಕವಾದ ಕಾಂಗ್ರೆಸ್ ಯೋಜನೆಯಲ್ಲಿ ಸರ್ವಾಧಿಕಾರಿತನಕ್ಕೆ ಅವಕಾಶವೆ ಇಲ್ಲ. ಸ್ವಾತಂತ್ರ್ಯದ ಅಹಿಂಸಕ ಯೋಧ ತನಗಾಗಿ ಏನನ್ನೂ ಬಯಸುವುದಿಲ್ಲ. ತನ್ನ ದೇಶದ ಸ್ವಾತಂತ್ರ್ಯಕ್ಕಾಗಿ ಮಾತ್ರ

ಹೋರಾಡುತ್ತಾನೆ. ಸ್ವಾತಂತ್ರ್ಯ ಬಂದಾಗ ಯಾರು ಪ್ರಭುತ್ವ ಮಾಡುತ್ತಾರೆಯೋ ಕಾಂಗ್ರೆಸ್ಸಿಗೆ ಅದರ ಚಿಂತೆಯಿಲ್ಲ. ಸತ್ತೆ ಬಂದಾಗ ಅದು ಭಾರತದ ಜನತೆಗೆ ಸೇರಿದ್ದು. ಯಾರ ಕೈಗೆ ಸತ್ತೆ ಕೊಡಬೇಕೋ ನಿರ್ಣಯಿಸುವವರು ಅವರು. ಪಾರಸೀಗಳ ಕೈಗೆ ಕೊಟ್ಟಾರು; ಹಾಗಾದರೆ ನನಗೆ ಬಹಳ ಇಷ್ಟ. ಇಪತ್ತು ಕಾಂಗ್ರೆಸ್ಸಿನಲ್ಲಿ ಯಾರ ಹೆಸರು ಕೇಳಿಯೇ ಇಲ್ಲವೋ ಅಂಥವರ ಕೈಗೆ ಕೊಟ್ಟಾರು. 'ಈ ಜಾತಿ ತೀರಾ ಅಲ್ಪ ಸಂಖ್ಯೆಯದು' ಎನ್ನಲಾಗದು ನೀವು. 'ಆ ಪಕ್ಷ ಸ್ವಾತಂತ್ರ್ಯ ಸಮರದಲ್ಲಿ ಪಾತ್ರ ವಹಿಸಲಿಲ್ಲ. ಅವರಿಗೇಕೆ ಸತ್ತೆ ?' ಎನ್ನಲಾಗದು. ಹುಟ್ಟಿದಾರಭ್ಯ ಕಾಂಗ್ರೆಸ್ಸು ಜಾತಿ–ಮತಗಳ ಬಣ್ಣಕ್ಕೆ ದೂರವಾಗಿದೆ. ಯಾವಾಗಲೂ ಇಡೀ ರಾಷ್ಟ್ರದ ದೃಷ್ಟಿಯಿಂದ ಯೋಚಿಸಿದೆ, ಹಾಗೆಯೆ ಕೆಲಸಮಾಡಿದೆ.

ನಮ್ಮ ಅಹಿಂಸೆ ಎಷ್ಟು ಅಪಶ್ಯವೋ, ನಮ್ಮ ಆದರ್ಶಕ್ಕೆ ನಾವು ಎಷ್ಟು ದೂರ ಇದೇವೋ ಬಲ್ಲೆ, ಅಹಿಂಸೆಯಲ್ಲಿ ಅಂತಿಮ ಪರಾಜಯ, ವಿಫಲತೆ ಎಂಬುದು ಇಲ್ಲವೇ ಇಲ್ಲ. ನಮ್ಮ ಲೋಪದೋಷಗಳಿದ್ದರೂ ಮಹಾ ಘಟನೆ ಸಂಭವಿಸಿದರೆ ಈ ಇಪ್ಪತ್ತು ವರ್ಷ ಸದ್ದಿಲ್ಲದೆ ನಿರಾತಂಕವಾಗಿ ನಾವು ಮಾಡಿದ ಸಾಧನೆಗೆ ದೇವರು ಸಫಲತೆಯನ್ನು ಕೊಟ್ಟು ಕರುಣಿಸಿದ, ನಮಗೆ ಸಹಾಯ ಮಾಡಿದ ಎನ್ನುತ್ತೇನೆ.

ನಮ್ಮದಕ್ಕಿಂತ ಹೆಚ್ಚು ನಿಜವಾದ ಪ್ರಜಾತಾಂತ್ರಿಕ ಸಮರ ಸ್ವಾತಂತ್ರ್ಯ ಜಗತ್ತಿನ ಇತಿಹಾಸದಲ್ಲಿ ಇಲ್ಲವೆಂದು ನಂಬಿದೇನೆ. ಸೆರೆಯಲ್ಲಿದ್ದಾಗ ಕಾರ್ಲೈಲರ 'ಫ್ರಾನ್ಸಿನ ಮಹಾಕ್ರಾಂತಿ'ಯನ್ನು ಓದಿದೆ. ಪಂಡಿತ ಜವಾಹರಲಾಲರು ರಷ್ಯದ ಕ್ರಾಂತಿಯ ವಿಷಯ ಸ್ವಲ್ಪ ಹೇಳಿದಾರೆ. ಆದರೆ ಈ ಕ್ರಾಂತಿಗಳು ಹಿಂಸಾತ್ಮಕವಾದುದರಿಂದ ಪ್ರಜಾತಾಂತ್ರಿಕ ಧ್ಯೇಯವನ್ನು ಸಾಧಿಸಲು ಅಸಮರ್ಥವಾದವು. ನಾನು ಕಲ್ಪಿಸಿಕೊಂಡ ಅಹಿಂಸೆಯಿಂದ ಸ್ಥಾಪಿತವಾದ ಪ್ರಜಾತಂತ್ರದಲ್ಲಿ ಸರ್ವ ಸಮಾನ ಸಮತೆ ಇದ್ದೀತು. ಪ್ರತಿಯೊಬ್ಬನೂ ತನಗೆ ತಾನೇ ಪ್ರಭು, ಅಂಥಾ ಪ್ರಜಾತಂತ್ರಕ್ಕಾಗಿ ಹೋರಾಡಲು ನಿಮ್ಮನ್ನು ಇಂದು ಕರೆಯುತ್ತಿದೇನೆ. ಇದನ್ನು ಅರಿತರೆ ಹಿಂದೂ—ಮುಸ್ಲಿಂ ಭೇದವನ್ನು ಮರೆತು ಕೇವಲ ಭಾರತೀಯರೆಂದೇ ತಿಳಿದು ಎಲ್ಲರದೂ ಆದ ಸ್ವಾತಂತ್ರ್ಯ ವ್ಯವಹಾರದಲ್ಲಿ ಭಾಗವಹಿಸೀರಿ.

ಆಮೇಲೆ ಬ್ರಿಟಿಷರ ಬಗ್ಗೆ ನಿಮ್ಮ ಮನೋವೃತ್ತಿಯ ಮಾತು. ಬ್ರಿಟನ್ನಿನ ಬಗ್ಗೆ ಜನರಲ್ಲಿ ದ್ವೇಷ ಇರುವುದನ್ನೂ ನೋಡಿದೇನೆ. ಅವರ ನಡತೆಯಿಂದ ಬೇಸರವಾಗಿದೆ ಎನ್ನುತ್ತಾರೆ, ಬ್ರಿಟಿಷ್ ಸಾಮ್ರಾಜ್ಯಷಾಹಿಗೂ ಬ್ರಿಟಿಷ್ ಜನತೆಗೂ ವ್ಯತ್ಯಾಸ ಕಾಣುವುದಿಲ್ಲ ಜನರಿಗೆ. ಅವರಿಗೆ ಎರಡೂ ಒಂದೇ. ಈ ದ್ವೇಷ ಜಪಾನೀಗಳನ್ನು ಸ್ವಾಗತಿಸುವಂತೆ ಮಾಡುತ್ತದೆ. ಬಹಳ ಅಪಾಯಕಾರಿ ಇದು. ಒಂದು ಗುಲಾಮಗಿರಿಯ ಬದಲು ಇನ್ನೊಂದು ಗುಲಾಮಗಿರಿಯನ್ನು ಒಪ್ಪಿಕೊಳ್ಳಲು ಸಿದ್ಧರಾಗಿದ್ದಾರೆ ಎಂದಾಯಿತು. ಈ ಭಾವನೆಯನ್ನು ನೀಗಬೇಕು ನಾವು. ಬ್ರಿಟಿಷ್ ಜನರೊಡನೆ ನಮಗೆ ಜಗಳ ಇಲ್ಲ. ಅವರ ಸಾಮ್ರಾಜ್ಯಷಾಹಿಯೊಡನೆ. ಅಪಾಯದ ಭಯದಿಂದ ಬಂದದ್ದಲ್ಲ, ಬ್ರಿಟಿಷರ ಸತ್ತೆ ಮುಕ್ತಾಯವಾಗಲಿ ಎಂಬ ಸೂಚನೆ. ಸದ್ಯದ ವಿಷಮ ಘಟ್ಟದಲ್ಲಿ ಭಾರತ ತನ್ನ ಪಾತ್ರವನ್ನು ಸರಿಯಾಗಿ ವಹಿಸಲು ಸಾಧ್ಯವಾಗಲಿ ಎಂದು ಬಂತು. ಸಂಯುಕ್ತ ರಾಷ್ಟ್ರಗಳು ಯುದ್ಧಮಾಡುತ್ತಿರುವಾಗ ಭಾರತದಂಥ ವಿಶಾಲ ದೇಶ ಇಷ್ಟವಿದ್ದೋ ಇಲ್ಲವೆಯೋ ಕೊಟ್ಟ ಹಣ—ಸಾಮಗ್ರಿಗಳ ಸಹಾಯ ಮಾತ್ರವೇ ಆದರೆ ಸಂತೋಷದ ಸ್ಥಿತಿಯಲ್ಲ. ನಿಜವಾದ ತ್ಯಾಗ—ಸಾಹಸಗಳನ್ನು ಪ್ರಚೋದಿಸಲು ಇದು ನಮ್ಮ ಯುದ್ಧ ಎನ್ನಿಸಬೇಕು, ನಾವು ಸ್ವತಂತ್ರರಾಗಬೇಕು. ನಾವು ಸಾಕಷ್ಟು ಆತ್ಮತ್ಯಾಗ ಮಾಡಿದರೆ ಬ್ರಿಟಿಷ್ ಸರಕಾರ ನಮಗೆ ಸ್ವಾತಂತ್ರ್ಯವನ್ನು ಸಲ್ಲಿಸದೆ ಇರಲಾರದು. ಆದ್ದರಿಂದ ನಾವು ದ್ವೇಷವನ್ನು ನೀಗಬೇಕು. ನನಗೆ ಎಂದೂ ದ್ವೇಷಭಾವನೆ ಹುಟ್ಟಿಲ್ಲ ಎಂದು ಹೇಳಬಲ್ಲೆ. ಎಂದಿಗಿಂತ ಇಂದು ನಾನು ಬ್ರಿಟಿಷರಿಗೆ ಹೆಚ್ಚು ಸ್ನೇಹಿತ ಎನಿಸುತ್ತಿದೆ. ಅವರು ಸಂಚಿನಲ್ಲಿದಾರೆ ಇವತ್ತು ಎಂಬುದು ಒಂದು ಕಾರಣ. ಆದ್ದರಿಂದ ನನ್ನ ಸ್ನೇಹವೇ ಅವರನ್ನೂ ತಪ್ಪುಮಾಡದಂತೆ ತಡೆಯಲು ಹೇಳುತ್ತಿದೆ. ಪರಿಸ್ಥಿತಿಯನ್ನು ನೋಡಿದರೆ ಅಗಾಧ ಕಂದರ ಒಂದರ ಅಂಚಿನಲ್ಲಿದಾರೆ ಅವರು. ಅವರಿಗೆ ಎಚ್ಚರಿಕೆ ಕೊಡುವುದು ನನ್ನ ಕರ್ತವ್ಯ ಆಗಿದೆ. ತತ್ಕಾಲಕ್ಕೆ ಅವರಿಗೆ ಸಿಟ್ಟು ಬರಬಹುದು, ಅವರಿಗೆ ಸಹಾಯಮಾಡಲು ಚಾಚಿದ ಕೈಯನ್ನೇ ಅವರು ಕಡಿಯಲೂ ಬಹುದು, ಜನ ನಕ್ಕಾರು. ಆದರೂ ಇದು ನನ್ನ ಶಪಥ. ನನ್ನ ಬಾಳಿನ ಮಹತ್ತರ ಹೋರಾಟ ನಡೆಸಲಿದೇನೆ. ಇಂಥ ಸಮಯದಲ್ಲಿ ಯಾರ ವಿಷಯದಲ್ಲೂ ದ್ವೇಷ ಭಾವನೆ ನನಗೆ ಸಲ್ಲದು.[೪೦]

## ೪೧. ಆಗಸ್ಟ್ ೮, ೧೯೪೨.

[ಆಗಸ್ಟ್ ೮ರಂದು ಗೊತ್ತುವಳಿಯನ್ನು ಸಭೆ ಅಂಗೀಕರಿಸಿದ ಮೇಲೆ ಗಾಂಧೀಜೀ ಎರಡು ಗಂಟೆಯ ಹೊತ್ತು ಮಾತಾಡಿದರು, ಮೊದಲು ಹಿಂದೂಸ್ತಾನಿಯಲ್ಲಿ.]

ಈಗ ನೀವು ಅಂಗೀಕರಿಸಿದ ತೀರ್ಮಾನಕ್ಕಾಗಿ ನಿಮ್ಮನ್ನು ಅಭಿನಂದಿಸುತ್ತೇನೆ. ತೀರ್ಮಾನದ ಪರವಾಗಿ ಅತ್ಯಧಿಕ ಬಹುಸಂಖ್ಯೆ ಇದೆ ಎಂದು ಗೊತ್ತಿದ್ದರೂ ತಮ್ಮ ತಿದ್ದುಪಡಿಗಳನ್ನು ಮತಕ್ಕೆ ಹಾಕಲು ಒತ್ತಾಯ ಮಾಡಿದ ಮೂವರು ಗೆಳೆಯರ ಧೈರ್ಯವನ್ನು ಅಭಿನಂದಿಸುತ್ತೇನೆ. ತೀರ್ಮಾನಕ್ಕೆ ವಿರುದ್ಧವಾಗಿ ಮತ ಕೊಟ್ಟ ಹದಿಮೂರು ಜನ ಗೆಳೆಯರನ್ನೂ ಅಭಿನಂದಿಸುತ್ತೇನೆ. ಅದರಲ್ಲಿ ನಾಚಿಕೊಳ್ಳಬೇಕಾದ್ದು ಏನೂ ಇಲ್ಲ. ಅತ್ಯಂತ ಅಲ್ಪ ಸಂಖ್ಯೆಯಲ್ಲಿದ್ದರೂ ನಮ್ಮನ್ನು ನೋಡಿ ಜನ ನಕ್ಕರೂ ಧೈರ್ಯಗೆಡಬಾರದೆಂದು ಕಳೆದ ಇಪ್ಪತ್ತು ವರ್ಷಗಳಿಂದ ಕಲಿಯುತ್ತಿದೇವೆ. ನಮ್ಮದು ಸರಿ ಎಂಬ ಭರವಸೆಯಿಂದ ನಮ್ಮ ನಂಬಿಕೆಯನ್ನೆ ದೃಢವಾಗಿ ಹಿಡಿಯಲು ಕಲಿತಿದೇವೆ. ಈ ಅಭಿಪ್ರಾಯ ದಾರ್ಢ್ಯವನ್ನು ಬೆಳೆಸಬೇಕು. ಅದರಿಂದ ಮನುಷ್ಯ ಉತ್ತಮನಾಗುತ್ತಾನೆ. ಅವನ ನೀತಿಯ ವ್ಯಕ್ತಿತ್ವ ಬೆಳೆಯುತ್ತದೆ. ಐವತ್ತು ವರ್ಷಗಳಿಂದ ನಾನು ಅನುಸರಿಸಲು ಯತ್ನಿಸಿದ ತತ್ತ್ವವನ್ನು ಈ ಗೆಳೆಯರು ಗ್ರಹಿಸಿರುವುದನ್ನು ಕಂಡು ಸಂತಸಗೊಂಡೆ.

ಅವರ ಧೈರ್ಯಕ್ಕಾಗಿ ಅವರನ್ನು ಅಭಿನಂದಿಸಿ ಈಗ ಹೇಳುತ್ತೇನೆ. ಈ ತಮ್ಮ ತಿದ್ದುಪಡಿಗಳ ಮೂಲಕ ಯಾವುದನ್ನು ಒಪ್ಪಿಕೊಳ್ಳಲು ಈ ಸಮಿತಿಯನ್ನು ಕೇಳಿದರೋ ಅದು ಪರಿಸ್ಥಿತಿಯ ಯಥಾ ದರ್ಶನವಲ್ಲ. ತಿದ್ದುಪಡಿಗಳನ್ನು ಹಿಂತೆಗೆದುಕೊಳ್ಳಲು ಮೌಲಾನಾ ಮಾಡಿದ ಬಿನ್ನಹವನ್ನು ಪರ್ಯಾಲೋಚಿಸಬೇಕಿತ್ತು ಈ ಗೆಳೆಯರು. ಜವಾಹರಲಾಲರು ಕೊಟ್ಟ ವಿವರಣೆಗಳನ್ನು ಎಚ್ಚರದಿಂದ ಅರಿತುಕೊಳ್ಳಬೇಕಿತ್ತು. ಹಾಗೆ ಮಾಡಿದ್ದರೆ ಅವರಿಗೆ ತಿಳಿಯುತ್ತಿತ್ತು. ಕಾಂಗ್ರೆಸ್ಸು ಯಾವ ಅಧಿಕಾರವನ್ನು ಕೊಡಬೇಕೆಂದು ಅವರು ಕೇಳುತ್ತಾರೋ ಅದನ್ನು ಆಗಲೇ ಕೊಟ್ಟು ಆಗಿದೆ.

ಪ್ರತಿಯೊಬ್ಬ ಮುಸಲ್ಮಾನನೂ ಭಾರತವನ್ನು ತನ್ನ ತಾಯಿನಾಡೆಂದು ಹೇಳುತ್ತಿದ್ದ ದಿನ ಒಂದು ಇತ್ತು. ಅಲೀ ಸೋದರರು ನನ್ನ ಜೊತೆಯಲ್ಲಿದ್ದಾಗ ಅವರ ಮಾತು ಚರ್ಚಿಸಲಿಕ್ಕೂ ಭಾರತ ಹಿಂದೂಗಳದು ಎಷ್ಟೋ ಮುಸಲ್ಮಾನರದೂ ಅಷ್ಟೇ ಎಂಬ ಗ್ರಹಿಕೆ ಆಧಾರವಾಗಿತ್ತು. ಇದು ಅವರ ಅಂತರಂಗದ ಭಾವನೆ, ತೋರಿಕೆ ಅಲ್ಲ ಎಂಬುದಕ್ಕೆ ನಾನೇ ಸಾಕ್ಷಿ. ಅವರೊಡನೆ ಹಲವು ವರ್ಷ ಬಾಳಿದೇನೆ. ಅವರ ಜೊತೆಯಲ್ಲಿ ಎಷ್ಟೋ ಹಗಲು ಇರುಳು ಕಳೆದಿದೇನೆ. ಅವರು ಹೇಳಿದುದೆಲ್ಲ ಅವರ ನಂಬಿದ್ದುದರ ಪ್ರಾಮಾಣಿಕ ಪ್ರಕಟನೆ ಎಂದು ಹೇಳುವ ಧೈರ್ಯ ಮಾಡುತ್ತೇನೆ. ಬೆಳ್ಳಗಿರುವುದನ್ನೆಲ್ಲಾ ಹಾಲು ಎಂದು ನಂಬುತ್ತೇನೆ ನಾನು ಎನ್ನುವವರು ಕೆಲವರು ಇದಾರೆ ಬಲ್ಲೆ. ನಾನು ಅಂಥ ದಡ್ಡನೂ ಅಲ್ಲ, ಭೋಳೆಯೂ ಅಲ್ಲ. ಅವರ ಟೀಕೆ ನನ್ನನ್ನು ಬಾಧಿಸದು. ನನ್ನನ್ನು ಭೋಳೆ ಎಂದರೂ ಚಿಂತೆಯಿಲ್ಲ, ವಂಚಕ ಎನ್ನದಿದ್ದರೆ ಸರಿ.

ಈ ಕಮ್ಯುನಿಸ್ಟ್ ಗೆಳೆಯರು ತಿದ್ದುಪಡಿಗಳಲ್ಲಿ ಸೂಚಿಸಿದುದು ಹೊಸದೇನಲ್ಲ. ಸಾವಿರ ವೇದಿಕೆಗಳಿಂದ ಅದನ್ನು ಮತ್ತೆ ಮತ್ತೆ ಹೇಳಿದಾರೆ. ಸಾವಿರಾರು ಮಂದಿ ಮುಸಲ್ಮಾನರು ನನಗೆ ಹೇಳಿದಾರೆ. ಹಿಂದೂ ಮುಸ್ಲಿಂ ಪ್ರಶ್ನೆ ಸಮಾಧಾನಕರವಾಗಿ ಬಗೆ ಹರಿಯಬೇಕಾದರೆ ನನ್ನ ಜೀವನಕಾಲದಲ್ಲೇ ಎಂದು. ಇದನ್ನು ಕೇಳಿ ನಾನು ಉಬ್ಬಬೇಕು. ಆದರೆ ನನ್ನ ಬುದ್ಧಿಗೆ ಒಪ್ಪದ ಮಾತನ್ನು ನಾನು ಹೇಗೆ ಒಪ್ಪಲಿ? ಹಿಂದೂ ಮುಸ್ಲಿಂ ಐಕಮತ್ಯ ಹೊಸದಲ್ಲ. ಕೋಟಿಗಟ್ಟಲೆ ಹಿಂದೂಗಳೂ ಮುಸಲ್ಮಾನರೂ ಅದಕ್ಕಾಗಿ ಯತ್ನಿಸಿದಾರೆ. ಬಾಲ್ಯದಿಂದಲೂ ನಾನು ಉದ್ದೇಶಪೂರ್ವಕ ಅದಕ್ಕಾಗಿ ಯತ್ನಿಸಿದೇನೆ. ಶಾಲೆಯಲ್ಲಿ ಮುಸ್ಲಿಂ, ಪಾರಸೀ ವಿದ್ಯಾರ್ಥಿಗಳ ಗೆಳೆತನ ಮಾಡಲು ವಿಶೇಷವಾಗಿ ಯತ್ನಿಸಿದೆ. ಆ ಚಿಕ್ಕ ವಯಸ್ಸಿನಲ್ಲೇ ನನಗೆನಿಸಿತ್ತು. ಭಾರತದಲ್ಲಿ ಇತರ ಮತಗಳವರೊಡನೆ ಸ್ನೇಹ ಶಾಂತಿಗಳೊಡನೆ ಬಾಳಬೇಕು ಹಿಂದೂಗಳು ಎಂಬುದಾದರೆ ಅವರು ಕಷ್ಟಪಟ್ಟು ನೆರೆಹೊರಿಕೆಯನ್ನು ಕಲಿಯಬೇಕು. ಹಿಂದೂಗಳ ಸ್ನೇಹಮಾಡಲು ವಿಶೇಷ ಪ್ರಯತ್ನ ಮಾಡದಿದ್ದರೂ ಚಿಂತೆಯಿಲ್ಲ. ನಾನು ಕೆಲವರಾದರೂ ಮುಸಲ್ಮಾನರೊಡನೆ ಗೆಳೆತನ ಬೆಳೆಸಬೇಕು ಎಂದುಕೊಂಡೆ. ಒಬ್ಬ ಮುಸ್ಲಿಂ ವರ್ತಕನ

ವಕೀಲನಾಗಿ ಹೋದೆ ನಾನು ದಕ್ಷಿಣ ಆಫ್ರಿಕಾಕ್ಕೆ. ಅಲ್ಲಿ ಇತರ ಮುಸಲ್ಮಾನರೊಡನೆ ಸ್ನೇಹ ಮಾಡಿಕೊಂಡೆ. ನನ್ನ ಕಕ್ಷಿಗಾರನ ವಿರೋಧಿಗಳೊಂದಿಗೆ ಕೂಡ ಪ್ರಾಮಾಣಿಕತೆಗೆ ಸಜ್ಜನಿಕೆಗೆ ಹೆಸರು ಗಳಿಸಿದೆ. ನನ್ನ ಜೊತೆಗಾರರಲ್ಲಿ ಮುಸ್ಲಿಮರೂ ಪಾರಸೀಗಳೂ ಇದ್ದರು. ಅವರ ಮನಸ್ಸನ್ನು ಸೂರೆಗೊಂಡೆ. ಕಡೆಗೆ ಭಾರತಕ್ಕೆ ಮರಳುವಾಗ ಆ ಅಗಲಿಕೆಯಿಂದ ದುಃಖಗೊಂಡು ಕಂಬನಿ ಸುರಿಸಿದೆ.

ಭಾರತದಲ್ಲಿಯೂ ನನ್ನ ಪ್ರಯತ್ನಗಳನ್ನು ಮುಂದೆ ಸಾಗಿಸಿದೆ. ಆ ಐಕಮತ್ಯವನ್ನು ಸಾಧಿಸುವ ಪ್ರಯತ್ನದಲ್ಲಿ ಕಿಂಚಿತ್ತೂ ಲೋಪ ಮಾಡಲಿಲ್ಲ. ಖಿಲಾಫತ್ ಚಳುವಳಿಯಲ್ಲಿ ನಾನು ನೀಡಿದ ಪೂರ್ಣ ಸಹಕಾರ ನನ್ನ ಯಾವಜ್ಜೀವವೂ ಇದ್ದ ಬಯಕೆಯ ಫಲ. ದೇಶಾದ್ಯಂತವೂ ಮುಸ್ಲಿಮರು ನನ್ನನ್ನು ಗೆಳೆಯ ಎಂದು ಒಪ್ಪಿಕೊಂಡರು.

ಅಂಥದು, ಈಗ ಹೇಗೆ ನಾನು ಕೇಡಿಗನಾದೆ? ಈಗೇಕೆ ತಿರಸ್ಕಾರ? ಖಿಲಾಫತ್ ಚಳುವಳಿಗೆ ನೆರವಾದಾಗ ನನಗೇನಾದರೂ ದುರುದ್ದೇಶವಿತ್ತೆ? ನಿಜ. ನನ್ನ ಹೃದಯಾಂತರಾಳದಲ್ಲಿ ಗೋಸಂರಕ್ಷಣೆ ಮಾಡಬಲ್ಲೆ ಅದರಿಂದ ಎಂಬ ಆಸೆ ಇತ್ತು. ನಾನು ಗೋ ಪೂಜಕ. ನಾನೂ ಗೋವೂ ಒಬ್ಬನೇ ದೇವರ ಸೃಷ್ಟಿ ಎಂದು ನಂಬಿದೇನೆ. ಗೋವನ್ನು ಕಾಪಾಡಲು ನನ್ನ ಪ್ರಾಣವನ್ನು ಕೊಡಲು ಸಿದ್ಧ. ನನ್ನ ಜೀವನ ತತ್ತ್ವ, ನನ್ನ ಅಂತಿಮ ಆಕಾಂಕ್ಷೆ ಹೀಗೇ ಇದ್ದರೂ ಚೌಕಾಸಿಗಾಗಿ ನಾನು ಚಳುವಳಿಯಲ್ಲಿ ಸೇರಲಿಲ್ಲ. ನನ್ನಂತೆಯೇ ಸಂಕಟದಲ್ಲಿದ್ದ ನನ್ನ ನೆರೆಯವನಿಗೆ ಸಲ್ಲಿಸಬೇಕಾದ ನನ್ನ ಕರ್ತವ್ಯವನ್ನು ಸಲ್ಲಿಸಲು ನಾನು ಚಳುವಳಿಯಲ್ಲಿ ಸೇರಿದೆ. ಅಲೀ ಸೋದರರು ಬದುಕಿದ್ದರೆ ಈ ಮಾತಿಗೆ ಪ್ರಮಾಣ ಕೊಡುತ್ತಿದ್ದರು. ಗೋಸಂರಕ್ಷಣೆಗಾಗಿ ಮಾಡಿದ ವ್ಯವಹಾರವಲ್ಲ ಅದು ಎಂದು ಇನ್ನೂ ಎಷ್ಟೋ ಜನ ನನ್ನ ಮಾತಿಗೆ ಸಾಕ್ಷಿ ಹೇಳಬಲ್ಲರು. ಖಿಲಾಫತ್ತಿನ ಹಾಗೇ ಗೋವೂ ತನ್ನ ಯೋಗ್ಯತೆಯನ್ನೇ ಅವಲಂಬಿಸಿತ್ತು. ಪ್ರಾಮಾಣಿಕ ಮನುಷ್ಯ, ನಿಜವಾದ ನೆರೆಯವ, ನೆಚ್ಚಿನ ಗೆಳೆಯ ಎಂದು ನನ್ನ ಕರ್ತವ್ಯ ಆಗಿತ್ತು, ಮುಸಲ್ಮಾನರಿಗೆ ಒದಗಿದ್ದ ಸಂಕಟ ಸಮಯದಲ್ಲಿ ಅವರಿಗೆ ನೆರವಾಗುವುದು.

ಆ ದಿನಗಳಲ್ಲಿ ಮುಸಲ್ಮಾನರೊಡನೆ ಸಹಪಂಗ್ತಿ ಭೋಜನ ಮಾಡಿ ಹಿಂದೂಗಳನ್ನು ಗಾಬರಿ ಗೊಳಿಸಿದೆ. ಕಾಲ ಕಳೆದಂತೆ ಈಗ ಅವರಿಗೆ ಅದು ರೂಢಿಯಾಗಿದೆ. ಆದರೂ ಮೌಲಾನಾ ಬಾರಿ ಹೇಳಿದರು—ನಿಮ್ಮನ್ನು ನನ್ನ ಅತಿಥಿಯಾಗಿ ಸ್ವಾಗತಿಸಿದರೂ ನಿಮ್ಮ ಜೊತೆಯಲ್ಲಿ ಊಟ ಮಾಡು ವುದಿಲ್ಲ ನಾನು. ಎಂದಾದರೂ ನನಗೆ ದುರುದ್ದೇಶವಿತ್ತು ಎಂದಾರು. ಆದ್ದರಿಂದ ನಾನು ಅವರಲ್ಲಿ ತಂಗಿದಾಗ ಬ್ರಾಹ್ಮಣ ಅಡಿಗೆಯವನೊಬ್ಬನನ್ನು ಕರೆಸಿ ಬೇರೆ ಅಡಿಗೆಗೆ ಏರ್ಪಾಡು ಮಾಡುತ್ತಿದ್ದರು. ಅವರ ನಿವಾಸ—ಫಿರಂಗಿ ಮಹಲ್—ಹಳೇ ಕಾಲದ್ದು, ಚಿಕ್ಕದು. ಹೆಚ್ಚು ಸ್ಥಳ ಇರಲಿಲ್ಲ. ಆವರೂ ಸಂತೋಷವಾಗಿ ಈ ಕಷ್ಟವನ್ನೆಲ್ಲ ಅನುಭವಿಸುತ್ತಿದ್ದರು. ತಮ್ಮ ದೃಢ ನಿಶ್ಚಯವನ್ನು ನಡೆಸುತ್ತಿದ್ದರು. ಅವರನ್ನು ಆದರಿಂದ ಬಿಡಿಸಲು ಆಗಲಿಲ್ಲ ನನಗೆ. ಆ ಕಾಲದಲ್ಲಿ ನಮಗಿದ್ದ ಪ್ರೇರಣೆ ಸೌಜನ್ಯದ್ದು, ಗಾಂಭೀರ್ಯ, ಔನ್ನತ್ಯಗಳದು. ಇತರ ಮತಗಳ ಗೆಳೆಯರನ್ನು ತೃಪ್ತಿ ಪಡಿಸಲು ಪ್ರತಿಯೊಂದು ಮತದವರೂ ತಾ ಮೇಲು ನಾ ಮೇಲು ಎಂದು ಯತ್ನಿಸುತ್ತಿದ್ದರು. ಪರಸ್ಪರರ ಧಾರ್ಮಿಕ ಭಾವನೆಗಳನ್ನು ಗೌರವಿಸು ತ್ತಿದ್ದರು. ಅದೊಂದು ವಿಶೇಷ ಮರ್ಯಾದೆ ತಮಗೆ ಎಂದು ತಿಳಿಯು ತ್ತಿದ್ದರು. ಯಾರ ಮನಸ್ಸಿನಲ್ಲೂ ಎಳ್ಳಷ್ಟೂ ಅನುಮಾನ ಇರಲಿಲ್ಲ. ಆ ಔನ್ನತ್ಯ, ಗಾಂಭೀರ್ಯ ಎಲ್ಲಿ ಹೋದವು ಈಗ? ಆ ಮಹತ್ತರ ಕಾಲವನ್ನು ನೆನೆಯಿರಿ ಎಂದು ಎಲ್ಲ ಮುಸಲ್ಮಾನರನ್ನು, ಕಾಯಿದೆ ಆಜಂಮರನ್ನು ಕೇಳುತ್ತೇನೆ. ಏಕೆ ಈ ಬಿಕ್ಕಟ್ಟು ಬಂತು? ಕಾಯಿದೆ ಆಜಂ ಜಿನ್ನಾ ಸ್ವತಃ ಒಂದು ಕಾಲದಲ್ಲಿ ಕಾಂಗ್ರೆಸ್ಸಿಗರು. ಇವತ್ತು ಕಾಂಗ್ರೆಸ್ಸಿನ ಮೇಲೆ ಅವರಿಗೆ ಸಿಟ್ಟು ಬಂದಿದ್ದರೆ, ಅವರ ಮನಸ್ಸಿನಲ್ಲಿ ಹೊಕ್ಕಿರುವ ಸಂಶಯವೇ ಕಾರಣ. ದೇವರು ಅವರಿಗೆ ದೀರ್ಘಾಯುಸ್ಸನ್ನು ಕೊಡಲಿ. ನಾನು ಗತಿಸಿದ ತರುವಾಯ ಅವರಿಗೆ ತಿಳಿದುಬರುತ್ತದೆ—ಮುಸಲ್ಮಾನರ ವಿರುದ್ಧ ಯಾವ ಯೋಜನೆಯೂ ನನಗೆ ಇರಲಿಲ್ಲ, ಅವರ ಹಿತಕ್ಕೆ ಎಂದೂ ನಾನು ಎರಡು ಬಗೆಯಲಿಲ್ಲ ಎಂಬುದು. ಅವರ ಚಳುವಳಿಗೆ ಧಕ್ಕೆ ತಂದರೆ, ಅವರ ಹಿತಕ್ಕೆ ಭಂಗ ತಂದರೆ ನನಗೆ ದಾರಿ ಏನು? ನನ್ನ ಗತಿ ಏನು? ನನ್ನ ಪ್ರಾಣ ಅವರ ಕೈಯಲ್ಲಿದೆ. ಅವರಿಗೆ ಇಷ್ಟ ಬಂದಾಗ ಅದನ್ನು ಕೊನೆ

ಗಾಣಿಸಲು ಅವರು ಸ್ವತಂತ್ರರು. ಹಿಂದೆ ನನ್ನ ಪ್ರಾಣ ತೆಗೆಯಲು ಪ್ರಯತ್ನ ನಡೆದಿದೆ. ಆದರೆ ದೇವರು ಪ್ರಾಣ ಉಳಿಸಿಕೊಂಡುಬಂದಿದ್ದಾನೆ ಇಲ್ಲಿಯವರೆಗೆ. ಆ ಕೃತ್ಯ ಮಾಡಲು ಬಂದವರೆಲ್ಲರೂ ಪಶ್ಚಾತ್ತಾಪ ಪಟ್ಟಿದ್ದಾರೆ. ಆದರೆ ಒಬ್ಬ ದುಷ್ಟನನ್ನು ತೀರಿಸಿಬಿಡೋಣ ಎಂದು ಯಾರಾದರೂ ನನಗೆ ಗುಂಡಿಟ್ಟರೆ ನಿಜವಾದ ಗಾಂಧಿಯನ್ನು ಆವನು ಕೊಲ್ಲಲಾರ, ದುಷ್ಟ ಎಂದು ತಾನು ತಿಳಿದ ಗಾಂಧಿಯನ್ನು ಕೊಂದಾನು.

ನಿಂದೆ ಅಪಪ್ರಚಾರಗಳಲ್ಲಿ ತೊಡಗಿರುವವರಿಗೆ ಹೇಳುತ್ತೇನೆ-- ಹಗೆಯನ್ನೂ ಕೂಡ ಹಳಿಯಬಾರದೆಂದು ಇಸ್ಲಾಮಿನ ಅಪ್ಪಣೆ, ಪೈಗಂಬರರು ತಮ್ಮ ವೈರಿಗಳಿಗೆ ಕೂಡ ಕರುಣೆ ತೋರಿ ತಮ್ಮ ಔದಾರ್ಯ—ನ್ಯಾಯಪರತೆಗಳಿಂದ ಅವರನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದರು. ನೀವು ಆ ಇಸ್ಲಾಮಿನ ಅನುಯಾಯಿಗಳೋ ಬೇರೆ ಯಾವುದೋ ಒಂದರದೋ? ಹಾಗೆ ನೀವು ನಿಜವಾದ ಇಸ್ಲಾಂ ಅನುಯಾಯಿಗಳಾಗಿದ್ದರೆ ಬಹಿರಂಗವಾಗಿ ತನ್ನ ನಂಬಿಕೆಯನ್ನು ಘೋಷಿಸುವವನನ್ನು ನಂಬದೆ ಸಂಶಯ ಪಡುವುದು ಸರಿಯೆ? ನಿಮ್ಮ ನಿಜ ಸ್ನೇಹಿತ, ವಿಶ್ವಾಸ ಪೂರ್ಣ ಸ್ನೇಹಿತನನ್ನು ನಂಬದೆ ಕೊಂದು ಹಾಕಿದಿರಿ ಎಂದು ಒಂದು ದಿನ ಮರುಗೀರಿ. ಈ ಮಾತನ್ನು ನೆನಪಿಡಿ. ನಾನು ವಿನಂತಿ ಮಾಡಿಕೊಂಡಷ್ಟು, ಮೌಲಾನಾ ಪ್ರಾರ್ಥಿಸಿಕೊಂಡಷ್ಟು ಈ ಅಪನಿಂದೆಯ ಚಳುವಳಿ ಹೆಚ್ಚುತ್ತಿರುವುದನ್ನು ಕಂಡು ನನಗೆ ಬಹಳ ಗಾಸಿಯಾಗಿದೆ. ನನ್ನ ಪಾಲಿಗೆ ಗುಂಡಿನೇಟಿನ ಹಾಗೆ ಇವು. ಗುಂಡು ನನ್ನ ಪ್ರಾಣ ತೆಗೆಯಬಲ್ಲದು. ಹಾಗೇ ಅವರೂ ನನ್ನನ್ನು ಕೊಲ್ಲಬಲ್ಲರು. ನೀವು ಕೊಲ್ಲಬಹುದು. ನನಗೆ ಅದರಿಂದ ನೋವು ಇಲ್ಲ. ಆದರೆ ನಿಂದನೆ ಮಾಡುವುದೇ ಕೆಲಸ ಆಗಿರುವವರ ಮಾತೇನು? ಇಸ್ಲಾಮಿಗೆ ಅಪಮಾನ ಮಾಡುತ್ತಾರೆ ಅವರು. ಇಸ್ಲಾಮಿನ ಶುಭನಾಮಕ್ಕಾಗಿ ಬೇಡುತ್ತೇನೆ. ಈ ಬಿಡುವಿಲ್ಲದ ಬೈಗುಳ ಅಪನಿಂದೆಯ ಚಳುವಳಿಯನ್ನು ಕೈಬಿಡಿ.

ಮೌಲಾನಾ ಸಾಹೇಬರ ಮೇಲೆ ಅತಿ ಅಸಹ್ಯಕರ ದುರ್ಭಾಷೆಯನ್ನು ಸುರಿಸುತ್ತಿದ್ದಾರೆ. ಏಕೆ? ತಮ್ಮ ಗೆಳೆತನದ ಒತ್ತಾಯವನ್ನು ಮಾಡುತ್ತಿಲ್ಲ ನನ್ನ ಮೇಲೆ. ನಿರಾಕರಿಸಿದ್ದಾರೆ. ತಾನು ಸುಳ್ಳು ಎಂದು ತಿಳಿದುದನ್ನು ನಿಜ

ಎಂದು ಒಪ್ಪಿಕೋ ಎಂದು ಒತ್ತಾಯ ಮಾಡುವುದು ಗೆಳೆತನದ ದುರು ಪಯೋಗ ಎಂದು ಅವರು ಬಲ್ಲರು.

ಕಾಯಿದೆ ಆಜಂಗೆ ಹೇಳುತ್ತೇನೆ: ಪಾಕಿಸ್ತಾನದ ಬೇಡಿಕೆಯಲ್ಲಿ ಎಷ್ಟು ಸತ್ಯವೋ ನ್ಯಾಯವೋ ಅದು ನಿಮ್ಮ ಕೈಯಲ್ಲಿ ಈಗಾಗಲೇ ಇದೆ. ಯಾವುದು ತಪ್ಪೋ ಅಸಮರ್ಥನೀಯವೋ ಅದನ್ನು ಯಾರೂ ಕೊಡ ಲಾರರು ನಿಮಗೆ. ಯಾರಾದರೂ ಇತರರ ಮೇಲೆ ಅಸತ್ಯವನ್ನು ಬಲಾತ್ಕಾರ ವಾಗಿ ಹೇರಿದರೂ ಅಂಥ ಬಲಾತ್ಕಾರದ ಫಲವನ್ನು ಬಹುಕಾಲ ಅವನು ಅನುಭವಿಸಲಾರ. ದೇವರಿಗೆ ಗರ್ವ ಇಷ್ಟವಿಲ್ಲ. ಗರ್ವ ಇದ್ದ ಕಡೆ ಇರದೆ ದೂರ ಹೋಗುತ್ತಾನೆ. ಅಸತ್ಯವನ್ನು ಬಲವಂತದಿಂದ ಹೇರಿದರೆ ದೇವರು ಸಹಿಸುವುದಿಲ್ಲ.

ಅತಿ ಕಟುವಾದ ಮಾತನ್ನು ತಾನು ಹೇಳಬೇಕಾಗಿ ಬಂದಿದೆ, ತನ್ನ ವಿಚಾರ—ಭಾವನೆಗಳನ್ನು ವ್ಯಕ್ತಪಡಿಸದೆ ಇರಲು ಸಾಧ್ಯವಿಲ್ಲ ಎನ್ನುತ್ತಾರೆ. ಅದೇರೀತಿ ನಾನು ಹೇಳುತ್ತೇನೆ: ನಾನು ಮುಸಲ್ಮಾನರ ಗೆಳೆಯ ಎಂದು ಕೊಳ್ಳುತ್ತೇನೆ. ಅದ್ದರಿಂದ ನನ್ನ ಹೃದಯಾಂತರಾಳದ ಮಾತನ್ನು ಏಕೆ ಹೊರಗೆಡಹಬಾರದು? ಅವರಿಗೆ ಅಸಂತೋಷ ಆದರೆ ಆಗಲಿ. ನನ್ನ ಅಂತ ರಂಗದ ಭಾವನೆಯನ್ನು ಅವರಿಗೆ ತಿಳಿಸದೆ ಹೇಗೆ ಮರೆಮಾಚಲಿ? ತಮ್ಮ ವಿಚಾರ ಭಾವನೆಗಳನ್ನು ಕೇಳುವವರಿಗೆ ಕಟು ಎನಿಸಿದರೂ ಮುಚ್ಚು ಮರೆ ಯಿಲ್ಲದೆ ವ್ಯಕ್ತಪಡಿಸಿದುದಕ್ಕಾಗಿ ಕಾಯದೆ ಆಜಂರನ್ನು ಅಭಿನಂದಿ ಸುತ್ತೇನೆ. ಆದರೆ ಇಲ್ಲಿ ಕೂಡಿರುವ ಮುಸಲ್ಮಾನರನ್ನು ಹಳಿಯಲೇಕೆ, ತಾವು ಹೇಳಿದಂತೆ ಕೇಳಲಿಲ್ಲ ಎಂದು? ಲಕ್ಷಗಟ್ಟಲೆ ಮುಸಲ್ಮಾನರು ತಮ್ಮ ಪರವಾ ಗಿದ್ದರೆ ಈ ಒಂದು ಹಿಡಿ ಮುಸಲ್ಮಾನರನ್ನು ಏಕೆ ಉದಾಸೀನಮಾಡಬಾರದು, ತಪ್ಪುದಾರಿ ತುಳಿದವರು ಎಂದು? ಹಲವು ಕೋಟಿ ಜನರ ಬೆಂಬಲ ಇರು ವಾಗ ಬಹುಸಂಖ್ಯೆಯ ಸಮಾಜಕ್ಕೆ ಏಕೆ ಅಂಜಬೇಕು? ಬಹುಸಂಖ್ಯೆಯ ವರು ಅಲ್ಪಸಂಖ್ಯಾತರನ್ನು ಎಲ್ಲಿ ನುಂಗಿಹಾಕುತ್ತಾರೋ ಎಂಬ ಭಯವೇಕೆ? ಪೈಗಂಬರರು ಅರಬ್ಬರ ನಡುವೆ ಮುಸಲ್ಮಾನರ ನಡುವೆ ಹೇಗೆ ಕೆಲಸ ಮಾಡಿದರು? ಇಸ್ಲಾಮನ್ನು ಹೇಗೆ ಪ್ರಚಾರಮಾಡಿದರು? ತಮಗೆ ಬಹು ಸಂಖ್ಯೆ ದೊರೆತಾಗಲೇ ನಾನು ಇಸ್ಲಾಮಿನ ಪ್ರಚಾರಮಾಡುತ್ತೇನೆ ಎಂದರೆ?

ಇಸ್ಲಾಮಿನ ಹೆಸರಿನಲ್ಲಿ ನಾನು ಹೇಳಿದ್ದನ್ನೂ ವಿಚಾರಮಾಡಿ ಎಂದು ಕೇಳಿಕೊಳ್ಳುತ್ತೇನೆ. ತನಗೆ ನಂಬಿಕೆ ಇಲ್ಲದಿದ್ದರೂ ತನ್ನ ತತ್ವಗಳಿಗೆ ವಿರುದ್ಧವಾದರೂ ಕಾಂಗ್ರೆಸ್ಸು ಅದನ್ನು ಒಪ್ಪಿಕೊಳ್ಳಬೇಕು ಎಂಬುದರಲ್ಲಿ ನ್ಯಾಯವೂ ಇಲ್ಲ ಸೌಜನ್ಯವೂ ಇಲ್ಲ.

ರಾಜಾಜೀ ಹೇಳಿದರು: ನನಗೆ ಪಾಕಿಸ್ಥಾನದಲ್ಲಿ ನಂಬಿಕೆಯಿಲ್ಲ, ಆದರೆ ಮುಸಲ್ಮಾನರು ಬೇಕು ಎನ್ನುತ್ತಾರೆ, ಜಿನ್ನಾ ಬೇಕು ಎನ್ನುತ್ತಾರೆ. ಅವರಿಗೆ ಅದೊಂದು ಭ್ರಾಂತಿಹಿಡಿದಿದೆ. ಆದ್ದರಿಂದ ಈಗ ಆಗಲಿ ಎಂದುಬಿಡೋಣ. ಇದೇ ಜಿನ್ನಾಗೆ ಮುಂದೆ ಪಾಕಿಸ್ತಾನದ ಅನಾನುಕೂಲಗಳೆಲ್ಲ ಅರ್ಥವಾಗುತ್ತದೆ. ಆಗ ಅದು ಬೇಡ ಎಂದಾರು.' ನಾನು ಹೇಳಿದೆ: ಅಸತ್ಯ ಎಂದು ನಮಗೆ ತಿಳಿದುದನ್ನು ಸತ್ಯ ಎಂದು ಒಪ್ಪುವುದು ಸರಿಯಲ್ಲ. ಆಮೇಲೆ ಅದನ್ನು ನಿರ್ಣಯಿಸುವಾಗ ಅವರು ಒತ್ತಾಯಮಾಡಲಾರರು ಎಂದು ನಂಬಿ ಇತರರನ್ನು ಒಪ್ಪಿಕೊಳ್ಳಿ ಎಂದು ಒತ್ತಾಯ ಮಾಡಬಾರದು. ಬೇಡಿಕೆ ನ್ಯಾಯ ಎನಿಸಿದರೆ ಅವತ್ತೇ ಅದನ್ನು ಒಪ್ಪಿಕೊಂಡು ಬಿಡಬೇಕು. ಕೇವಲ ಜಿನ್ನಾ ಸಾಹೇಬರನ್ನು ಸಮಾಧಾನಪಡಿಸಲು ಎಂದು ನಾನು ಒಪ್ಪಬಾರದು. ಜಿನ್ನಾರನ್ನೂ ತತ್ಕಾಲಕ್ಕೆ ಸಮಾಧಾನಪಡಿಸೋಣ, ಅವರ ಸಂಶಯಗಳನ್ನು ಕಳೆಯೋಣ, ಅವರು ಏನು ಪ್ರತಿಕ್ರಿಯೆ ತೋರಿಸುತ್ತಾರೋ ಅದಕ್ಕೆ, ನೋಡೋಣ ಎಂದು ಅನೇಕರು ಗೆಳೆಯರು ನನಗೆ ಹೇಳಿದಾರೆ. ಆದರೆ ಸುಳ್ಳು ವಚನಕೊಟ್ಟು ಯಾವ ಕೆಲಸವನ್ನೂ ನಾನು ಮಾಡಲಾರೆ. ನನ್ನ ಪದ್ಧತಿಯಂತೂ ಅದಲ್ಲ.

ಕಾಂಗ್ರೆಸ್ಸಿಗೆ ಏನು ಅಧಿಕಾರ ಇದೆ ತನ್ನ ತೀರ್ಮಾನಗಳನ್ನು ನಡೆಯಿಸಲು? ನೀತಿಯ ಬಲ ಒಂದೇ. ನಿಜವಾದ ಪ್ರಜಾಶಕ್ತಿ ಬರಬೇಕಾದರೆ ಅಹಿಂಸೆಯಿಂದಲೇ ಎಂದು ಅದರ ನಂಬಿಕೆ. ಜಗತ್ ಒಕ್ಕೂಟವನ್ನು ಕಟ್ಟಬೇಕಾದರೆ ಅಹಿಂಸೆಯ ಆಧಾರದ ಮೇಲೆಯೇ, ಜಗತ್ತಿನ ವ್ಯವಹಾರದಲ್ಲಿ ಹಿಂಸೆಯನ್ನು ಪೂರಾ ವರ್ಜಿಸಬೇಕು. ಇದು ನಿಜ. ಆದರೆ ಹಿಂದೂ ಮುಸ್ಲಿಂ ಪ್ರಶ್ನೆಯೂ ಹಿಂಸೆಯ ಮೂಲಕ ಪರಿಹಾರ ಆಗದು. ಹಿಂದೂಗಳು ಮುಸಲ್ಮಾನರ ಮೇಲೆ ದಬ್ಬಾಳಿಕೆ ನಡೆಸಿದರೆ ಜಗತ್ ಒಕ್ಕೂಟದ ಬಗ್ಗೆ ಮಾತನಾಡಲು ಅವರಿಗೆ ಮುಖ ಎಲ್ಲಿಯದು? ಅದೇ ಕಾರಣಕ್ಕಾಗಿಯೆ

ಹಿಂಸೆಯ ಮೂಲಕ ಜಗತ್ ಶಾಂತಿಯನ್ನು ಸ್ಥಾಪಿಸಲು ಸಾಧ್ಯವಿಲ್ಲ, ಇಂಗ್ಲೀಷು ಅಮೇರಿಕನ್ ಮುತ್ಸದ್ದಿಗಳು ಯೋಚಿಸುವಂತೆ, ಎಂದು ನಂಬಿದೇನೆ. ನಿಷ್ಪಕ್ಷಪಾತಿಯಾದ ಅಂತರ ರಾಷ್ಟ್ರೀಯ ಪಂಚಾಯತಿಗೆ ತನ್ನ ವಿವಾದವನ್ನು ಒಪ್ಪಿಸಿ ಅದರ ತೀರ್ಮಾನದಂತೆ ನಡೆಯಲು ಕಾಂಗ್ರೆಸ್ಸು ಒಪ್ಪಿದೆ. ಇಂಥ ಉತ್ತಮೋತ್ತಮ ನ್ಯಾಯಪೂರ್ಣ ಸೂಚನೆಯೂ ಒಪ್ಪಿಗೆ ಯಾಗದಿದ್ದರೆ ಉಳಿಯುವುದು ಒಂದೇಮಾರ್ಗ—ಕತ್ತಿಯುದು, ಹಿಂಸೆಯುದು. ಇಂಥ ಅಸಾಧ್ಯವಾದುದನ್ನು ನಾನು ಹೇಗೆ ಒಪ್ಪಲಿ? ಜೀವಂತ ವಸ್ತುವನ್ನು ಕತ್ತರಿಸಬೇಕು ಎಂದರೆ ಅದರ ಪ್ರಾಣವನ್ನೆ ತೆಗೆದಹಾಗೆ, ಯುದ್ಧಕ್ಕೆ ಆಹ್ವಾನ. ಇಂಥ ಸೋದರರ ಸಮರಕ್ಕೆ ಕಾಂಗ್ರೆಸ್ ಸಿದ್ಧವಾಗಿಲ್ಲ. ಡಾ, ಮೂಂಜೆ, ಶ್ರೀ ಸಾವರಕರರ ಹಾಗೆ ಖಡ್ಗದ ಸಿದ್ಧಾಂತವನ್ನು ನಂಬಿದ ಹಿಂದೂಗಳು ಹಿಂದೂಗಳ ಅಡಿಯಾಳುಗಳಾಗಿ ಮುಸಲ್ಮಾನರನ್ನು ಇಟ್ಟುಕೊಳ್ಳಲು ಪ್ರಯತ್ನಿಸಲಿ. ಆ ವಿಭಾಗಕ್ಕೆ ನಾನು ಪ್ರತಿನಿಧಿ ಅಲ್ಲ. ನಾನು ಕಾಂಗ್ರೆಸ್ಸಿನ ಪ್ರತಿನಿಧಿ. ಬಂಗಾರದ ತತ್ತಿ ಇಡುವ ಬಾತು ಆದ ಕಾಂಗ್ರೆಸ್ಸನ್ನು ಕೊಲ್ಲಬೇಕು ಎನ್ನುತ್ತೀರಿ ನೀವು. ಕಾಂಗ್ರೆಸ್ಸಿನಲ್ಲಿ ನಿಮಗೆ ಅಪನಂಬಿಕೆಯಾದರೆ ಹಿಂದೂ—ಮುಸಲ್ಮಾನರಲ್ಲಿ ಸದಾ ಕದನ ಇದ್ದೇ ಇರುತ್ತದೆ. ದೇಶ ಯುದ್ಧ—ರಕ್ತಪಾತಗಳಿಗೆ ಬಲಿಯಾಗುತ್ತದೆ, ಖಂಡಿತ. ಇಂಥ ಯುದ್ಧವೇ ನಮ್ಮ ಹಣೆಯ ಬರಹದಲ್ಲಿ ಇದ್ದರೆ ಅದನ್ನು ನೋಡಲು ನಾನಂತೂ ಬದುಕಿರಲಾರೆ.

ಆದ್ದರಿಂದಲೆ ಜಿನ್ನಾ ಸಾಹೇಬರಿಗೆ ನಾನು ಹೇಳುವುದು. ನಿಮ್ಮ ಪಾಕಿಸ್ತಾನದ ಬೇಡಿಕೆಯಲ್ಲಿ ನ್ಯಾಯವಾದುದು ಧರ್ಮವಾದುದು ಏನಿದೆಯೋ ಅದು ನಿಮ್ಮ ಜೇಬಿನಲ್ಲೇ ಇದೆ, ನನ್ನ ಮಾತನ್ನು ನಂಬಿ; ನ್ಯಾಯಧರ್ಮಗಳಿಗೆ ಯಾವುದು ವಿರುದ್ಧವೋ ಅದನ್ನು ಕತ್ತಿಹಿಡಿದೇ ತೆಗೆದುಕೊಳ್ಳಬೇಕು ನೀವು, ಬೇರೆ ಯಾವ ರೀತಿಯಲ್ಲೂ ಅಲ್ಲ.

ಈ ಸಭೆಯ ಮುಂದೆ ಹೇಳಿಕೊಳ್ಳಬೇಕಾದುದು ಎಷ್ಟೋ ಇದೆ ನನ್ನ ಹೃದಯದಲ್ಲಿ. ನನ್ನ ಹೃದಯದಲ್ಲಿ ಉಕ್ಕುತ್ತಿದ್ದ ವಿಷಯವನ್ನು ಆಗಲೇ ಹೇಳಿದೇನೆ. ನನಗೆ ಇದು ಸಾವು—ಬದುಕಿನ ಸಮಸ್ಯೆ, ತಿಳಿದುಕೊಳ್ಳಿ. ಹಿಂದೂಗಳೂ ಮುಸಲ್ಮಾನರೂ ನಾವು, ಯಾರೊಳಗೂ ಕಿಂಚಿತ್ತೂ

ಸಂಕೋಚವಿಲ್ಲದೆ ಹೃದಯದ ಏಕತೆಯನ್ನು ಸಾಧಿಸಬೇಕು ಎನ್ನುವುದಾದರೆ, ಮೊಟ್ಟಮೊದಲು ಸಾಮ್ರಾಜ್ಯದ ಸಂಗತಿಗಳನ್ನು ಕಳಿಸುವ ಪ್ರಯತ್ನದಲ್ಲಿ ಒಂದುಗೂಡಬೇಕು. ಹೇಗೂ ಪಾಕಿಸ್ತಾನ ಭಾರತದ ಒಂದು ಭಾಗ ಆಗುವುದಿದ್ದರೆ ಮುಸಲ್ಮಾನರು ಭಾರತ ಸ್ವಾತಂತ್ರ್ಯ ಸಮರಕ್ಕೆ ಸೇರಲು ಆಕ್ಷೇಪಣೆ ಏನು? ಆದ್ದರಿಂದ ಹಿಂದೂಗಳೂ ಮುಸಲ್ಮಾನರೂ ಮೊಟ್ಟಮೊದಲು ಸ್ವಾತಂತ್ರ್ಯದ ಹೋರಾಟದಲ್ಲಿ ಒಂದಾಗಬೇಕು. ಯುದ್ಧ ಬಹಳ ದಿನ ತಡೆದೀತೆಂದು ಜಿನ್ನಾ ಸಾಹೇಬರು ತಿಳಿದಿದಾರೆ. ನಾನು ಒಪ್ಪುವುದಿಲ್ಲ. ಇನ್ನೂ ಆರು ತಿಂಗಳು ಯುದ್ಧ ನಡೆದರೆ ನಾವು ಚೀನಾವನ್ನು ಕಾಪಾಡುವುದು ಹೇಗೆ?

ಆದ್ದರಿಂದ ಈ ಕೂಡಲೇ ಬೇಕು ನನಗೆ ಸ್ವಾತಂತ್ರ್ಯ. ಸಾಧ್ಯವಾದರೆ ಇವತ್ತು ರಾತ್ರಿಯೇ, ಬೆಳಕು ಹರಿಯುವುದರೊಳಗಾಗಿಯೇ. ಮತೀಯ ಸೌಹಾರ್ದ—ಐಕಮತ್ಯಗಳಿಗಾಗಿ ಕಾಯುವಂತಿಲ್ಲ ಸ್ವಾತಂತ್ರ್ಯ. ಆ ಐಕಮತ್ಯ ಬರದಿದ್ದರೆ, ಅದಕ್ಕಾಗಿ ಮಾಡಬೇಕಾದ ಬಲಿದಾನ ಇನ್ನೂ ಹೆಚ್ಚಾದೀತು. ಆದರೆ ಕಾಂಗ್ರೆಸ್ಸು ಸ್ವಾತಂತ್ರ್ಯವನ್ನಾದರೂ ಗಳಿಸಬೇಕು, ಇಲ್ಲವೆ ಆ ಪ್ರಯತ್ನದಲ್ಲಿ ನಿರ್ನಾಮವಾಗಬೇಕು. ಕಾಂಗ್ರೆಸ್ಸು ಯಾವ ಸ್ವಾತಂತ್ರ್ಯ ಸಾಧನೆಗೆ ಹೋರಾಡುತ್ತಿದೆಯೋ ಅದು ಕಾಂಗ್ರೆಸ್ಸಿಗರಿಗೆ ಮಾತ್ರ ಅಲ್ಲ, ನಲವತ್ತು ಕೋಟಿ ಭಾರತೀಯರಿಗೆ, ಮರೆಯಬೇಡಿ. ಕಾಂಗ್ರೆಸಿಗರು ಎಂದೆಂದಿಗೂ ಜನತೆಯ ವಿನಮ್ರ ಸೇವಕರಾಗಿರಬೇಕು.

ಬ್ರಿಟಿಷರು ಮುಸ್ಲಿಮರಿಂದ ಸಾಮ್ರಾಜ್ಯವನ್ನು ಕಸಿದುಕೊಂಡಿದ್ದರು. ಈಗ ಅವರು ಮತ್ತೆ ಮುಸ್ಲಿಂ ಲೀಗಿಗೆ ಪ್ರಭುತ್ವವನ್ನು ವಹಿಸಿಕೊಟ್ಟರೆ ತೆಗೆದುಕೊಳ್ಳಲು ಸಿದ್ಧ ಎಂದು ಕಾಯಿದೆ ಆಜಂ ಹೇಳಿದಾರೆ. ಹಾಗಾದರೆ ಇದು ಮುಸ್ಲಿಂ ರಾಜ್ಯ ಆಗುತ್ತದೆ. ಮೌಲಾನಾ ಸಾಹೇಬರಾಗಲಿ ನಾನಾಗಲಿ ಮಾಡಿದ ಸೂಚನೆಯಲ್ಲಿ ಮುಸ್ಲಿಂ ರಾಜ್ಯದ ಅಥವಾ ಮುಸ್ಲಿಂ ಆಧಿಪತ್ಯದ ವಾಸನೆ ಇಲ್ಲ. ಕಾಂಗ್ರೆಸ್ಸಿಗೆ ಯಾವ ಒಂದು ಮತದವರ ಅಥವಾ ಗುಂಪಿನ ಆಧಿಪತ್ಯದಲ್ಲಿ ನಂಬಿಕೆಯಿಲ್ಲ. ಅದಕ್ಕೆ ಪ್ರಜಾತಂತ್ರದಲ್ಲಿ ನಂಬಿಕೆಯಿದೆ. ಅದರಲ್ಲಿ ಮುಸಲ್ಮಾನರು, ಕ್ರಿಶ್ಚಿಯನರು, ಪಾರಸೀಗಳು, ಯಹೂದ್ಯರು, ಹಿಂದೂಗಳು, ಈ ವಿಶಾಲ ದೇಶದ ಪ್ರತಿಯೊಂದು ಮತದವರೂ ಇದ್ದಾರೆ,

ಮುಸ್ಲಿಂ ರಾಜ್ಯ ಅನಿವಾರ್ಯವಾದರೆ ಬರಲಿ, ಆದರೆ ಅದಕ್ಕೆ ನಮ್ಮ ಸಮ್ಮತಿಯ ಮುದ್ರೆಯನ್ನು ಹೇಗೆ ಒತ್ತಬೇಕು? ಒಂದು ಜಾತಿ—ಮತ ಉಳಿದವುಗಳ ಮೇಲೆ ಆಧಿಪತ್ಯದ ಕಾಲ ಎಂದು ನಾವು ಒಪ್ಪುವುದು ಹೇಗೆ?

ಈ ದೇಶದ ಕೋಟಿಗಟ್ಟಲೆ ಮುಸಲ್ಮಾನರು ಹಿಂದೂ ಬುಡಕಟ್ಟಿನವರು. ಹಿಂದೂಸ್ಥಾನವಲ್ಲದೆ ಬೇರೊಂದು ಅವರ ತಾಯಿನಾಡು ಆದೀತೆ? ನನ್ನ ಹಿರಿಯ ಮಗ ಕೆಲವು ವರ್ಷಗಳ ಕೆಳಗೆ ಇಸ್ಲಾಂ ಸ್ವೀಕರಿಸಿದ. ಅವನ ತಾಯಿನಾಡು ಯಾವುದು? ಪೋರಬಂದರೋ ಪಂಜಾಬೋ? ಮುಸಲ್ಮಾನರನ್ನು ನಾನು ಕೇಳುತ್ತೇನೆ: ಹಿಂದೂಸ್ಥಾನ ನಿಮ್ಮ ತಾಯಿನಾಡು ಅಲ್ಲದಿದ್ದರೆ ಬೇರೆ ಯಾವುದು ನಿಮ್ಮ ದೇಶ? ಇಸ್ಲಾಮನ್ನು ಅಪ್ಪಿದ ನನ್ನ ಮಗನನ್ನು ಯಾವ ತಾಯಿನಾಡಿಗೆ ಕಳಿಸುತ್ತೀರಿ? ಅವನು ಇಸ್ಲಾಂ ಸ್ವೀಕರಿಸಿದ ಮೇಲೆ ಅವನ ತಾಯಿ ಪತ್ರ ಬರೆದರು. ತನ್ನ ಅನುಯಾಯಿಗಳನ್ನು ಹೆಂಡ ಕುಡಿಯಬೇಡಿ ಎನ್ನುತ್ತದೆಯಲ್ಲ ಇಸ್ಲಾಂ. ನೀನು ಬಿಟ್ಟದೀಯಾ? ಆ ಮತಾಂತರವನ್ನೆ ನೋಡಿ ಹಿಗ್ಗಿದವರಿಗೆ ಆಕೆ ಹೇಳಿದಳು: ಅವನು ಮುಸಲ್ಮಾನನಾದ ಚಿಂತೆಯಿಲ್ಲ ನನಗೆ, ಅವನು ಕುಡುಕನಾದದ್ದೇ ಚಿಂತೆ. ಅವನು ಮತಾಂತರಗೊಂಡಮೇಲೂ ನೀವು ಮುಸ್ಲಿಮರು ಅವನ ಕುಡಿತವನ್ನು ಸಹಿಸುತ್ತೀರಾ? ಕುಡಿಕುಡಿದು ಲಫಂಗನಾಗಿದಾನೆ ಅವನು. ಅವನನ್ನೆ ಮತ್ತೆ ಮನುಷ್ಯನನ್ನು ಮಾಡಿದರೆ ನೀವು ಮಾಡಿದ ಮತಾಂತರ ಸಾರ್ಥಕ. ಮುಸಲ್ಮಾನನಾದ್ದರಿಂದ ಹೆಂಡವನ್ನೂ ಹೆಂಗಸನ್ನೂ ಅವನು ಬಿಡುವಂತೆ ಮಾಡಿ. ಆ ಪರಿವರ್ತನೆ ಬಾರದಿದ್ದರೆ ಅವನ ಮತಾಂತರ ವ್ಯರ್ಥವಾದೀತು, ಅವನೊಡನೆ ನಮ್ಮ ಅಸಹಕಾರ ಮುಂದುವರಿಯಬೇಕಾದೀತು.

ಈ ದೇಶದಲ್ಲಿ ವಾಸ ಆಗಿರುವವರೆಲ್ಲರಿಗೂ ತಾಯಿನಾಡು ಹಿಂದೂಸ್ಥಾನ. ಆದ್ದರಿಂದ ಪ್ರತಿಯೊಬ್ಬ ಮುಸಲ್ಮಾನನೂ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಹಕರಿಸಬೇಕು. ಕಾಂಗ್ರೆಸ್ಸು ಯಾವ ಒಂದು ಮತದವರದೂ ಜಾತಿಯವರದೂ ಅಲ್ಲ. ಇಡೀ ಜನಾಂಗದ್ದು, ರಾಷ್ಟ್ರದ್ದು. ಮುಸಲ್ಮಾನರು ಕಾಂಗ್ರೆಸ್ಸನ್ನು ಸ್ವಾಧೀನಪಡಿಸಿಕೊಳ್ಳಬಹುದು. ಕಾಂಗ್ರೆಸ್ಸಿನಲ್ಲಿ ಅತ್ಯಧಿಕವಾಗಿ ಸೇರಿ ಅದನ್ನು ತುಂಬಿ, ತಮಗೆ ಇಷ್ಟವಾದ ದಾರಿಯಲ್ಲಿ ಅದನ್ನು ನಡೆಸಬಹುದು. ಕಾಂಗ್ರೆಸ್ಸು ಹಿಂದೂಗಳ ಪರವಾಗಿ ಹೋರಾಡು

ತ್ತಿಲ್ಲ. ಇಡೀ ರಾಷ್ಟ್ರದ ಪರವಾಗಿ, ಅಲ್ಪ ಸಂಖ್ಯಾತರ ಸಮೇತ, ಕಾಂಗ್ರೆಸಿಗರು ಒಬ್ಬನೇ ಒಬ್ಬ ಮುಸಲ್ಮಾನನನ್ನು ಕೊಂದ ಸುದ್ದಿ ಕಿವಿಗೆ ಬಿದ್ದರೆ ನನಗೆ ನೋವು ಆಗುತ್ತದೆ. ಬರಲಿರುವ ಕ್ರಾಂತಿಯಲ್ಲಿ ಕಾಂಗ್ರೆಸಿಗರು ಹಿಂದೂಗಳ ಆಕ್ರಮಣದಿಂದ ಮುಸಲ್ಮಾನರನ್ನೂ, ಮುಸಲ್ಮಾನರ ಆಕ್ರಮಣದಿಂದ ಹಿಂದೂಗಳನ್ನು ಕಾಪಾಡಿಯಾರು. ಅವರ ಶ್ರದ್ಧೆಯು ಅಂಶ, ಅಹಿಂಸೆಯು ಸಾರ. ಇಂಥ ಸಂದರ್ಭಗಳಲ್ಲಿ ನಿಮ್ಮ ತಲೆ ಕೆಡಕೂಡದು. ಹಿಂದೂವಾಗಲಿ ಮುಸಲ್ಮಾನನಾಗಲಿ ತನ್ನ ಸಂಸ್ಥೆಗೆ ಪ್ರತಿಯೊಬ್ಬ ಕಾಂಗ್ರೆಸಿಗನೂ ಸಲ್ಲಿಸ ಬೇಕಾದ ಋಣ ಇದು. ಹೀಗೆ ನಡೆಯುವ ಮುಸಲ್ಮಾನ ಇಸ್ಲಾಮಿಗೆ ಸೇವೆ ಸಲ್ಲಿಸುತ್ತಾನೆ. ಮುಂದೆ ಬರಲಿರುವ ರಾಷ್ಟ್ರವ್ಯಾಪಿ ಹೋರಾಟದಲ್ಲಿ ಯಶಸ್ಸನ್ನು ಗಳಿಸಲು ಪರಸ್ಪರ ವಿಶ್ವಾಸ ಅಗತ್ಯ.

ಮುಸ್ಲಿಂ ಲೀಗಿನ ಇಂಗ್ಲಿಷರ ವಿರೋಧ ಇರುವುದರಿಂದ ಈ ಸಲದ ಹೋರಾಟದಲ್ಲಿ ಹೆಚ್ಚಿನ ತ್ಯಾಗವನ್ನು ಮಾಡಬೇಕಾದೀತೆಂದು ಹೇಳಿದೇನೆ. ಸರ್ ಫ್ರೆಡರಿಕ್ ಪಕಲ್ ಹೊರಡಿಸಿದ ರಹಸ್ಯ ಪರಿಪತ್ರವನ್ನು ನೋಡಿದೀರಿ. ಅವರು ಹಿಡಿದ ದಾರಿ ಆತ್ಮವಿನಾಶದ ದಾರಿ. ಕಾಂಗ್ರೆಸ್ಸಿನ ವಿರುದ್ಧ ಹೋರಾಡಲು ನಾಯಿಕೊಡೆಗಳಂತೆ ಹುಟ್ಟಿದ ಸಂಸ್ಥೆಗಳನ್ನು ಬಹಿರಂಗ ವಾಗಿಯೇ ಪ್ರಚೋದಿಸಿದಾರೆ. ವಕ್ರಮಾರ್ಗಾವಲಂಬಿ ಸಾಮ್ರಾಜ್ಯದ ಸಂಗಡ ವ್ಯವಹರಿಸಬೇಕಾಗಿದೆ ನಾವು. ನಮ್ಮದು ನೇರ ದಾರಿ. ಕಣ್ಣು ಮುಚ್ಚಿಕೊಂಡು ಕೂಡ ನಡೆಯಬಹುದು. ಸತ್ಯಾಗ್ರಹದ ಸೊಬಗೆ ಅದು.

ಸತ್ಯಾಗ್ರಹದಲ್ಲಿ ಮೋಸ, ಸುಳ್ಳು ಯಾವ ಬಗೆಯ ಅಸತ್ಯಕ್ಕೂ ಸ್ಥಾನವಿಲ್ಲ. ಇವತ್ತು ಕಪಟ, ಅಸತ್ಯಗಳು ಜಗತ್ತಿನಲ್ಲಿ ಮೆರೆಯುತ್ತಿವೆ. ಇಂಥ ಪ್ರಸಂಗವನ್ನು ನೋಡಿಯೂ ನಿಸ್ಸಹಾಯನಾಗಿ ನಾನು ಕೂಡಲಾರೆ. ಈ ಕಾಲದಲ್ಲಿ ಯಾರೂ ಮಾಡಿರಲಾರದಷ್ಟು ಭಾರತದ ಆದ್ಯಂತವೂ ನಾನು ಸುತ್ತಾಡಿದೇನೆ. ಈ ಮೂಕ ಜನಕೋಟಿ ನನ್ನಲ್ಲಿ ತಮ್ಮ ಗೆಳೆಯನನ್ನು ಪ್ರತಿನಿಧಿಯನ್ನು ಕಂಡರು. ಮನುಷ್ಯ ಮಾತ್ರನಿಗೆ ಸಾಧ್ಯವಿದ್ದಷ್ಟು ನಾನೂ ಅವರೊಡನೆ ತಾದಾತ್ಮ್ಯವನ್ನು ಸಾಧಿಸಿದೆ. ಅವರ ಕಣ್ಣಿನಲ್ಲಿ ನಂಬಿಕೆಯನ್ನು ನೋಡಿದೆ. ಅದನ್ನು ಈಗ ಉಪಯೋಗಿಸಿಕೊಳ್ಳಬೇಕು ಎನ್ನುತ್ತೇನೆ. ಹಿಂಸೆ–ಅಸತ್ಯಗಳ ಆಶ್ರಯದಲ್ಲಿ ನಿಂತ ಈ ಸಾಮ್ರಾಜ್ಯ

ನೊಡನೆ ಹೋರಾಡಲು. ಈ ಪರಮ ಮುಹೂರ್ತದಲ್ಲಿ ನನ್ನ ಒಳಗಿನ ಬೆಳಕನ್ನು ಹೊರಗೆ ಹರಿಯಿಸದೆ ಹೇಗೆ ಸುಮ್ಮನೆ ಕೂಡಲಿ? ಜಪಾನನ್ನು ಸ್ವಲ್ಪ ತಡೆಯಿರಿ ಎನ್ನಲೆ? ಇಡೀ ಜಗತ್ತನ್ನೆ ಸುಡುತ್ತಿದೆ ದಳ್ಳುರಿ. ಈ ಹೊತ್ತಿನಲ್ಲಿ ನಿಷ್ಕ್ರಿಯನಾಗಿ ಸುಮ್ಮನೆ ಕೂತರೆ ತಾನು ಕೊಟ್ಟ ಐಶ್ವರ್ಯ ವನ್ನು ಉಪಯೋಗಿಸಲಿಲ್ಲವೇಕೆ ಎಂದು ದೇವರು ನನ್ನನ್ನು ದಂಡಿಸಿಯಾನು. ಪರಿಸ್ಥಿತಿ ಬೇರೆಯಾಗಿದ್ದರೆ ಸ್ವಲ್ಪ ತಡೆಯಿರಿ ಎಂದು ನಿಮಗೆ ಹೇಳುತ್ತಿದ್ದೆ. ಆದರೆ ಪರಿಸ್ಥಿತಿ ಅಸಹನೀಯವಾಗಿದೆ. ಕಾಂಗ್ರೆಸ್ಸಿಗೆ ಬೇರೆ ದಾರಿಯೆ ಇಲ್ಲ.

ಆದರೂ ಹೋರಾಟ ಈಗಲೇ ಪ್ರಾರಂಭ ಆಗುವುದಿಲ್ಲ. ಸಮಸ್ತ ಅಧಿಕಾರವನ್ನು ನನ್ನ ಕೈಗೆ ಕೊಟ್ಟಿದೀರಿ, ಅಷ್ಟೇ. ನಾನು ಈಗ ವೈಸರಾಯ್ ರನ್ನು ಭೇಟಿಮಾಡಿ ಕಾಂಗ್ರೆಸ್ಸಿನ ಬೇಡಿಕೆಯನ್ನು ಒಪ್ಪಿಕೊಳ್ಳುವಂತೆ ಅವರನ್ನು ಪ್ರಾರ್ಥಿಸುತ್ತೇನೆ. ಇದು ಎರಡು ಮೂರು ವಾರ ಹಿಡಿಯ ಬಹುದು. ಈ ಮಧ್ಯೆ ನೀವು ಏನು ಮಾಡುತ್ತೀರಿ? ಈ ಮಧ್ಯ ಕಾಲದಲ್ಲಿ ಎಲ್ಲರೂ ಮಾಡಬಹುದಾದ ಕಾರ್‍ಯಕ್ರಮ ಏನು? ನನಗೆ ಮೊಟ್ಟಮೊದಲು ತೋರುವುದು ರಾಟೆ. ನಿಮಗೆ ಗೊತ್ತೇ ಇದೆ. ಮೌಲಾನಾಗೆ ಇದೇ ಉತ್ತರ ಕೊಟ್ಟೆ. ಅದು ಯಾವುದೂ ಅವರಿಗೆ ಬೇಡವಾಯಿತು. ಮುಂದೆ ಅದರ ಮಹತ್ವವನ್ನು ಅವರೇ ಅರಿತುಕೊಂಡರು. ನೀವು ಮಾಡಬೇಕೆಂದರೆ ಹದಿನಾಲ್ಕು ಅಂಶಗಳ ರಚನಾತ್ಮಕ ಕಾರ್ಯ ಇದ್ದೇ ಇವೆ. ಇನ್ನೇನು ಹೆಚ್ಚು ಮಾಡಬೇಕು ನೀವು? ಹೇಳುತ್ತೇನೆ. ಈ ಗಳಿಗೆಯಿಂದ ಮುಂದೆ ಪ್ರತಿ ಯೊಬ್ಬನೂ ನೀವು ಗಂಡಸರು, ಹೆಂಗಸರು, ಸ್ವತಂತ್ರರು ಎಂದುಕೊಳ್ಳಿ, ಇನ್ನು ಈ ಸಾಮ್ರಾಜ್ಯಕ್ಕೆ ಅಧೀನರಲ್ಲ ಸ್ವತಂತ್ರರು ಎಂದು ವ್ಯವಹಾರ ಮಾಡಿ.

ಬರೀ ಭ್ರಾಂತಿಯಲ್ಲ ನಾನು ಹೇಳುತ್ತಿರುವುದು. ಸ್ವಾತಂತ್ರ್ಯದ ಸಾರ ಅದು. ತಾನು ಸ್ವತಂತ್ರ ಎಂದುಕೊಂಡ ಗಳಿಗೆಯಲ್ಲೇ ಗುಲಾಮನ ಸಂಕೋಲೆ ಕಡಿದು ಹೋಯಿತು. ಧಣಿಗೆ ಸ್ಪಷ್ಟವಾಗಿ ಹೇಳಿಬಿಡುತ್ತಾನೆ: ಈ ಗಳಿಗೆಯವರೆಗೆ ನಾನು ನಿನ್ನ ಗುಲಾಮನಾಗಿದ್ದೆ. ಇನ್ನು ಮುಂದೆ ಅಲ್ಲ. ನೀನು ನನ್ನನ್ನು ಕೊಂದರೂ ಸರಿ. ಬದುಕಗೊಟ್ಟರೆ, ನನ್ನನ್ನು

ಬಂಧ ಮುಕ್ತನಾಗಿಮಾಡು ನಿನ್ನ ಸ್ವಪ್ರೇರಣೆಯಿಂದ. ನಿನ್ನಿಂದ ಮತ್ತೇನು ನಾನು ಬೇಡುವುದಿಲ್ಲ ಎನ್ನುತ್ತೇನೆ. ನಾನೇ ದುಡಿದು ಅನ್ನ ಬಟ್ಟೆ ಗಳಿಸಿ ಕೊಳ್ಳುತ್ತಿದ್ದೆ. ಆದರೂ ನೀನು ನನಗೆ ಅನ್ನ ಬಟ್ಟೆ ಕೊಟ್ಟೆ, ಅನ್ನ ಬಟ್ಟೆ ಗಾಗಿ ಇಷ್ಟು ದಿನ ನಾನು ನಿನ್ನನ್ನು ಅವಲಂಬಿಸಿದೆ, ದೇವರನ್ನಲ್ಲ, ಆದರೆ ದೇವರು ನನಗೆ ಸ್ವಾತಂತ್ರ್ಯದ ಆಕಾಂಕ್ಷೆಯನ್ನು ಹುಟ್ಟಿಸಿದಾನೆ ಈಗ. ಇಂದಿನಿಂದ ನಾನು ಸ್ವತಂತ್ರ. ಇನ್ನು ಮೇಲೆ ನಿನ್ನನ್ನು ಅವಲಂಬಿಸು ವುದಿಲ್ಲ.

ಭರವಸೆ ಕೊಡುತ್ತೇನೆ. ವೈಸರಾಯರ ಬಳಿ ಮಂತ್ರಿಮಂಡಲಿ ಗಳಿಗಾಗಿ ಮತ್ತೊಂದಕ್ಕಾಗಿ ನಾನು ಚೌಕಾಸಿ ಮಾಡುವುದಿಲ್ಲ. ಸಂಪೂರ್ಣ ಸ್ವಾತಂತ್ರ್ಯಕ್ಕೆ ತಿಲ ಮಾತ್ರ ಕಡಮೆ ಆದರೂ ನಾನು ಒಪ್ಪುವುದಿಲ್ಲ. ಬಹುಶಃ ಉಪ್ಪಿನ ತೆರಿಗೆಯ ವರ್ಜನ, ಪಾನ ನಿರೋಧ ಮುಂತಾದವನ್ನು ಅವರು ಸೂಚಿಸಬಹುದು. ನಾನೇನೋ ಸ್ವಾತಂತ್ರ್ಯಕ್ಕೆ ಎಳ್ಳಷ್ಟು ಕಡಮೆ ಇಲ್ಲ ಎನ್ನುತ್ತೇನೆ.

ಚಿಕ್ಕದೊಂದು ಮಂತ್ರ ಹೇಳಿಕೊಡುತ್ತೇನೆ ನಿಮಗೆ. ನಿಮ್ಮ ಹೃದಯದಲ್ಲಿ ಅದನ್ನು ಮುದ್ರಿಸಿಕೊಳ್ಳಿ. ನಿಮ್ಮ ಪ್ರತಿ ಉಸಿರೂ ಆ ಮಂತ್ರವನ್ನು ಉಸಿರು. 'ಮಾಡು ಇಲ್ಲವೆ ಮಾಡಿ' ಇದು ಆ ಮಂತ್ರ. ದೇಶವನ್ನು ಬಿಡುಗಡೆ ಮಾಡಿಯೇವು, ಇಲ್ಲವೆ ಆ ಪ್ರಯತ್ನದಲ್ಲಿ ಪ್ರಾಣ ಬಿಟ್ಟೇವು. ನಮ್ಮ ದಾಸ್ಯ ಮುಂದುವರಿದುದನ್ನು ನೋಡಲು ನಾವು ಬದುಕುವುದಿಲ್ಲ. ನಿಜವಾದ ಕಾಂಗ್ರೆಸ್ಸಿಗರು, ಗಂಡಸರು ಹೆಂಗಸರು ಪ್ರತಿಯೊಬ್ಬರೂ, ನಮ್ಮ ದೇಶ ದಾಸ್ಯದಲ್ಲಿ ಶೃಂಖಲೆಯಲ್ಲಿ ಇರುವುದನ್ನು ನೋಡಲು ನಾವು ಬದುಕುವುದಿಲ್ಲ ಎಂಬ ದೃಢ ನಿರ್ಧಾರದಿಂದ ಹೋರಾಟ ದಲ್ಲಿ ಸೇರಲಿ. ಈ ಪ್ರತಿಜ್ಞೆ ಮಾಡಿ. ಸೆರೆಮನೆಯ ಯೋಚನೆ ಮಾಡ ಬೇಡಿ. ಸರಕಾರ ನನ್ನನ್ನು ಬಂಧಿಸದೆ ಬಿಟ್ಟರೆ ನಿಮಗೆ ಸೆರೆಮನೆಗೆ ಹೋಗುವ ತೊಂದರೆ ತಪ್ಪಿಸುತ್ತೇನೆ. ಏಕಕಾಲದಲ್ಲಿ ಅನೇಕ ಮಂದಿಯನ್ನು ಸೆರೆಯಲ್ಲಿ ಇಡುವ ಕಷ್ಟವನ್ನು ಸರಕಾರಕ್ಕೆ ಕೊಡ ಬಯಸುವುದಿಲ್ಲ. ಸರ ಕಾರ ತಾನೇ ಕಷ್ಟದಲ್ಲಿ ಇದೆ. ಇನ್ನು ಮುಂದೆ ಪ್ರತಿಯೊಂದು ಕ್ಷಣದಲ್ಲೂ ಸ್ವಾತಂತ್ರ್ಯ ಗಳಿಸಲು, ಅವಶ್ಯವಿದ್ದರೆ ಅದಕ್ಕಾಗಿ ಸಾಯಲು, ಬದುಕಿದೇವೆ

ನಾವು ಎಲ್ಲರಲ್ಲಿ ಪ್ರತಿಯೊಬ್ಬರೂ. ಭಗವತ್ ಸಾಕ್ಷಿಯಾಗಿ ನಿಮ್ಮ ಅಂತರಾತ್ಮ ಸಾಕ್ಷಿಯಾಗಿ ಪ್ರತಿಜ್ಞೆ ಮಾಡಿ : ಸ್ವಾತಂತ್ರ್ಯ ಬರುವವರೆಗೆ ವಿರಮಿಸುವುದಿಲ್ಲ, ಆ ಪ್ರಯತ್ನದಲ್ಲಿ ಪ್ರಾಣಬಿಡಲಿಕ್ಕೂ ಸಿದ್ಧ ಎಂದು. ಪ್ರಾಣ ತೊರೆದವನಿಗೆ ಲಭಿಸೀತು, ಅದನ್ನೂ ಉಳಿಸಿಕೊಳ್ಳಲು ಯತ್ನಿಸಿದವನು ಕಳೆದು ಕೊಂಡಾನು. ಸ್ವಾತಂತ್ರ್ಯ ಹೇಡಿಗಳಿಗೆ, ದುರ್ಬಲ ಮನಸದವರಿಗೆ ಅಲ್ಲ.

ಪತ್ರಿಕೋದ್ಯಮಿಗಳಿಗೆ ಒಂದು ಮಾತು. ಇದುವರೆಗೆ ರಾಷ್ಟ್ರೀಯ ಬೇಡಿಕೆಗೆ ನೀವು ಕೊಟ್ಟ ಒತ್ತಾಸೆಗಾಗಿ ನಿಮಗೆ ಅಭಿನಂದನೆ. ಎಂಥ ನಿರ್ಬಂಧದಲ್ಲಿ ಅನಾನುಕೂಲಗಳಲ್ಲಿ ನೀವು ಕೆಲಸ ಮಾಡಬೇಕೋ ನಾನು ಬಲ್ಲೆ. ನಿಮ್ಮ ಸಂಕೋಲೆಗಳನ್ನು ಈಗ ಕಡಿಯಿರಿ ಎನ್ನುತ್ತೇನೆ. ಸ್ವಾತಂತ್ರ್ಯ ಕ್ಕಾಗಿ ಪ್ರಾಣಾರ್ಪಣೆ ಮಾಡುವುದರಲ್ಲಿ ಮೇಲ್ಪಂಗ್ತಿ ಹಾಕುವ ಹೆಮ್ಮೆಯ ಗೌರವ ಪತ್ರಿಕೆಗಳದಾಗಲಿ. ಸರಕಾರ ನಿಮ್ಮ ಲೇಖನಿಯನ್ನು ಅದುಮಿಡ ಲಾರದು. ಮುದ್ರಣಾಲಯಗಳು ಮುಂತಾದ ದೊಡ್ಡ ದೊಡ್ಡ ಆಸ್ತಿಗಳಿವೆ ನಿಮಗೆ. ಇವನ್ನು ಸರಕಾರ ಜಫ್ತಿಮಾಡೀತು ಎಂಬ ಅಂಜಿಕೆ ಇದೆ, ಬಲ್ಲೆ. ನೀವಾಗಿ ನಿಮ್ಮ ಮುದ್ರಣಾಲಯಗಳ ಜಫ್ತಿಗೆ ದಾರಿಮಾಡಬೇಡಿ. ಮುದ್ರ ಣಾಲಯ ಜಫ್ತಿ ಆದರೂ ಸರಿಯೆ, ನನ್ನ ಮಟ್ಟಿಗೆ ನಾನಂತೂ ನನ್ನ ಲೇಖನಿ ಯನ್ನು ಕೆಳಗಿಡುವುದಿಲ್ಲ, ನಿಮಗೆ ಗೊತ್ತಿರಬೇಕು, ಹಿಂದೆ ನನ್ನ ಮುದ್ರ ಣಾಲಯ ಜಫ್ತಿಯಾಗಿತ್ತು. ಆಮೇಲೆ ಹಿಂದಕ್ಕೆ ಕೊಟ್ಟರು, ಆದರೆ ಆ ಅಂತಿಮ ತ್ಯಾಗವನ್ನು ಮಾಡಲು ನಿಮಗೆ ಹೇಳುತ್ತಿಲ್ಲ. ಮಧ್ಯಮಾರ್ಗವನ್ನು ಸೂಚಿಸುತ್ತೇನೆ. ನಿಮ್ಮ ಸ್ಥಾಯಿ ಸಮಿತಿಯನ್ನು ಮುಕ್ತಾಯಮಾಡಿ. ಈಗಿನ ನಿರ್ಬಂಧಗಳು ಇರುವವರೆಗೆ ನಾವು ಬರೆಯುವುದಿಲ್ಲ ಎನ್ನಿ. ಭಾರತ ಸ್ವತಂತ್ರವಾದ ಮೇಲೆಯೆ ಲೇಖನಿ ಹಿಡಿಯುತ್ತೇವೆ ಎನ್ನಿ. ಸರ್ ಫ್ರೆಡರಿಕ್ ಪಕಲ್‌ಗೆ ಹೇಳಿ — ನೀವು ಹೇಳಿದಂತೆ ನಾವು ಮಾಡಲಾರೆವು. ನಿಮ್ಮ ಸುದ್ದಿ—ಟಿಪ್ಪಣಿ ಎಲ್ಲವೂ ಬರೀ ಸುಳ್ಳಿನ ಕಂತೆ, ನಾವು ಅವನ್ನು ಪ್ರಕಟ ಸುವುದಿಲ್ಲ. ಮನಃಪೂರ್ಣವಾಗಿ ನಾವು ಕಾಂಗ್ರೆಸ್ಸಿನ ಕಡೆಯೇ ಎಂದು ಬಹಿರಂಗವಾಗಿ ಹೇಳಿ. ಇಷ್ಟು ಮಾಡಿದರೆ ನೀವು, ಹೋರಾಟ ಪ್ರಾರಂಭ ಆಗುವ ಮೊದಲೇ ವಾತಾವರಣವನ್ನು ಬದಲುಮಾಡಿ ಬಿಟ್ಟೀರಿ.

ನರೇಂದ್ರರಿಗೆ ಕೊಡಬೇಕಾದ ಎಲ್ಲ ಮರ್ಯಾದೆಯನ್ನು ಕೊಟ್ಟು ಅವರಿಂದ ಒಂದು ಚಿಕ್ಕ ಮಾತನ್ನು ಬೇಡುತ್ತೇನೆ. ನಾನು ಅವರ ಹಿತೈಷಿ.

ನಾನೂ ದೇಶೀ ಸಂಸ್ಥಾನದಲ್ಲಿ ಹುಟ್ಟಿದವನು. ತನ್ನ ದೊರೆಯನ್ನು ಬಿಟ್ಟು ಬೇರೆ ಯಾರನ್ನೂ ಬಲಗೈಯಿಂದ ನಮಸ್ಕರಿಸುವುದಿಲ್ಲ ಎಂದು ತಿರಸ್ಕರಿಸಿದವನು ನಮ್ಮ ತಾತ. ಆದರೆ, ತನ್ನ ಅಂತರಾತ್ಮಕ್ಕೆ ವಿರುದ್ಧವಾಗಿ ಕೆಲಸ ಮಾಡೆಂದು ತನ್ನ ದೊರೆಯೇ ಹೇಳಿದರೂ ತಾನು, ಆತನ ದಿವಾನ, ಮಾಡಲು ಸಾಧ್ಯವಿಲ್ಲ ಎಂದು ಹೇಳಬಲ್ಲ. ಹೇಳಬೇಕಾಗಿತ್ತು ಎನಿಸುತ್ತದೆ ನನಗೆ. ದೊರೆಗಳ ಉಪ್ಪು ತಿಂದಿದೇನೆ ನಾನು, ಉಪ್ಪಿಗೆ ಎರಡು ಬಗೆಯಲಾರೆ. ಸ್ವಾಮಿಭಕ್ತ ಸೇವಕನಂತೆ ನರೇಂದ್ರರಿಗೆ ಎಚ್ಚರಿಕೆ ಕೊಡುವುದು ನನ್ನ ಕರ್ತವ್ಯ. ನಾನು ಇನ್ನೂ ಬದುಕಿರುವಾಗಲೇ ಅವರು ಹೆಜ್ಜೆ ಹಾಕಿದರೆ ಸ್ವತಂತ್ರ ಭಾರತದಲ್ಲಿ ಅವರಿಗೆ ಯೋಗ್ಯ ಸ್ಥಳ ಸಿಕ್ಕೀತು. ಜವಾಹರಲಾಲರ ಸ್ವತಂತ್ರ ಭಾರತದ ಯೋಜನೆಯಲ್ಲಿ ಅಧಿಕಾರಿಗಳೂ ಇಲ್ಲ, ಅಧಿಕಾರ ಸಂಪನ್ನರೂ ಇಲ್ಲ. ಆಸ್ತಿ ಎಂಬುದೆಲ್ಲವೂ ರಾಜ್ಯದ್ದು ಎಂಬುದು ಜವಾಹರಲಾಲರ ಮತ. ಯೋಜನಾಬದ್ಧ ಅರ್ಥ ವ್ಯವಸ್ಥೆ ಬೇಕು ಆತನಿಗೆ. ಭಾರತವನ್ನು ಯೋಜನೆಯ ಪ್ರಕಾರ ಪುನಃ ನಿರ್ಮಿಸಬೇಕು. ಹಾರಬೇಕು ಮುಗಿಲಿನಲ್ಲಿ ಎನ್ನುತ್ತಾನೆ ಆತ. ನನಗೆ ಬೇಕಾಗಿಲ್ಲ. ನಾನು ಕಲ್ಪಿಸಿಕೊಂಡ ಭಾರತದಲ್ಲಿ ರಾಜರಿಗೆ, ಜಮೀನುದಾರರಿಗೆ ಒಂದು ಸ್ಥಾನ ಇದೆ. ತ್ಯಾಗಮಾಡಿ ಭೋಗಿಸಿ ಎಂದು ಅವರಿಗೆ ಅತ್ಯಂತ ವಿನಯದಿಂದ ಹೇಳುತ್ತೇನೆ. ತಮ್ಮ ಆಸ್ತಿಯ ಒಡೆತನವನ್ನು ಬಿಟ್ಟುಕೊಟ್ಟು ರಾಜರು ಅದಕ್ಕೆ ನಿಜವಾದ ವಿಶ್ವಸ್ತರಾಗಲಿ. ಜನರ ನೆರವಿಯಲ್ಲಿ ದೇವರನ್ನು ಕಾಣುತ್ತೇನೆ ನಾನು. ನರೇಂದ್ರರು ತಮ್ಮ ಜನರಿಗೆ ಹೇಳಲಿ: ‘ರಾಜ್ಯದ ಒಡೆಯರು ಧಣಿಗಳು ನೀವು. ನಿಮ್ಮ ಕಿಂಕರರು ನಾವು’ ಪ್ರಜಾ ಸೇವಕರಾಗಿ, ನಿಮ್ಮ ಸೇವೆಯನ್ನು ಜನರಿಗೆ ಸಲ್ಲಿಸಿ ಎನ್ನುತ್ತೇನೆ ದೊರೆಗಳಿಗೆ. ಸಾಮ್ರಾಜ್ಯವೂ ಅವರಿಗೆ ಅಧಿಕಾರ ಕೊಡುತ್ತದೆ. ಆದರೆ ಜನರಿಂದಲೇ ಸತ್ತೆಯನ್ನೂ ಪಡೆಯಲಿ ಅವರು ಎನ್ನುತ್ತೇನೆ, ಬಾಧಕವಲ್ಲದ ವಿಲಾಸ ಭೋಗಗಳನ್ನು ಭೋಗಿಸಬೇಕು ಎಂದರೆ ಪ್ರಜಾ ಸೇವಕರಂತೆ ಹಾಗೆ ಮಾಡಲಿ, ದೊರೆಗಳು ದಿವಾಳಿ ತೆಗೆಯಬೇಕಾದ್ದಿಲ್ಲ. ಆದರೆ ಸದಾ ಕಾಲವೂ ಗುಲಾಮಗಿರಿಯಲ್ಲಿಯೇ ಬದುಕಬೇಕು ಎನ್ನುತ್ತೀರಾ? ಪರದೇಶದ ಪ್ರಭುತ್ವಕ್ಕೆ ಮಣಿದು ಕಪ್ಪ ತೆರುವ ಬದಲು ನಿಮ್ಮ ಪ್ರಜೆಯ ಸಾರ್ವಭೌಮತ್ವವನ್ನು ಏಕೆ ಒಪ್ಪ

ಬಾರದು ಎನ್ನುತ್ತೇನೆ. ರಾಜಕೀಯ ಶಾಖೆಗೆ ಬರೆದು ತಿಳಿಸಿರಿ—'ಜನರು ಈಗ ಎಚ್ಚೆತ್ತಿದಾರೆ. ಈ ಮಹಾ ಪ್ರತಾಪದ ಮುಂದೆ ಮಹಾ ಸಾಮ್ರಾಜ್ಯಗಳೇ ಉರುಳುತ್ತಿವೆ, ನಾವು ಹೇಗೆ ತಡೆಯಬೇಕು? ಆದ್ದರಿಂದ ಇವತ್ತಿನಿಂದ ನಾವು ಪ್ರಜಾಧೀನರು, ಮುಳುಗಿದರೂ ತೇಲಿದರೂ ಅವರ ಜೊತೆಯಲ್ಲೆ.' ನಾನು ಹೇಳುವ ಈ ಮಾತು ಶಾಸನ ವಿರುದ್ಧವಾದುದಲ್ಲ. ರಾಜರನ್ನು ಬಲತ್ಕಾರಮಾಡುವಂಥ ಒಪ್ಪಂದಗಳು ಏನೂ ಇಲ್ಲ ನನಗೆ ತಿಳಿದಿರುವ ಮಟ್ಟಿಗೆ. ದೇಶೀ ರಾಜರ ಪ್ರಜೆಗಳಾದರೂ ನಾವೂ ಭಾರತ ರಾಷ್ಟ್ರದವರೇ. ರಾಜರು ಪ್ರಜೆಯ ಜೊತೆಗೆ ಬಂದು ನಿಂತರೆ ಅವರ ನಾಯಕತ್ವ ಇರಲಿ, ಇಲ್ಲದಿದ್ದರೆ ಬೇಡ ಎಂದು ಸಂಸ್ಥಾನಗಳ ಪ್ರಜೆಯೂ ಘೋಷಿಸೀತು. ಈ ಘೋಷಣೆಯಿಂದ ಸಿಟ್ಟುಗೊಂಡು ಸಂಸ್ಥಾನಾಧೀಶರು ಜನರನ್ನು ಕೊಂದರೆ ಜನರು ಧೈರ್ಯದಿಂದ ಸಾವನ್ನು ಎದುರಿಸಿಯಾರು, ವಚನ ಭ್ರಷ್ಟರಾಗಲಿಕ್ಕಿಲ್ಲ.

ಆದರೆ ಗುಟ್ಟಾಗಿ ಏನನ್ನೂ ಮಾಡಲಾಗದು. ಇದು ಬಹಿರಂಗ ವಿಪ್ಲವ. ಈ ಹೋರಾಟದಲ್ಲಿ ಗುಟ್ಟು-ರಹಸ್ಯ ಪಾಪ, ಸ್ವತಂತ್ರ ಮನುಷ್ಯ ಗುಟ್ಟಿನಲ್ಲೇಕೆ ಕೆಲಸ ಮಾಡುತ್ತಾನೆ? ನಾನು ಬೇಡ ಎಂದರೂ, ನಿಮಗೆ ಸ್ವಾತಂತ್ರ್ಯ ಬಂದ ಮೇಲೆ ನೀವೂ ಗೂಢಾಚಾರರನ್ನು ಇಡುತ್ತೀರಿ. ಆದರೆ ಈ ಹೋರಾಟದಲ್ಲಿ ಬಹಿರಂಗವಾಗಿಯೇ ಕೆಲಸ ಮಾಡಬೇಕು ನಾವು. ಪಲಾಯನ ಮಾಡದೆ ಗುಂಡಿನೇಟನ್ನು ಎದುರಿಸಲು ಸಿದ್ಧರಾಗಿರಬೇಕು.

ಸರಕಾರಿ ನೌಕರರಿಗೂ ಒಂದು ಮಾತು ಹೇಳುತ್ತೇನೆ. ಈಗಲೇ ತಮ್ಮ ನೌಕರಿಗಳಿಗೆ ಅವರು ರಾಜೀನಾಮೆ ಕೊಡಬೇಕಾಗಿಲ್ಲ. ದಿವಂಗತ ನ್ಯಾಯಮೂರ್ತಿ ರಾನಡೆ ರಾಜೀನಾಮೆ ಕೊಡಲಿಲ್ಲ. ನಾನು ಕಾಂಗ್ರೆಸಿನವನು ಎಂದು ಬಹಿರಂಗವಾಗಿಯೆ ಘೋಷಿಸಿದರು. ನಾನು ನ್ಯಾಯಾಧೀಶನೇ ಆದರೂ ಕಾಂಗ್ರೆಸಿನವನು, ಬಹಿರಂಗವಾಗಿಯೆ ಕಾಂಗ್ರೆಸ್ ಅಧಿವೇಶನಕ್ಕೆ ಹೋಗುತ್ತೇನೆ; ಆದರೆ ನ್ಯಾಯ ಪೀಠದಲ್ಲಿದ್ದಾಗ ನನ್ನ ರಾಜಕೀಯ ಮತ ನನ್ನ ನಿಷ್ಪಕ್ಷಪಾತತನಕ್ಕೆ ಅಡ್ಡ ಬರಲು ಬಿಡುವುದಿಲ್ಲ ಎಂದು ಅವರು ಸರಕಾರಕ್ಕೆ ಹೇಳಿದರು. ಕಾಂಗ್ರೆಸ್ ಮಂಟಪದಲ್ಲೇ ಸಮಾಜ ಸುಧಾರಣೆ ಸಮ್ಮೇಳನವನ್ನು ನಡೆಸುತ್ತಿದ್ದರು. ಸರಕಾರಿ ನೌಕರರನ್ನೆಲ್ಲ ರಾನಡೆಯವರ

ಜಾಡಿನಲ್ಲಿ ನಡೆಯಿರಿ, ಫ್ರೆಡರಿಕ್ ಪಕಲ್ ಹೊರಡಿಸಿದ ಗುಪ್ತ ಪರಿಪತ್ರಕ್ಕೆ ಉತ್ತರ ರೂಪವಾಗಿ ಕಾಂಗ್ರೆಸ್ಸಿನಲ್ಲಿ ನಮ್ಮ ಭಕ್ತಿಯನ್ನು ಘೋಷಿಸಿ ಎಂದು ಕೇಳುತ್ತೇನೆ.

ಸದ್ಯಕ್ಕೆ ನಿಮ್ಮನ್ನು ನಾನು ಕೇಳುವುದು ಇಷ್ಟೇ. ಇನ್ನು ವೈಸ್‌ರಾಯರಿಗೆ ಬರೆಯುತ್ತೇನೆ. ಪತ್ರ ವ್ಯವಹಾರವನ್ನು ನೀವು ಓದಬಹುದು. ಈಗಲ್ಲ, ವೈಸರಾಯರ ಒಪ್ಪಿಗೆ ಪಡೆದು ನಾನು ಪ್ರಕಟಿಸಿದಾಗ, ನಾನು ಆ ಪತ್ರದಲ್ಲಿ ಮಂಡಿಸುವ ಬೇಡಿಕೆಯನ್ನು ಸಮರ್ಥಿಸುತ್ತೇವೆ ಎಂದು ಹೇಳಲು ನೀವು ಸ್ವತಂತ್ರರು. ಒಬ್ಬ ನ್ಯಾಯಾಧೀಶರು ಬಂದು ನನಗೆ ಹೇಳಿದರು. ನಮಗೆ ರಹಸ್ಯ ಪರಿಪತ್ರಗಳು ಬರುತ್ತವೆ. ಏನು ಮಾಡಬೇಕು ? ನಾನು ಹೇಳಿದೆ. ನಾನಾಗಿದ್ದರೆ ಅದನ್ನು ಉದಾಸೀನ ಮಾಡುತ್ತಿದ್ದೆ. ಬಹಿರಂಗವಾಗಿಯೆ ಸರಕಾರಕ್ಕೆ ಹೇಳಬಹುದಲ್ಲ; ನಿಮ್ಮ ರಹಸ್ಯ ಪರಿಪತ್ರ ಬಂದಿದೆ. ನಾನು ಕಾಂಗ್ರೆಸ್ಸಿನ ಪಕ್ಷದವನು. ಹೊಟ್ಟೆಯ ಪಾಡಿಗೆ ಸರಕಾರದ ಚಾಕರಿ ಮಾಡಿದರೂ ಈ ರಹಸ್ಯ ಪರಿಪತ್ರಗಳನ್ನು ನಾನು ಪಾಲಿಸುವುದಿಲ್ಲ, ಗುಪ್ತಕಾರ್ಯಗಳನ್ನು ಮಾಡುವುದೂ ಇಲ್ಲ.

ಈ ಕಾರ್ಯಕ್ರಮದಲ್ಲಿ ಸಿಪಾಯಿಗಳಿಗೂ ಸ್ಥಾನ ಇದೆ. ರಾಜೀನಾಮೆ ಕೊಟ್ಟು ಸೇನೆಯನ್ನು ಬಿಟ್ಟು ಬನ್ನಿ ಎಂದು ಅವರನ್ನು ಈಗಲೇ ಕರೆಯುವುದಿಲ್ಲ. ನನ್ನ ಬಳಿಗೆ, ಜವಾಹರಲಾಲರ ಬಳಿಗೆ, ಮೌಲಾನಾರ ಬಳಿಗೆ ಬರುತ್ತಾರೆ ಸಿಪಾಯಿಗಳು. “ ನಾವು ಸಂಪೂರ್ಣವಾಗಿ ನಿಮ್ಮ ಕಡೆಯೇ, ಸರಕಾರದ ದಬ್ಬಾಳಿಕೆ ನಮಗೆ ಸಾಕಾಗಿದೆ ” ಎನ್ನುತ್ತಾರೆ. ಸರಕಾರಕ್ಕೆ ಹೇಳಿ—ನಮ್ಮ ಹೃದಯ ಕಾಂಗ್ರೆಸ್ ಪಕ್ಷದಲ್ಲಿ. ನಾವಂತೂ ಕೆಲಸ ಬಿಡುವುದಿಲ್ಲ. ಸಂಬಳ ತೆಗೆದುಕೊಳ್ಳುವವರೆಗೂ ಕೆಲಸ ಮಾಡುತ್ತೇವೆ. ನ್ಯಾಯವಾದ ಅಪ್ಪಣೆಗಳನ್ನು ಪಾಲಿಸುತ್ತೇವೆ. ನಮ್ಮವರ ಮೇಲೆ ಗುಂಡು ಹಾರಿಸಿ ಎಂದರೆ ಹಾರಿಸುವುದಿಲ್ಲ ಎನ್ನಿ, ಎನ್ನುತ್ತೇನೆ.

ಇಷ್ಟು ಮಾಡುವ ಧೈರ್ಯ ಇಲ್ಲದವರಿಗೆ ಹೇಳಬೇಕಾದ್ದು ಏನೂ ಇಲ್ಲ. ಅವರ ದಾರಿಯಲ್ಲಿ ಅವರು ಹೋಗಲಿ. ಆದರೆ ನೀವು ಇಷ್ಟು ಮಾಡಿದರೆ ಇಡೀ ವಾತಾವರಣದಲ್ಲಿಯೆ ವಿದ್ಯುತ್ ಸಂಚಾರ ಆಗುತ್ತದೆ. ಆಮೇಲೆ

ಸರಕಾರ ಬಾಂಬಿನ ಮಳೆಗರೆಯಲಿ ಬೇಕಾದರೆ. ಆಗ ಭೂಮಿಯ ಮೇಲಿನ ಯಾವ ಶಕ್ತಿಯೂ ನಿಮ್ಮನ್ನು ಬಂಧನದಲ್ಲಿ ಇಡಲಾರದು.

ಈಗ ಹೋರಾಟಕ್ಕೆ ಸೇರುತ್ತೇವೆ, ಸ್ವಲ್ಪ ದಿನ ಬಿಟ್ಟು ಮತ್ತೆ ವಿದ್ಯಾಭ್ಯಾಸಕ್ಕೆ ಹೋಗುತ್ತೇವೆ ಎಂದರೆ ವಿದ್ಯಾರ್ಥಿಗಳು ನಾನು ಅವರನ್ನು ಕರೆಯುವುದಿಲ್ಲ. ಹೋರಾಟದ ಕಾರ್ಯಕ್ರಮವನ್ನು ನಿರ್ಧರಿಸುವವರೆಗೆ ಸದ್ಯಕ್ಕೆ ವಿದ್ಯಾರ್ಥಿಗಳಿಗೆ ಇಷ್ಟು ಹೇಳುತ್ತೇನೆ. ಹೋಗಿ ನಿಮ್ಮ ಪ್ರಾಧ್ಯಾಪಕರನ್ನು ಕೇಳಿ — ನಾವು ಕಾಂಗ್ರೆಸ್ಸಿನವರು; ನೀವು ಕಾಂಗ್ರೆಸ್ಸೋ, ಸರಕಾರದ ಕಡೆಯೋ? ಕಾಂಗ್ರೆಸ್ಸಿನವರಾದರೆ ನಿಮ್ಮ ಸ್ಥಾನಗಳನ್ನು ಬಿಡಬೇಡಿ. ಆದರೆ ನಮಗೆ ಸ್ವಾತಂತ್ರ್ಯವನ್ನು ಕಲಿಸಿ, ಸ್ವಾತಂತ್ರ್ಯಕ್ಕೆ ನಮ್ಮನ್ನು ಕೊಂಡೊಯ್ಯಿರಿ ಎನ್ನಿ. ಜಗತ್ತಿನಲ್ಲೆಲ್ಲ ಎಲ್ಲ ಸ್ವಾತಂತ್ರ್ಯ ಸಂಗ್ರಾಮಗಳಲ್ಲೂ ವಿದ್ಯಾರ್ಥಿಗಳು ಹೆಚ್ಚಾಗಿ ಕೆಲಸ ಮಾಡಿದ್ದಾರೆ.

ಹೋರಾಟ ಪ್ರತ್ಯಕ್ಷವಾಗಿ ಪ್ರಾರಂಭ ಆಗುವುದರೊಳಗಾಗಿ ಇರುವ ಸಮಯದಲ್ಲಿ ನಾನು ಹೇಳಿದ ಈ ಸ್ವಲ್ಪ ಏನಾದರೂ ಮಾಡಿದರೆ, ವಾತಾವರಣವನ್ನು ಬದಲಾಯಿಸಿ ಮುಂದಿನ ಹೆಜ್ಜೆಗೆ ಸ್ಥಳ ಮಾಡಿರಿ.

ಇನ್ನೂ ಹೇಳಬೇಕಾದುದು ಬಹಳ ಇದೆ. ಆದರೆ ನನ್ನ ಹೃದಯ ಭಾರವಾಗಿದೆ. ಆಗಲೇ ನಿಮ್ಮ ಸಮಯವನ್ನು ಹೆಚ್ಚಾಗಿ ತೆಗೆದುಕೊಂಡಿದ್ದೇನೆ. ಇಂಗ್ಲಿಷಿನಲ್ಲೂ ಒಂದೆರಡು ಮಾತು ಹೇಳಬೇಕಾಗಿದೆ. ಈ ಅವೇಳೆಯಲ್ಲೂ ಇಷ್ಟು ಸಹನೆಯಿಂದ ಲಕ್ಷ್ಯ ಕೊಟ್ಟು ನನ್ನ ಮಾತು ಕೇಳಿದಿರಿ. ನಿಮಗೆ ವಂದನೆ. ನಿಜವಾಗಿ ಸಿಪಾಯಿಗಳು ಹೀಗೆ ಮಾಡುವುದು. ಇಪ್ಪತ್ತೆರಡು ವರ್ಷಗಳಿಂದ ವಾಣಿಯ ಸಂಯಮ ಮಾಡಿದ್ದೇನೆ, ಶಕ್ತಿಯನ್ನು ಸಂಗ್ರಹಿಸಿದ್ದೇನೆ. ತನ್ನ ಶಕ್ತಿಯನ್ನು ಪೋಲು ಮಾಡದವನು ನಿಜವಾದ ಬ್ರಹ್ಮಚಾರಿ. ಆದ್ದರಿಂದ ಅವನು ವಾಣಿಯ ಸಂಯಮ ಮಾಡುತ್ತಾನೆ. ಇಷ್ಟು ವರ್ಷವೂ ಅದಕ್ಕಾಗಿ ಪ್ರಯತ್ನಿಸಿದ್ದೇನೆ. ಆದರೆ ಇವತ್ತು ನನ್ನ ಹೃದಯವನ್ನು ಬಿಚ್ಚಿ ನಿಮ್ಮ ಮುಂದೆ ತೋಡಿಕೊಳ್ಳಬೇಕಾದ ಪ್ರಸಂಗ ಬಂತು. ನಿಮ್ಮ ಸಹನೆಗೆ ಮೀರಿದ್ದೀತು, ಭಾರವಾಗಿದ್ದೀತು. ಅವರೂ ತೋಡಿಕೊಂಡೆ. ಅದಕ್ಕಾಗಿ ಪಶ್ಚಾತ್ತಾಪವಿಲ್ಲ ನನಗೆ. ನನ್ನ

ಸಂದೇಶವನ್ನು ನಿಮಗೆ ಹೇಳಿದೇನೆ. ನಿಮ್ಮ ಮೂಲಕ ಇಡೀ ಭಾರತಕ್ಕೇ ಮುಟ್ಟಿಸಿದೇನೆ.

[ಆಮೇಲೆ ಇಂಗ್ಲಿಷಿನಲ್ಲಿ ಮಾತನಾಡಿದರು.]

ನನ್ನ ಜೀವವನ್ನು ತಳಮಳಗೊಳಿಸುತ್ತಿದ್ದುದನ್ನು, ಯಾರ ಸೇವೆ ಮಾಡುವ ಭಾಗ್ಯ ನನಗೆ ದೊರೆಯಿತೋ ಅವರ ಮುಂದೆ ತೋಡಿಕೊಳ್ಳಲು ಬಲು ದೀರ್ಘ ಸಮಯವನ್ನು ತೆಗೆದುಕೊಂಡೆ. ನನ್ನನ್ನು ನಾಯಕ ಎಂದಿದಾರೆ. ಸೇನೆಯ ಪರಿಭಾಷೆಯಲ್ಲಿ ದಳಪತಿ ಎಂದಿದಾರೆ. ನಾನು ಹಾಗೆ ತಿಳಿದಿಲ್ಲ. ಪ್ರೇಮ ವಿನಾ ನನ್ನಲ್ಲಿ ಯಾವ ಆಯುಧವೂ ಇಲ್ಲ, ಅಧಿಕಾರ ನಡೆಸಲು. ಒಂದು ಕೋಲು ಹಿಡಿದಿದೇನೆ. ನಿರಾಯಾಸವಾಗಿ ಅದನ್ನು ತುಂಡು ತುಂಡು ಮಾಡಬಹುದು. ನಡೆಯುವಾಗ ನನಗೆ ಅದು ಊರೆಗೋಲು, ಇಂಥ ಹೆಳವನಿಗೆ ಇಷ್ಟು ಭಾರ ಹೊರಿಸಿದಾಗ ಅವನಿಗೆ ಹಿಗ್ಗು ಇಲ್ಲ. ನಿಮ್ಮ ಮುಂದೆ ದಳಪತಿಯು ಹಾಗೆ ಅಲ್ಲದೆ ನಮ್ರ ಸೇವಕನಂತೆ ಬಂದರೆ ನೀವು ಆ ಭಾರವನ್ನು ಹಂಚಿಕೊಂಡೀರಿ. ಉತ್ತಮ ಸೇವೆ ಮಾಡಬಲ್ಲವನೇ ಸಮಗಾರರಲ್ಲಿ ಮುಖಂಡನಾಗಬಲ್ಲ.

ಆದ್ದರಿಂದ ನನ್ನ ಎದೆಯಲ್ಲಿ ಉಕ್ಕಿಬರುತ್ತಿರುವ ಭಾವಗಳನ್ನು ನಿಮಗೆ ಹಂಚಿಕೊಟ್ಟು, ನನಗೆ ಸಾಧ್ಯವಿದ್ದಷ್ಟು ಸಂಗ್ರಹವಾಗಿ ನೀವು ಹೇಗೆ ಮೊದಲ ಹೆಜ್ಜೆ ಹಾಕಬೇಕೆಂದು ನನ್ನ ನಿರೀಕ್ಷೆಯೋ ಹೇಳುತ್ತೇನೆ.

ಪ್ರಾರಂಭದಲ್ಲಿಯೇ ಹೇಳುತ್ತೇನೆ. ನಿಜವಾದ ಹೋರಾಟ ಇವತ್ತು ಮೊದಲಾಗುವುದಿಲ್ಲ. ಇನ್ನೂ ಬಹಳ ಶಾಸ್ತ್ರ ಆಗಬೇಕು. ನನ್ನದು ಯಾವಾಗಲೂ ಹಾಗೆಯೇ. ಭಾರಕ್ಕೆ ತಿಣಿಕುತ್ತಿದ್ದೇನೆ. ಸದ್ಯ ಎಲ್ಲಿ ನನ್ನ ಪತ್ತು ಕಟ್ಟಿದೆಯೋ ಅಲ್ಲೇ, ಅವರ ನಡುವೆಯೆ, ನಾನು ಇನ್ನೂ ವಾದಮಾಡಬೇಕಾಗಿದೆ. ಈ ಕೆಲವು ವಾರಗಳಲ್ಲಿ ಹಿಂದೂಸ್ಥಾನದಲ್ಲೂ ಪರದೇಶಗಳಲ್ಲೂ ಅನೇಕ ಜನ ಗೆಳೆಯರ ವಿಶ್ವಾಸವನ್ನು ಕಳೆದುಕೊಂಡಿದೇನೆ. ಕೆಲವರು ನನಗೆ ವಿವೇಕ ಇದೆಯೆ ಎಂದು ಸಂದೇಹ ಪಡುತ್ತಿದಾರೆ. ನನ್ನ ಪ್ರಾಮಾಣಿಕತನದಲ್ಲೂ ನಂಬಿಕೆ ಹೋಗಿದೆ. ನನ್ನ ವಿವೇಕವೇನಂಥ ಮಹಾ ಭಾಗ್ಯವಲ್ಲ. ಹೋದರೆ ಹೋಗಲಿ. ಆದರೆ ಪ್ರಾಮಾಣಿಕತನ ಮಾತ್ರ ನನ್ನ ಮಹಾನಿಧಿ. ಅದನ್ನು ಕಳೆದುಕೊಳ್ಳಲಾರೆ.

ಸತ್ಯಶೋಧಕನಾದ ಮನುಷ್ಯ, ಮಾನವ ಲೋಕವನ್ನೂ ತನ್ನ ದೇಶವನ್ನೂ ಭಯ ಕಪಟಗಳಿಲ್ಲದೆ ತನ್ನ ತಿಳಿವಿಗೆ ಅನುಸಾರ ಸೇವೆಮಾಡುವವನು, ಇಂಥವನ ಬಾಳಿನಲ್ಲಿ ಈ ತರದ ಪ್ರಸಂಗ ಬರುತ್ತವೆ. ಕಳೆದ ಐವತ್ತು ವರ್ಷ ನನಗೆ ಬೇರೆ ದಾರಿ ಗೊತ್ತಿಲ್ಲ, ಮಾನವ ಲೋಕದ ವಿನಮ್ರ ಸೇವಕ ಆಗಿದ್ದೇನೆ. ಅನೇಕ ಸಲ ನನ್ನಿಂದ ಸಾಧ್ಯವಿದ್ದಷ್ಟು ಸೇವೆಯನ್ನು ಸಾಮ್ರಾಜ್ಯಕ್ಕೆ ಸಲ್ಲಿಸಿದೇನೆ. ಎದುರು ಹೇಳಿಯಾರೆಂಬ ಭಯವಿಲ್ಲದೆ ಹೇಳುತ್ತೇನೆ. ನನ್ನ ಇಡೀ ಬಾಳಿನಲ್ಲಿಯೆ ಸ್ವಂತಕ್ಕಾಗಿ ಯಾವುದನ್ನೂ ಎಂದೂ ಕೇಳಿಲ್ಲ. ಇವತ್ತು ಹೇಗೋ ಹಾಗೇ ಮೊದಲೂ ಲಿನ್‌ಲತ್‌ಗೋ ಸ್ನೇಹವನ್ನೂ ಸವಿದಿದೇನೆ. ಅಧಿಕಾರದ ಸಂಬಂಧವನ್ನು ದಾಟಿ ಬೆಳೆದಿದೆ ಆ ಗೆಳೆತನ. ಈ ಮಾತನ್ನು ಲಿನ್‌ಲಿತ್‌ಗೋ ಪುಷ್ಟೀಕರಿಸಿಯಾರೋ ಇಲ್ಲವೋ ನಾನರಿಯೆ. ಆದರೆ ನನಗೂ ಅವರಿಗೂ ವೈಯಕ್ತಿಕ ಸ್ನೇಹ ಬೆಳೆಯಿತು. ಒಂದು ಸಲ ತಮ್ಮ ಮಗಳಿಗೆ ನನ್ನ ಪರಿಚಯ ಮಾಡಿಕೊಟ್ಟರು. ಅವರ ಅಳಿಯನಿಗೆ ನನ್ನನ್ನು ಕಂಡು ವಿಶ್ವಾಸ ಹುಟ್ಟಿತು. ನನಗಿಂತ ಹೆಚ್ಚಾಗಿ ಮಹಾದೇವನಲ್ಲಿ ಪ್ರೀತಿ ಹುಟ್ಟಿತು ಅವನಿಗೆ. ಅವನೂ, ಸತಿ ಆನ್ ಇಬ್ಬರೂ ನನ್ನಲ್ಲಿ ಬಂದರು. ಆಕೆ ವಿಧೇಯಳಾದ ಪ್ರೀತಿಯ ಮಗಳು. ಅವರ ಯೋಗಕ್ಷೇಮದಲ್ಲಿ ನನಗೆ ಆಸಕ್ತಿ. ಈ ತುಣುಕು ಮಾತುಗಳನ್ನು ಹೇಳಲು ಕಾರಣ, ನಮ್ಮಲ್ಲಿ ಇರುವ ವೈಯಕ್ತಿಕ ಸ್ನೇಹವನ್ನು ತಿಳಿಸಲಿಕ್ಕೆ. ಆದರೆ ಸಾಮ್ರಾಜ್ಯದ ಪ್ರತಿನಿಧಿಯಂತೆ ಲಿನ್‌ಲಿತ್‌ಗೋ ವಿರುದ್ಧ ನಾನೇನಾದರೂ ಕದನ ಹೂಡಬೇಕಾಗಿ ಬಂದರೆ ಈ ವೈಯಕ್ತಿಕ ಸ್ನೇಹಬಂಧನ ಯಾವುದೂ ಅಡ್ಡಬರುವುದಿಲ್ಲ ಎಂದು ಇಲ್ಲಿ ಘೋಷಿಸುತ್ತೇನೆ. ಆ ಸಾಮ್ರಾಜ್ಯದ ಶಕ್ತಿಯನ್ನು ಮೂಕ ಜನಕೋಟಿಯ ಶಕ್ತಿಯ ಬಲದಿಂದ ಪ್ರತಿರೋಧಿಸಬೇಕು ನಾನು ಎಂದು ಕಾಣುತ್ತಿದೆ. ಇದಕ್ಕೆ ಯಾವ ಮಿತಿಯೂ ಇಲ್ಲ. ಈ ಹೋರಾಟಕ್ಕೆ ಅಹಿಂಸೆಯೇ ಧೋರಣೆ ಎಂಬುದೇ ಮಿತಿ. ಇಂಥಾ ಸಂಬಂಧ ಇರುವ ವೈಸರಾಯರೊಡನೆ ಹೋರಾಟ ನಡೆಸುವುದು ಬಹಳ ಘೋರತರ ವಿಷಯ. ಆತ ಅನೇಕ ಸಲ ನನ್ನ ಮಾತನ್ನು ನಂಬಿದಾರೆ. ಅನೇಕ ಸಲ ನಮ್ಮ ಜನರ ವಿಷಯದಲ್ಲಿ, ಬಹಳ ಹೆಮ್ಮೆ—ಹಿಗ್ಗುಗಳಿಂದ ಇದನ್ನು ಹೇಳುತ್ತಿದೇನೆ. ಬ್ರಿಟಿಷ್ ಜನಾಂಗಕ್ಕೆ, ಸಾಮ್ರಾಜ್ಯಕ್ಕೆ ಸತ್ಯವಾಗಿ ನಡೆಯ

ಬೇಕೆಂಬ ನನ್ನ ಆಸೆಯ ಕುರುಹಾಗಿ ಇದನ್ನೂ ತಿಳಿಸುತ್ತಿದೇನೆ. ಆ ಸಾಮ್ರಾಜ್ಯ ನನ್ನ ವಿಶ್ವಾಸವನ್ನು ಕಳೆದುಕೊಂಡಾಗ ವೈಸರಾಯ್ ಆಗಿದ್ದ ಇಂಗ್ಲಿಷ್ ಮನುಷ್ಯನಿಗೆ ತಿಳಿಯಿತು ಎಂಬುದನ್ನು ತೋರಿಸಲು ತಿಳಿಸುತ್ತಿದೇನೆ.

ಆಮೇಲೆ ಈ ಗಳಿಗೆಯಲ್ಲಿ ಉಕ್ಕಿ ಬರುತ್ತಿರುವ ಚಾರ್ಲಿ ಅಂಡ್ರೂಸರ ಪವಿತ್ರಸ್ಮರಣೆ ಇದೆ. ಅಂಡ್ರೂಸರ ಆತ್ಮ ನನ್ನ ಸುತ್ತಲೂ ಹಾರಾಡುತ್ತಿದೆ. ಇಂಗ್ಲಿಷ್ ಸಂಸ್ಕೃತಿಯಲ್ಲಿ ಉತ್ತಮೋತ್ತಮವಾದ ಸಂಪ್ರದಾಯಕ್ಕೆ ಆತ ಪ್ರತೀಕ ನನಗೆ. ಅಂಡ್ರೂಸರೊಡನೆ ನನಗಿದ್ದ ಸಂಬಂಧಕ್ಕಿಂತ ಸಮೀಪ ಸಂಬಂಧ ಯಾವ ಭಾರತೀಯನೊಡನೆಯೂ ನನಗಿಲ್ಲ. ಆತನ ವಿಶ್ವಾಸ ನನಗಿತ್ತು. ನಮ್ಮಿಬ್ಬರ ನಡುವೆ ಮುಚ್ಚು ಮರೆ ಇರಲಿಲ್ಲ. ದಿನವೂ ಪರಸ್ಪರ ಮನ ಬಿಚ್ಚಿ ಮಾತಾಡುತ್ತಿದ್ದೆವು. ಎಳ್ಳಷ್ಟು ಸಂಕೋಚವಿಲ್ಲದೆ ತನ್ನ ಮನಸ್ಸಿನಲ್ಲಿದ್ದುದನ್ನೆಲ್ಲ ಆತ ಹೇಳುತ್ತಿದ್ದ. ಆತ ಗುರುದೇವನ ಗೆಳೆಯನೂ ಹೌದು. ಆದರೆ ಗುರುದೇವನ ಸನ್ನಿಧಿಯಲ್ಲಿ ಆತ ಭೀರು. ಗುರುದೇವನಿಗೆ ಅದು ಬೇಕಿರಲಿಲ್ಲ. ಅಂಡ್ರೂಸರಲ್ಲಿ ಆ ವಿಶೇಷ ವಿನಮ್ರತೆ ಇತ್ತು. ನನಗಂತೂ ಅತ್ಯಂತ ನಿಕಟ ಸ್ನೇಹಿತನಾದ. ಅನೇಕ ವರ್ಷಗಳ ಕೆಳಗೆ ದಿವಂಗತ ಗೋಖಲೆಯವರ ಪತ್ರ ತೆಗೆದುಕೊಂಡು ದಕ್ಷಿಣ ಆಫ್ರಿಕಾಕ್ಕೆ ಬಂದ. ನಮ್ಮ ದುರದೃಷ್ಟ, ಆತ ತೀರಿಹೋದ. ಎಂಥ ಸೊಗಸಾದ ಆಂಗ್ಲ ಮನುಷ್ಯ! ಅಂಡ್ರೂಸರ ಆತ್ಮ ನನ್ನ ಮಾತನ್ನು ಕೇಳುತ್ತಿದೆ, ನಾ ಬಲ್ಲೆ.

ಕಲ್ಕತ್ತೆಯ ಮೆಟ್ರೊಪಾಲಿಟನ್ ಡಾ. ವೆಸ್ಟ್‌ಕಾಟ್ ತಮ್ಮ ಆಶೀರ್ವಾದಗಳ ತಂತಿಯನ್ನು ಕಳಿಸಿದಾರೆ. ನನ್ನ ಈ ಪ್ರಯತ್ನಕ್ಕೆ ಅವರು ವಿರುದ್ಧ ಇವತ್ತು. ಆತ ಪರಮ ಭಾಗವತನೆಂದು ನನ್ನ ಅಭಿಪ್ರಾಯ. ಅವರ ಹೃದಯದ ಮಾತು ನನಗೆ ತಿಳಿಯುತ್ತದೆ. ಅವರ ಹೃದಯ ನನ್ನ ಪರ.

ಇವತ್ತು ನನ್ನ ವಿರುದ್ಧ ಬೇಕಾದುದು ಹೇಳಲಿ ಜನ, ಪಾಶ್ಚಾತ್ಯರಲ್ಲಿ ಅನೇಕ ಗೆಳೆಯರ ಆದರ ವಿಶ್ವಾಸಗಳನ್ನು ಕಳೆದುಕೊಂಡಿದ್ದರೂ, ಕೆಲವರ ನಂಬಿಕೆಯನ್ನೆ ಕಳೆದುಕೊಂಡಿದ್ದರೂ ಈ ಹಿನ್ನೆಲೆಯಿಂದ ಹೇಳಬಯಸು

ತ್ತೇನೆ—ಅವರ ಪ್ರೀತಿಗಾಗಿ ಗೆಳೆತನಕ್ಕಾಗಿ ಮಣಿದೇನೇ ವಿನಾ ನನ್ನೊಳಗಿನ ವಾಣಿಯನ್ನು ದಮನಮಾಡಲಾರೆ. ಅಂತಃಕರಣವೆನ್ನಿ, ನನ್ನ ಮೂಲ ಸ್ವಭಾವದ ಪ್ರಚೋದನೆ ಎನ್ನಿ, ಏನೆಂದರೂ ಸರಿಯೆ, ಅದು ಇರುವುದೇನೋ ಸತ್ಯ. ನನ್ನ ಸಂಕಟವನ್ನು ಗಟ್ಟಿಯಾಗಿ ಕೂಗಿ ಹೇಳಲು ಒಳಗೆ ಏನೋ ಒಂದು ಒತ್ತಾಯ ಮಾಡುತ್ತಿದೆ. ಮಾನವ ಲೋಕವನ್ನು ಬಲ್ಲೆ. ಹೆಚ್ಚು ಪುಸ್ತಕ ಓದದಿದ್ದರೂ ಸ್ವಲ್ಪ ಮನಶ್ಶಾಸ್ತ್ರ ಕಲಿತಿದ್ದೇನೆ. ಇಂಥವನಿಗೆ ಅವೇನೆಂಬುದು ಸರಿಯಾಗಿ ಗೊತ್ತು. ನನಗೆ ಎಂದೆಂದೂ ಮೋಸ ಮಾಡದ ಆ ಒಳಗಿನದು ಹೇಳುತ್ತಿದೆ: ಇಡೀ ಜಗತ್ತನ್ನೆ ಎದುರಿಸಬೇಕಾದೀತು ನೀನು; ಒಬ್ಬನೇ ನಿಲ್ಲಬೇಕಾದೀತು. ರಕ್ತದಿಂದ ಕೆಂಪೇರಿದ ಕಣ್ಣಿನಿಂದ ಜಗತ್ತು ನಿನ್ನ ಕಡೆ ನೋಡೀತು. ಜಗತ್ತಿಗೆ ಎದೆಗೊಟ್ಟು ನಿಲ್ಲಬೇಕು. ಜಗತ್ತಿಗೆ ಅಂಜಬೇಡ. ಹೃದಯವಾಸಿಯಾದ ಆ ಪುಟ್ಟ ವಸ್ತುವನ್ನೂ ನಂಬು. ಆ ವಾಣಿ ಹೇಳುತ್ತಿದೆ—ಗೆಳೆಯರು, ಹೆಂಡತಿ, ಎಲ್ಲವನ್ನೂ ಬಿಡು; ಯಾವುದಕ್ಕಾಗಿ ನೀನು ಬದುಕಿದೀಯೋ ಯಾವುದಕ್ಕಾಗಿ ನೀನು ಸಾಯಬೇಕೋ ಅದನ್ನು ಪ್ರಮಾಣಿಸಿ ಕೊಡು.

ಗೆಳೆಯರೆ, ನನ್ನ ಮಾತನ್ನು ನಂಬಿ. ಸಾಯುವ ಆತುರವೇನಿಲ್ಲ ನನಗೆ. ಆಯುಸ್ಸಿನ ಪೂರ್ಣ ಕಾಲವೂ ಬದುಕಬೇಕೆಂದಿದ್ದೇನೆ. ನನ್ನ ಪ್ರಕಾರ ೧೨೦ ವರ್ಷ ಆಯುಃಪ್ರಮಾಣ. ಕನಿಷ್ಠಪಕ್ಷ ಆ ವೇಳೆಗೆ ಭಾರತ ಸ್ವತಂತ್ರವಾದೀತು, ಪ್ರಪಂಚವೇ ಸ್ವತಂತ್ರವಾದೀತು. ಇಂದು ಇಂಗ್ಲೆಂಡು ಅಮೆರಿಕಾಗಳು ಸ್ವತಂತ್ರವೆಂದು ನನಗೆ ಎನಿಸಿಲ್ಲ. ತಮ್ಮ ರೀತಿಯಲ್ಲಿ ಅವರು ಸ್ವತಂತ್ರರು. ಈ ಭೂಮಿಯ ಮೇಲಿನ ಬಣ್ಣದ ಜನಾಂಗಗಳನ್ನು ಬಂಧನದಲ್ಲಿಟ್ಟುಕೊಳ್ಳಲು ಸ್ವತಂತ್ರರು. ಈ ರಾಷ್ಟ್ರಗಳ ಸ್ವಾತಂತ್ರ್ಯಕ್ಕಾಗಿ ಅಮೆರಿಕಾ, ಇಂಗ್ಲೆಂಡು ಇವತ್ತು ಹೋರಾಡುತ್ತಿವೆಯೆ? ಸ್ವಾತಂತ್ರ್ಯದ ನನ್ನ ಕಲ್ಪನೆಗೆ ಜೇಡಿ ಹಾಕಲಾರಿರಿ ನೀವು. ಇಂಗ್ಲಿಷ್, ಅಮೆರಿಕನ್ ಶಿಕ್ಷಕರು, ಅವರ ಇತಿಹಾಸ, ಅವರ ಭವ್ಯವಾದ ಕಾವ್ಯ–ಸಾಹಿತ್ಯ, ಸ್ವಾತಂತ್ರ್ಯಕ್ಕೆ ವಿಶಾಲಾರ್ಥ ಮಾಡಬೇಡ ಎಂದು ನನಗೆ ಹೇಳಿಕೊಟ್ಟಿಲ್ಲ. ಆ ಸ್ವಾತಂತ್ರಕ್ಕೆ ನನ್ನ ವಾಖ್ಯೆಯಂತೆ, ಅವರ ಕವಿಗಳು ಶಿಕ್ಷಕರು ವರ್ಣಿಸಿದ ಸ್ವಾತಂತ್ರ್ಯದ ಪರಿಚಯ ಅವರಿಗಿಲ್ಲ. ಸ್ವಾತಂತ್ರ್ಯ

ಎಂದರೇನೋ ತಿಳಿದುಕೊಳ್ಳಲು ಅವರು ಭಾರತಕ್ಕೆ ಬಂದರೆ ಅರ್ಥವಾಗುತ್ತದೆ. ಅಹಂಕಾರ ಗರ್ವಗಳಿಂದಲ್ಲ ಬರಬೇಕಾದುದು, ಪ್ರಾಮಾಣಿಕರಾದ ಸತ್ಯಶೋಧಕರಂತೆ.

ಇಪ್ಪತ್ತೆರಡು ವರ್ಷಗಳಿಂದ ಭಾರತ ಈ ಮೂಲ ಸತ್ಯದ ಪ್ರಯೋಗ ನಡೆಸಿದೆ. ಹುಟ್ಟಿದಾಗಿನಿಂದಲೂ ತನಗೆ ತಿಳಿಯದೆಯೆ ಕಾಂಗ್ರೆಸ್ಸು ಅಹಿಂಸಾ ಪಂಥಿಯಾಗಿ ವೈಧಾನಿಕ ಮಾರ್ಗವನ್ನು ಹಿಡಿದಿದೆ. ಕಾಂಗ್ರೆಸ್ ಭಾರತವನ್ನು ತಮ್ಮ ಅಂಗೈಯಲ್ಲಿಟ್ಟುಕೊಂಡಿದ್ದ ದಾದಾಭಾಯಿ, ಫಿರೋಜ್‌ಷಾ ಅದರ ನಾಯಕರು. ನಾಯಕರಲ್ಲ, ಅದರ ಸೇವಕರು ಆಗಿದ್ದರು. ಕೊಲೆ, ಮುಚ್ಚುಮರೆ ಅವರಿಗೆ ಎಂದೂ ಸರಿಹೋಗಲಿಲ್ಲ. ಕಾಂಗ್ರೆಸಿಗರಲ್ಲಿ ಹುಳುಕು ಕಾಳೂ ಇದೆ, ಬಲ್ಲೆ. ಆದರೆ ಅತ್ಯಂತ ವ್ಯಾಪಕವಾದ ಅಹಿಂಸೆಯ ಹೋರಾಟ ನಡೆಸಲು ಇಡೀ ಭಾರತವನ್ನೆ ನಂಬಿದೇನೆ. ಸತ್ಯವನ್ನು ಸಹಜವಾಗಿ ಗುರುತಿಸಿ, ವಿಷಮ ಪ್ರಸಂಗಗಳಲ್ಲಿ ಸ್ವಾಭಾವಿಕವಾಗಿಯೆ ಅದನ್ನು ಕಾಯ್ದುಕೊಳ್ಳುವ ಮಾನವನ ನೈಜ ಸ್ವಭಾವವನ್ನು ನಂಬಿದೇನೆ. ಒಂದು ವೇಳೆ ಇದರಲ್ಲಿ ನಾನು ಮೋಸ ಹೋದರೂ ಹಿಡಿದುದನ್ನು ಬಿಡುವುದಿಲ್ಲ. ಹುಟ್ಟಿದಾಗಿನಿಂದಲೂ ಕಾಂಗ್ರೆಸ್ಸಿನ ಧೋರಣೆ ಶಾಂತಿಮಯ ಮಾರ್ಗವಿತ್ತು. ಅದಕ್ಕೆ ಮುಂದಿನ ಪೀಳಿಗೆಗಳಲ್ಲಿ ಅಸಹಕಾರವನ್ನು ಬೋಧಿಸಿತು. ದಾದಾಭಾಯಿ ಬ್ರಿಟಿಷ್ ಪಾರ್ಲಿಮೆಂಟನ್ನು ಪ್ರವೇಶಿಸಿದಾಗ ಸ್ಯಾಲಿಸ್‌ಬರಿ ಅವರನ್ನು ಕಪ್ಪು ಮನುಷ್ಯ ಎಂದು ಕರೆದ. ಆದರೆ ಬ್ರಿಟಿಷ್ ಜನ ಸ್ಯಾಲಿಸ್‌ಬರಿಯನ್ನು ಸೋಲಿಸಿದರು. ಅವರ ಮತಗಳ ಬಲದಿಂದ ದಾದಾಭಾಯಿ ಪಾರ್ಲಿಮೆಂಟಿಗೆ ಹೋದರು. ಭಾರತಕ್ಕೆ ಆಗ ಹರ್ಷೋನ್ಮಾದವಾಯಿತು. ಆದರೆ ಭಾರತ ಇವೆಲ್ಲವನ್ನೂ ದಾಟಿ ಬಂದಿದೆ.

ಇವೆಲ್ಲದರ ಹಿನ್ನೆಲೆಯಲ್ಲಿ ಇಂಗ್ಲೆಂಡೂ ಯೂರೋಪಿಯನ್ನರೂ ಎಲ್ಲ ಸಂಯುಕ್ತ ರಾಷ್ಟ್ರಗಳೂ ಹೃದಯ ಶೋಧನೆ ಮಾಡಿಕೊಳ್ಳಲಿ. ಸ್ವಾತಂತ್ರ್ಯ ಕೇಳಿದುದು ಭಾರತದ ಅಪರಾಧವಾಯಿತೆ? ಇದು ತಪ್ಪೆ? ನಮ್ಮನ್ನು ನಂಬದಿರುವುದು ಸರಿಯೆ ಎಂದು ಕೇಳುತ್ತೇನೆ. ಅರ್ಧ ಶತಮಾನದ ಸಂಪ್ರದಾಯ, ಕಾರ್ಯಪರಂಪರೆಯ ಹಿನ್ನೆಲೆ ಇರುವ ಈ ಸಂಸ್ಥೆಯನ್ನು ನಂಬದಿರುವುದು ಸರಿಯೆ? ನಿಮ್ಮ ಸರ್ವ ಶಕ್ತಿಯನ್ನೂ

ವಿನಿಯೋಗಿಸಿ ಅವರ ಬಗ್ಗೆ ಅಪಪ್ರಚಾರ ಮಾಡಬಹುದೆ? ಪರದೇಶೀ ಪತ್ರಿಕೆಗಳ ಸಹಾಯದಿಂದ ಸುಳ್ಳೋ ಸೊಟ್ಟೋ ಹೇಗೋ ಒಂದು ರೀತಿಯಲ್ಲಿ ಭಾರತದ ಸಂಗ್ರಾಮವನ್ನು ಭಯಾನಕವಾಗಿ ಚಿತ್ರಿಸಬಹುದೆ? ಅಮೆರಿಕಾ ಅಧ್ಯಕ್ಷ, ಚೀನೀ ದಳಪತಿ ಹಾಗೆ ಮಾಡಲಿಕ್ಕಿಲ್ಲವೆಂದು ನಂಬಿದ್ದೇನೆ.

ಚೀನೀ ದಳಪತಿಯನ್ನು ಭೇಟಿ ಮಾಡಿದೇನೆ. ಅವರ ಹೆಂಡತಿ ನನ್ನ ದುಭಾಷಿ ಆಗಿದ್ದಳು. ಆಕೆಯ ಮೂಲಕ ಅವರನ್ನು ಬಲ್ಲೆ. ಆಗ ನನಗೆ ಅರ್ಥವಾಗಲಿಲ್ಲ. ಅವರ ಹೆಂಡತಿ ಹಾಗಲ್ಲ. ಆಕೆಯ ಮೂಲಕ ಅವರ ಮನಸ್ಸನ್ನು ಅರಿಯಗೊಟ್ಟರು. ನಾವು ಸ್ವಾತಂತ್ರ್ಯ ಕೇಳಿದುದು ತಪ್ಪೆಂದು ಆತ ಇನ್ನೂ ಹೇಳಿಲ್ಲ. ಇಡೀ ಜಗತ್ತೇ ನಮ್ಮ ವಿರುದ್ಧ ತಾಳ ಕುಟ್ಟುತ್ತಿದೆ. ನೀವು ತಪ್ಪುತ್ತಿದೀರಿ, ನಿಮ್ಮ ಉದ್ಯಮ ಪ್ರಸಂಗ ಶುದ್ಧವಲ್ಲ ಎನ್ನುತ್ತಿದಾರೆ. ಬ್ರಿಟಿಷರೆಂದರೆ ನನಗೆ ಬಹಳ ಗೌರವ ಇತ್ತು. ಈಗ ಬ್ರಿಟಿಷರ ರಾಜತಂತ್ರ ಅಸಹ್ಯವಾಗಿದೆ, ನಾರುತ್ತಿದೆ. ಆದರೂ ಇವರು ಅವರ ಪಾಠ ಕಲಿಯುತ್ತಿದಾರೆ. ಈ ವಿಧಾನದಿಂದ ಜಗತ್ತಿನ ಅಭಿಪ್ರಾಯವನ್ನು ಕೆಲವು ಕಾಲ ತಮ್ಮ ಕಡೆ ಮಾಡಿಕೊಂಡಾರು. ಇವೆಲ್ಲ ಸುಸಂಘಟಿತ ಪ್ರಚಾರದ ವಿರುದ್ಧ ಭಾರತ ತನ್ನ ಧ್ಯಾನ ವೊಳಗಿಸೀತು. ಅವರ ವಿರುದ್ಧ ನಾನು ಮಾತಾಡುತ್ತೇನೆ. ಇಡೀ ಜಗತ್ತೇ ನನ್ನ ಕೈಬಿಟ್ಟರೂ ನಾನು ಹೇಳುತ್ತೇನೆ; ನಿಮ್ಮದು ತಪ್ಪು. ಇಷ್ಟವಿಲ್ಲದ ಕೈಗಳಿಂದ ಅಹಿಂಸೆಯ ಮೂಲಕ ಭಾರತ ತನ್ನ ಸ್ವಾತಂತ್ರ್ಯವನ್ನು ಕಸಿದುಕೊಳ್ಳುತ್ತದೆ.

ನಾನು ಕಣ್ಣು ಮುಚ್ಚಿದರೂ ಭಾರತಕ್ಕೆ ಸ್ವಾತಂತ್ರ್ಯ ಬಾರದಿದ್ದರೂ ಅಹಿಂಸೆಗೆ ಅಂತವಿಲ್ಲ. ಬಹುಕಾಲದ ಋಣ ಸಲ್ಲಿಸಿರಿ ಎಂದು ಮಂಡಿಯೂರಿ ಬೇಡಿಕೊಳ್ಳುತ್ತಿದೇವೆ. ಅಹಿಂಸಕ ಭಾರತದ ಸ್ವಾತಂತ್ರ್ಯವನ್ನು ವಿರೋಧಿಸಿದರೆ ಚೀನಾ, ರಷ್ಯಾಗಳಿಗೆ ಮಹಾ ವಿಪತ್ತನ್ನೂ ತಂದೊಡ್ಡಿಯಾರು. ಸಾಲ ಕೊಟ್ಟವನು ಹೀಗೆಲ್ಲಾದರೂ ಸಾಲ ಕೇಳುವುದುಂಟೆ? ಅದರೂ ಎಷ್ಟು ಕೋಪ, ಎಷ್ಟು ವಿರೋಧ ಭಾರತಕ್ಕೆ. ಇಷ್ಟಾದರೂ ಭಾರತ ಹೇಳುತ್ತಿದೆ; ನಾವು ಕಟಿಭಂಗ ಮಾಡುವುದಿಲ್ಲ. ಸಾಕಷ್ಟು ಸಜ್ಜನಿಕೆಯನ್ನು ಕಲಿತಿದೇವೆ. ಹಿಂಸೆಯ ಶಪಥ ಮಾಡಿದೇವೆ, ಇಕ್ಕಟ್ಟಿಗೆ ಸಿಗಿಸಬಾರದು ಎಂಬ ಸೂತ್ರಕ್ಕೆ ನಾನೇ ಕರ್ತ. ನಾನೇ ಇವತ್ತು ಇಷ್ಟು ಪರುಷ ಭಾಷೆಯನ್ನು ಬಳಸುತ್ತಿ

ದೇನೆ. ನನ್ನ ಆ ಸೂತ್ರಕ್ಕೆ ಯಾವಾಗಲೂ ‘ ನಮ್ಮ ಗೌರವ, ಸುಭದ್ರತೆಗಳಿಗೆ ಅನುಗುಣವಾಗಿ’ ಎಂಬ ನಿಯಮ ಇದ್ದೇ ಇತ್ತು. ಯಾರಾದರೂ ನನ್ನ ಕುತ್ತಿಗೆ ಹಿಡಿದು ನೀರಿನೊಳಗೆ ಮುಳುಗಿಸುತ್ತೇನೆ ಎಂದರೆ ಬಿಡಿಸಿಕೊಳ್ಳಲು ಪ್ರತ್ಯಕ್ಷವಾಗಿ ನಾನು ಹೆಣಗಾಡಬಾರದೆ? ಇವತ್ತಿನ ನಮ್ಮ ನಿಲುವಿನಲ್ಲಿ ಅಸಂಗತತೆ ಏನೂ ಇಲ್ಲ.

ಪರದೇಶದ ಪತ್ರಿಕಾ ಪ್ರತಿನಿಧಿಗಳು ಇಂದು ಇಲ್ಲಿದಾರೆ. ಅವರ ಮೂಲಕ ಜಗತ್ತಿಗೆ, ಸಂಯುಕ್ತರಾಷ್ಟ್ರ ಸಂಘಕ್ಕೆ ತಿಳಿಸ ಬಯಸುತ್ತೇನೆ. ಭಾರತವನ್ನು ಸ್ವತಂತ್ರ ಎಂದು ಘೋಷಿಸಿ ತಮ್ಮ ವಚನ ಸಲ್ಲಿಸಲು ಇದು ಸುಸಮಯ. ಈ ಸಮಯ ಕಳೆದರೆ ಮತ್ತೆ ಸಿಗಲಾರದು. ಈ ತಲೆಮಾರಿನಲ್ಲಿ ಇನ್ನೊಮ್ಮೆ ಬರಲಿಕ್ಕಿಲ್ಲ, ಇತಿಹಾಸ ಹೇಳೀತು: ಭಾರತಕ್ಕೆ ತಮ್ಮ ಋಣ ಸಲ್ಲಿಸಲಿಲ್ಲ ಸಕಾಲದಲ್ಲಿ, ಯುದ್ಧದಲ್ಲಿ ಸೋತರು. ಇಡೀ ಜಗತ್ತಿನ ಆಶೀರ್ವಾದ ಬೇಡುತ್ತಿದೇನೆ. ಅವರೊಡನೆ ನಾನೂ ಗೆಲ್ಲಬೇಕು. ಸಂಯುಕ್ತ ರಾಷ್ಟ್ರಗಳು ತಮ್ಮ ಮಿತಿಯನ್ನು ಮೀರಬೇಕಾಗಿಲ್ಲ. ಅಹಿಂಸೆಯನ್ನು ಒಪ್ಪಿ ನಿಶ್ಶಸ್ತ್ರೀಕರಣ ಮಾಡಬೇಕಾದ್ದಿಲ್ಲ ಇವತ್ತು. ಫ್ಯಾಸಿಸ್ಟರಿಗೂ ನಾವು ಎದುರಿಸುತ್ತಿರುವ ಈ ಸಾಮ್ರಾಜ್ಯಶಾಹಿಗೂ ಮೂಲಭೂತ ವ್ಯತ್ಯಾಸ ಇದೆ. ಬ್ರಿಟಿಷರಿಗೆ ಭಾರತದಿಂದ ಅವರು ಬಯಸಿದ್ದೆಲ್ಲ ಸಿಗುತ್ತದೆಯೆ? ಅವರ ಬಂಧನದಲ್ಲಿರುವ ಭಾರತದಿಂದ ಏನೋ ಅಲ್ಪ ಸ್ವಲ್ಪ ಸಿಗುತ್ತಿದೆ ಈಗ. ಸ್ವತಂತ್ರ ಮಿತ್ರನಂತೆ ಭಾರತ ಭಾಗವಹಿಸಿದರೆ ಏನು ವ್ಯತ್ಯಾಸವಾದೀತೋ ಯೋಚಿಸಿ. ಬರುವ ಹಾಗಿದ್ದರೆ ಆ ಸ್ವಾತಂತ್ರ್ಯ ಇಂದೇ ಬರಬೇಕು. ಸಹಾಯಮಾಡುವ ಶಕ್ತಿ ಇದ್ದೂ ಇವತ್ತೂ ಮಾಡದಿದ್ದರೆ ಅದರಲ್ಲಿ ಏನೂ ರುಚಿ ಉಳಿಯದು. ಆ ಶಕ್ತಿಯನ್ನು ಉಪಯೋಗಿಸಿದರೆ, ಇವತ್ತು ಯಾವುದು ಅಸಾಧ್ಯವಾಗಿದೆಯೋ ಅದು ಸ್ವಾತಂತ್ರ್ಯದ ಬೆಳಕಿನಲ್ಲಿ ಮಿಂಚಿನಲ್ಲಿ ಸಾಧ್ಯವಾದೀತು. ಭಾರತಕ್ಕೆ ಆ ಸ್ವಾತಂತ್ರ್ಯಸಂಭವ ಆದರೆ ಚೀನಾಕ್ಕೂ ಆ ಸ್ವಾತಂತ್ರ್ಯವನ್ನು ಕೊಡಿಸುತ್ತದೆ ಅಧಿಕಾರಯುತವಾಗಿ. ರಷ್ಯಾಕ್ಕೆ ನೆರವಾಗುವ ದಾರಿ ತೆರೆಯುತ್ತದೆ. ಇಂಗ್ಲಿಷರು ಬರ್ಮಾ ಭೂಮಿಯಲ್ಲಿ ಮಲಯಾದಲ್ಲಿ ಸಾಯಲಿಲ್ಲ. ಈ ಪರಿಸ್ಥಿತಿಯನ್ನು ಬಿಡುಗಡೆ ಮಾಡಿಕೊಳ್ಳಲು ಏನು ಮಾಡಬೇಕು? ಎಲ್ಲಿಗೆ ಹೋಗಲಿ ನಾನು? ಈ

ನಲವತ್ತು ಕೋಟಿ ಜನರನ್ನು ಎಲ್ಲಿಗೆ ಕರೆದೊಯ್ಯಲಿ? ಜಗತ್ತಿನ ವಿಮೋಚನೆಯ ಚಳುವಳಿಯಲ್ಲಿ ಈ ಅಪಾರ ಮಾನವ ಸಮೂಹ ಉಳಿದದ್ದು ಹೇಗೆ ಧುಮುಕೀತು, ತನಗೇ ಸ್ವಾತಂತ್ರ್ಯ ಸ್ಪರ್ಶವಾಗದೆ? ತಾನೇ ಸ್ವಾತಂತ್ರ್ಯ ಕಾಣದೆ? ಇವತ್ತು ಜೀವನ ಸ್ಪರ್ಶವೇ ಇಲ್ಲ ಅವರಿಗೆ. ಅದನ್ನು ಗಾಣವಾಡಿ ಹಿಂಡಿ ಹಾಕಿದರೆ. ಅವರ ಕಣ್ಣಿಗೆ ಕಳೆ—ಕಾಂತಿ ಬರಬೇಕು ಎಂದರೆ ಸ್ವಾತಂತ್ರ್ಯ ನಾಳೆ ಅಲ್ಲ, ಇಂದೇ ಬರಬೇಕು. ಆದ್ದರಿಂದ ನಾನು ಪಣ ತೊಟ್ಟಿದೇನೆ, ಕಾಂಗ್ರೆಸ್ಸನ್ನು ಪಣ ಇಟ್ಟಿದೇನೆ, ಕಾಂಗ್ರೆಸ್ಸೂ ಪಣ ತೊಟ್ಟಿದೆ: 'ಮಾಡಿ ಇಲ್ಲವೆ ಮಡಿ'.೪೧

## ೪೨. ಸ್ಯಾನ್ ಫ್ರಾನ್ಸಿಸ್ಕೋ ಸಮ್ಮೇಳನಕ್ಕೆ ಪ್ರತಿನಿಧಿಯ ನೇಮಕ

[ಬಿಕ್ಕಟ್ಟು ಹಾಗೇ ಸಾಗುತ್ತಿದ್ದುದರಿಂದ ಬ್ರಿಟನ್ನಿನಲ್ಲಿ ಸಾರ್ವಜನಿಕಾಭಿಪ್ರಾಯ ಬೇಸರಗೊಂಡಿತ್ತು. ಆದರೆ ಪಶ್ಚಿಮದಲ್ಲಿ ನಡೆದ ಘಟನೆಗಳು ಜರ್ಮನಿಯ ಯುದ್ಧದ ಕೊನೆಯ ಹಂತ, ಅಧ್ಯಕ್ಷ ರೂಸ್‌ವೆಲ್ಟರ ಮರಣ, ಸ್ಯಾನ್ ಫ್ರಾನ್ಸಿಸ್ಕೋ ಸಮ್ಮೇಳನದ ಸಿದ್ಧತೆ—ಭಾರತದ ಸಮಸ್ಯೆಯ ಚರ್ಚೆಯನ್ನು ಹಿಂದಕ್ಕೆ ತಳ್ಳಿದ್ದವು. ಎಲ್ಲ ಲೆಕ್ಕಕ್ಕೂ ಭಾರತ ಸ್ವತಂತ್ರವೇ ಎನ್ನುವ ಅಭಿಪ್ರಾಯವನ್ನು ಹುಟ್ಟಿಸಲು ಸ್ಯಾನ್ ಫ್ರಾನ್ಸಿಸ್ಕೋ ಸಮ್ಮೇಳನದಲ್ಲಿ ಬ್ರಿಟಿಷ್ ಸರಕಾರ ಒಂದು ನಾಟಕ ಆಡುವ ಸರ್ವ ಪ್ರಯತ್ನವನ್ನು ಮಾಡಿತು. ಈ ಕುತಂತ್ರವನ್ನು ವಿರೋಧಿಸಿ ಗಾಂಧೀ ದನಿಯೆತ್ತಿ ಸಾರಿದರು. ಏಪ್ರಿಲ್ ೧೮ರಲ್ಲಿ ಬೊಂಬಾಯಿಂದ ಈ ಹೇಳಿಕೆ ಹೊರಟಿತು.]

ಆಡಿದ ಮಾತಿಗಿಂತ ಬರೆದ ಬರಹಕ್ಕಿಂತ ಮೌನವೇ ಉತ್ತಮ ಎಂಬುದನ್ನು ಬಲ್ಲೆ. ಆದರೆ ಈ ಸೂತ್ರಕ್ಕೂ ಕೆಲವು ಮಿತಿ—ಮೇರೆ ಇವೆ. ಸ್ಯಾನ್ ಫ್ರಾನ್ಸಿಸ್ಕೋ ಸಮ್ಮೇಳನ ಬೇಗನೆ ಸೇರಲಿದೆ ಎಂದು ಪ್ರಕಟವಾಗಿದೆ. ಅದರ ಕಾರ್ಯಕ್ರಮ ಏನೋ ನನಗೆ ತಿಳಿಯದು. ಬಹುಶಃ ಹೊರಗಿನವರಿಗೆ ಯಾರಿಗೂ ಗೊತ್ತಿರಲಾರದು.

ಏನೇ ಇರಲಿ, ಈ ಯುದ್ಧದ ಮುಕ್ತಾಯ ಎಂಬುದು ಆದ ಮೇಲೆ ಜಗತ್ತಿನ ರೂಪ ಹೇಗಿರಬೇಕೆಂಬುದೇ ಅದರ ಮುಖ್ಯ ಚರ್ಚೆಯಾಗುತ್ತದೆ.

ಜಗತ್ತಿನ ಸುಭದ್ರತೆ ಸುಕ್ಷೇಮಗಳ ನಿರ್ಮಾಣದ ಮಾತನ್ನು ಆಡುತ್ತಾರಲ್ಲ. ಅವರ ಹಿಂದೆ ಯುದ್ಧಗಳಿಗೆ ಕಾರಣವಾದ ಅನುಮಾನ ಅಂಜಿಕೆ ಅಡಗಿವೆ ಎಂದು ನನಗೆ ತುಂಬಾ ಭಯ. ಆದ್ದರಿಂದ, ಯುದ್ಧಕ್ಕೆ ವಿರುದ್ಧ ಶಾಂತಿಯನ್ನೇ ಯಾವಜ್ಜೀವವೂ ನಂಬಿದ ನಾನು ಈ ಪ್ರಸಂಗದಲ್ಲಿ ನನ್ನ ಗಟ್ಟಿ ನಿಲುವನ್ನು ತಿಳಿಸುವುದು ಒಳ್ಳೆಯದು.

ಯುದ್ಧ ಮಾರ್ಗದ ಅವರ ಕಪಟ ವಂಚನೆಗಳ ಸಾಮರ್ಥ್ಯದಲ್ಲಿ ತಮಗಿರುವ ನಂಬಿಕೆಯನ್ನು ತ್ಯಜಿಸದಿದ್ದರೆ, ಸಮಸ್ತ ಜನಾಂಗ ರಾಷ್ಟ್ರಗಳ ಸರ್ವ ಸಮತೆ—ಸ್ವಾತಂತ್ರ್ಯಗಳ ತಳಹದಿಯ ಮೇಲೆ ನಿಲ್ಲಿಸಿದ ನಿಜವಾದ ಶಾಂತಿಯನ್ನು ನಿರ್ಮಿಸಲು ನಿರ್ಧಾರ ಮಾಡದಿದ್ದರೆ, ಮಿತ್ರ ಪಕ್ಷಕ್ಕಾಗಲಿ ಜಗತ್ತಿಗಾಗಲಿ ಶಾಂತಿಯಿಲ್ಲ ಎಂಬ ನನ್ನ ದೃಢಾಭಿಪ್ರಾಯವನ್ನು ಮತ್ತೆ ಹೇಳುತ್ತೇನೆ. ಯುದ್ಧವೇ ಇರಬಾರದು ಎಂದು ಪ್ರಯತ್ನಿಸುತ್ತಿರುವ ಜಗತ್ತಿನಲ್ಲಿ ಒಂದು ರಾಷ್ಟ್ರ ಇನ್ನೊಂದನ್ನು ಶೋಷಿಸುವುದಾಗಲಿ ಒಂದು ರಾಷ್ಟ್ರ ಇನ್ನೊಂದರ ಮೇಲೆ ಅಧಿಕಾರ ಮಾಡುವುದಾಗಲಿ ಸಾಧ್ಯವಿಲ್ಲ. ಸೈನಿಕ ಶಕ್ತಿಯಲ್ಲಿ ದುರ್ಬಲವಾದ ರಾಷ್ಟ್ರಗಳಿಗೆ ಶೋಷಣದ ಆಕ್ರಮಣದ ಅಂಜಿಕೆ ಇಲ್ಲದಿರಬೇಕಾದರೆ ಅಂಥ ಜಗತ್ತಿನಲ್ಲೇ.

ಭಾರತ ಎಲ್ಲ ವಿದೇಶೀ ಹಿಡಿತದಿಂದಲೂ ಸ್ವತಂತ್ರವಾಗುವುದೇ ಶಾಂತಿಯ ಅನಿವಾರ್ಯ ಪೀಠಿಕೆ. ಸಾಮ್ರಾಜ್ಯಷಾಹಿ ದಬ್ಬಾಳಿಕೆಯ ಬಲವಾದ ಉದಾಹರಣೆ ಎಂದೇ ಅಲ್ಲ. ಭಾರತ ವಿಶಾಲವಾದ ಪುರಾತನ ಸಂಸ್ಕೃತಿ ಪೂರ್ಣ ದೇಶ. ೧೯೨೦ರಿಂದಲೂ ಸ್ವಾತಂತ್ರ್ಯಕ್ಕಾಗಿ ಹೋರಾಡಿದೆ. ಸತ್ಯ ಅಹಿಂಸೆಗಳನ್ನು ತನ್ನ ಏಕೈಕ ಸಾಧನವಾಗಿ ಮಾಡಿಕೊಂಡು ಹೋರಾಡಿದೆ, ಅದರಿಂದ.

ಭಾರತದ ಸ್ವಾತಂತ್ರ್ಯಕ್ಕಾಗಿ ಯುದ್ಧ ಮಾಡದಿದ್ದರೂ, ಯುದ್ಧ ವಿದ್ಯೆಯಲ್ಲಿ ಉತ್ತಮೋತ್ತಮರಿಗೆ ಕನಿಷ್ಠಪಕ್ಷ ತಾನು ಸಮ ಎಂಬುದನ್ನು ಹಿಂದೆ ಎಂದೂ ಇಲ್ಲದಹಾಗೆ ಈ ಯುದ್ಧದಲ್ಲಿ ತೋರಿಸಿಕೊಟ್ಟಿದಾನೆ ಭಾರತೀಯ ಸಿಪಾಯಿ. ಭಾರತದಲ್ಲಿ ಯೋಧಗುಣವಿಲ್ಲ, ಆದ್ದರಿಂದ ಹೀಗೆ ಶಾಂತಸಮರ ನಡೆಸುತ್ತಿದೆ ಎಂಬ ನಿಂದನೆಗೆ ಉತ್ತರ ಎಂದು ಇದನ್ನೂ ಹೇಳುತ್ತಿದೇನೆ. ಇದರಿಂದ ನಾನು ಮಾಡುವ ತೀರ್ಮಾನ–ಧೀರರ ಹಿಂಸೆ

ಗಿಂತ ಅಹಿಂಸೆಯೇ ಬಲಶಾಲಿ. ಭಾರತ ಇನ್ನೂ ಅಂಥ ಅಹಿಂಸೆಯನ್ನು ವಿಕಾಸಗೊಳಿಸಿಕೊಂಡಿರಲಿಕ್ಕಿಲ್ಲ. ಅದು ಬೇರೆ. ಅಂಥದು ಬಂದರೆ, ಭಾರತ ತಕ್ಕಮಟ್ಟಿಗೆ ಯಶಸ್ವಿಯಾಗಿ ಅಹಿಂಸೆಯ ಹೋರಾಟ ನಡೆಸಿತು ಸ್ವಾತಂತ್ರ್ಯಕ್ಕಾಗಿ ಎಂಬುದಕ್ಕೇನೂ ಚ್ಯುತಿ ಬರುವುದಿಲ್ಲ.

ಜಗತ್ತಿನ ಸಮಸ್ತ ಶೋಷಿತ ರಾಜ್ಯಗಳಿಗೂ ಭಾರತದ ಸ್ವಾತಂತ್ರ್ಯ ಒಂದು ಪ್ರತ್ಯಕ್ಷ ಪ್ರಮಾಣ: ಅವರ ಸ್ವಾತಂತ್ರ್ಯವೂ ಸನ್ನಿಹಿತವಾಗಿದೆ, ಇನ್ನಂತೂ ಅವರು ಶೋಷಣ ಮಾಡಿಸಿಕೊಳ್ಳರು ಎಂದು.

ಶಾಂತಿ ನ್ಯಾಯಯುಕ್ತವಾಗಿರಬೇಕು. ಹಾಗೆ ಆಗಬೇಕಾದರೆ ಸೇಡು, ದಂಡನೆಗಳ ಶಾಂತಿ ಆಗಬಾರದು, ಜರ್ಮನಿ, ಜಪಾನುಗಳನ್ನು ಕಾಲಿನ ಕೆಳಗೆ ತುಳಿಯಬಾರದು. ಬಲಿಷ್ಠರು ಯಾವಾಗಲೂ ಸೇಡು ತೀರಿಸಿಕೊಳ್ಳಬಾರದು. ಶಾಂತಿಯ ಫಲವನ್ನು ಎಲ್ಲರೂ ಸಮವಾಗಿ ಹಂಚಿಕೊಳ್ಳಬೇಕು. ಅವರನ್ನು ಗೆಳೆಯರಾಗಿ ಮಾಡಿಕೊಳ್ಳುವ ಪ್ರಯತ್ನ ಮಾಡಬೇಕು. ತಮ್ಮದು ಪ್ರಜಾತಂತ್ರ ಎಂದು ತೋರಿಸಿಕೊಡಲು ಮಿತ್ರ ಪಕ್ಷಕ್ಕೆ ಬೇರೆ ಮಾರ್ಗವಿಲ್ಲ.

ಬಲತ್ಕಾರವಾಗಿ ನಿರಾಯುಧರಾಗಿಮಾಡಿ ಅವರ ಮೇಲೆ ಒಂದು ಸಶಸ್ತ್ರ ಶಾಂತಿಯನ್ನು ಹೊರಿಸುವುದು ಬೇಡ. ಮೇಲೆ ಹೇಳಿದುದರ ಮಥಿತಾರ್ಥ ಇದೇ, ಎಲ್ಲರೂ ನಿರಾಯುಧರಾಗಬೇಕು. ಶಾಂತಿಯ ಅತ್ಯಂತ ಸರಾಗವಾದ ನಿಯಮಗಳನ್ನು ನಡೆಸುವಂತೆ ಮಾಡಲು ಅಂತರ-ರಾಷ್ಟ್ರೀಯ ಪೋಲೀಸು ಬಲ ಒಂದು ಇರಲಿ, ಈ ಅಂತರ-ರಾಷ್ಟ್ರೀಯ ಪೋಲೀಸಿನ ವ್ಯವಸ್ಥೆಯೂ ಮನುಷ್ಯ ಮಾತ್ರದ ದೌರ್ಬಲ್ಯಕ್ಕೆ ಒಂದು ಬಿಡತಿಯೇ ವಿನಾ ಶಾಂತಿ ಸೂಚಕವಲ್ಲ.

ಮೇಲೆ ಹೇಳಿದ ಶಾಂತಿಯ ಸಾರಭೂತ ಅಂಶಗಳನ್ನು ಒಪ್ಪಿದರೆ, ಬ್ರಿಟಿಷರು ನಾಮಕರಣಮಾಡಿದ ಭಾರತೀಯರು ನಮ್ಮನ್ನು ಪ್ರತಿನಿಧಿಸುವ ಕಪಟ ನಾಟಕವನ್ನು ಕೈಬಿಡಬೇಕು. ಪ್ರಾತಿನಿಧ್ಯವೇ ಇಲ್ಲದಿರುವುದೇ ಇದಕ್ಕಿಂತ ಮೇಲು; ಇದು ತೀರ ಹೊಲಸು. ಸ್ಯಾನ್‌ಫ್ರಾನ್ಸಿಸ್ಕೋ ಸಮ್ಮೇಳನಕ್ಕೆ ಭಾರತದಿಂದ ಚುನಾಯಿತ ಪ್ರತಿನಿಧಿ ಹೋಗಬೇಕು, ಇಲ್ಲದಿದ್ದರೆ ಪ್ರಾತಿನಿಧ್ಯವೇ ಬೇಡ.೪೨

# ೪೩. ಸರ್ ಫಿರೋಜ್‌ಖಾನ್ ನೂನ್‌ಗೆ ಉತ್ತರ

[ ಸರ್ ಫಿರೋಜ್ ಗಾಂಧೀ ಜಪಾನೀ ಪಕ್ಷಪಾತಿ ಎಂದು ನಿಂದಿಸಿ ನೆಹರೂಗೆ ನಾಯಕತ್ವವನ್ನು ಬಿಟ್ಟುಕೊಡಲಿ ಎಂದ. ಅದಕ್ಕೆ ಉತ್ತರ. ]

ನನ್ನನ್ನು ಜಪಾನಿ ಪಕ್ಷಪಾತಿ ಎಂದು ಬ್ರಿಟಿಷರು ದೂರುತ್ತಿದ್ದ ಕಾಲ ಒಂದು ಇತ್ತು. ಆಮೇಲೆ ಸದ್ದಿಲ್ಲದೆ ಅದನ್ನು ಹಿಂತೆಗೆದುಕೊಂಡರು. ಆ ಮಾತಿಗೆ ತಿಲಮಾತ್ರವೂ ಆಧಾರ ಇರಲಿಲ್ಲ. ಈ ಪ್ರಸಂಗದಲ್ಲಿ ಸರ್ ಫಿರೋಜ್ ಇಂಥ ಹೇಳಿಕೆ ಕೊಡುವುದು ಆಶ್ಚರ್ಯವೇ. ಬ್ರಿಟಿಷರು ಸೋಲು ತ್ತಿದ್ದಾಗಲೂ ಬ್ರಿಟಿಷರು ಸೋಲಿಗೆ ಬೆದರುವ ಯೋಧರಲ್ಲ, ತಪ್ಪು ಮತ್ತೆ ಮಾಡಿ ಬುದ್ಧಿ ಕಲಿಯುವುದೇ ಅವರ ಸ್ವಭಾವ ಎಂದು ನಾನು ನಮ್ಮ ಜನರಿಗೆ ಹೇಳಿದೆ. ಇದನ್ನು ತಿಳಿದುಕೊಳ್ಳಲಿ ಸರ್ ಫಿರೋಜ್. ೧೯೪೨ರ ಆಗಸ್ಟಿಗೆ ಮೊದಲು ನಾನು ಬರೆದುದನ್ನು ನೋಡಲಿ ಎಂದು ಸೂಚಿ ಸುತ್ತೇನೆ.

ಸ್ವಲ್ಪವೂ ಅಶುದ್ಧವಲ್ಲದ ಸಂಪೂರ್ಣ ಸ್ವಾತಂತ್ರ್ಯವೇ ನನ್ನ ನಿಲುವು. ಆದರಿಂದ ಜಪಾನೀಗಳಾಗಲಿ ಮತ್ತಾರಾದರೂ ಆಗಲಿ ಬ್ರಿಟಿಷ ರನ್ನು ಗೆಲ್ಲುವುದನ್ನು ಸುಮ್ಮನೆ ನೋಡುತ್ತಿರುವುದು ನನಗೆ ಸಾಧ್ಯವಿಲ್ಲ. ಬ್ರಿಟಿಷರೋ ಬೇರೆಯವರೋ ಎಲ್ಲ ವಿದೇಶೀ ಪ್ರಭುತ್ವವನ್ನೂ ಭಾರತದಲ್ಲಿ ಅಹಿಂಸಾತ್ಮಕ ಅಸಹಕಾರದಿಂದ ಸವಿನಯ ಪ್ರತೀಕಾರದಿಂದ ಕೊನೆ ಗಾಣಿಸುವುದೇ ನನ್ನ ಉದ್ದೇಶ.

ಪಂಡಿತ ಜವಾಹರಲಾಲರ ಬಗ್ಗೆ, ನನ್ನ ಬಗ್ಗೆ, ಫಿರೋಜ್ ಹೇಳಿ ದುದರ ಬಗ್ಗೆ. ಪಂಡಿತರನ್ನು ನನ್ನ ಉತ್ತರಾಧಿಕಾರಿ ಎಂದು ಕರೆದಿದ್ದೇನೆ; ತಿಳಿದುಕೊಳ್ಳಲಿ. ಅವರು ಮುಂದೆ ಬರಬೇಕಾದುದಿಲ್ಲ. ಮುಂದೆಯೇ ಇದ್ದಾರೆ. ಆತನ ಮನಸ್ಸಿಗೆ ತೋರಿದಂತೆ ಕೆಲಸ ಮಾಡಲು ಸರಕಾರ ಬಿಡಲಿಲ್ಲ. ನಾವಿಬ್ಬರೂ ಗೆಳೆಯರು, ಸ್ಪರ್ಧಿಗಳಲ್ಲ. ನಾವಿಬ್ಬರೂ ಜನತಾ ಸೇವಕರು. ಸೇವೆಯ ವೇದಿಕೆ ಜಗತ್ತಿನಷ್ಟು ವಿಶಾಲವಾದುದು. ಅದರಲ್ಲಿ ನೂಕು ನುಗ್ಗಲು ಇಲ್ಲವೇ ಇಲ್ಲ. ಅದರಲ್ಲಿ ಯಾವಾಗಲೂ ಸ್ಥಳ ತೆರೆದೇ ಇದೆ. ಸ್ವಾತಂತ್ರ್ಯದ ವಿಷಯದಲ್ಲಿ ನಮಗೆ ಯಾವ ಭೇದವೂ ಇಲ್ಲ.

ಇಬ್ಬರೂ ಸಹ ಯೋಧರು. ನನಗಿಂತ ಆತನಿಗೆ ಯೌವನದ ಅನುಕೂಲ ಹೆಚ್ಚು, ನಿಜ.

ಜವಾಹರಲಾಲ್ ನೆಹರೂವನ್ನೂ ಆತನ ಸಂಗಾತಿಗಳನ್ನೂ ಸೆರೆಯಿಂದ ಬಿಡುಗಡೆ ಮಾಡುವಂತೆ ಸರ್ ಫಿರೋಜ್ ತನ್ನ ಸರಕಾರಕ್ಕೆ ಹೇಳಲಿ. ಅವರ ಆಸೆ ಸಫಲವಾದೀತು. ಆದಕ್ಕೆ ನನ್ನ ಸಂಪೂರ್ಣ ಸಹಕಾರ ಕೊಟ್ಟೇನು.

ನಾನು ಸಂಪ್ರದಾಯವಾದಿ, ಅಂಧಶ್ರದ್ಧೆಯುವ ಎಂದು ಹೇಳಿ ಲಾಭ ಪಡೆಯದಿರಲಿ. ತಾರುಣ್ಯದಿಂದಲೂ ಸಂಪ್ರದಾಯವಾದಿ ಎನಿಸಿ ಕೊಂಡಿಲ್ಲ ಎಂಬುದು ಅವರಿಗೆ ತಿಳಿದಿಲ್ಲವೇನೋ. ಅಸ್ಪೃಶ್ಯತೆಯ ಬಗ್ಗೆ, ಸಮಾಜ ಸುಧಾರಣೆಯ ಬಗ್ಗೆ ನನ್ನ ದೃಢಾಭಿಪ್ರಾಯಗಳನ್ನು ನಿಶ್ಚಲ ವಿಚಾರವನ್ನು ಸಂಪ್ರದಾಯವಾದ ವಿರೋಧಿಸಿತು. ಆಗಲೇ ಹಳೆಯ ಕಾಲ ನಿಮ್ಮದು ಎಂದಾಗ ಫಿರೋಜ್ ಭದ್ರವಾದ ನೆಲದಲ್ಲಿದಾರೆ. ಏಕೆಂದರೆ, ಯಾರದು ಹಳೆಯ ಕಾಲವೋ, ಯಾವುದು ಹಳೆಯ ಕಾಲದ್ದೋ ಯಾರಿಗೂ ಗೊತ್ತಿಲ್ಲ. ಈ ವಿಷಯದಲ್ಲಿ ನನ್ನ ಅಜ್ಞಾನವನ್ನು ಒಪ್ಪಿಕೊಳ್ಳುತ್ತೇನೆ.೪೩

## ೪೪. ಬಿಹಾರಿಗಳಿಗೆ

[೧೯೪೭ರ ನವಂಬರ್ ೫ರಂದು ಬಿಹಾರದ ಮತೀಯ ದಂಗೆಗಳು ೨೪ ಗಂಟೆಗಳಲ್ಲಿ ನಿಲ್ಲದಿದ್ದಲ್ಲಿ ಗಾಂಧೀಜೀ ಆಮರಣಾಂತ ಉಪವಾಸ ಮಾಡಲು ನಿರ್ಧರಿಸಿರುವರೆಂದು ರಾಜೇಂದ್ರ ಪ್ರಸಾದರು ಪ್ರಕಟಿಸಿದರು. ತೀವ್ರ ಪರಿಸ್ಥಿತಿ ಯುಂಟಾದಲ್ಲಿ ಗಾಂಧೀಜೀ ಬಿಹಾರಕ್ಕೆ ಬಂದು ಉಪವಾಸ ಪ್ರಾರಂಭಿಸ ಬಹುದೆಂದರು. ನವಂಬರ್ ೬ರ ಪ್ರಾತಃಕಾಲ ನವಕಾಲೀಗ* ಹೊರಡುವ ಮುನ್ನ ಗಾಂಧೀಜೀ ಬಿಹಾರಿಗಳಿಗೆ ಎಂಬ ಶೀರ್ಷಿಕೆಯಲ್ಲಿ ಒಂದು ಹೇಳಿಕೆ ಯಿತ್ತರು.]

---

* ಇದು ಅವಿಭಕ್ತ ಬಂಗಾಳಾ ಪ್ರಾಂತಕ್ಕೆ ಸೇರಿತ್ತು. ಅಲ್ಲಿ ಮುಸ್ಲಿಮರು ನಡೆಸಿದ ಹಿಂದೂಗಳ ಹತ್ಯೆ, ದೌರ್ಜನ್ಯ ಭೀಭತ್ಸತರದ್ದು.

ನನ್ನ ಕನಸಿನ ಬಿಹಾರ ಸುಳ್ಳಾದಂತೆ ಭಾಸವಾಗುತ್ತದೆ. ಪಕ್ಷಪಾತಯುಕ್ತ ಅಥವಾ ಉತ್ಪ್ರೇಕ್ಷಿತ ವರದಿಗಳ ಮೇಲೆ ನಾನು ಹೇಳುತ್ತಿಲ್ಲ. ಕೇಂದ್ರೀಯ ಮುಖ್ಯಮಂತ್ರಿ ಮತ್ತು ಅವರ ಸಹೋದ್ಯೋಗಿಗಳು ಅಲ್ಲಿ ಬಹುಕಾಲ ನಿಂತಿರುವುದೇ ಬಿಹಾರದ ದುರಂತ ಕಥೆಗೆ ಸಾಕ್ಷಿ. ಬಂಗಾಳದ ಮುಸ್ಲಿಂ ಲೀಗ್ ಸರಕಾರದ ಆಡಳಿತದಲ್ಲಿ ಇನ್ನೂ ಹದಗೆಟ್ಟ ಅಥವಾ ಇದಕ್ಕಿಂತ ಉತ್ತಮವಲ್ಲದ ಸ್ಥಿತಿಯಿತ್ತೆಂದೂ, ಬಿಹಾರದ ಸ್ಥಿತಿ ಅದರದೇ ಪರಿಣಾಮವೆಂದೂ ಪ್ರತಿ ನುಡಿಯುವುದು ಸುಲಭ. ಒಂದು ಪಕ್ಷದ ದುರ್ನಡತೆ ಪ್ರತಿಪಕ್ಷಕ್ಕೆ ಸಮರ್ಥನೆಯಾಗಲಾರದು. ಅದರಲ್ಲೂ ದೀರ್ಘ ಕಾಲದ ಹಾಗೂ ವಿಪುಲವಾದ ರಾಜಕೀಯ ಚಾರಿತ್ರ್ಯ ಹೊಂದಿರುವ ಇದರಿಂದ ಸಕಾರಣವಾಗಿ ಹೆಮ್ಮೆ ಪಡುವ ಪಕ್ಷಕ್ಕಂತೂ ಸಲ್ಲದು.

ಬಂಗಾಳದಲ್ಲಿ ಒಂದು ವಾರದಿಂದ ಇದ್ದಾಗ್ಯೂ ಇಲ್ಲಿನ ದುರಂತ ಘಟನೆಗಳ ಪ್ರಮಾಣವನ್ನು ನಾನಿನ್ನೂ ಅರಿಯೆನೆಂದು ಒಪ್ಪಿಕೊಳ್ಳುತ್ತೇನೆ. ಬಿಹಾರದ ಕರೆಯಿದ್ದರೂ ಕೂಡ ನವಕಾಲೀ ಯಾತ್ರೆಯನ್ನು ನಾನು ನಿಲ್ಲಿಸಲಾರೆ. ಮುಸ್ಲಿಮ್ ಲೀಗಿನ ಮತಾಂಧತೆಯನ್ನು ಮೂದಲಿಸುವ ಕಾಂಗ್ರೆಸ್ಸಿಗರಿಗೆ ಮತೀಯ ಪ್ರತಿರೋಧ ಸಮಂಜಸವಾದೀತೆ? ಬಿಹಾರಿನ ಶೇಕಡ ೧೪ರಷ್ಟಿರುವ ಅಲ್ಪಸಂಖ್ಯಾತ ಮುಸ್ಲಿಮರನ್ನು ಅನಾಗರಿಕ ಕ್ರೌರ್ಯದಿಂದ ಮರ್ದಿಸುವುದು ರಾಷ್ಟ್ರೀಯತೆಯಾದೀತೆ?

ಕೇವಲ ಕೆಲವು ಸಾವಿರ ಬಿಹಾರಿಗಳ ಪಾಪಕೃತ್ಯಗಳಿಗಾಗಿ ಇಡಿಯ ಬಿಹಾರವನ್ನು ದೂಷಿಸುವುದು ಸರಿಯಲ್ಲವೆಂದು ನನಗೆ ಹೇಳಬೇಕಾಗಿಲ್ಲ. ಒಬ್ಬ ಬ್ರಿಜಕಿಶೋರ ಪ್ರಸಾದರ ಬಗ್ಗೆ, ಒಬ್ಬ ರಾಜೇನ್ ಬಾಬುಗಳ ಬಗ್ಗೆ ಬಿಹಾರ ಹೆಮ್ಮೆಪಟ್ಟುಕೊಳ್ಳುತ್ತಿಲ್ಲವೆ? ಬಿಹಾರದಲ್ಲಿನ ಅನಾಚಾರ ನಿಲ್ಲದಿದ್ದಲ್ಲಿ ಇಡಿಯ ಭಾರತದ ಹಿಂದೂಗಳನ್ನು ಪ್ರಪಂಚವೇ ದೂಷಿಸುತ್ತದೆ. ಅದೇ ಲೋಕದ ರೀತಿ. ಆ ಮಾರ್ಗವೇನು ಅನುಚಿತವಲ್ಲ. ಬಿಹಾರೀ ಹಿಂದೂಗಳ ದುರ್ವರ್ತನೆಯಿಂದ ಕಾಯಿದೆ ಆಜಂ ಜಿನ್ನಾರವರು ಮೂದಲಿಸುವಂತೆ ಕಾಂಗ್ರೆಸ್ ಸಂಸ್ಥೆಯಲ್ಲಿ ಕೆಲವು ಕ್ರಿಶ್ಚಿಯನ್ನರು, ಮುಸ್ಲಿಮರು, ಸಿಕ್ಕರು, ಪಾರಸೀಗಳು ಮತ್ತಿತರರು ಇದ್ದರೂ ಕೂಡ ಅದೊಂದು ಹಿಂದೂ ಸಂಸ್ಥೆ ಎಂಬ ದೂಷಣೆಗೆ ಸಮರ್ಥನೆ ದೊರೆತೀತು. ಅಲ್ಪಸಂಖ್ಯಾತರಾದ

ಮುಸಲ್ಮಾನ ಸಹೋದರರ ರಕ್ಷಣೆ ತಮ್ಮ ಪವಿತ್ರ ಕರ್ತವ್ಯವೆಂದು ಬಿಹಾರೀ ಹಿಂದೂಗಳು ಭಾವಿಸಬೇಕಾದುದೂ ಅಗಾಧ ಬಹುಸಂಖ್ಯಾತರಾದ ಹಿಂದುಗಳೊಡನೆ ಅವರು ಸರಿಸಮಾನಸ್ಕಂಧರೆಂದು ಪರಿಗಣಿಸುವುದೂ ಅತ್ಯಗತ್ಯ. ಕಾಂಗ್ರೆಸ್ಸಿನ ಘನತೆಯನ್ನು ವರ್ಧಿಸಲು ಬಹುವಾಗಿ ಶ್ರಮಿಸಿದ ಬಿಹಾರ ರಾಜ್ಯವೇ ಆ ಸಂಸ್ಥೆಯ ಸಮಾಧಿಯನ್ನೂ ರಚಿಸದಿರಲಿ.

ನನ್ನ ಅಹಿಂಸಾವ್ರತಕ್ಕಾಗಿ ನಾನೆಂದಿಗೂ ನಾಚಿಕೊಳ್ಳಬೇಕಾಗಿಲ್ಲ. ಪರೀಕ್ಷೆಯ ತುರ್ತು ಸಮಯದಲ್ಲಿ ನನ್ನ ಅಹಿಂಸೆ ನನ್ನಲ್ಲಿ ಹೇಗೆ ಪ್ರಕಟವಾದೀತೆಂದು ನಿರೀಕ್ಷಿಸುವುದಕ್ಕಾಗಿಯೇ ನಾನೀಗ ಬಂಗಾಳಕ್ಕೆ ಬಂದಿದ್ದೇನೆ. ಆದರೂ ಈ ಪತ್ರದಲ್ಲಿ ನಿಮಗೆ ನಾನು ಅಹಿಂಸೆಯನ್ನೇನೂ ಬೋಧಿಸ ಲಿಚ್ಛಿಸುವುದಿಲ್ಲ. ಆದರೆ ನೀವೆಸಗಿರುವಿರೆಂದು ವರದಿಯಾಗಿರುವ ಕೃತ್ಯ ಎಂದೆಂದಿಗೂ ವೀರವೃತ್ತಿಯೆನಿಸಲಾರದೆಂದು ಮಾತ್ರ ಖಂಡಿತವಾಗಿ ಹೇಳ ಬಯಸುತ್ತೇನೆ. ಸಾವಿರಾರು ಜನ ಸೇರಿ ಸ್ವಲ್ಪ ಜನರನ್ನು ಹತ್ತಿಕ್ಕಿ ಕೊಲ್ಲುವುದೇನೂ ಶೌರ್ಯವಲ್ಲ. ಹೇಡಿತನಕ್ಕಿಂತ ಕೀಳಾದ ವರ್ತನೆಯದು; ರಾಷ್ಟ್ರೀಯತೆಗೆ ಅಗೌರವ; ಯಾವ ಧರ್ಮಕ್ಕೂ ಸಲ್ಲದು. ಹೊಡೆತಕ್ಕೆ ಪ್ರತಿಭಟಿಸಿ ಹೊಡೆದಿದ್ದರೆ ನಿಮ್ಮನ್ಯಾರೂ ನಿಂದಿಸಲಾರರು. ಈಗ ನೀವೆಸಗಿರುವುದು ನಿಮ್ಮನ್ನೂ ಭಾರತವನ್ನೂ ಅಧೋಗತಿಗೆಳೆವ ಅಕೃತ್ಯ.

ಜವಾಹರರನ್ನೂ ನಿಷ್ಟಾರ್* ಸಾಹೇಬರನ್ನೂ, ರಾಜೇಂದ್ರಬಾಬುಗಳನ್ನೂ 'ದೇಶಕಾರ್ಯಕ್ಕೆ ಹಿಂದಿರುಗಿ; ನಿಮ್ಮ ಸೈನ್ಯವನ್ನು ಹಿಂತೆಗೆದುಕೊಳ್ಳಿ' ಎಂದು ನೀವು ಕೇಳಬೇಕು. ನಿಮ್ಮ ಅಮಾನುಷ ಅಕೃತ್ಯಗಳಿಗೆ ವಿಷಾದ ವ್ಯಕ್ತಮಾಡಿ ನಿಮ್ಮ ಅಣ್ಣತಮ್ಮಂದಿರಂತೆಯೇ ಮುಸಲ್ಮಾನ ಸಹೋದರರನ್ನೂ ನೀವು ರಕ್ಷಿಸುವುದಾಗಿ ಭರವಸೆ ನೀಡಿದರೆ ಮಾತ್ರ ನಾಯಕರು ಹಾಗೆ ಮಾಡಬಲ್ಲರು. ಪ್ರತಿಯೊಬ್ಬ ಮುಸಲ್ಮಾನ ನಿರಾಶ್ರಿತನೂ ತನ್ನ ಮನೆಗೆ ಹಿಂದಿರುಗುವಂತೆ ಮಾಡುವವರೆಗೂ ನೀವು

---

* ಅಬ್ದುಲ್ ರಬ್ ನಿಷ್ಟಾರ್—ಮುಸ್ಲಿಂ ಲೀಗ್ ಪರವಾಗಿ ಕೇಂದ್ರ ಮಂತ್ರಿ ಮಂಡಲದಲ್ಲಿ ಸಚಿವರಾಗಿದ್ದರು.

ವಿಶ್ರಾಂತರಾಗಬಾರದು. ಕೆಡವಿದ ಮನೆಗಳನ್ನು ಪುನಃ ನಿರ್ಮಿಸಿ; ಅದಕ್ಕಾಗಿ ಮಂತ್ರಿಗಳ ಸಹಾಯ ಪಡೆಯಿರಿ. ಟೀಕಿಸುವವರು ನಿಮ್ಮ ಮಂತ್ರಿಗಳ ಬಗ್ಗೆ ನನಗೇನು ಹೇಳಿದ್ದಾರೆಂಬುದನ್ನು ನೀವು ಅರಿತಿಲ್ಲ.

ನಿಮ್ಮ ವಾತ್ಸಲ್ಯ ನನ್ನನ್ನು ನಿಮ್ಮವನನ್ನಾಗಿ ಬಂಧಿಸಿದೆ. ಬಿಹಾರದ ಹಿಂದೂಗಳ ಕರ್ತವ್ಯದ ಬಗ್ಗೆ ನಿಮಗಿಂತ ನನಗೆ ಸ್ಪಷ್ಟ ಕಲ್ಪನೆಯಿದೆ ಯೆಂದು ನಂಬಿ ಅದಕ್ಕಾಗಿ ಸಮಯೋಚಿತ ತಪಸ್ಸನ್ನಾಚರಿಸುವವರೆಗೆ ನನಗೆ ಸಮಾಧಾನವಿಲ್ಲ. ನಾನು ಕಲ್ಕತ್ತೆಗೆ ಬಂದಾಗಿನಿಂದ ಆರೋಗ್ಯದ ಪ್ರಧಾನ ಕಾರಣಕ್ಕಾಗಿ ಅತ್ಯಲ್ಪ ಆಹಾರವನ್ನು ತೆಗೆದುಕೊಳ್ಳಲು ಆರಂಭಿಸಿದ್ದೇನೆ. ಬಿಹಾರದ ದುರಂತ ಪ್ರಕರಣದ ಸುದ್ದಿ ಕೇಳಿದ ಮೇಲೆ ಈ ಅಲ್ಪಾಹಾರದ ವ್ರತವನ್ನು ತಪಸ್ಸಿನ ರೂಪದಲ್ಲಿ ಮುಂದುವರಿಸುತ್ತೇನೆ. ಅಪಮಾರ್ಗದಲ್ಲಿ ತೊಡಗಿರುವ ಬಿಹಾರಿಗಳು ತಮ್ಮ ನಡತೆಯನ್ನು ತಿದ್ದಿಕೊಳ್ಳದಿದ್ದಲ್ಲಿ ಈ ಅಲ್ಪಾಹಾರದ ವ್ರತ ಆಮರಣಾಂತ ನಿರಶನ ವ್ರತದಲ್ಲಿ ಪರ್ಯವಸಾನಗೊಳ್ಳುತ್ತದೆ.

ಅತ್ಯಂತ ಪವಿತ್ರ ಕರ್ತವ್ಯ ನಿರ್ವಹಣೆಗಾಗಿ ನಾನು ಕೈಗೊಂಡ ನಿರ್ಮಲ ತಪಸ್ಸಿಂದಲ್ಲದೆ, ಈ ಕ್ರಮವನ್ನು ಬಿಹಾರ ಅನ್ಯಥಾ ಭಾವಿಸುವ ಭಯವೇನಿಲ್ಲ.

ಸಹಾನುಭೂತಿ ಸಹಾಯಗಳಿಗೆಂದು ಸ್ನೇಹಿತರಾರೂ ನನ್ನ ಬಳಿಗೆ ಧಾವಿಸದಿರಲಿ. ನನ್ನ ಸುತ್ತಲೂ ವಾತ್ಸಲ್ಯಭರಿತ ಗೆಳೆಯರಿದ್ದಾರೆ. ನನ್ನ ಮಾರ್ಗವನ್ನು ಅನುಕರಿಸುವುದು ಯಾರಿಗೂ ಸಲ್ಲದ ಅಪರಾಧ ಕಾರ್ಯವೇ ಆದೀತು. ಸಹಾನುಭೂತಿಗಾಗಿ ನಿರಶನ ಉಪವಾಸಗಳು ಕೂಡದು. ಅಂಥ ಪ್ರತಿಕ್ರಿಯೆಗಳಿಂದ ಹೆಚ್ಚು ಹಾನಿಯೇ ಆದೀತು. ನನ್ನ ಸದುದ್ದೇಶಗಳಲ್ಲಿ ಭರವಸೆಯುಳ್ಳ, ನನ್ನನ್ನು ಬಲ್ಲ, ಸ್ನೇಹಿತರ ಸದಸದ್ವಿವೇಚನೆ ಜಾಗ್ರತಗೊಳ್ಳುವಂತೆ ಮಾಡುವುದೇ ನನ್ನ ತಪಸ್ಸಿನ ಗುರಿ. ಯಾರೂ ನನ್ನ ಬಗ್ಗೆ ಆತಂಕಗೊಳ್ಳಬಾರದು. ಎಲ್ಲರಂತೆ ನಾನೂ ಪರಮಾತ್ಮನ ರಕ್ಷಣೆಗೊಳಗಾದವನೇ.

ಈ ನಶ್ವರ ಶರೀರದ ಮೂಲಕ ಎಲ್ಲಿಯವರೆಗೆ ಸೇವೆ ಸ್ವೀಕರಿಸಲು ಭಗವಾನ ಇಚ್ಛಿಸುವನೋ ಅಲ್ಲಿಯವರೆಗೆ ನನಗೆ ಯಾವ ಬಾಧಕವೂ ಆಗದು.೪೪

## ೪೫. ದತ್ತಪಾರದಲ್ಲಿ ಭಾಷಣ

[ ಮಾರನೆಯ ದಿನ ಗಾಂಧೀಜೀಯ ಶಿಬಿರ* ದತ್ತಪಾರದಲ್ಲಿತ್ತು. ದುರಂತಕ್ಕೆ ತುತ್ತಾಗಿದ್ದ ದೂರದ ಹಳ್ಳಿಗಳ ಭೇಟಿಗಾಗಿ ಅವರು ಅಲ್ಲಿದ್ದರು. ನವಂಬರ್ ೧೧ರಂದು ಶೇಕಡ ೮೦ರಷ್ಟು ಮುಸಲ್ಮಾನರಿದ್ದ ಸಭೆಯಲ್ಲಿ ಗಾಂಧೀಜೀ ಭಾಷಣ ಮಾಡಿದರು ]

ನೀವು ನಂಬಿ, ಬಿಡಿ, ನಾನು ಹಿಂದೂ ಮುಸಲ್ಮಾನರಿಬ್ಬರಿಗೂ ಸೇವಕನೆಂದು ನಿಮಗೆ ಭರವಸೆ ಕೊಡಲಿಚ್ಛಿಸುತ್ತೇನೆ. ಪಾಕಿಸ್ತಾನವನ್ನು ವಿರೋಧಿಸಲು ನಾನಿಲ್ಲಿಗೆ ಬಂದಿಲ್ಲ. ವಿಧಿ ಭಾರತದ ವಿಭಜನೆಯನ್ನು ಬಯಸಿದರೆ ನಾನದನ್ನು ತಡೆಗಟ್ಟಲಾರೆ. ಆದರೆ ಶಸ್ತ್ರಶಕ್ತಿಯಿಂದ ಪಾಕಿಸ್ತಾನವನ್ನು ಸ್ಥಾಪಿಸಲಾಗುವುದಿಲ್ಲ. ಈಗ ಹಾಡಿದ ಭಜನೆಯಲ್ಲಿ ಕವಿ ದೇವರನ್ನು ಸ್ಪರ್ಶಮಣಿಗೆ (Philosopher's Stone) ಹೋಲಿಸಿದ್ದಾನೆ. ಗಾದೆಯ ರೂಪದ ಈ ಮಣಿ ಕಬ್ಬಿಣವನ್ನು ಸುವರ್ಣವನ್ನಾಗಿ ಪರಿವರ್ತಿಸುವುದಂತೆ. ಇದು ಎಲ್ಲ ಸಮಯಗಳಲ್ಲೂ ಹಿತವಾದುದೇನಲ್ಲ. ಉದಾಹರಣೆಗೆ ರೈಲು ಕಂಬಿಗಳೆಲ್ಲ ಈ ಮಣಿಯ ಸ್ಪರ್ಶದಿಂದ ಬಂಗಾರವಾದರೆ ರೈಲುಗಳು ಅದರ ಮೇಲೆ ಓಡಲಾರವು. ಆದರೆ ಪರಮಾತ್ಮನ ಸ್ಪರ್ಶದಿಂದ ಆತ್ಮ ಪುನೀತವಾಗುತ್ತದೆ. ಇದು ಯಾವಾಗಲೂ ಅಪೇಕ್ಷಣೀಯ.

ಈ ಸ್ಪರ್ಶಮಣಿ ನಮ್ಮೆಲ್ಲರಲ್ಲೂ ಇದೆ. ನನ್ನ ಮುಸಲ್ಮಾನ ಸಹೋದರರಿಗೆ ನಾನಿಷ್ಟನ್ನು ಹೇಳ ಬಯಸುತ್ತೇನೆ. ನೀವು ಒಂದೇ ಜನಾಂಗವಾಗಿಯಾಗಲೀ ಪ್ರತ್ಯೇಕ ಜನಾಂಗಗಳಾಗಿಯಾಗಲೀ ಇರುವುದಾದರೂ ಹಿಂದೂಗಳೊಡನೆ ಸ್ನೇಹದಿಂದಿರಿ. ಅದು ಸರಿದೋರದಿದ್ದಲ್ಲಿ ಪ್ರಾಮಾಣಿಕವಾಗಿ ಹಾಗೆ ಹೇಳಿ ಬಿಡಿ. ಆಗ ನಾನು ಸೋತೆನೆಂದು ಒಪ್ಪಿಕೊಳ್ಳುತ್ತೇನೆ. ನಿರಾಶ್ರಿತರು ಸರ್ವಕಾಲಕ್ಕೂ ನಿರಾಶ್ರಿತರಾಗಿಯೇ ಉಳಿಯಲಾರರು. ಸರಕಾರವೇ ಅವರನ್ನು ಯಾವಾಗಲೂ ಪೋಷಿಸಲಾರದು. ಈಗಾದರೂ

* ಹಿಂದೂ—ಮುಸ್ಲಿಂ ಸಖ್ಯ ಸಾಧನೆಗಾಗಿ ನವಕಾಲೀ ಮತ್ತು ತಿಪ್ಪೇರಾ ಜಿಲ್ಲೆಗಳಲ್ಲಿ ಪ್ರವಾಸ ಕೈಗೊಂಡಾಗ ಪ್ರವಾಸ ಶಿಬಿರ.

ಅವರಿಗೆ ದೊರೆಯುತ್ತಿರುವ ಆಹಾರವೆಂತಹುದು? ದಿನದ ಪಡಿಯೂಟ ಅರ್ಧ ಹೊಟ್ಟೆಗೂ ಸಾಲದು. ಕೇವಲ ಪ್ರಾಣವುಳಿಯಲು ಸಾಕಾದಷ್ಟು; ಕಾಯಿಪಲ್ಯ ಮೀನು, ಮತ್ತಿತರ ಪೋಷಕ ಸಾಮಾಗ್ರಿಗಳಿಲ್ಲದ ಆಹಾರ. ಈ ಸ್ಥಿತಿಯಲ್ಲಿ ಅವರು ಬಹಳ ಕಾಲ ಬದುಕಲಾರರು. ಆದ್ದರಿಂದ ಅವರು ತಮ್ಮ ಗ್ರಾಮಕ್ಕೆ ಹಿಂದಿರುಗುವುದು ಮುಸ್ಲಿಮರಿಗೆ ಇಷ್ಟವಿಲ್ಲದುದಾದರೆ ಅವರು ಬೇರೆ ಕಡೆಗೆ ಹೋಗಬೇಕು.

ಆದರೆ ಪೂರ್ವ ಬಂಗಾಳದ ಎಲ್ಲ ಹಿಂದೂಗಳೂ ಇಲ್ಲಿಂದ ಹೊರಟು ಹೋದರೂ ನಾನಿಲ್ಲಿಯೇ ಉಳಿಯುತ್ತೇನೆ. ಮುಸಲ್ಮಾನರು ನನಗೆಷ್ಟು ಕೊಡುವರೋ, ನನಗೆಷ್ಟು ಅದರಲ್ಲಿ ನ್ಯಾಯವಾಗಿ ಬೇಕೋ ಅಷ್ಟನ್ನೇ ಸ್ವೀಕರಿಸುತ್ತೇನೆ. ನನ್ನ ಆಹಾರವನ್ನು ನಾನು ಹೊರಗಿನಿಂದ ತರಿಸುವುದಿಲ್ಲ. ನನಗೆ ಮೀನಾಗಲೀ ಮಾಂಸವಾಗಲೀ ಅನಗತ್ಯ. ಸ್ವಲ್ಪ ಹಣ್ಣು, ತರಕಾರಿ ಮತ್ತು ಸ್ವಲ್ಪ ಆಡಿನ ಹಾಲು, ಇಷ್ಟೇ ನನ್ನ ಆಹಾರ. ಆಡಿನ ಹಾಲು ಮತ್ತು ದ್ವಿದಳ ಧಾನ್ಯಗಳನ್ನು ಮುಂದೆ ಪರಮಾತ್ಮನ ಇಚ್ಛೆಯಾದ ವೇಳೆಗೆ ತೆಗೆದುಕೊಳ್ಳುತ್ತೇನೆ. ಇವುಗಳನ್ನು ನಾನು ಈಗ ವರ್ಜಿಸಿದ್ದೇನೆ. ಬಿಹಾರದ ಹಿಂದೂಗಳು ತಮ್ಮ ದುಷ್ಕೃತ್ಯಗಳಿಗೆ ಪ್ರಾಮಾಣಿಕವಾಗಿ ಪಶ್ಚಾತ್ತಾಪ ಪಡುವವರೆಗೂ ನಾನು ಈ ಆಹಾರಗಳನ್ನು ಮತ್ತೆ ತೆಗೆದು ಕೊಳ್ಳುವುದಿಲ್ಲ.

ಸಾವಿರಾರು ಹಿಂದೂಗಳು ನೂರು ಮುಸಲ್ಮಾನರನ್ನಾಗಲಿ, ಸಾವಿರ ಮುಸಲ್ಮಾನರು ನೂರು ಜನ ಹಿಂದೂಗಳನ್ನಾಗಲೀ ಸುತ್ತುಗಟ್ಟಿ ಹೊಡೆಯುವುದು ಪರಾಕ್ರಮವಲ್ಲ, ಹೇಡಿತನ. ಸರಿಸಮ ಸಂಖ್ಯೆಯಿದ್ದು ಪೂರ್ವಭಾವಿ ಎಚ್ಚರಿಕೆ ಕೊಟ್ಟುದಾದರೆ ನ್ಯಾಯವಾದ ಕಲಹವಾದೀತು. ನಾನು ಈ ಘರ್ಷಣೆಯನ್ನು ಒಪ್ಪುತ್ತೇನೆಂದು ಇದರ ಅರ್ಥವಲ್ಲ. ಹಿಂದೂ ಮುಸಲ್ಮಾನರು ಒಟ್ಟಿಗೆ ಸ್ನೇಹಿತರಂತೆ ಸಹಕರಿಸಿ ಬಾಳುವುದು ಸಾಧ್ಯವೇ ಇಲ್ಲ ಎನ್ನುತ್ತಾರೆ ಕೆಲವರು. ನಾನೆಂದಿಗೂ ಅದನ್ನು ನಂಬಲಾರೆ. ಆದರೆ ನೀವು ಹಾಗೆ ನಂಬುವುದಾದರೆ ಅದರಂತೆ ನಡೆಯಬೇಕು. ಹಿಂದೂಗಳು ತಮ್ಮ ಸ್ವಗ್ರಾಮಗಳಿಗೆ ಹಿಂದಿರುಗಬೇಕೆಂದು ಆಗ ನಾನು ಹೇಳುವುದಿಲ್ಲ. ಅವರು ಪೂರ್ವ ಬಂಗಾಳವನ್ನು ತ್ಯಜಿಸಿ ಹೋದಾರು. ಇದು ಹಿಂದೂ

ಮುಸಲ್ಮಾನರಿಬ್ಬರಿಗೂ ನಾಚಿಕೆಗೇಡು. ಇದಕ್ಕೆ ಬದಲಾಗಿ, ಹಿಂದೂಗಳು ನಿಮ್ಮ ಮಧ್ಯೆ ಬಾಳಬೇಕೆಂದು ನಿಮ್ಮ ಅಭಿಲಾಷೆಯಾದರೆ, ಸೈನ್ಯ ರಕ್ಷಣೆಯನ್ನೆದುರು ನೋಡದೆ ಮುಸಲ್ಮಾನ ಸಹೋದರರನ್ನೆ ನಮ್ಮ ರಕ್ಷಕರೆಂದು ತಿಳಿಯಬೇಕೆಂದು ಅವರಿಗೆ ನೀವು ಭರವಸೆ ಕೊಡಬೇಕು. ಅವರ ಹೆಣ್ಣು ಮಕ್ಕಳು, ಅಕ್ಕತಂಗಿಯರು ಮತ್ತು ಮಾತೆಯರು ನಿಮ್ಮ ಮಕ್ಕಳು, ತಂಗಿಯರು ಮತ್ತು ಮಾತೆಯರ ಹಾಗೆಯೆ. ಅವರ ರಕ್ಷಣೆಗೆ ನೀವು ಬಲಿದಾನ ಮಾಡಬೇಕು.

ನಿನ್ನೆ ಸಂಜೆ ಪ್ರಾರ್ಥನಾ ಸಭೆಯಾದನಂತರ ಒಬ್ಬ ಸೋದರ ತನ್ನ ಗ್ರಾಮಕ್ಕೆ ಹಿಂತಿರುಗಿದನಂತೆ. ಮುಸಲ್ಮಾನರು ಅವನ ಮನೆಯನ್ನು ಸುತ್ತುಗಟ್ಟಿ ತನ್ನ ವಸ್ತುಗಳನ್ನು ತೆಗೆದುಕೊಳ್ಳದಂತೆ ತಡೆದರು. ಇಂಥ ಪರಿಸ್ಥಿತಿಯಲ್ಲಿ ತಮ್ಮ ಹಳ್ಳಿಗಳಿಗೆ ಹಿಂದಿರುಗಿರಿ ಎಂದು ನಾನು ಅವರಿಗೆ ಹೇಗೆ ಹೇಳಲಾದೀತು. ನನ್ನ ಮಾತನ್ನು ನೀವು ಆಳವಾಗಿ ಆಲೋಚಿಸಿ ನಿಮ್ಮ ಅಭ್ಯೆಯನ್ನು ನನಗೆ ಸ್ಪಷ್ಟವಾಗಿ ತಿಳಿಸಬೇಕು. ಅದರಂತೆಯೇ ನಾನು ಹಿಂದೂಗಳಿಗೆ ಸಲಹೆ ಮಾಡುತ್ತೇನೆ. ಅನೇಕ ಸಹೃದಯ ಮುಸ್ಲಿಮರು ಹಿಂದೂಗಳನ್ನು ಹಿಂದಿರುಗಿ ಬರುವಂತೆ ಸ್ವಾಗತಿಸುವರೆಂದು ಕೇಳಿದ್ದೇನೆ. ಹಾಗೆಯೇ ನಾನೂ ನಂಬುತ್ತೇನೆ. ಆದರೆ ಕೆಲವರು ಗೂಂಡಾಗಳು ಅವರನ್ನು ತಡೆಗಟ್ಟಿದ್ದಾರಂತೆ. ಸಜ್ಜನರಾದ ಮುಸಲ್ಮಾನರು ಒಗ್ಗಟ್ಟಿನಿಂದ ನುಡಿದು ಅದರಂತೆ ಆಚರಿಸುವುದಾದರೆ ಪುಂಡರೆನಿಸಿಕೊಳ್ಳುವವರೂ ಶಕ್ತಿಹೀನರಾಗುತ್ತಾರೆ; ಅವರ ಮಾರ್ಗವನ್ನೂ ಸರಿಪಡಿಸಿಕೊಳ್ಳುತ್ತಾರೆ.೪೫

## ೪೬. ಅಂತರ ಏಷ್ಯಾ ಸಮ್ಮೇಳನದಲ್ಲಿ

[೧೯೪೭ನೆಯ ಏಪ್ರಿಲ್‌ನಲ್ಲಿ ದೆಹಲಿಯಲ್ಲಿ ನಡೆದ ಏಷ್ಯಾ ರಾಷ್ಟ್ರಗಳ ಪ್ರಥಮ ಸಮ್ಮೇಳನದಲ್ಲಿ ಗಾಂಧೀಜೀ ಸ್ವಲ್ಪಕಾಲ ಭಾಗವಹಿಸಿದ್ದರು. ಮೊದಲನೆಯ ದಿನ ಅವರು ಭಾಷಣಮಾಡಲಿಲ್ಲ. ಹಲವು ಪ್ರತಿನಿಧಿಗಳ ಪ್ರಶ್ನೆಗಳಿಗವರು ಉತ್ತರಕೊಟ್ಟರು. ಆ ಪ್ರಶ್ನೋತ್ತರಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.]

ಅಜರ್‌ಬೈಜಾನಿನ ಪ್ರತಿನಿಧಿ ಶ್ರೀ ಯೂಸೊಟೋಫ್ ಅಂದಿನ ಅಧ್ಯಕ್ಷ ಪೀಠದಿಂದ ಗಾಂಧೀಜೀಯವರನ್ನು ಮಾತನಾಡುವಂತೆ ಪ್ರಾರ್ಥಿಸಿದರು. ಮಾರನೆಯ ದಿನ ಸಮಾರೋಪ ಸಭೆಯಲ್ಲಿ ತಾವು ಭಾಷಣ ಮಾಡುವುದಾಗಿಯೂ ಪ್ರಸಕ್ತ ಸಭೆಯಲ್ಲಿ ಪ್ರತಿನಿಧಿಗಳು ಕೇಳಬಹುದಾದ ಕೆಲವು ಪ್ರಶ್ನೆಗಳಿಗೆ ತಾವು ಉತ್ತರ ನೀಡುವುದಾಗಿಯೂ ಗಾಂಧೀಜೀ ತಿಳಿಸಿದರು.

"ಏಕ ವಿಶ್ವದ ಸಾಧ್ಯತೆಯನ್ನು ನೀವು ನಂಬುವಿರಾ? ಇಂದಿನ ಪರಿಸ್ಥಿತಿಯಲ್ಲಿ ಅದು ಯಶಸ್ವಿಯಾದೀತೆ?" ಎಂಬ ಪ್ರಶ್ನೆಗೆ ಉತ್ತರಿಸುತ್ತಾ ಗಾಂಧೀಜೀ; ಹೀಗೆ ನುಡಿದರು: "ಇಂಥ ರೀತಿಯಲ್ಲಿ ರೂಪುಗೊಳ್ಳದ ಪ್ರಪಂಚದಲ್ಲಿ ನಾನು ಜೀವಿಸಿರಲು ಇಚ್ಛಿಸುವುದಿಲ್ಲ. ನನ್ನ ಜೀವಿತ ಕಾಲದಲ್ಲೇ ಈ ಕನಸು ನನಸಾಗುವುದನ್ನು ನೋಡಬೇಕೆಂದು ನನ್ನ ಬಯಕೆ" ಎಂದರು. ಅವರು ಮುಂದುವರಿದು, "ಈ ಮಹಾ ಸಭೆಗೆ ವಿವಿಧ ಏಷ್ಯಾ ರಾಷ್ಟ್ರಗಳಿಂದ ಬಂದಿರುವ ಪ್ರತಿನಿಧಿಗಳೆಲ್ಲರೂ ಇಂಥ ಏಕ ವಿಶ್ವದ ಸಾಧನೆಗಾಗಿ ಶ್ರಮಿಸುವರೆಂದು ನನ್ನ ನಂಬಿಕೆ. ಈ ಗುರಿಯನ್ನು ಸಾಧಿಸುವ ಮಾರ್ಗಗಳನ್ನು ಅವರು ಶೋಧಿಸಬೇಕು. ಸ್ಥಿರ ಸಂಕಲ್ಪರಾಗಿ ನೀವೆಲ್ಲರೂ ದುಡಿದರೆ ನಮ್ಮ ತಲೆಮಾರಿನಲ್ಲೇ ಈ ಕನಸು ಈಡೇರಬಲ್ಲದೆಂಬುದರಲ್ಲಿ ಸಂಶಯವಿಲ್ಲ" ಎಂದರು.

ಚೀನಾ ದೇಶದ ಪ್ರತಿನಿಧಿ ಡಾ. ಹ್ಯಾನ್ ಲಿವು ಮುಂದೆ ಸ್ಥಾಪಿಸಬೇಕೆಂದಿರುವ 'ಏಷ್ಯಾಸಂಸ್ಥೆ' (Asian Institute) ಬಗ್ಗೆ ಗಾಂಧೀಜೀಯ ಅಭಿಪ್ರಾಯವೇನೆಂದು ಕೇಳಿದರು. ಉತ್ತರವಾಗಿ ಗಾಂಧೀಜೀ, "ಪ್ರಶ್ನೆ ಬಹಳ ಉಚಿತವಾಗಿದೆ. ಆದರೆ ಈ ಬಗ್ಗೆ ನನ್ನ ಜ್ಞಾನಾಭಾವವನ್ನು ಒಪ್ಪಿಕೊಳ್ಳಬೇಕಾಗಿದೆ. ಅದಕ್ಕಾಗಿ ನಿಮ್ಮ ಕ್ಷಮೆಯನ್ನೂ ಕೇಳುತ್ತೇನೆ. ಈ ಸಮ್ಮೇಳನ ಸೇರುವುದಕ್ಕೆ ಬಹಳ ದಿನಗಳ ಹಿಂದೆಯೇ ಪಂಡಿತ ನೆಹರೂ ಅವರು ನನಗೆ ತಿಳಿಸಿ ಈ ಸಭೆಗೆ ನಾನು ಬರುವುದು ಸಾಧ್ಯವಾಗಬಹುದೇ ಎಂದು ಕೇಳಿದ್ದರು. ನಿರೀಕ್ಷಣೆಗಿಂತ ಹೆಚ್ಚು ಪ್ರಾಮುಖ್ಯವಾದ ಸಮ್ಮೇಳನವಾಗಿ ಪರಿಣಮಿಸಿದೆ ಇದು. ಹಿಂದೆ ನನ್ನನ್ನು ಕೇಳಿದಾಗ ನಾನು ಈ ಸಮ್ಮೇಳನಕ್ಕೆ ಬರುವುದು ಬಹುಶಃ ಸಾಧ್ಯವಾಗಲಾರದೆಂದು ಹೇಳಬೇಕಾದ ಸಂದರ್ಭವಿತ್ತು. ಹೊಸ ವೈಸ್‌ರಾಯರಾದ ಲಾರ್ಡ್ ಮೌಂಟ್‌

ಜೇಟನ್ನರು ತಮ್ಮನ್ನು ಭೇಟಿಯಾಗುವಂತೆ ಆಹ್ವಾನಿಸಿದಾಗ ನಾನು ಆಹ್ವಾನವನ್ನು ನಿರಾಕರಿಸಲಾಗಲಿಲ್ಲ. ಹಾಗೆ ಮಾಡುವುದು ನನ್ನ ಸ್ವಭಾವಕ್ಕೆ ಸರಿಹೋಗದು. ಈ ಏಷ್ಯಾ ಸಮ್ಮೇಳನದ ಕಾಲಕ್ಕೆ ನನ್ನನ್ನು ದೆಹಲಿಗೆ ಬರಮಾಡಿಕೊಂಡ ಶ್ರೇಯಸ್ಸು ವೈಸರಾಯರದೇ ಎಂದು ಅವರು ತಿಳಿಸಿದರು. "ನಾನು ನಿಮ್ಮ ಕೈದಿ" ಎಂದವರಿಗೆ ಹೇಳಿದೆ. "ನಾನು ಜವಹರರ ಕೈದಿಯೂ ಹೌದು, ಏಕೆಂದರೆ ಎಷ್ಟಾದರೂ ಅವರು ನಿಮ್ಮ ಉಪಾಧ್ಯಕ್ಷರಲ್ಲವೇ?" ಎಂದರು.

ಪತ್ರ ವ್ಯವಹಾರಗಳ ಮೂಲಕ ಪ್ರಪಂಚದ ಬಹು ಭಾಗದ ದೇಶಗಳನ್ನು ನಾನು ಬಲ್ಲೆನಾದ್ದರಿಂದ ಸಹಜವಾಗಿ ಏಷ್ಯಾ ದೇಶಗಳನ್ನೂ ಬಲ್ಲೆ. ತಮ್ಮಲ್ಲಿ ಯಾರನ್ನೂ ವೈಯಕ್ತಿಕವಾಗಿ ಅರಿಯೆ. ನೀವು ಕೇಳಿದ ಪ್ರಶ್ನೆ ನನಗೂ ಪ್ರಿಯವಾದ ವಿಷಯವೇ ಆದರೂ ಆ ಬಗ್ಗೆ ನಾನೇನೂ ಹೆಚ್ಚು ಹೇಳಲಾರೆ. ಈ ವಿಷಯದ ಕೆಲವು ಭಾಗಗಳನ್ನೀಗಾಗಲೇ ಪಂಡಿತ್ ನೆಹರೂರವರು ನಿನ್ನೆ ಪ್ರಸ್ತಾಪಮಾಡಿದ್ದಾರೆ. ಭಾರತದ ಇತಿಹಾಸದಲ್ಲೇ ಮೊದಲ ಬಾರಿಗೆ ಈ ನಾಡಿನಲ್ಲಿ ಇಂಥ ಸಮ್ಮೇಳನ ನಡೆಯುತ್ತಿರುವುದು ಒಂದು ಮಹತ್ವದ ಘಟನೆ. ಈ ಸಮಯದಲ್ಲಿ ನಮ್ಮ ಸುತ್ತಲಿನ ಪರಿಸ್ಥಿತಿಯನ್ನು ದುಃಖದಿಂದ ವ್ಯಕ್ತಪಡಿಸಬೇಕಾಗಿದೆ. ನಾವು ಆಂತರಿಕ ಶಾಂತಿಯನ್ನು ಸಾಧಿಸಲಾರದವರಾಗಿದ್ದೇವೆ. ಮಾನವೀಯ ಸಖ್ಯದಿಂದ ನಮ್ಮೊಳಗೆ ನಿವಾರಿಸಲಾಗದೇ ಹೋಗಿರುವ ಅನೇಕ ಭಿನ್ನತೆಗಳು ಇನ್ನೂ ಇವೆ. ಪಶುವೃತ್ತಿಗೇ ಶರಣಾಗಬೇಕೆಂದು ನಮ್ಮ ಭಾವನೆ. ಇಂದಿನ ಈ ಅನುಭವವನ್ನು ಮಾತ್ರ ತಾವು ಯಾರೂ ತಮ್ಮ ದೇಶಗಳಿಗೆ ಕೊಂಡೊಯ್ಯಬೇಡಿ. ಇಲ್ಲೇ ಅದನ್ನು ಮರೆತುಬಿಡಿ ಎಂಬುದೇ ನನ್ನ ಇಚ್ಛೆ.

ಪೂರ್ಣ ಸ್ವಾತಂತ್ರ್ಯದ ಹೊಸಲಿನಲ್ಲಿ ಭಾರತ ಇಂದು ನಿಂತಿದೆ. ಭಾರತವನ್ನು ತನ್ನ ಸ್ವತ್ತಾಗಿ ಭಾವಿಸುವ ಯಾವ ದೇಶಕ್ಕೂ ನಾವು ಆಶ್ರಿತರಾಗಲಾರೆವು. ನಾವು ಬಯಸುತ್ತಿರುವುದು ಕೇವಲ ಆಳರಸರ ಬದಲಾವಣೆಯನ್ನಲ್ಲ. ನಮ್ಮ ಭೂಮಿ ಪೂರ್ಣವಾಗಿ ನಮ್ಮ ಒಡೆತನದೊಳಗೆ ಬರಬೇಕೆಂಬುದೇ ನಮ್ಮ ಇಚ್ಛೆ. ಇದು ಹೇಗೆ ರೂಪುಗೊಂಡೀತೆಂಬುದನ್ನು ನಾನಿನ್ನೂ ಅರಿಯೆ. ಮನುಷ್ಯ ಸಂಕಲ್ಪಕ್ಕಲ್ಲದೆ ದೈವಸಂಕಲ್ಪಕ್ಕೆ ಶರಣಾಗಿ

ನಮ್ಮ ಕರ್ತವ್ಯ ಪರಿಪಾಲನೆಯಲ್ಲಿ ಮಗ್ನರಾಗುವುದನ್ನು ಮಾತ್ರ ನಾವು ಬಲ್ಲೆವು. ಮಾನವನ ಸಂಕಲ್ಪಗಳನ್ನೆಲ್ಲ ಮೀರಿ ನಿಂತು ತನ್ನ ಪರಮೋದ್ದೇಶಗಳನ್ನು ಸಾಧಿಸುವ ಸರ್ವಶಕ್ತ ಪರಮಾತ್ಮನ ಇಚ್ಛಾವಲಯದೊಳಗೆ ಮಾತ್ರ. ಮಾನವ ತನ್ನ ಭವಿಷ್ಯವನ್ನು ತಾನೇ ರೂಪಿಸಿಕೊಳ್ಳಬಹುದೆಂಬ ನಂಬಿಕೆ ನನ್ನದು. ಆ ಮಹಾಶಕ್ತಿಯನ್ನು 'ಅಲ್ಲಾ' ಎಂದಾಗಲಿ 'ಖುದಾ' ಅಥವಾ 'ಗಾಡ್' ಎಂದಾಗಲೀ ಕರೆಯುವ 'ಸತ್ಯ' ಎಂದೇ ಸಂಬೋಧಿಸುತ್ತೇನೆ. ನನಗೆ ಸತ್ಯವೇ ದೇವರು; ನಮ್ಮ ಹವಣಿಕೆಗಳನ್ನೆಲ್ಲ ಮೀರಿ ನಿಲ್ಲುತ್ತದೆ 'ಸತ್ಯ'. ಆ ಸರ್ವಶಕ್ತ ಸತ್ಯದ ಹೃದಯದಲ್ಲೇ ಪೂರ್ಣ ಸತ್ಯ ಅಡಗಿದೆ. ಸತ್ಯದ ಸ್ವರೂಪ ಅಗಮ್ಯವಾದ ಸಾಧಿಸಲಸಾಧ್ಯವಾದ ಗುರಿ ಎಂದು ನಾನು ಬಾಲ್ಯದಿಂದಲೇ ಅರಿತೆ. ಪರಮಾತ್ಮನು ಅಜ್ಞೇಯನೆಂದು ನಂಬಲು ಒಬ್ಬ ಆಂಗ್ಲೇಯ ಮಹಾಶಯ ನನಗೆ ಬೋಧಿಸಿದರು. ನಮ್ಮ ಸೀಮಿತ ಬುದ್ಧಿಶಕ್ತಿಗೆ ನಿಲುಕುವಷ್ಟು ಮಾತ್ರವೇ ಭಗವಂತ ಜ್ಞಾನಗಮ್ಯ; ಅವನ ಅರಿವು ನಮಗೆ ಅಷ್ಟುಮಾತ್ರ ಸಾಧ್ಯ.

ತಾವೆಲ್ಲ ಸಜ್ಜನರು. ಏಷ್ಯಾದ ವಿವಿಧ ಭಾಗಗಳಿಂದ ಬಂದಿದ್ದೀರಿ. ತೀವ್ರಾಸಕ್ತಿಯಿಂದ ಉತ್ಸುಕರಾಗಿ ಸೇರಿರುವುದರಿಂದ ಪ್ರತಿವರ್ಷವೋ ಅಥವಾ ಎರಡು ಮೂರು ವರ್ಷಗಳಿಗೊಮ್ಮೆಯೋ ನೀವೆಲ್ಲರೂ ಸಭೆ ಸೇರಬೇಕು. ಇಂಥ ಭೇಟಿಗಳ ಮಧುರ ಸ್ಮೃತಿಗಳನ್ನು ಕೊಂಡೊಯ್ದು ಸತ್ಯದ ಭವ್ಯ ಮಹಾ ಸೌಧವನ್ನು ನಿರ್ಮಿಸಲು ಸರ್ವಪ್ರಯತ್ನ ಕೈಗೊಳ್ಳಬೇಕು.

ಏಷ್ಯಾಖಂಡದ ಪ್ರತಿನಿಧಿಗಳೆಲ್ಲ ಒಟ್ಟುಗೂಡಿದ್ದೀರಿ. ಅದ ಮಾತ್ರಕ್ಕೆ ಯೂರೋಪು, ಅಮೇರಿಕಾ ಅಥವಾ ಏಷ್ಯಾಕ್ಕೆ ಸೇರದ ಇತರ ಜನಾಂಗಗಳ ಮೇಲೆ ಯುದ್ಧಸನ್ನಾಹ ಮಾಡುವಿರೇನು? ಘಂಟಾಘೋಷವಾಗಿ 'ಇಲ್ಲ' ಎಂದೇನು, ಅದು ಭಾರತದ ಧ್ಯೇಯವಲ್ಲ. ಪ್ರಧಾನವಾಗಿ ಸತ್ಯಪೂರ್ಣ ಅಹಿಂಸಾ ಮಾರ್ಗದಿಂದಲೇ ಸ್ವಾತಂತ್ರ್ಯ ಗಳಿಸಿದ ಭಾರತ ತನ್ನ ಸ್ವಾತಂತ್ರ್ಯವನ್ನು ಪ್ರಪಂಚದ ಇತರ ಭಾಗಗಳನ್ನು ದಮನಮಾಡಲು ಬಳಸುವುದಾದರೆ ನನಗೆ ಮಹಾ ದುಃಖವಾದೀತೆಂದು ತಿಳಿಸ ಬಯಸುತ್ತೇನೆ. ಏಷ್ಯಾ ಎಂಬ ಈ ಬೃಹತ್ ಖಂಡದ ವಿವಿಧ ಜನಾಂಗಗಳನ್ನು ಐರೋಪ್ಯರು ಶೋಷಣೆ ಮಾಡಿದ್ದರು. ಪಶ್ಚಿಮದ ಎಲ್ಲ ಸ್ವತಂತ್ರ ರಾಷ್ಟ್ರಗಳಂತೆಯೇ ಏಷ್ಯಾಖಂಡದ

ಜನಾಂಗಗಳೂ ಅಷ್ಟೇ ಸ್ವತಂತ್ರರಾಗಿ ಬಾಳುವೆವೆಂಬ ಧೃಢ ಸಂಕಲ್ಪ ಮಾಡದೆ ನಾವಿಲ್ಲಿಂದ ತೆರಳುವುದಾದರೆ ಅದೊಂದು ದುಃಖವೆನಿಸೀತು. ಇಂಥ ಸಮ್ಮೇಲನಗಳು ನಿಯಮಿತ ಸಮಯಗಳಲ್ಲಿ ತಪ್ಪದೆ ಸೇರಬೇಕೆಂದು ಹೇಳ ಬಯಸುತ್ತೇನೆ. ಭಾರತವೇ ಅದರ ಕೇಂದ್ರವಾಗಬೇಕೆಂದೂ ನನ್ನ ಇಚ್ಛೆ.೪೬

## ೪೭. ಅಂತರ ಏಷ್ಯಾ ಸಮ್ಮೇಳನದಲ್ಲಿ ಮಾಡಿದ ಭಾಷಣ

[೧೯೪೭ರ ಏಪ್ರಿಲ್ ೨ರಂದು ದೆಹಲಿಯ 'ಪುರಾನಾ ಖಿಲ್ಲಾ'ದಲ್ಲಿ ಸೇರಿದ್ದ ಅಂತರ ಏಷ್ಯಾ ಸಮ್ಮೇಳನದ ಮುಕ್ತಾಯ ಸಭೆಯನ್ನುದ್ದೇಶಿಸಿ ಗಾಂಧೀಜೀ ಭಾಷಣ ಮಾಡಿದರು.]

ಪರಕೀಯ ಭಾಷೆಯೊಂದರಲ್ಲಿ ನಿಮ್ಮನ್ನು ಕುರಿತು ಮಾತನಾಡು ತ್ತಿರುವುದಕ್ಕಾಗಿ ನಾನು ಕ್ಷಮೆ ಬೇಡಬೇಕಾಗಿಲ್ಲವೆಂದು ಭಾವಿಸುತ್ತೇನೆ. ಈ ಬೃಹತ್ ಸಭೆಯ ಮೂಲೆಯವರೆಗೂ ನನ್ನ ವಾಣಿಯನ್ನು ಈ ಧ್ವನಿ ವರ್ಧಕ ಯಂತ್ರ ಕೊಂಡೊಯ್ಯುವುದೋ ಇಲ್ಲವೋ ನಾನರಿಯೆ. ಕೊನೆ ಯಲ್ಲಿ ಕುಳಿತಿರುವವರಿಗೆ ನನ್ನ ಮಾತು ಕೇಳಿಸದೇ ಹೋದರೆ ಅದು ಈ ಯಂತ್ರದ ತಪ್ಪು.

ನಾನು ಕ್ಷಮೆ ಬೇಡಬೇಕಾಗಿಲ್ಲವೆಂದೆ; ಅಂಥ ಧೈರ್ಯ ನನಗಿಲ್ಲ. ಏಕೆಂದರೆ ನನ್ನ ತಾಯ್ನುಡಿಯನ್ನು ನೀವು ತಿಳಿದಿಲ್ಲ. ಗುಜರಾತಿಯಲ್ಲಿ ಮಾತನಾಡಿ ನಿಮಗೆ ಅಪಚಾರ ಮಾಡಲಾರೆ. ಹಿಂದೂಸ್ತಾನಿ ನಮ್ಮ ರಾಷ್ಟ್ರಭಾಷೆ. ಅದು ಅಂತರರಾಷ್ಟ್ರೀಯ ಭಾಷೆಯಾಗಲು ಇನ್ನೂ ಬಹಳ ಕಾಲ ಬೇಕಾದೀತು. ಆದ್ದರಿಂದ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಮಾತ್ರ ಇಂಗ್ಲಿಷಿಗೇ ಪ್ರಥಮಸ್ಥಾನ. ವ್ಯವಹಾರ ಕುಶಲತೆಗೆ ಫ್ರೆಂಚ್ ಭಾಷೆಯೇ ಯೋಗ್ಯ ಎಂದು ಕೇಳಿದ್ದೆ. ಯೂರೋಪಿನಲ್ಲಿ ಎಲ್ಲಿ ಸಂಚರಿಸ ಬೇಕಾದರೂ ಫ್ರೆಂಚ್ ಭಾಷೆಯನ್ನು ಕಲಿತಿರಬೇಕೆಂದು ನನ್ನ ಬಾಲ್ಯದಲ್ಲಿ ನನಗೆ ಹೇಳುತ್ತಿದ್ದರು. ನನ್ನ ವಿಚಾರಗಳನ್ನು ತಿಳಿಯ ಹೇಳಲು ನಾನು ಫ್ರೆಂಚ್ ಭಾಷೆಯನ್ನು ಕಲಿಯಲು ಪ್ರಯತ್ನಿಸಿದೆ. ಫ್ರೆಂಚ್ ಮತ್ತು

ಇಂಗ್ಲಿಷ್ ಭಾಷೆಗಳ ಮಧ್ಯೆ ಸ್ಪರ್ಧೆಯಿದೆ. ಇಂಗ್ಲಿಷ್ ಶಿಕ್ಷಣ ಪಡೆದಿರುವುದರಿಂದ ಸಹಜವಾಗಿಯೇ ನಾನು ಆ ಭಾಷೆಯನ್ನು ಬಳಸಬೇಕಾಗಿದೆ.

ನಿಮಗೇನು ಹೇಳಬೇಕೆಂದು ವಿಚಾರ ಮಾಡುತ್ತಿದ್ದೆ. ನನ್ನ ಚಿಂತನೆಗಳನ್ನು ರೂಪುಗೊಳಿಸಲು ನನಗೆ ಸಾಕಷ್ಟು ಸಮಯವಿರಲಿಲ್ಲ. ಆದರೂ ಈ ದಿನ ಕೆಲವು ಮಾತುಗಳನ್ನಾಡಲು ನಾನು ನಿನ್ನೆಯೇ ಒಪ್ಪಿಕೊಂಡಿದ್ದೆ. ಚಾಪ್‌ಷಾಖಾನರೊಡನೆ ಈ ಸಭೆಗೆ ಬರುತ್ತಿರುವಾಗ ಕಾಗದ ಮತ್ತು ಸೀಸದ ಕಡ್ಡಿಗಳನ್ನು ಬೇಡಿದೆ. ಸೀಸದ ಕಡ್ಡಿಗೆ ಬದಲಾಗಿ ಲೇಖನಿಯನ್ನು ಕೊಟ್ಟರು. ಕೆಲವು ಮಾತುಗಳನ್ನು ಗೀಚಿಕೊಳ್ಳಲು ಪ್ರಯತ್ನಿಸಿದೆ. ಆ ಕಾಗದವೂ ಈಗ ನನ್ನಲ್ಲಿಲ್ಲ. ಹೇಳಬೇಕೆಂದು ಬರೆದುಕೊಂಡ ವಿಷಯಗಳೇನೋ ಸ್ಮೃತಿಯಲ್ಲುಳಿದಿವೆ.

ಸ್ನೇಹಿತರೇ, ತಾವು ನಿಜವಾದ ಭಾರತವನ್ನು ಕಂಡಿಲ್ಲ. ನೀವು ಸೇರಿರುವ ಸ್ಥಳ ನಿಜವಾದ ಭಾರತದ ಪ್ರತೀಕವಲ್ಲ. ದೆಹಲಿ, ಬೊಂಬಾಯಿ, ಮದರಾಸು, ಕಲ್ಕತ್ತಾ, ಲಾಹೋರುಗಳು ಮಹಾ ನಗರಗಳು; ಅಂತೆಯೇ ಅವು ಬಹುವಾಗಿ ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾಗಿವೆ.

ನನಗೊಂದು ಕಥೆ ಜ್ಞಾಪಕಕ್ಕೆ ಬರುತ್ತದೆ. ಫ್ರೆಂಚ್ ಭಾಷೆಯಲ್ಲಿನ ಈ ಕಥೆಯನ್ನು ಆಂಗ್ಲೋ—ಫ್ರೆಂಚ್ ದಾರ್ಶನಿಕರೊಬ್ಬರು ನನಗೆ ಭಾಷಾಂತರಿಸಿದರು. ಅವರೊಬ್ಬ ನಿಃಸ್ವಾರ್ಥ ವ್ಯಕ್ತಿ. ಅಲ್ಪಸಂಖ್ಯಾತರ ಪಕ್ಷಪಾತಿಗಳಾಗಿದ್ದುದರಿಂದ ಅವರು ತಾವಾಗಿಯೇ ನನ್ನ ಸಖ್ಯವನ್ನು ಬೆಳೆಸಿದರು. ಆಗ ನಾನು ನನ್ನ ತಾಯ್ನಾಡಿನಲ್ಲಿರಲಿಲ್ಲ. ದಕ್ಷಿಣ ಆಫ್ರಿಕಾದ ಐರೋಪ್ಯರು ಮನ್ನಿಸುವುದಾದರೆ, ನಾನಾಗ ಅತಿ ಕನಿಷ್ಟ ಹಾಗೂ ಅತ್ಯಂತ ತಿರಸ್ಕೃತ ಅಲ್ಪಸಂಖ್ಯಾತರಲ್ಲಿ ಪರಿಗಣಿತನಾಗಿದ್ದೆನೆಂದು ಹೇಳಿಯೇನು. ನನ್ನನ್ನು 'ಕೂಲಿ ಲಾಯರ್' ಎನ್ನುತ್ತಿದ್ದರು. ಆ ಕಾಲಕ್ಕೆ ಕೂಲಿ ವೈದ್ಯರಾಗಲೀ, ಕೂಲಿ ವಕೀಲರಾಗಲೀ ಇರಲಿಲ್ಲ. ನಾನೇ ಆ ವರ್ಗದಲ್ಲಿ ಮೊದಲಿಗ. 'ಕೂಲಿ' ಶಬ್ದದ ಅರ್ಥ ನಿಮಗೆ ಗೊತ್ತಿರಬಹುದು.

ಫ್ರೆಂಚ್ ತಾಯಿ, ಇಂಗ್ಲಿಷ್ ತಂದೆ ಇವರ ಪುತ್ರನಾಗಿದ್ದ ನನ್ನ ಸ್ನೇಹಿತರು ಭಾಷಾಂತರಿಸಿದ ಆ ಫ್ರೆಂಚ್ ಕಥೆ ಹೀಗಿತ್ತು: ಮೂವರು ಫ್ರೆಂಚ್ ವಿಜ್ಞಾನಿಗಳು ಸತ್ಯಾನ್ವೇಷಕರಾಗಿ ಫ್ರಾನ್ಸಿನಿಂದ ಹೊರಟರು.

ಏಷ್ಯಾದ ವಿವಿಧ ಭಾಗಗಳಿಗೆ ಹೋದರು. ಒಬ್ಬಾತ ಭಾರತವನ್ನು ಸೇರಿ ಪರಿಶೋಧಿಸ ತೊಡಗಿದ. ಇದು ಬಹುಶಃ ಬ್ರಿಟಿಷರ, ಮೊಗಲರ ಕಾಲ ಗಳಿಗೂ ಹಿಂದಿನ ಭಾರತದಲ್ಲಿದ್ದಿರಬೇಕು. ಆ ಕಾಲದ ಪಟ್ಟಣಗಳೆಂದು ಕರೆಯಲ್ಪಟ್ಟ ಸ್ಥಳಗಳಿಗೆ ಭೇಟಿ ಕೊಟ್ಟ. ಉತ್ಕೃಷ್ಟ ಜಾತಿಯವರೆನಿಸಿ ಕೊಂಡಿದ್ದ ಸ್ತ್ರೀ-ಪುರುಷರನ್ನು ಕಂಡು ನಿರಾಶನಾದ. ಕೊನೆಗೊಂದು ಸಾಮಾನ್ಯ ಗ್ರಾಮದ ಬಡ ಕುಟೀರಕ್ಕೆ ಹೋದ. ಅದೊಂದು ಜಲಗಾರನ ಬಡ ಕುಟೀರ. ಅವನು ಅನ್ವೇಷಿಸುತ್ತಿದ್ದ ಸತ್ಯದ ದರ್ಶನ ಅವನಿಗೆ ಅಲ್ಲಿ ಆಯಿತು. ಇಂಥ ಗ್ರಾಮಗಳಲ್ಲಿನ 'ಭಂಗಿ'ಗಳ ಬಡ ಕುಟೀರಗಳ ಸಂಪರ್ಕನದಿಂದ ಮಾತ್ರವೇ ನಿಮಗೆ ನಿಜವಾದ ಭಾರತದ ಉದಾತ್ತತೆ ಗೋಚರವಾದೀತು. ಭಾರತದಲ್ಲಿ ಇಂಥ ಏಳು ಲಕ್ಷ ಹಳ್ಳಿಗಳಿವೆ. ಮೂವತ್ತೆಂಟು ಕೋಟಿ ಜನ ಅಲ್ಲಿ ವಾಸ ಮಾಡುತ್ತಾರೆ.

ಹಳ್ಳಿಗಳನ್ನು ನೋಡಿದೊಡನೆ ನಿಮಗಾವ ಆಕರ್ಷಣೆಯೂ ಆಗ ಲಾರದು. ಆ ತಿಪ್ಪೆಗುಂಡಿಗಳನ್ನಗೆದು ನೋಡಬೇಕು. ಹಿಂದೆ ಅವುಗಳು ಸ್ವರ್ಗದಂತಿದ್ದವೆಂದು ನಾನು ಉತ್ಪ್ರೇಕ್ಷಿಸುವುದಿಲ್ಲ. ಆದರೆ ಇಂದು ಅವು ನಿಜವಾಗಿ ಕೂಪಗಳಾಗಿವೆ. ಹಿಂದೆ ಅವು ಹಾಗಿರಲಿಲ್ಲ. ನಾನು ಕಣ್ಣಾರೆ ಕಂಡಂತೆ ಹೇಳುತ್ತಿದ್ದೇನೆ. ಚರಿತ್ರೆಯ ಪುಟಗಳಿಂದ ಉದಾಹರಿಸುತ್ತಿಲ್ಲ. ನಾನು ಭಾರತಾದ್ಯಂತ ಸಂಚರಿಸುತ್ತಾ ಕಾಂತಿಹೀನ ಕಣ್ಣುಗಳಿಂದ ಕೂಡಿದ ದುಃಖತಪ್ತ ಮಾನವ ವ್ಯಕ್ತಿಗಳೆನಿಸಿದವರನ್ನು ಸಂದರ್ಶಿಸಿದ್ದೇನೆ. ಅವರೇ ಭಾರತ. ಈ ಶೌಚ ಕೂಪಗಳ ಮಧ್ಯೆ ಬಡಕುಟೀರಗಳಲ್ಲಿ ವಾಸಿಸುವ ನಮ್ಮ ಭಂಗಿಗಳಲ್ಲಿ ವಿವೇಕದ ಸಾರಸರ್ವಸ್ವ ಗೋಚರವಾಗುತ್ತದೆ.

ಆಂಗ್ಲೇಯ ಚರಿತ್ರೆಕಾರರ ಗ್ರಂಥಗಳಿಂದ ನಾನು ಭಾರತದ ಚರಿತ್ರೆ ಯನ್ನು ಕಲಿತಿದ್ದೇನೆ. ನಮ್ಮ ತಾಯ್ನುಡಿಯಲ್ಲಾಗಲೀ ರಾಷ್ಟ್ರಭಾಷೆ ಯಾದ ಹಿಂದೂಸ್ತಾನಿಯಲ್ಲಾಗಲೀ ನಾವು ಪುಸ್ತಕಗಳನ್ನು ಬರೆಯದೆ ಇಂಗ್ಲಿಷ್ ಭಾಷೆಯಲ್ಲೇ ಇಂಗ್ಲಿಷ್ ಚರಿತ್ರೆಕಾರರ ಪುಸ್ತಕಗಳನ್ನೇ ಓದು ತ್ತೇವೆ. ನಮ್ಮ ಇತಿಹಾಸವನ್ನು ಮೂಲದಿಂದ ನಾವು ಕಲಿಯುವುದು, ಇಂಗ್ಲಿಷರ ಬರಹಗಳಿಂದ. ಈ ರೀತಿ ಭಾರತೀಯ ಸಂಸ್ಕೃತಿಯ ಮೇಲೆ ಗೆಲುವನ್ನು ಸಾಧಿಸಲಾಗಿದೆ.

ಜ್ಞಾನದ ಝರಿ ಪೂರ್ವದಿಂದಲೇ ಪಶ್ಚಿಮ ರಾಷ್ಟ್ರಗಳಿಗೆ ಹರಿದಿದೆ ಎಂದು ಹೇಳುತ್ತಾ ಗಾಂಧೀಜೀ ಹೀಗೆ ನುಡಿದರು; ಈ ಮಹಾಜ್ಞಾನಿಗಳಲ್ಲಿ ಮೊದಲನೆಯವನು ಝರತುಷ್ಟ್ರ. ಪೌರ್ವಾತ್ಯ ದೇಶದವನು. ಆವನಾದ ಮೇಲೆ ಭಾರತದ ಬುದ್ಧ. ಬುದ್ಧನ ನಂತರ ಮತ್ತೆ ಪೌರ್ವಾತ್ಯ ದೇಶದಿಂದಲೇ ಬಂದವನು ಏಸು ಕ್ರಿಸ್ತ. ಏಸುವಿಗೆ ಪೂರ್ವದಲ್ಲಿದ್ದ ಮೋಸಸ್ ಈಜಿಪ್ಟಿನಲ್ಲಿ, ಜನಿಸಿದವನಾದರೂ ಪ್ಯಾಲೆಸ್ಟೈನಿನವನು. ಏಸುವಿನ ನಂತರ ಮೊಹಮ್ಮದ್. ರಾಮಕೃಷ್ಣ ಮೊದಲಾದ ಜ್ಯೋತಿಗಳ ಬಗ್ಗೆ ನಾನು ಹೇಳಬಯಸುವುದಿಲ್ಲ. ಅವರು ಪ್ರಪಂಚ ಸಾಹಿತ್ಯಕ್ಕೆ ಹೆಚ್ಚು ಪರಿಚಿತ ವ್ಯಕ್ತಿಗಳಲ್ಲವೆಂದು ಬಿಟ್ಟಿದ್ದೇನೆ. ಕಡಮೆ ಪ್ರಭೆಯವರೆಂದಲ್ಲ. ಏಷ್ಯದ ಈ ಮಹಾಪುರುಷರ ಸರಿಸಮರಾಗುವ ಯಾವ ವ್ಯಕ್ತಿಯನ್ನೂ ನಾನು ಪ್ರಪಂಚದಲ್ಲಿ ಕಾಣೆ. ಮುಂದಾದುದಾದರೂ ಏನು? ಕ್ರೈಸ್ತ ಮತ ಪಶ್ಚಿಮಕ್ಕೆ ಹೋಗಿ ಕಲುಷಿತವಾಯಿತು. ಹೀಗೆ ಹೇಳಲು ನನಗೆ ವ್ಯಸನವಾಗುತ್ತದೆ. ಇಷ್ಟಕ್ಕೇ ನಿಲ್ಲಿಸುತ್ತೇನೆ.

ದೊಡ್ಡ ನಗರಗಳಲ್ಲಿ ನೀವು ಕಾಣುವುದು ನಿಜವಾದ ಭಾರತವಲ್ಲ. ಎಂಬುದನ್ನು ತಿಳಿಯ ಹೇಳಲು ಮೇಲೆ ಹೇಳಿದ ಕಥೆಯನ್ನು ಬಳಸಿಕೊಂಡೆ. ನಮ್ಮ ಕಣ್ಮುಂದೆ ನಡೆಯುತ್ತಿರುವ ಈ ಹತ್ಯಾಕಾಂಡ ನಾಚಿಕೆಗೇಡಿನ ಪ್ರಸಂಗ. ನಾನು ನಿನ್ನೆ ಹೇಳಿದಂತೆ ಈ ಹತ್ಯಾಕಾಂಡದ ಸ್ಮರಣೆಯನ್ನು ಭಾರತದ ಗಡಿಯಿಂದಾಚೆ ಕೊಂಡೊಯ್ಯಬೇಡಿ. ಏಷ್ಯಾದ ಸಂದೇಶವನ್ನು ನೀವು ಅರಿಯಬೇಕೆಂಬುದೇ ನನ್ನ ಇಚ್ಛೆ. ಪಾಶ್ಚಾತ್ಯರ ದೃಷ್ಟಿಯಿಂದಾಗಲೀ ಅಥವಾ ಆಟಂ ಬಾಂಬಿನ ಅನುಕರಣದಿಂದಾಗಲೀ ಇದು ದುಸ್ಸಾಧ್ಯ. ಪಾಶ್ಚಾತ್ಯ ರಾಷ್ಟ್ರಗಳಿಗೆ ನಾವಿಂದು ಸಂದೇಶವೊಂದನ್ನು ಕೊಡಬಯಸಿದರೆ ಅದು ಪ್ರೇಮದ ಸಂದೇಶ; ಸತ್ಯದ ಸಂದೇಶ. ನನ್ನ ಮನವಿ ನಿಮ್ಮ ಬುದ್ಧಿಗೆ ಮಾತ್ರ ನಿಲುಕಲೆಂದಲ್ಲ, ನಿಮ್ಮ ಹೃದಯಗಳನ್ನು ಸೂರೆಗೊಳ್ಳಬೇಕೆಂದೇ ನನ್ನ ಪ್ರಯತ್ನ.

ಪ್ರಜಾಧಿಪತ್ಯದ ಈ ಯುಗದಲ್ಲಿ, ಬಡವರಲ್ಲಿ ಬಡವರು ಚೇತನಗೊಳ್ಳುತ್ತಿರುವ ಈ ಯುಗದಲ್ಲಿ, ನೀವು ಈ ಸಂದೇಶವನ್ನು ಅತ್ಯಂತ ಪ್ರಭಾವಶಾಲಿಯಾಗಿ ಪ್ರತಿಧ್ವನಿಸಬಲ್ಲಿರಿ. ಈವರೆಗೆ ಶೋಷಿತರಾದವೆಂದು

ಕೇವಲ ಪ್ರತೀಕಾರ ಭಾವನೆಯನ್ನೇ ಅವಲಂಬಿಸದೆ ನಿಜವಾದ ವಿವೇಕ ದಿಂದಲೇ ನೀವು ಪಾಶ್ಚಾತ್ಯರಲ್ಲಿ ಪ್ರೇಮ ಸಾಮ್ರಾಜ್ಯವನ್ನು ಪೂರ್ಣ ಗೊಳಿಸುತ್ತೀರಿ. ನಿಮ್ಮೆಲ್ಲರ ವಿಚಾರ ಐಕ್ಯತೆಯುಷ್ಟೇ ಅಲ್ಲದೆ, ಹೃದಯ ಮಿಲನವೂ ಆಗಿ, ಈ ಪೌರ್ವಾತ್ಯ ಮಹಾ ಜ್ಞಾನಿಗಳ ಸಂದೇಶ ರಹಸ್ಯ ವನ್ನರಿತು ಅದಕ್ಕೆ ನಾವೆಲ್ಲ ಸುಯೋಗ್ಯರಾಗುಪ್ರದಾದರೆ, ಪಾಶ್ಚಾತ್ಯರ ಮೇಲಿನ ವಿಜಯ ಪೂರ್ಣಗೊಂಡೀತು; ಪಶ್ಚಿಮ ವಲಯುವೇ ಈ ವಿಜಯ ವನ್ನು ಆಸಕ್ತಿಯಿಂದ ಕಂಡೀತು.

ಪಾಶ್ಚಾತ್ಯರು ಇಂದು ಜ್ಞಾನಕ್ಕಾಗಿ ಹಂಬಲಿಸುತ್ತಿದ್ದಾರೆ. ಅಣ್ವಸ್ತ್ರಗಳ ಅತಿ ಸಂಖ್ಯೆಯಿಂದ ಹತಾಶರಾಗುತ್ತಿದ್ದಾರೆ. ಏಕೆಂದರೆ ಕೇವಲ ಪಾಶ್ಚಾತ್ಯ ರಾಷ್ಟ್ರಗಳಷ್ಟೇ ಅಲ್ಲದೆ ಇಡಿಯ ಜಗತ್ತೇ ಈ ಅಣ್ವಸ್ತ್ರಗಳಿಂದ ನಾಶವಾದೀತು. ಮಹಾ ಪ್ರಳಯವೊಂದು ಕೊನೆಗೆ ಜಗತ್ತನ್ನು ಕೊಚ್ಚಿಕೊಂಡು ಹೋಗಿ ಬಿಡುವುದೆಂಬ ಬೈಬಲ್ಲಿನ ಭವಿಷ್ಯವಾಣಿ ಇಂದೇ ಸಂಭವಿಸೀತೆಂದು ಅವರು ಭಯಗ್ರಸ್ತರಾಗಿದ್ದಾರೆ. ಲೋಕಕಂಟಕ ಪಾಪವೃತ್ತಿಗಳನ್ನು ಬಹಿರಂಗ ಪಡಿಸಿ ಜಗತ್ತಿಗೆ ಸಾರುವುದೇ ನನ್ನ ಹಾಗೂ ನಿಮ್ಮ ಮಹಾ ಗುರು ಪರಂಪರೆ ಏಷ್ಯಾ ಜನರಿಗೆ ಬಿಟ್ಟುಹೋದ ಉಪದೇಶಗಳ ಮಹಾಭಾಗ್ಯ.[೪೭]

## ೪೮. ಹೇಳಿಕೆ

[೧೯೪೭ರ ಸೆಪ್ಟೆಂಬರ್ ತಿಂಗಳಲ್ಲಿ ಕಲ್ಕತ್ತೆಯಲ್ಲಿ ಕೈಗೊಂಡ ಉಪವಾಸ ವ್ರತಕ್ಕೆ ಸ್ವಲ್ಪಮುಂಚೆ ಗಾಂಧೀಜೀ ಕೊಟ್ಟ ಹೇಳಿಕೆ.]

ಕಳೆದ ರಾತ್ರಿ ಗಾಯಗೊಂಡವನೊಬ್ಬನನ್ನು ಹಲವು ಯುವಕರು ಈ ಆವರಣಕ್ಕೆ ಕರೆದು ತಂದರು. ಕೆಲವು ಮುಸಲ್ಮಾನರು ಅವನ ಮೇಲೆ ದಾಳಿಮಾಡಿದ್ದರೆಂದು ವರದಿಯಾಗಿತ್ತು. ಮುಖ್ಯ ಮಂತ್ರಿಗಳು ಆ ಮನುಷ್ಯ ನನ್ನು ಪರೀಕ್ಷೆ ಮಾಡಿಸಿದರು. ಇರಿಯಲ್ಪಟ್ಟನೆಂದು ಹೇಳಲಾಗಿದ್ದರೂ ಆತನ ದೇಹದಲ್ಲಿ ಇರಿತದ ಗಾಯಗಳಿರಲಿಲ್ಲವೆಂದು ತಿಳಿಯಿತು. ಅವನಿಗಾದ ಗಾಯಕ್ಕಿಂತ ದಾಳಿ ನಡೆಸಿದ್ದ ಯುವಕರು ಆ ಸಂದರ್ಭದಲ್ಲಿ ತಾವೇ

ನ್ಯಾಯಾಧೀಶರೂ, ದಂಡನೆಮಾಡುವವನೂ ಆಗಲು ಪ್ರಯತ್ನಿಸಿದುದನ್ನು ಒತ್ತಿ ಹೇಳುವುದು ನನ್ನ ಉದ್ದೇಶ.

ರಾತ್ರಿ ಹತ್ತುಗಂಟೆಯಾಗಿತ್ತು. ಘಟ್ಟಿಯಾಗಿ ಕೂಗಿಕೊಂಡದ್ದರಿಂದ ನನಗೆ ನಿದ್ರಾಭಂಗವಾಯಿತು. ಏನಾಗಿದೆಯೆಂಬುದನ್ನರಿಯದೆ ಹಾಗೇ ಮಲಗಲು ಪ್ರಯತ್ನಪಟ್ಟೆ. ಕಿಟಕಿಯ ಗಾಜುಗಳನ್ನು ಅಪ್ಪಳಿಸಿ ಪುಡಿಪುಡಿ ಮಾಡುವುದು ಕೇಳಿಸಿತು. ನನ್ನ ಇಕ್ಕೆಲದಲ್ಲಿ ಕೆಚ್ಚೆದೆಯ ಬಾಲಕಿಯರಿಬ್ಬರು ಮಲಗಿದ್ದರು. ನಾನು ಕಣ್ಣು ಮುಚ್ಚಿಕೊಂಡಿದ್ದಂತೆಯೇ ನನಗೆ ತಿಳಿಯದ ಹಾಗೆ ಅವರಿಬ್ಬರೂ ನಿದ್ರೆ ಬಿಟ್ಟು ಹೊರಗಿದ್ದ ಗುಂಪಿನ ಮಧ್ಯೆ ಹೋಗಿ ಅವರನ್ನು ಸಮಾಧಾನಗೊಳಿಸಲು ಪ್ರಯತ್ನಿಸಿದರು. ದೇವರ ದಯದಿಂದ ಆ ಗುಂಪು ಅವರನ್ನು ಅಪಾಯಕ್ಕೀಡುಮಾಡಲಿಲ್ಲ. ನಾನಿದ್ದ ಮನೆಯ ಮುಸಲ್ಮಾನ ವೃದ್ಧೆ—ಆಕೆಯನ್ನು ಪ್ರೀತಿಯಿಂದ 'ಬೀ ಅಮ್ಮ' ಎಂದು ಕರೆಯುತ್ತಿದ್ದೆವು—ಮತ್ತು ಒಬ್ಬ ಮುಸಲ್ಮಾನ ಯುವಕ ನನ್ನ ಹಾಸಿಗೆಯ ಬಳಿ ನನ್ನನ್ನು ಕಾಯುವುದಕ್ಕೆಂದು ನಿಂತಿದ್ದರು.

ಗಲಭೆ ಹೆಚ್ಚಾಗುತ್ತಿತ್ತು. ಕೆಲವರು ಹಜಾರದೊಳಕ್ಕೆ ನುಗ್ಗಿ ಬಾಗಿಲುಗಳನ್ನು ಬಡಿದು ತೆರೆಯಲೆತ್ನಿಸುತ್ತಿದ್ದರು. ಕೋಪದಿಂದ ಕೆರಳಿದ ಗುಂಪನ್ನು ನಾನೇ ಎದ್ದು ಎದುರಿಸಬೇಕೆನಿಸಿತು. ಹೊರ ಬಾಗಿಲ ಬಳಿ ಬಂದು ನಿಂತೆ. ಮಿತ್ರರು ನನ್ನನ್ನು ಸುತ್ತುಗಟ್ಟಿ ಮುಂದೆ ಹೋಗಲು ಬಿಡಲಿಲ್ಲ. ಇಂಥ ಸಮಯಗಳಲ್ಲಿ ಅನಿವಾರ್ಯವಾಗಿ ನನ್ನ ಮೌನವ್ರತ ತ್ಯಜಿಸಲು ನನಗೆ ಅಡ್ಡಿಯಿರಲಿಲ್ಲ. ಕೋಪಗೊಂಡ ಯುವಕರನ್ನು ಕುರಿತು ಶಾಂತವಾಗುವಂತೆ ಮನವಿಮಾಡಿಕೊಳ್ಳಲು ಮೌನವ್ರತವನ್ನು ಮುರಿದೆ. ನನ್ನ ಮೊಮ್ಮಗನ ಹೆಂಡತಿ ಬಂಗಾಳದವಳು, ನನ್ನ ಮಾತನ್ನು ಭಾಷಾಂತರಿಸಲು ಅವಳಿಗೆ ಹೇಳಿದೆ. ಯಾವುದೂ ಪ್ರಯೋಜನವಾಗಲಿಲ್ಲ. ಯುಕ್ತಾಯುಕ್ತ ವಿವೇಕಕ್ಕೆ ಆ ಕಿವಿಗಳು ಕಿವುಡಾಗಿದ್ದವು. ನನ್ನ ಕೈಗಳೆರಡನ್ನೂ ಜೋಡಿಸಿ ಬೇಡಿಕೊಂಡೆ; ಏನೂ ಆಗಲಿಲ್ಲ. ಮತ್ತೆ ಕಿಟಕಿ ಗಾಜುಗಳನ್ನು ಒಡೆದರು. ಗುಂಪಿನಲ್ಲಿದ್ದ ಕೆಲವು ಸ್ನೇಹಿತರು ಸಮಾಧಾನ ಹೇಳಿದರು. ಪೋಲೀಸ್ ಅಧಿಕಾರಿಗಳೂ ಇದ್ದರು. ಅವರು ಅಧಿಕಾರ ದಂಡವನ್ನುಪಯೋಗಿಸದೆ ಶ್ಲಾಘನೀಯ ಸಂಯಮ ತೋರಿಸಿದರು. ಕೈ

ಜೋಡಿಸಿ ಅವರೂ ಬೇಡಿಕೊಂಡರು. ಇಷ್ಟರಲ್ಲಿ ಯಾರೋ ಲಾಠಿಯನ್ನು ಬೀಸಿದರು, ಅದು ನನಗೂ ನನ್ನ ಸುತ್ತಲಿನವರಿಗೂ ಬೀಳದೆ ಗುರಿ ತಪ್ಪಿತು. ನನ್ನ ಕಡೆಗೆಸೆದ ಇಟ್ಟಿಗೆಯೊಂದು ಮುಸಲ್ಮಾನ ಸೋದರನೊಬ್ಬನಿಗೆ ತಗುಲಿ ಗಾಯವಾಯಿತು. ನನ್ನ ಬೆಂಗಾವಲಿನ ಇಬ್ಬರು ಹುಡುಗಿಯರು ಎಡಬಿಡದೆ ನನ್ನ ಹತ್ತಿರವಿದ್ದರು. ಅಷ್ಟುಹೊತ್ತಿಗೆ ಪೋಲೀಸು ಸೂಪರಿಂಟೆಂಡೆಂಟರು ಸಿಬ್ಬಂದಿಯೊಡನೆ ಅಲ್ಲಿಗೆ ಬಂದರು. ಅವರೂ ಬಲ ಪ್ರಯೋಗವನ್ನೇನೂ ಮಾಡಲಿಲ್ಲ. ನನ್ನನ್ನು ಒಳಗೆ ಹೋಗಲು ಕೇಳಿ ಕೊಂಡರು. ನಾನು ಮರೆಯಾದರೆ ಆ ಯುವಕ ತಂಡವನ್ನು ತಹಬಂದಿಗೆ ತರುವುದು ಸಾಧ್ಯವೆಂದರು. ಸ್ವಲ್ಪವೇಳೆ ಕಳೆದ ಮೇಲೆ ಗುಂಪು ಚುದರಿತು.

ಮನೆಯ ಸುತ್ತು ಗೋಡೆಯ ಹೊರಗೆ ಏನಾಯಿತೆಂದು ನಾನರಿಯೆ. ಗುಂಪನ್ನು ಚದುರಿಸಲು ಪೋಲೀಸರು ಅಶ್ರುವಾಯುವನ್ನುಪಯೋಗಿಸ ಬೇಕಾಯಿತೆಂದು ತಿಳಿಯಿತು. ಆ ವೇಳೆಗೆ ಡಾ. ಪಿ. ಸಿ. ಘೋಷ್, ಅನಂದ ಬಾಬು ಮತ್ತು ಡಾ. ನೃಪೇನ್ ಬಂದು ಸ್ವಲ್ಪ ಹೊತ್ತು ಚರ್ಚಿಸಿ ಹೊರಟು ಹೋದರು. ದೈವವಶಾತ್ ಸಹೀದ್ ಸಾಹೇಬರು* ಮಾರನೆಯ ದಿನ ನವಕಾಲೀ ಪ್ರಯಾಣದ ಸಿದ್ಧತೆ ಮಾಡಲು ಮನೆಗೆ ತೆರಳಿದ್ದರು. ಮೇಲ್ಕಂಡ ಹೇಯ ಘಟನೆಯಿಂದಾಗಿ ಪರಿಸ್ಥಿತಿ ಯಾವ ರೂಪ ತಾಳುವುದೋ ಎಂದು ಕೊಂಡು ನಾನು ಕಲ್ಕತ್ತೆಯನ್ನು ಬಿಟ್ಟು ನವಕಾಲೀಗೆ ಹೋಗುವುದು ಅಸಾಧ್ಯವೆನಿಸಿತು.

ಈ ಘಟನೆಯಿಂದ ಪ್ರಕಟವಾದುದೇನು? ಅಮೂಲ್ಯ ಬಲಿದಾನ ದಿಂದ ಗಳಿಸಿದ ಸ್ವಾತಂತ್ರ್ಯವನ್ನು ಭಾರತ ಉಳಿಸಿಕೊಳ್ಳಬೇಕಾದರೆ ತಮ್ಮ ದೇಶದ ಜನ ಈ ನಿಯಮಬಾಹಿರ ನ್ಯಾಯವನ್ನು (Lynch Law) ಪೂರ್ಣವಾಗಿ ಕಿತ್ತೊಗೆಯಬೇಕೆಂಬುದು ನನಗೆ ಖಚಿತವಾಯಿತು. ಇಲ್ಲಿ ನಡೆದುದು ಅಂಥ ವರ್ತನೆಯ ಅರೆಬರೆಯ ಅನುಕರಣೆ. ಮುಸಲ್ಮಾನರು ಅಸಭ್ಯರಾಗಿ ವರ್ತಿಸಿದ್ದರೆ ಆ ದೂರನ್ನು ಮಂತ್ರಿಗಳಿಗೆ ತಿಳಿಸಲಾಗದಿದ್ದರೆ

---

* ಬಂಗಾಳದ ಮುಖ್ಯಮಂತ್ರಿಯಾಗಿದ್ದ ಸುಹ್ರವರ್ದಿ.

ನನಗಾಗಲೀ ನನ್ನ ಸ್ನೇಹಿತರಾದ ಸಹೀದ್ ಸಾಹೇಬರಿಗಾಗಲೀ ಹೇಳಬಹುದಾಗಿತ್ತು. ಹಾಗೆಯೇ ಮುಸಲ್ಮಾನರೂ ಮಾಡಬೇಕು. ಈ ನಿಯಮಬದ್ಧ ವರ್ತನೆ ಇಲ್ಲದಿದ್ದರೆ ಕಲ್ಕತ್ತೆಯಲ್ಲಾಗಲೀ ಬೇರೆ ಕಡೆಗಳಲ್ಲಾಗಲೀ ಶಾಂತಿ ನೆಲೆಸುವುದು ಅಸಾಧ್ಯ. ಪಂಜಾಬಿನ ರಾಕ್ಷಸೀಕೃತ್ಯಗಳನ್ನಾಗಲೀ, ಭಾರತದ ಹೊರಗಿನ ದುಷ್ಕೃತ್ಯಗಳನ್ನಾಗಲೀ ಅವರು ಯೋಚಿಸಬೇಕಾಗಿಲ್ಲ. ತಾವೇ ನ್ಯಾಯ ತೀರಿಸಿ ಬಿಡುವ ಅಸಭ್ಯತೆಯನ್ನೆಂದಿಗೂ ಒಪ್ಪದಿರುವ ಸ್ವರ್ಣ ನಿಯಮಕ್ಕೆ ಯಾವ ಅಪವಾದವೂ ಇಲ್ಲ.

ಪಾಟ್ನಾದಿಂದ ನನ್ನ ಕಾರ್ಯದರ್ಶಿ ದೇವ ಪ್ರಕಾಶ್ ಈ ರೀತಿ ತಂತಿ ಕಳುಹಿಸಿದ್ದಾನೆ. "ಪಂಜಾಬಿನ ಘಟನೆಗಳಿಂದ ಜನ ಕೆರಳಿದ್ದಾರೆ. ಸಾರ್ವಜನಿಕರ ಹಾಗೂ ಪತ್ರಿಕೆಗಳ ಕರ್ತವ್ಯ ಕುರಿತು ಹೇಳಿಕೆ ಅವಶ್ಯಕವೆನಿಸುತ್ತದೆ." ಅನಾವಶ್ಯಕವಾಗಿ ಉದ್ರೇಕಗೊಳ್ಳದವನು ದೇವ ಪ್ರಕಾಶ್. ಪತ್ರಿಕೆಗಳು ಏನನ್ನೋ ಮೇರೆ ತಪ್ಪಿ ನುಡಿದಿರಬೇಕು. ಸ್ಫೋಟಕ ವಸ್ತು ರಾಶಿಯ ಮೇಲೆ ಕುಳಿತಿರುವಂತಿರುವ ಈ ಕಾಲದಲ್ಲಿ ಪತ್ರಿಕಾ ಪ್ರಪಂಚ ವಿಶೇಷ ಪ್ರಜ್ಞೆಯಿಂದ ಸಂಯಮದಿಂದ ವರ್ತಿಸಬೇಕಾದೀತು. ಅನೈತಿಕ ವರ್ತನೆಯಿಂದ ಬೆಂಕಿ ತಗುಲುತ್ತದೆ. ಪ್ರತಿಯೊಬ್ಬ ವರದಿಕಾರನೂ ಸಂಪಾದಕನೂ ತನ್ನ ಕರ್ತವ್ಯವನ್ನು ಪೂರ್ಣವಾಗಿ ತಿಳಿದುಕೊಂಡಾನೆಂದು ನಂಬಿದ್ದೇನೆ.

ಪಂಜಾಬಿನಿಂದ ನನಗೆ ತುರ್ತು ಕರೆಯೊಂದು ಬಂದಿದೆ. ಕಲ್ಕತ್ತೆಯಲ್ಲಿ ಘರ್ಷಣೆಗಳು ಮರುಕೊಳಿಸುವ ಅನೇಕ ರೀತಿಯ ಸುದ್ದಿಗಳು ಕೇಳಿ ಬರುತ್ತಿವೆ. ಅವು ನಿರಾಧಾರವಲ್ಲದಿದ್ದರೂ ಉತ್ಪ್ರೇಕ್ಷಿತವಾದವುಗಳೆಂದು ಭಾವಿಸುತ್ತೇನೆ. ಒಮ್ಮೆ ಶಾಂತಿ ನೆಲೆಸಿದಲ್ಲಿ ಅದಕ್ಕೆ ವಿಘ್ನ ಬಾರದಂತೆ ಕಲ್ಕತ್ತೆಯಲ್ಲಿ ಯಾವ ವಿಪತ್ತೂ ಸಂಭವಿಸುವುದಿಲ್ಲವೆಂಬ ಭರವಸೆಯನ್ನು ಇಲ್ಲಿನ ನಾಗರಿಕರು ನನ್ನಲ್ಲಿ ಮೂಡಿಸಬೇಕು. ಶಾಂತಿ ನೆಲೆಸಿದ ಆಗಸ್ಟ್ ೧೪ನೆಯ ದಿನದಿಂದಲೇ ಈ ಸಮಾಧಾನ ಬಹಳ ತಾತ್ಕಾಲಿಕ ಶಾಂತಿಯಾಗಿರಬಹುದೆಂದು ನಾನು ಹೇಳುತ್ತಿದ್ದೇನೆ. ಯಾವ ಪವಾಡವೂ ಇಲ್ಲಿ ಸಂಭವಿಸಿಲ್ಲ. ಈ ದುರಂತ ಭವಿಷ್ಯ ನಿಜವಾಗಿ ಸಂಭವಿಸಿ ಕಲ್ಕತ್ತಾ ನಗರ ರೂಕ್ಷ ಸ್ಥಿತಿಗೆ ಹಿಂತಿರುಗೀತೆ? ಹೀಗೆಂದಿಗೂ ಆಗದಿರಲಿ. ನಮ್ಮ ಹೃದಯಗಳನ್ನು

ಕಾಯ್ದು ನಮಗೆ ಮತ್ತೆ ಬುದ್ಧಿ ಭ್ರಮಣೆಯಾಗದಂತೆ ಅನುಗ್ರಹಿಸಲು ಪರಮಾತ್ಮನನ್ನು ಪ್ರಾರ್ಥಿಸೋಣ.

ನಾನಿದನ್ನು ಬರೆದು ಮುಗಿಸುವ ಹೊತ್ತಿಗೆ ಸುಮಾರು ೪ ಗಂಟೆ. ನನ್ನ ಮೌನದ ವೇಳೆಯಲ್ಲಿ ನಗರದ ವಿವಿಧ ಭಾಗಗಳಲ್ಲಾದ ಘಟನೆಗಳ ವಿವರಗಳು ಗೊತ್ತಾಯಿತು. ನಿನ್ನೆಯವರೆಗೆ ಸುರಕ್ಷಿತವೆನಿಸಿದ್ದ ಕೆಲವು ಸ್ಥಳಗಳು ಹಠಾತ್ತನೆ ಅಪಾಯಕಾರಿ ಪ್ರದೇಶಗಳಾಗಿವೆ. ಹಲವು ಕೊಲೆಗಳಾಗಿವೆ, ಇಬ್ಬರು ಮುಸಲ್ಮಾನರ ಮೃತದೇಹಗಳನ್ನು ನಾನೇ ನೋಡಿದೆ. ಹಲವು ಹತಭಾಗ್ಯ ಮುಸಲ್ಮಾನರನ್ನು ಸುರಕ್ಷಿತ ಸ್ಥಳಗಳಿಗೆ ಕೊಂಡೊಯ್ಯುದನ್ನೂ ಕಂಡೆ, ಭಗ್ಗನೆ ಹತ್ತಿಕೊಂಡು ಉರಿಯುತ್ತಿರುವ ಈ ಪರಿಸ್ಥಿತಿಯ ಮುಂದೆ ಹಿಂದಿನ ರಾತ್ರಿ ನಡೆಯಿತೆಂದು ನಾನು ಬಣ್ಣಿಸಿರುವ ಘಟನೆ ಅಲ್ಪವಾಗಿ ತೋರುತ್ತದೆ. ಈ ದಳ್ಳುರಿಯ ಮಧ್ಯೆ ನಾನು ಬಹಿರಂಗವಾಗಿ ತಿರುಗಾಡುವುದರಿಂದ ಅದನ್ನು ತಡೆಯಬಹುದೆನಿಸುವುದಿಲ್ಲ.

ನಿನ್ನೆ ಸಂಜೆ ನನ್ನನ್ನು ಸಂಧಿಸಿದ ಸ್ನೇಹಿತರಿಗೆ ಅವರ ಕರ್ತವ್ಯದ ಬಗ್ಗೆ ಹೇಳಿದ್ದೇನೆ. ಈ ದುರಂತವನ್ನು ನಿಲ್ಲಿಸಲು ನಾನೇನು ಮಾಡಬೇಕು? ಪೂರ್ವ ಪಂಜಾಬಿನಲ್ಲಾದುದನ್ನು ಹಿಂದೂಗಳೂ ಸಿಕ್ಕರೂ ಮರೆಯಬಾರದು. ಈ ಉನ್ಮಾದ ಪ್ರವಾಹವನ್ನೇ ಈಗ ಪಶ್ಚಿಮ ಪಂಜಾಬಿನ ಮುಸಲ್ಮಾನರು ಪ್ರಾರಂಭಿಸಿದ್ದಾರೆ. ಈ ಘಟನೆಗಳಿಂದ ಹಿಂದುಗಳೂ ಸಿಕ್ಕರೂ ಕೆರಳಿದ್ದಾರೆಂದು ಹೇಳಲಾಗುತ್ತಿದೆ. ಪಂಜಾಬಿಗೆ ಬರಬೇಕೆಂಬ ತುರ್ತು ಕರೆಯ ವಿಷಯಕ್ಕೆ ಇದನ್ನು ನಾನು ಪ್ರಸ್ತಾಪಿಸಿದ್ದೇನೆ. ಕಲ್ಕತ್ತೆಯ ನೀರ್ಗುಳ್ಳೆ ಸಿಡಿದೊಡೆದಿರುವಾಗ ಯಾವ ಮುಖವಿಟ್ಟುಕೊಂಡು ನಾನು ಪಂಜಾಬಿಗೆ ಹೋದೇನು. ಈವರೆವಿಗೆ ಅಜೇಯ ಶಕ್ತಿಯೆಂದು ನನಗೆ ಕಂಡುಬಂದಿರುವ ಅಸ್ತ್ರವೆಂದರೆ ಉಪವಾಸ ವ್ರತ. ಬೊಬ್ಬೆಯಿಡುವ ಜನರ ಗುಂಪಿನೆದುರು ಮುಖ ಕೊಟ್ಟು ನಿಂತರೂ ಪರಿಣಾಮಕಾರಿಯಾಗಲಾರದು. ನಿನ್ನೆ ರಾತ್ರಿಯಂತೂ ಏನೂ ಪರಿಣಾಮವಾಗಲಿಲ್ಲ. ನಾನೇ ಅಲ್ಲಿದ್ದು ನೇರವಾಗಿ ಮಾತನಾಡಿದರೂ ಆಗಲಾರದುದನ್ನು ನನ್ನ ನಿರಶನ ವ್ರತ ಸಾಧಿಸಬಹುದೋ ಏನೋ. ಕಲ್ಕತ್ತೆಯ ಜನರನ್ನು ಅದು ಶಾಂತಗೊಳಿಸಿದಲ್ಲಿ, ಪಂಜಾಬಿನಲ್ಲಿ ಹೋರಾಡುತ್ತಿರುವ ಎಲ್ಲ ವರ್ಗಗಳ ಹೃದಯಗಳನ್ನೂ ಅದು ಸ್ಪರ್ಶ

ಮಾಡೀತು. ಆದ್ದರಿಂದ ಇಂದು ರಾತ್ರಿ ಎಂಟೂಕಾಲು ಗಂಟೆಯಿಂದ ನಾನು ನಿರಶನ ವ್ರತವನ್ನು ಕೈಗೊಳ್ಳುತ್ತೇನೆ. ಕಲ್ಕತ್ತೆಯ ಜನರಲ್ಲಿ ವಿವೇಕ ಮೂಡಿದರೆ ಮಾತ್ರ ನಾನು ಉಪವಾಸವನ್ನು ನಿಲ್ಲಿಸುತ್ತೇನೆ. ಸಾಮಾನ್ಯ ಉಪ್ಪನ್ನೂ, ಸೈಂಧವ ಲವಣವನ್ನೂ ನಾನು ಕುಡಿಯಬಹುದಾದ ನೀರಿನಲ್ಲಿ ಬೆರಸಿಕೊಂಡು ತೆಗೆದುಕೊಳ್ಳಲು ನಿರ್ಧರಿಸಿದ್ದೇನೆ. ಕಲ್ಕತ್ತೆಯ ಜನ ನಾನು ಪಂಜಾಬಿಗೆ ಹೋಗಿ ಅಲ್ಲಿನವರಿಗೆ ನೆರವಾಗಬೇಕೆಂದು ಇಚ್ಛಿಸುವುದಾದರೆ ತಾವು ಆದಷ್ಟು ಶೀಘ್ರವಾಗಿ ಶಮನಗೊಂಡು ನನ್ನ ಉಪವಾಸವನ್ನು ನಿಲ್ಲಿಸಲು ನೆರವಾಗಬೇಕು.೪೮

## ೪೯. ಆಡುವುದು ಮಾಡುವುದು ನಮ್ಮ ಇಚ್ಛೆ; ಆಗುವುದು ಹೋಗುವುದು ದೈವೇಚ್ಛೆ

[ದೆಹಲಿಯಿಂದ ಇತ್ತ ಹೇಳಿಕೆ (೨೧—೯—೪೭)]

ಮೇಲಿನ ನಾಣ್ನುಡಿ ಅನೇಕರ ಬಾಳಿನಲ್ಲಿ ನಿಜವೆನಿಸಿದಂತೆ ನನ್ನ ಜೀವನದಲ್ಲೂ ಅನೇಕ ಸಲ ಆಗಿದೆ. ಕಳೆದ ಭಾನುವಾರ ಕಲ್ಕತ್ತೆಯನ್ನು ಬಿಟ್ಟು ದೆಹಲಿಗೆ ಹೊರಟಾಗ ಇಲ್ಲಿದ್ದ ಸಂಕಟಕರ ಸ್ಥಿತಿಯನ್ನು ನಾನು ಊಹಿಸಿರಲಿಲ್ಲ. ದೆಹಲಿಯನ್ನು ಸೇರಿದಾಗಿನಿಂದ—ಬೆಳಗಿನಿಂದ ಸಂಜೆಯವರೆಗೆ ಇಲ್ಲಿನ ದಾರುಣ ಕಥೆಯನ್ನೇ ಕೇಳುತ್ತಿದ್ದೇನೆ—ತಮ್ಮ ಕರುಣ ಕಥೆಯನ್ನು ತೋಡಿಕೊಂಡ ಅನೇಕ ಮುಸಲ್ಮಾನ ಸ್ನೇಹಿತರನ್ನು ಕಂಡೆ. ದೆಹಲಿ ನಗರವು ತನ್ನ ಪೂರ್ವ ಸ್ಥಿತಿಗೆ ಬರುವವರೆಗೆ ಇಲ್ಲಿಂದ ಪಂಜಾಬಿಗೆ ನಾನು ಪ್ರಯಾಣ ಮಾಡಲಾರೆನೆಂದು ತೀರ್ಮಾನಿಸಲು ನನಗಿಲ್ಲಿ ಸಾಕಷ್ಟು ದುರಂತ ಗೋಚರವಾಯಿತು.

ಈ ಉದ್ರಿಕ್ತ ವಾತಾವರಣವನ್ನು ಶಾಂತಗೊಳಿಸಲು ನನ್ನ ಕಿಂಚಿತ್ ಪ್ರಯತ್ನವನ್ನು ಮಾಡಲೇ ಬೇಕು. 'ಮಾಡು ಅಥವಾ ಮಡಿ' ಎಂಬ ನನ್ನ ಹಿಂದಿನ ಸೂತ್ರವಾಕ್ಯವನ್ನು ಭಾರತದ ರಾಜಧಾನಿಯಲ್ಲಿಂದು ಪ್ರಯೋಗಿಸಬೇಕು. ಇಲ್ಲಿ ನಡೆಯುತ್ತಿರುವ ಅರ್ಥಶೂನ್ಯ ವಿನಾಶಕೃತ್ಯ

ಗಳನ್ನು ದೆಹಲಿಯ ನಾಗರಿಕರು ಇಚ್ಛಿಸುವುದಿಲ್ಲವೆಂಬುದನ್ನು ಬಲ್ಲೆ. ದುರದೃಷ್ಟವಶಾತ್ ಪಶ್ಚಿಮ ಪಂಜಾಬಿನಿಂದ ಹೊರದೂಡಲ್ಪಟ್ಟಿರುವ ನಿರ್ಭಾಗ್ಯ ನಿರಾಶ್ರಿತರ ಆಕ್ರೋಶವನ್ನು ಅರಿಯಬಲ್ಲೆನೆಂದು ಭಾವಿಸುತ್ತೇನೆ. ಆದರೆ ಆಕ್ರೋಶ ಕೇವಲ ಬುದ್ಧಿ ಭ್ರಮಣೆ. ಎಲ್ಲ ರೀತಿಯಲ್ಲೂ ಅದು ಪರಿಸ್ಥಿತಿಯನ್ನು ಹದಗೆಡಿಸಬಲ್ಲುದು. ಮುಯ್ಯಿ ತೀರಿಸಿಕೊಳ್ಳುವುದು ರೋಗವನ್ನು ನಿವಾರಣೆ ಮಾಡಲಾರದು; ಇನ್ನೂ ಹೆಚ್ಚು ಉಲ್ಬಣವಾಗುವಂತೆ ಮಾಡೀತು. ಆದ್ದರಿಂದ ಕೊಲೆ, ದೊಂಬಿ, ದರೋಡೆಗಳಲ್ಲಿ ತೊಡಗಿರುವವರೆಲ್ಲ ಈ ಪ್ರಜ್ಞಾಹೀನ ಕೊಲೆಗಡುಕತನವನ್ನು ನಿಲ್ಲಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಸ್ವಾತಂತ್ರ್ಯ ಘೋಷಣೆಯ ನಂತರ ಅತ್ಯಂತ ಸಮರ್ಥರಾದ, ನಿರ್ಭಯರಾದ ಸ್ವಾರ್ಥತ್ಯಾಗಿಗಳಿಂದ ಕೂಡಿದ ಸಚಿವ ಸಂಪುಟ ಅಧಿಕಾರಕ್ಕೆ ಬಂದು ಇನ್ನೂ ಒಂದು ತಿಂಗಳು ಸಹ ಆಗಿಲ್ಲ. ನಾಡಿನ ಪರಿಸ್ಥಿತಿಯನ್ನು ವ್ಯವಸ್ಥೆಗೊಳಿಸಲು ಅವರಿಗೆ ಸ್ವಲ್ಪವೂ ಸಮಯ ಕೊಡದಿದ್ದರೆ ಮಹಾಪರಾಧವಾದೀತು, ಆತ್ಮನಾಶಕವಾದೀತು. ಆಹಾರದ ಕೊರತೆಯಿದೆ ಎಂದು ಬಲ್ಲೆ. ದೊಂಬಿಯ ಪ್ರಭುತ್ವದಿಂದ ಎಲ್ಲವೂ ತಳಮೇಲಾಗಿ ಆಹಾರ ವಿತರಣೆಯೂ ಅಸಾಧ್ಯವಾಗುತ್ತಿದೆ. ಪ್ರಕ್ಷುಬ್ಧ ಹೊಂದಿದ ದೆಹಲಿಗೆ ಪರಮಾತ್ಮ ಶಾಂತಿ ದಯಪಾಲಿಸಲಿ.

ನಾನು ಕಲ್ಕತ್ತೆಯನ್ನು ಬೀಳ್ಕೊಟ್ಟಾಗ ಅಲ್ಲಿನ ಜನ ಕೊಟ್ಟ ವಚನವನ್ನು ಪಾಲಿಸುವರೆಂಬ ಭರವಸೆಯನ್ನು ಪುನಶ್ಚರಿಸಿ ಇದನ್ನು ಮುಗಿಸುತ್ತೇನೆ. ಸುತ್ತಲೂ ಆವರಿಸಿರುವ ಚಿತ್ತ ಭ್ರಮಣೆಯಲ್ಲಿ ಅದೇ ನನ್ನ ಕೈದೀವಿಗೆ.[೪೯]

# ೫೦. ನಿರಾಶ್ರಿತರ ಶಿಬಿರಗಳಲ್ಲಿ ನೈರ್ಮಲ್ಯ

ಈ ದಿನ ರಾಜಕುಮಾರಿ ಅಮೃತ್ ಕೌರ್ ನನ್ನನ್ನೂ ಡಾ. ಸುಶೀಲಾ ನಯ್ಯಾರರನ್ನೂ ಇರ್ವಿನ್ ಆಸ್ಪತ್ರೆಗೆ ಕರೆದೊಯ್ದರು. ಅಲ್ಲಿ ಜಾತಿಭೇದಗಳ ನ್ನೆಣಿಸದೆ ಗಾಯಗೊಂಡವರ ಚಿಕಿತ್ಸೆ ಮಾಡುತ್ತಿದ್ದಾರೆ. ಗುಂಡಿನೇಟಿನಿಂದ ಗಾಯಗೊಂಡ ಕೇವಲ ಐದು ವರ್ಷಗಳ ಒಂದು ಹಸುಗೂಸು ಅಲ್ಲಿ ಚಿಕಿತ್ಸೆ ಪಡೆಯುತ್ತಿತ್ತು. ವೈದ್ಯರೂ ದಾದಿಯರೂ ಅತಿ ಕಷ್ಟ ಪರಿಸ್ಥಿತಿಯಲ್ಲಿ ಸೇವೆ ಮಾಡುತ್ತಿದ್ದರು. ಅಲ್ಲಿದ್ದ ಹಿಂದೂಗಳನ್ನೂ ಸಿಕ್ಕರನ್ನೂ ಬೇರೆ ಆಸ್ಪತ್ರೆಗಳಿಗೆ ಸ್ಥಳಾಂತರಿಸಿದ್ದರಿಂದ ಮುಸಲ್ಮಾನರೇ ಬಹು ಸಂಖ್ಯೆಯಲ್ಲಿದ್ದರು.

ನಿರಾಶ್ರಿತ ಶಿಬಿರಗಳನ್ನು ಚೊಕ್ಕಟಗೊಳಿಸಲು ಝಾಡಮಾಲಿಗಳನ್ನೊದಗಿಸುವುದು ದುಸ್ತರವಾಗಿದೆಯೆಂದೂ ಅಲ್ಲಿ ಕಾಲರಾ ರೋಗದಂಥ ಸಾಂಕ್ರಾಮಿಕ ಜಾಡ್ಯಗಳು ತಲೆದೋರುವ ಸಂಭವವುಂಟೆಂದೂ ರಾಜಕುಮಾರಿ ಅಮೃತ್ ಕೌರ್ ತಿಳಿಸಿದರು. ಶಿಬಿರದ ನೈರ್ಮಲ್ಯವನ್ನು ಕಾಪಾಡಿಕೊಳ್ಳಲು ಶಿಬಿರ ನಿವಾಸಿಗಳು ಕಕ್ಕಸುಗಳನ್ನು ಶುದ್ಧಿಗೊಳಿಸುವುದರಿಂದ ಹಿಡಿದು ಎಲ್ಲ ಕೆಲಸಗಳನ್ನೂ ತಾವೇ ಮಾಡಿಕೊಳ್ಳುವುದು ಅಗತ್ಯವೆಂಬುದರಲ್ಲಿ ನನಗೆ ಸಂಶಯವಿಲ್ಲ. ಇದರ ಜೊತೆಗೆ ಅವರು ಮುಖ್ಯಾಧಿಕಾರಿಗಳ ಅಪ್ಪಣೆ ಪಡೆದು ಯಾವುದಾದರೂ ಉಪಯುಕ್ತ ಕಸುಬನ್ನೂ ಅವಲಂಬಿಸಬೇಕು. ಕೇವಲ ದುರ್ಬಲರನ್ನು ಬಿಟ್ಟು ಬೇರೆ ಯಾರಿಗೂ ಇದರಿಂದ ವಿನಾಯಿತಿ ದೊರೆಯಕೂಡದು. ಶಿಬಿರಗಳೆಲ್ಲ ನೈರ್ಮಲ್ಯ, ಸರಳತೆ ಮತ್ತು ಉದ್ಯೋಗ ಶೀಲತೆಗಳಿಗೆ ಮಾದರಿಯಾಗಿರಬೇಕು.

ಜಾತೀಯ ಐಕ್ಯತೆ ಮತ್ತು ಶಾಂತಿ ಸ್ಥಾಪನೆಯಲ್ಲಿ ಹೃತ್ಪೂರ್ವಕ ಉತ್ಸಾಹವುಳ್ಳ ಪಾಕಿಸ್ತಾನದ ಹೈ ಕಮೀಷನರು ನನ್ನನ್ನಿಂದು ಭೇಟಿಯಾದರು. ಸಿಕ್ ಮತಸ್ಥರಾದ ಸ್ನೇಹಿತರೂ ಇಂದು ಎರಡು ಬಾರಿ ಬಂದಿದ್ದರು. ಕೃಪಾಣಗಳನ್ನು (Kirpans) ಧರಿಸಕೂಡದೆಂಬ ಆಜ್ಞೆಯಿಂದ ಅವರು ತಾಪಗೊಂಡಿದ್ದರು. ಸರ್ಕಾರದೊಡನೆ ಮಾತನಾಡುವ ಮುನ್ನ ನನಗೆ ಅವರ ಆವಶ್ಯಕತೆಗಳನ್ನು ಬರೆದುಕೊಡುವುದಾಗಿ ಹೇಳಿದರು. ಅವರ ಮೇಲಿನ

ಆರೋಪಣೆಗಳು ಉತ್ಪ್ರೇಕ್ಷಿತವಾದುವುಗಳೆಂದೂ ಮುಸಲ್ಮಾನರೊಂದಿಗಾಗಲೀ ಇತರ ಯಾವುದೇ ಜಾತಿಯವರೊಂದಿಗಾಗಲೀ ತಮಗೆ ಜಗಳವಿಲ್ಲವೆಂದೂ ತಿಳಿಸಿದರು. ಈ ದೇಶದ ನ್ಯಾಯಬದ್ಧ ಸತ್ಪ್ರಜೆಗಳಾಗಿ ಬಾಳಬೇಕೆಂದೇ ಅವರ ಆಕಾಂಕ್ಷೆಯಾಗಿತ್ತು.[೫೦]

## ೫೧. ಗುರು ನಾನಕ್ ಜಯಂತಿಯಲ್ಲಿ ಭಾಷಣ

[ ೧೯೪೭ರ ನವಂಬರ್ ೨೭, ಗುರು ನಾನಕ್ ಜಯಂತಿಯ ಆಚರಣೆ ಸಂದರ್ಭದಲ್ಲಿ ಗಾಂಧೀಜೀ ಸಿಕ್ಕರನ್ನು ಕುರಿತು ಭಾಷಣ ಮಾಡಿದರು. ]

ನಾನು ಹೇಳಬೇಕೆಂದಿರುವುದನ್ನೆಲ್ಲಾ ಬಹುಶಃ ಇಂದು ಹೇಳಲಾರೆ. ಸೈನಿಕ ಶಿಕ್ಷಣ ಪಡೆದ ನೀವೆಲ್ಲರೂ ಸಭೆಯ ನಿಶ್ಶಬ್ದತೆಯನ್ನು ಕಾಪಾಡುವಿರೆಂದು ಆಶಿಸಿದ್ದೆ. ಸೋದರಿಯರು ಅಶಿಕ್ಷಿತರಾಗಿ ಸಾರ್ವಜನಿಕ ಸಭಾ ಮರ್ಯಾದೆಯನ್ನು ಕಾಯ್ದುಕೊಳ್ಳಲಾರದಾಗಿದ್ದಾರೆ. ಕೆಲವು ವರ್ಷಗಳ ಕೆಳಗೆ ಅಮೃತಸರದಲ್ಲಿ ನನಗಿದೇ ಅನುಭವವಾಯಿತು. ಪುರುಷರೇ ಇದಕ್ಕೆ ಮುಖ್ಯ ಕಾರಣ. ಸಭೆಗೆ ಬರುವಾಗ ದಾರಿಯುದ್ದಕ್ಕೂ ಹಣ್ಣಿನ ಸಿಪ್ಪೆಗಳನ್ನೂ ಕಸವನ್ನೂ ಎಸೆದಿದ್ದುದನ್ನು ಕಂಡೆ. ಇದರಿಂದ ಗಲೀಜು, ಅಪಾಯ ಎರಡೂ ಉಂಟು. ನಮ್ಮ ಮನೆಗಳಲ್ಲಿದ್ದಂತೆಯೇ ರಸ್ತೆಗಳನ್ನೂ ನಿರ್ಮಲವಾಗಿಡುವುದು ನಮ್ಮ ಕರ್ತವ್ಯ. ಸುಸಂಸ್ಕೃತರು ತಿಂದ ಹಣ್ಣಿನ ಸಿಪ್ಪೆಗಳನ್ನು ಕಸದ ತೊಟ್ಟಿಗಳು ಸಿಗುವವರೆಗೆ ಕಾಗದದಲ್ಲಿ ಸುತ್ತಿ ತಮ್ಮ ಜೇಬಿನಲ್ಲೇ ತೆಗೆದುಕೊಯ್ಯುವುದನ್ನು ನೋಡಿದ್ದೇನೆ. ಸಾಮಾಜಿಕ ಸದ್ವರ್ತನೆಯನ್ನು ಪುರುಷರು ಕಲಿತಿದ್ದರೆ ಸ್ತ್ರೀಯರಿಗೂ ಕಲಿಸುವುದು ಅವರ ಕರ್ತವ್ಯ.

ಬಾಬಾ ಬಚಿತ್ತರ್ ಸಿಂಗರು ಬೆಳಗ್ಗೆ ಬಂದು ಈ ದಿನ ಗುರು ನಾನಕ್ ಜಯಂತಿ ಸಮಾರಂಭಕ್ಕೆ ಬರಲು ನನ್ನನ್ನು ಒತ್ತಾಯ ಮಾಡಿದರು. ಒಂದು ಲಕ್ಷಕ್ಕೂ ಮೀರಿ ಸಿಕ್ಕರು ಇಲ್ಲಿ ಸೇರುವರೆಂದೂ ಅವರಲ್ಲಿ ಬಹುಪಾಲು ಜನ ಪಶ್ಚಿಮ ಪಾಕಿಸ್ತಾನದಿಂದ ಬಂದ ನಿರಾಶ್ರಿತರೆಂದೂ ತಿಳಿಸಿದರು. ಸಿಕ್ಕರು ನನ್ನಲ್ಲಿ ಅಸಮಾಧಾನಗೊಂಡಿರುವುದರಿಂದ ನಾನು ಬರಲು ಸ್ವಲ್ಪ

ಹಿಂಜರಿದೆ. ಬಾವಾ ಬಚೀತರ್‌ಸಿಂಗರು ಒತ್ತಾಯ ಮಾಡಿದರು. ನನ್ನ ಮಾತುಗಳಿಗೆ ಏನೂ ಅರ್ಥವಿಲ್ಲವೆಂದರು. ಮಗುವಿಗೆ ತಾಯಿ ಕುಡಿಸುವ ಔಷಧಿಯಂತೆ ಕಹಿಯಾದರೂ ವಾಸ್ತವವಾಗಿ ನಿಮ್ಮ ನಿಜವಾದ ಹಿತವನ್ನೇ ಬಯಸಿ ಹೇಳುವ ಈ ಮಾತುಗಳನ್ನಾಡಲು ನಾನು ಒಪ್ಪಿ ಬಂದಿದ್ದೇನೆ. ನನ್ನ ತಾಯಿ ಕಹಿಯಾದ ಔಷಧಿಗಳನ್ನು ನನಗೆ ಕುಡಿಸುತ್ತಿದ್ದರು. ಆದರೂ ಆಕೆಯ ತೊಡೆಯ ಮೇಲಿನ ಆಶ್ರಯದ ಸೌಖ್ಯವನ್ನು ನಾನು ಮತ್ತೆಲ್ಲಿ ಪಡೆದೇನು. ಈವರೆಗೆ ನಾನು ಹೇಳಿರುವುದಾವುದಕ್ಕೂ ನಾನು ಪಶ್ಚಾತ್ತಾಪ ಪಡಲಾರೆ. ನಿಮ್ಮ ಪ್ರಾಮಾಣಿಕ ಸ್ನೇಹಿತನಂತೆ, ಸೇವಕನಂತೆ ಹೇಳಿದ್ದೇನೆ. ಸರದಾರ್ ದಾತಾರ್ ಸಿಂಗರ ಮಗಳು ನನ್ನಾಶ್ರಯದಲ್ಲಿದ್ದಾಳೆ. ನಿಮಗವರು ಗೊತ್ತು. ಪಶ್ಚಿಮ ಪಂಜಾಬಿನಲ್ಲಿ ಅವರು ತಮ್ಮ ಸರ್ವಸ್ವವನ್ನೂ ಕಳೆದುಕೊಂಡಿದ್ದಾರೆ. ದೊಡ್ಡ ಜಮೀನುದಾರರು. ನೂರಾರು ದನಕರುಗಳನ್ನು ಕಟ್ಟಿದ್ದರು. ಮಾಂಟಗಾಮರಿಯಲ್ಲಿ ಅವರ [illegible]ರು ಮಿತ್ರರನೇಕರು ಕೊಲೆಗೀಡಾಗಿದ್ದರು. ಈ ಅಸಹನೀಯ ದುರದೃಷ್ಟಕ್ಕೆ ಅವರೆಂದೂ ಮರುಗಲಿಲ್ಲ. ಮುಸಲ್ಮಾನರನ್ನವರು ದ್ವೇಷಿಸಲಿಲ್ಲ. ಅವರನ್ನು ನೀವು ಅನುಸರಿಸಿ. ಲಕ್ಷ ಜನರಿಗೆ ಒಬ್ಬ ಸಿಕ್ ಸಮಾನ ಎನ್ನುತ್ತಾರೆ ಸಿಕ್ ಸ್ನೇಹಿತರು. ಆ ಪೌರುಷವಿಂದೆಲ್ಲಿ ಹೋಯಿತು? ಅಲ್ಪಸಂಖ್ಯೆಯ ಮುಸ್ಲಿಂ ಜನಾಂಗ ನಿಮ್ಮ ಮಧ್ಯೆ ನಿರಾತಂಕರಾಗಿ ಬಾಳಲಾರದಷ್ಟು ಹೀನ ಸ್ಥಿತಿಗಿಳಿಯುವಂತಾಗಿಬಿಟ್ಟಿತೇ?

ಈ ದೌರ್ಜನ್ಯ ಪಾಕಿಸ್ಥಾನದಲ್ಲಿ ಮೊದಲಾಯಿತೆಂದು ನಾನೊಪ್ಪುತ್ತೇನೆ. ಪೂರ್ವ ಪಂಜಾಬಿನ ಸಿಕ್ಕರೂ, ಹಿಂದೂಗಳೂ ಅದನ್ನನುಕರಿಸಿ ಸುತ್ತಮುತ್ತಲಿನ ಜಿಲ್ಲೆಗಳಲ್ಲೂ ಅಷ್ಟೇ ದೌರ್ಜನ್ಯಕಾರಿಗಳಾದರು. ಕತ್ತಿಯನ್ನುಪಯೋಗಿಸಬಲ್ಲ ಸಿಕ್ಕರಷ್ಟು ಹಿಂದೂಗಳು ಧೀರರಾಗಿರಲಿಲ್ಲ. ಅಷ್ಟೇ ವ್ಯತ್ಯಾಸ.

ಷೇಕ್ ಅಬ್ದುಲ್ಲಾ ಇಂದು ನನ್ನೊಡನಿದ್ದರು. ಅವರನ್ನಿಲ್ಲಿಗೆ ಕರೆತರಲು ಹಿಂಜರಿದೆ. ಹಿಂದೂ ಮತ್ತು ಸಿಕ್ಕರಿಗೂ ಮುಸಲ್ಮಾನರಿಗೂ ಮಧ್ಯೆ ಇಂದು ಇರುವ ಕಂದರವನ್ನು ನಾನು ಬಲ್ಲೆ. ಕಾಶ್ಮೀರದ ಸಿಂಹ ವೆಂದೆನಿಸಿದ ಷೇಕ್ ಸಾಹೇಬರು ಮುಸಲ್ಮಾನರಾದನೂ ಮೂರೂ ಜನಾಂಗ

ಗಳ ಹೃದಯಗಳನ್ನು ಗೆದ್ದು ಅವರಲ್ಲಿ ಭೇದಭಾವನೆಗಳನ್ನು ನಿರ್ಮೂಲ ಮಾಡಿದ್ದಾರೆ. ದ್ವೇಷಭಾವವನ್ನವರು ಬೆಳೆಸಿಕೊಳ್ಳಲಿಲ್ಲ. ಇತ್ತೀಚಿಗೆ ಜಮ್ಮುವಿನಲ್ಲಿ ಹಿಂದೂ ಮತ್ತು ಸಿಕ್ಕರು ಮುಸಲ್ಮಾನರನ್ನು ಕೊಂದಾಗ ಅವರಲ್ಲಿಗೆ ಧಾವಿಸಿ ಕೊಲೆಗಡುಕರನ್ನು ಕಂಡು ಹೀನಕೃತ್ಯಕ್ಕೆ ಪಶ್ಚಾತ್ತಾಪ ಪಟ್ಟು ಕಳೆದುಹೋದುದನ್ನು ಮರೆಯಿರೆಂದು ಮೊರೆಯಿಟ್ಟರು. ಜಮ್ಮುವಿನ ಹಿಂದೂಗಳೂ ಸಿಕ್ಕರೂ ಅವರ ಕರೆಗೆ ಓಗೊಟ್ಟರು. ಜಮ್ಮು ಮತ್ತು ಕಾಶ್ಮೀರದ ಮುಸಲ್ಮಾನ, ಹಿಂದೂ ಮತ್ತು ಸಿಕ್ಕರು ಒಗ್ಗಟ್ಟಾಗಿ ಕಾಶ್ಮೀರದ ಸುಂದರ ಕಣಿವೆಯನ್ನು ರಕ್ಷಿಸಲು ಹೋರಾಡುತ್ತಿದ್ದಾರೆ. ನಮ್ಮಿಬ್ಬರನ್ನೂ ನೀವಿಂದು ಇಲ್ಲಿ ಹೃತ್ಪೂರ್ವಕವಾಗಿ ಸ್ವಾಗತಿಸುತ್ತಿರುವುದು ಬಹಳ ಸಂತೋಷ.

ನಿಮ್ಮ ಬಾಳಿನಲ್ಲಿ ಈ ಪವಿತ್ರ ದಿನದಂದು ಒಂದು ಹೊಸ ಅಧ್ಯಾಯ ಆರಂಭವಾಗಲಿ. ದೆಹಲಿಯಿಂದ ಮುಸಲ್ಮಾನರನ್ನು ಹೊರದೂಡುವ ಹೇಯ ಕಾರ್ಯ ಇಂದಿನಿಂದ ನಿಲ್ಲಲಿ. ಚಾಂದಿನಿ ಚೌಕದ ಬಳಿ ನಮ್ಮ ಕಾರು ಬರುತ್ತಿರುವಾಗ ಒಬ್ಬ ಮುಸಲ್ಮಾನನೂ ಕಣ್ಣಿಗೆ ಬೀಳದುದನ್ನು ಕಂಡು ನನಗೆ ನಾಚಿಕೆಯಾಯಿತು. ಹಿಂದೂ ಮುಸಲ್ಮಾನ ಸಿಕ್ಕರೆಲ್ಲರಿಂದ ತುಂಬಿರುತ್ತಿತ್ತು ಆ ಸ್ಥಳ. ಭಾರತದಲ್ಲೆಲ್ಲ ಹಂಚಿಹೋಗಿರುವ ಅಲ್ಪಸಂಖ್ಯಾತರಾದ ಮುಸಲ್ಮಾನರಿಗೆ ನಾವಿಷ್ಟು ಹೆದರುವಂತಾಯಿತೇ? ಅವರಲ್ಲಿ ಯಾರಾದರೂ ರಾಷ್ಟ್ರಘಾತುಕರಿದ್ದರೆ ಸರಕಾರ ಅವರನ್ನು ದಮನ ಮಾಡಲು ಸಮರ್ಥವಾಗಿದೆ. ಹೆಂಗಸರು ಮಕ್ಕಳನ್ನೂ ವೃದ್ಧರನ್ನೂ ನೋಯಿಸುವುದು ನಾಚಿಕೆಗೇಡು. ಕ್ರಮಬದ್ಧ ನ್ಯಾಯಾಲಯದಲ್ಲಿ ತಪ್ಪಿತಸ್ಥನೆಂದು ತೀರ್ಮಾನವಾಗುವವರೆಗೆ ಪ್ರತಿಯೊಬ್ಬನೂ ನಿರ್ದೋಷಿಯೆಂದೇ ತಿಳಿಯಬೇಕು.

ಇಂಥ ದುಷ್ಕೃತ್ಯಗಳು ಮಾಯವಾಗುವುವೆಂದು ನನ್ನ ತೀವ್ರ ಅಭಿಲಾಷೆ. ನಿರಪರಾಧಿಗಳ ಅಶಕ್ತರ ರಕ್ಷಣೆಗಾಗಿ ನಿಲ್ಲುವ ಪವಿತ್ರ ಕರ್ತವ್ಯದ ಪ್ರತೀಕ ನೀವು ಧರಿಸುವ ಸಣ್ಣ ಖಡ್ಗ (ಕೃಪಾಣ್). ಸಿಕ್ಕರ ಹತ್ತನೆಯ ಹಾಗೂ ಕೊನೆಯ ಗುರು ಕತ್ತಿ ಹಿಡಿದು ಹೋರಾಡಿದರೆಂಬುದು ನಿಜ, ಆದರೆ ಅವರೆಂದಿಗೂ ದುರ್ಬಲರ ಮೇಲೆ ಬೀಳಲಿಲ್ಲ.

ಸ್ವಯಂಪ್ರೇರಿತ ಸಂಯಮವನ್ನು ಕಾಯ್ದುಕೊಂಡರು. ಮುಸಲ್ಮಾನರನೇಕರು ಅವರ ಶಿಷ್ಯರಾದರು. ಗುರು ನಾನಕ್‌ರಿಂದ ಹಿಡಿದು ಮಿಕ್ಕೆಲ್ಲ ಗುರುಗಳೂ ಹೀಗೆಯೇ ನಡೆದುಕೊಂಡರು. ಮುಸಲ್ಮಾನರೂ ಮಿಕ್ಕಿತರ ಧರ್ಮಗಳವರೂ ಯಾವ ಪ್ರಮಾಣದಲ್ಲಿ ನಿಮ್ಮ ಪ್ರಾಮಾಣಿಕ ಸ್ನೇಹಿತರಾಗುವರೋ ಅದೇ ನಿಮ್ಮ ಶೌರ್ಯಕ್ಕೆ ನಿದರ್ಶನವಾದೀತು.

ಮಹಾಗುರುವಿನ ಹಾಗೂ ಗ್ರಂಥ ಸಾಹೇಬದ* ಅನುಯಾಯಿಗಳಿಗೆಂದಿಗೂ ಮದ್ಯಪಾನ, ದೌರ್ಜನ್ಯ, ವ್ಯಭಿಚಾರಗಳಂತಹ ದುಷ್ಕರ್ಮಗಳು ಸಲ್ಲವು. ಗ್ರಂಥ ಸಾಹೇಬದ ಸಾಕ್ಷಿಯಾಗಿ ನಿಮ್ಮನ್ನು ಪ್ರಾರ್ಥಿಸುತ್ತೇನೆ. ನೀವು ಶುದ್ಧ ಹೃದಯಿಗಳಾಗಿ ವರ್ತಿಸುವೆವೆಂದು ಪ್ರತಿಜ್ಞೆಮಾಡಿ ನೋಡಿ. ಮಿಕ್ಕೆಲ್ಲ ಮತೀಯರೂ ನಿಮ್ಮನ್ನು ಅನುಸರಿಸಿಯೇ ತೀರುವರು.೫೧

## ೫೨. ಕೊನೆಯ ನಿರಶನ ವ್ರತ ಕೈಗೊಳ್ಳುವ ಮುನ್ನ ಇತ್ತ ಹೇಳಿಕೆ

[೧೯೪೮ನೆಯ ಜನವರಿ ೧೨ನೆಯ ತಾರೀಖು ವಿವಿಧ ಮತೀಯರಲ್ಲಿ ಹೃತ್ಪೂರ್ವ ಐಕ್ಯತೆಯನ್ನು ಸಾಧಿಸಲು ತಾವು ಮಾರನೆ ದಿನದಿಂದ ಅನಿರ್ದಿಷ್ಟ ಕಾಲದ ನಿರಶನ ವ್ರತವನ್ನು ಕೈಗೊಳ್ಳುವ ನಿರ್ಧಾರವನ್ನು ಗಾಂಧೀಜೀ ಪ್ರಕಟಿಸಿದರು. ಆಗ ಇತ್ತ ಹೇಳಿಕೆಯಿದು.]

ದೇಹಾರೋಗ್ಯಕ್ಕಾಗಿ ನಿಯಮಬದ್ಧ ಉಪವಾಸಮಾಡುವುದುಂಟು. ತಾನೇಮಾಡಿದ ಅಪರಾಧಗಳಿಗೆ ಪಶ್ಚಾತ್ತಾಪಪಟ್ಟು ಉಪವಾಸ ವ್ರತವನ್ನು ಕೈಗೊಳ್ಳಬಹುದು. ಇಂಥ ಉಪವಾಸಗಳನ್ನು ಮಾಡುವವರಿಗೆ ಅಹಿಂಸೆಯಲ್ಲಿ ಅವಿಚಲ ವಿಶ್ವಾಸವಿರಬೇಕಾದುದೇನಿಲ್ಲ. ಸಮಾಜದ ಘೋರ ಅಕೃತ್ಯಗಳನ್ನು ಪ್ರತಿಭಟಿಸಿ ನಿಲ್ಲುವುದು ಅನಿವಾರ್ಯವೆನಿಸಿದಾಗ, ಮತ್ತೆಲ್ಲ ಮಾರ್ಗಗಳೂ ವಿಫಲವೆನಿಸಿದಾಗ, ಅಹಿಂಸಾ ಧರ್ಮನಿಷ್ಠನಾದವನು ಕಟ್ಟಕಡೆಯ ಅಪರಿಹಾರ್ಯ ಹೆಜ್ಜೆಯಾಗಿ ಕೈಕೊಳ್ಳುವ ಉಪವಾಸ ವ್ರತ

* ಸಿಕ್ಕರ ಪವಿತ್ರ ಮತ ಗ್ರಂಥ.

ವೊಂದುಂಟು. ಅಂಥ ಮಹಾ ವ್ರತವನ್ನು ಕೈಗೊಳ್ಳುವ ಸನ್ನಿವೇಶ ಈಗ ನನಗೊದಗಿ ಬಂದಿದೆ.

ಸೆಪ್ಟೆಂಬರ್ ಒಂಬತ್ತರಂದು ನಾನು ಕಲ್ಕತ್ತೆಯಿಂದ ದೆಹಲಿಗೆ ಬಂದುದು ಪಶ್ಚಿಮ ಪಂಜಾಬಿಗೆ ಹೋಗಬೇಕೆಂದು. ಆದರೆ ಅದು ಹಾಗಾಗ ಲಿಲ್ಲ. ಸಂತಸದಿಂದಿದ್ದ ದೆಹಲಿ ಕುರುಕ್ಷೇತ್ರವಾಗಿತ್ತು, ಸ್ಮಶಾನವಾಗಿತ್ತು. ಇಲ್ಲಿ ಇಳಿದೊಡನೆಯೇ ನಿರ್ವಿಣ್ಣ ಮುಖಗಳೇ ಎಲ್ಲೆಡೆಯಲ್ಲಿಯೂ ಎದು ರಾದುವು. ಹಾಸ್ಯಪ್ರಿಯತೆಯಿಂದ ಚಿಮ್ಮುವ ಹಸನ್ಮುಖಿಗಳಾಗಿರುತ್ತಿದ್ದ ಸರದಾರ್ ಪಟೇಲರೂ ವ್ಯಾಕುಲಗ್ರಸ್ತರಾಗಿಯೇ ಕಂಡರು. ನನಗಿದು ಅರ್ಥವಾಗಲಿಲ್ಲ. ಸರದಾರರು ನಿಲ್ದಾಣದಲ್ಲಿ ದುರಂತ ಘಟನೆಗಳ ಸುದ್ದಿಯನ್ನು ಕೂಡಲೇ ನನಗೆ ವಿವರಿಸಿದರು. ಅದೇ ಕ್ಷಣದಲ್ಲಿ ನಾನು ದೆಹಲಿಯಲ್ಲಿ ನಿಂತು ' ಮಾಡಬೇಕು ಅಥವಾ ಮಡಿಯಬೇಕು ' ಎನ್ನಿಸಿತು, ಮಿಲಿಟರಿ ಮತ್ತು ಪೋಲೀಸಿನವರಿಂದ ಬಾಹ್ಯ ಶಾಂತಿಯೇನೊ ಕುದುರಿದೆ. ಎದೆಯೊಳಗೆ ಮಾತ್ರ ಸಂಕ್ಷೋಭೆ ಇದ್ದೇ ಇದೆ, ಯಾವ ಕ್ಷಣವಾದರೂ ಅದು ಹೊರ ಚಿಮ್ಮೀತು. ಮಾಡು ಎಂಬ ಪ್ರತಿಜ್ಞೆಯ ಪೂರ್ಣ ಸಿದ್ಧಿಯಲ್ಲ ಇದು. ಅಂಥ ಪೂರ್ಣಸಿದ್ಧಿ ಮಾತ್ರ ನನ್ನನ್ನು ಸಾವಿನಂತಹ ಅನುಪಮ ಗೆಳೆಯ ನಿಂದ ದೂರವಿಡಲು ಸಮರ್ಥವಾದೀತು. ಹಿಂದೂ, ಮುಸಲ್ಮಾನ ಮತ್ತು ಸಿಕ್ಕರ ನಡುವೆ ಹೃತ್ಪೂರ್ವಕ ಮೈತ್ರಿಗಾಗಿ ಹಾತೊರೆಯುತ್ತಿದ್ದೇನೆ. ಮೊನ್ನೆ ಮೊನ್ನೆಯವರೆಗೆ ಆ ಮೈತ್ರಿ ಪ್ರತಿಷ್ಠಿತವಾಗಿತ್ತು. ಇಂದು ಮಾಯ ವಾಗಿದೆ. ಯಾವ ದೇಶಭಕ್ತನೂ ಈ ಅಧೋಗತಿಯನ್ನು ಸಮಾಧಾನದಿಂದ ಸಹಿಸಲಾರ. ನನ್ನ ಅಂತರ್ವಾಣಿ ಹಲವು ದಿನಗಳಿಂದ ಸುಸ್ಪಷ್ಟವಾಗಿ ನುಡಿಯುತ್ತಿತ್ತು. ನನ್ನ ದೌರ್ಬಲ್ಯಗಳ ಪರಿಣಾಮವಾಗಿ ದುರ್ಬೋಧೆ ಯಾಗಿರಬಹುದೇ ಎಂದು ಶಂಕಿಸಿ ನಾನು ಇದುವರೆಗೆ ಕಿವಿಗೊಡಲಿಲ್ಲ. ಸತ್ಯಾಗ್ರಹಿಯಾದವನು ಎಂದಿಗೂ ನಿಸ್ಸಹಾಯಕತೆಯನ್ನನುಭವಿಸಲಾರ. ಅದು ಅವನಿಗೆ ಸಲ್ಲದು. ಅವನ ಆತ್ಯಂತಿಕ ಮಹಾ ಅಸ್ತ್ರ ಉಪವಾಸ ವ್ರತ. ದಿನದಿನವೂ ನನ್ನನ್ನು ಕಂಡು ಏನುಮಾಡಬೇಕೆಂದು ಕೇಳುವ ಮುಸಲ್ಮಾನ ಸೋದರರಿಗೆ ಉತ್ತರಿಸಲಾರದಾಗಿದ್ದೇನೆ. ಅಸಹನೀಯ ನಿರ್ವೀರ್ಯತೆ ನನ್ನನ್ನು ದಹಿಸುತ್ತಿದೆ. ಉಪವಾಸ ಪ್ರಾರಂಭಿಸಿದೊಡನೆಯೇ

ಅದು ಮಾಯವಾಗುತ್ತದೆ. ಮೂರು ದಿನಗಳಿಂದ ಚಿಂತಿಸುತ್ತಿದ್ದೆ. ಕೊನೆಯ ನಿರ್ಧಾರ ಮಿಂಚಿನಂತೆ ಹೊಳೆದು ನಾನು ಹರ್ಷಿತನಾಗಿದ್ದೇನೆ. ನಿಷ್ಕಳಂಕ ವ್ಯಕ್ತಿಯೊಬ್ಬನ ಜೀವದ ಬಲಿದಾನಕ್ಕಿಂತ ಬೇರಾವ ಅನರ್ಘ್ಯ ಕಾಣಿಕೆ ಯುಂಟು? ಈ ಮಹಾ ನಿರ್ಧಾರಕ್ಕೆ ಯೋಗ್ಯವಾಗುವಂತಹ ಧವಳ ನಿಷ್ಕಲ್ಮಷತೆ ನನ್ನಲ್ಲಿ ಆವಿರ್ಭಾವವಾಗಲೆಂದು ಆಶಿಸಿ ಪ್ರಾರ್ಥಿಸುತ್ತೇನೆ.

ನೀವೆಲ್ಲ ನನ್ನನ್ನು ಆಶೀರ್ವದಿಸಿ ನನ್ನ ವ್ರತ ಸಾರ್ಥಕವಾಗುವಂತೆ ನನ್ನೊಡನೆ ಪ್ರಾರ್ಥಿಸಿ. ನಾಳಿನ ಮೊದಲ ಊಟವಾದ ಮೇಲೆ ಉಪವಾಸ ವ್ರತ ಪ್ರಾರಂಭಿಸುತ್ತೇನೆ. ಅನಿರ್ದಿಷ್ಟ ಕಾಲದವರೆಗೆ ಅದು ನಡೆಯುತ್ತದೆ. ಉಪವಾಸದ ಸಮಯದಲ್ಲಿ ನಿಂಬೇ ರಸ ಮಿಶ್ರವಾದ ನೀರನ್ನು ಉಪ್ಪಿ ನೊಡನೆಯೋ ಇಲ್ಲದೆಯೋ ತೆಗೆದುಕೊಳ್ಳುತ್ತೇನೆ. ಬಾಹ್ಯ ಒತ್ತಾಯ ವಿಲ್ಲದೆ ಅಂತಃಸ್ಫುರಿತ ಕರ್ತವ್ಯನಿಷ್ಠೆಯನ್ನರಿತು ಎಲ್ಲ ಮತೀಯರೂ ಹಾರ್ದಿಕ ಸಾಮರಸ್ಯದಿಂದ ಒಂದುಗೂಡಿದರೆಂದು ನನಗೆ ಸಮಾಧಾನ ವಾದಾಗ ಮಾತ್ರ ಈ ಉಪವಾಸವನ್ನು ನಿಲ್ಲಿಸುತ್ತೇನೆ. ಇಳಿಮುಖವಾಗು ತ್ತಿರುವ ಭಾರತದ ಘನತೆ ಇದರಿಂದ ಮತ್ತೆ ಸುಪ್ರತಿಷ್ಠಿತವಾದೀತು. ಏಷ್ಯಾದಲ್ಲಿ ಪಸರಿಸಿ ತನ್ಮೂಲಕ ಜಗತ್ತನ್ನೂ ಸೂರೆಗೊಳ್ಳುವಂತಹ ಭಾರತದ ಪ್ರೇಮ ಸಾಮ್ರಾಜ್ಯ ಅಳಿಯದೆ ನಿಂತೀತು. ಭಾರತದ ಆತ್ಮ ನಾಶವಾದಲ್ಲಿ ದುಃಖತಪ್ತ, ಪ್ರಕ್ಷುಬ್ಧ, ಕ್ಷುತ್ಪೀಡಿತ ಜಗತ್ತಿನ ಆಶಾಕಿರಣವೇ ನಂದಿಹೋದೀತೆಂದು ಅಭಿಮಾನದಿಂದ ನುಡಿಯ ಬಲ್ಲೆ. ಮಿತ್ರರಾಗಲೀ, ಶತ್ರುವಾಗಲೀ ಅಂಥವರಿರುವುದಾದರೆ ನನ್ನಲ್ಲಿ ಸಿಟ್ಟಾಗದಿರಲಿ. ಉಪವಾಸ ದಿಂದ ಜನರ ಮನಸ್ಸು ಸನ್ಮಾರ್ಗಕ್ಕೆ ತಿರುಗಲಾರದೆಂದು ನಂಬಿರುವ ಸ್ನೇಹಿತರಿದ್ದಾರೆ. ಅಂಥವರು ತಾವು ಬಯಸುವ ತಮ್ಮ ಸ್ವಾತಂತ್ರ್ಯವನ್ನು ನನಗೂ ನೀಡಿ ನನ್ನೊಡನೆ ಸಹಕರಿಸಲಿ. ಪರಮಾತ್ಮನೊಬ್ಬನನ್ನೆ ನನ್ನ ಅತ್ಯುಚ್ಚ ಆಪ್ತನೆಂದಂಗೀಕರಿಸಿ ನನ್ನ ನಿರ್ಧಾರವನ್ನು ಕೈಗೊಳ್ಳಬೇಕೆನ್ನಿಸಿತು. ಮತ್ತಾರ ಸಲಹೆಗಳನ್ನೂ ನಾನು ಕೇಳಿಲ್ಲ. ನನ್ನ ಹೆಜ್ಜೆ ತಪ್ಪಾದಲ್ಲಿ, ಅದು ನನಗೆ ಗೋಚರವಾದಲ್ಲಿ, ಬಹಿರಂಗವಾಗಿಯೇ ಅದನ್ನೊಪ್ಪಿಕೊಂಡು ಹಿಂತೆಗೆದುಕೊಳ್ಳಲು ನಾನು ಹಿಂಜರಿಯುವುದಿಲ್ಲ. ಅಂಥ ತಪ್ಪು ಗೋಚರ ವಾಗುವ ಸಂಭವವಿಲ್ಲವೆಂದೇ ಹೇಳಬೇಕು. ಅಂತರ್ವಾಣಿಯ ನಿಶ್ಚಲ

ನಿರೂಪಣೆ ನನಗಾಗಿರುವಂತೆ ಸ್ಪಷ್ಟವಾದಾಗ ಯಾರೂ ವಿರೋಧಿಸಲಾಗದು. ಇದು ತರ್ಕಾತೀತವೆಂದೇ ನಿಮ್ಮೊಡನೆ ಈ ಹೆಜ್ಜೆಯು ಅನಿವಾರ್ಯ ಅನು ಮೋದನೆಯನ್ನು ಯಾಚಿಸುತ್ತಿದ್ದೇನೆ. ಸಮಗ್ರಭಾರತ ನನ್ನ ಕರೆಗೆ ಓಗೊಟ್ಟರೆ ಅಥವಾ ದೆಹಲಿ ನಗರವಾದರೂ ನನ್ನ ಮನವಿಯನ್ನಾಲಿಸಿದರೆ ಶೀಘ್ರದಲ್ಲೇ ಈ ಉಪವಾಸ ಮುಕ್ತಾಯವಾದೀತು.

ಮುಕ್ತಾಯವಾಗಲೀ ಆಗದಿರಲಿ, ಇಂದಿನ ಉತ್ಕಟ ಪರಿಸ್ಥಿತಿಯ ನ್ನೆದುರಿಸುವ ಕಾರ್ಯದಲ್ಲಿ ಮಾತ್ರ ಮನೋಶೈಥಿಲ್ಯ ಕೂಡದು. ನನ್ನ ಉಪವಾಸ ವ್ರತಗಳ ದುರ್ಭರ ಬಲಾತ್ಕಾರದಿಂದಲೇ ವಿರೋಧಾಭಿಪ್ರಾಯ ಗಳು ಹತ್ತಿಕ್ಕಲ್ಪಟ್ಟವೆಂದೂ ವಾಸ್ತವವಾಗಿ ವಿರೋಧ ನಿರ್ಣಯವೇ ಅನುಮೋದಿಸಲ್ಪಡುತ್ತಿತ್ತೆಂದೂ ಹಿಂದಿನ ಕೆಲವು ಸಂದರ್ಭಗಳಲ್ಲಿ ಟೀಕೆ ಮಾಡಿದ್ದಾರೆ. ಪವಿತ್ರೋದ್ದೇಶ ಸುಪ್ರತಿಷ್ಠಿತವಾದಾಗ ಪ್ರತಿರೋಧದ ನುಡಿಗೆ ಬೆಲೆ ಇರದು. ನಿಷ್ಕಲ್ಮಷ ಬುದ್ಧಿಯಿಂದ ಕೈಗೊಂಡ ಉಪವಾಸ ವ್ರತ ಪವಿತ್ರ ಕರ್ತವ್ಯ ನಿರ್ವಹಣೆಯಾದಂತೆ, ಸ್ವಯಂಸಿದ್ಧ ಫಲ. ಅದರಿಂದಾಗುವ ಫಲಕ್ಕಾಗಿ ನಾವೆಂದೂ ಉಪವಾಸ ಕೈಗೊಳ್ಳುವುದಿಲ್ಲ. ನನಗೆ ಅತ್ಯಗತ್ಯವೆನಿಸಿದಾಗ ಎಂದಿಗೂ ಕೈಗೊಳ್ಳದಿರಲಾರೆ. ನಿರಾಗ್ರಹ ಬುದ್ಧಿಯಿಂದ ಸರ್ವರೂ ನನ್ನ ಉದ್ದೇಶವನ್ನು ಪರೀಕ್ಷಿಸಿರಿ. ಮೃತ್ಯು ಮುಖ ನಾಗಬೇಕಾದಲ್ಲಿ ಪ್ರಶಾಂತತೆಯ ಭರವಸೆಯನ್ನನುಗ್ರಹಿಸಿ. ಭಾರತದ ವಿನಾಶ, ಅದರೊಂದಿಗೆ ಹಿಂದೂ, ಸಿಕ್, ಇಸ್ಲಾಂ ಧರ್ಮಗಳ ವಿನಾಶಕ್ಕೆ ನಿಸ್ಸಹಾಯಕ ಸಾಕ್ಷಿಯಾಗುವುದಕ್ಕಿಂತ ನನಗೆ ಸಾವೇ ಭವ್ಯಮುಕ್ತಿ ಎನಿಸೀತು. ಪಾಕಿಸ್ತಾನ ಅನ್ಯಮತಾನುಯಾಯಿಗಳ ಸಮಾನ ಹಕ್ಕು ಬಾಧ್ಯತೆಗಳನ್ನೂ ಜೀವನ ಭರವಸೆಯನ್ನೂ ತುಳಿದುಬಿಟ್ಟರೆ, ಅಂತೆಯೇ ಭಾರತವೂ ಅನುಕರಿಸಿದರೆ ಈ ಸರ್ವ ನಾಶ ಖಂಡಿತ. ಇಸ್ಲಾಮ್ ಧರ್ಮ ಭಾರತ ಪಾಕಿಸ್ತಾನಗಳಲ್ಲಿ ಧ್ವಂಸವಾದೀತು ; ಮಿಕ್ಕ ಪ್ರಪಂಚದಲ್ಲಿ ಬದುಕೀತು. ಹಿಂದೂ, ಸಿಕ್ ಧರ್ಮಗಳಿಗೆ ಮಾತ್ರ ಮತ್ತಾವ ಆಶ್ರಯವೂ ಇಲ್ಲ. ಎಷ್ಟೇ ನಿಷ್ಠುರರಾದರೂ ಭಿನ್ನಾಭಿಪ್ರಾಯವುಳ್ಳವರ ಪ್ರತಿಭಟನೆ ಯನ್ನು ನಾನು ಗೌರವಿಸುತ್ತೇನೆ. ನಮ್ಮ ಪ್ರೀತಿಯ ಭಾರತಕ್ಕೊದಗಿರುವ ಅಧೋಗತಿಯನ್ನು ಚಿಂತಿಸಿ ನೋಡಿ. ಕೆಚ್ಚೆದೆಯ ಶಕ್ತನೂ ಬಹುಶಃ

ಅಷ್ಟೇ ಶುದ್ಧಾತ್ಮನೂ ಆದ ಭಾರತಾಂಬೆಯ ವಿನೀತ ಸುಪುತ್ರನೊಬ್ಬ ಈ ಮಹಾಬಲಿದಾನಕ್ಕೆ ಸಿದ್ಧನಾಗಿರುವುದು ನಿಮಗೆ ಹರ್ಷವನ್ನುಂಟು ಮಾಡೀತು. ಮಹಾ ಗುಣಗಳು ಅವನಲ್ಲಿಲ್ಲವಾದರೆ ಅವನು ಭೂಮಿಗೆ ಭಾರ ವಾದಾನು. ಎಷ್ಟು ತ್ವರೆಯಾಗಿ ಅವನು ಕಣ್ಮರೆಯಾಗುವನೋ ಅಷ್ಟು ಬೇಗ ಭಾರತಕ್ಕೆ ಹೊರೆ ಇಳಿದು ಅವನಿಗೂ, ಮಿಕ್ಕವರಿಗೂ ಕ್ಷೇಮವಾದೀತು.

ಬಿರ್ಲಾ ಭವನಕ್ಕೆ ಧಾವಿಸಬೇಡಿ; ನಿರ್ಣಯ ಬದಲಿಸಲು ಪ್ರಯತ್ನಿಸ ಬೇಡಿ, ನನ್ನ ಬಗ್ಗೆ ಆತಂಕಗೊಳ್ಳದಿರಿ; ಎಂದು ಸ್ನೇಹಿತರನ್ನು ಕೇಳಿಕೊಳ್ಳು ತ್ತೇನೆ. ನಾನು ಪರಮಾತ್ಮನ ಕೈಯಲ್ಲಿದ್ದೇನೆ. ನೀವೆಲ್ಲರೂ ಅಂತರ್ಮುಖಿಗ ಳಾಗಿ ಹೃದಯ ಪರೀಕ್ಷೆಮಾಡಿಕೊಳ್ಳುವುದೇ ಹೆಚ್ಚು ಸಮಂಜಸ. ನಮ್ಮೆಲ್ಲರ ಅಗ್ನಿಪರೀಕ್ಷೆ ನಡೆದಿದೆ. ನಿಷ್ಠರಾಗಿ ಕರ್ತವ್ಯ ಪಾಲನೆಯಲ್ಲಿ ತೊಡಗಿ ತಾವು ಕೈಗೊಂಡ ಕಾರ್ಯವನ್ನು ಹೆಚ್ಚು ಶ್ರದ್ಧೆಯಿಂದ ದಕ್ಷತೆಯಿಂದ ಸೂಕ್ಷ್ಮಬುದ್ಧಿಯಿಂದ ನೀವಿರುವಲ್ಲಿ ನಿರ್ವಹಿಸಿದರೆ ನನಗೂ ನನ್ನ ಮಹೋ ದ್ದೇಶಗಳಿಗೂ ಪೋಷಕವಾದೀತು. ಉಪವಾಸ ಆತ್ಮಶುದ್ಧಿಯ ವಿಧಾನ.

ಆಂಧ್ರದಿಂದ ಬಂದ ಎರಡು ಪತ್ರಗಳ ವಿಷಯ ಪ್ರಸ್ತಾಪಿಸಿದ್ದೆ. ನಿಸ್ಸೀಮ ದೇಶಭಕ್ತ ಕೊಂಡಾ ವೆಂಕಟಪ್ಪಯ್ಯಗಾರು ಅವರು ಬರೆದುದು ಒಂದು. ಅದರ ಕೆಲವು ಭಾಗಗಳನ್ನಿಲ್ಲಿ ಉದಾಹರಿಸುತ್ತೇನೆ :

ಮಿಕ್ಕ ಹಲವು ಸಂಕೀರ್ಣ ರಾಜಕೀಯ ಆರ್ಥಿಕ ಸಮಸ್ಯೆಗಳಲ್ಲದೆ ಇಂದು ಕಾಂಗ್ರೆಸ್ ವಲಯಗಳಲ್ಲಿ ಆಗಿರುವ ನೈತಿಕ ಅಧಃಪತನವೇ ಒಂದು ಮಹಾ ಸಮಸ್ಯೆ. ಇತರ ರಾಜ್ಯಗಳಲ್ಲಿ ಹೇಗೋ ಕಾಣೆ ನನ್ನ ಪ್ರಾಂತದಲ್ಲಂತೂ ದುಸ್ಸಹನೀಯ. ರಾಜ್ಯಾಧಿಕಾರದ ರುಚಿ ಅವರ ತಲೆ ತಿರುಗಿಸಿದೆ. ಹಲವು ಶಾಸನ ಸಭಾ ಸದಸ್ಯರು " ಸಮಯ ಸಿಕ್ಕಾಗ ತೂರಿಕೋ " ಎಂಬ ನೀತಿಯ ನ್ನನುಸರಿಸುತ್ತಿದ್ದಾರೆ. ನ್ಯಾಯಾಧಿಕಾರಿಯ ಸಮ್ಮುಖದಲ್ಲಿ ನಡೆಯುವ ದಂಡಶಾಸನ ನ್ಯಾಯಾಲಯದ ಆಡಳಿತದಲ್ಲಿ ಕೂಡ ಹಸ್ತಕ್ಷೇಪ ನಡೆಸುವ ವರೆಗೂ ಇಳಿದು ತಮ್ಮ ಪ್ರಭಾವದಿಂದ ಹಣ ಗಳಿಸುತ್ತಿದ್ದಾರೆ. ಜಿಲ್ಲಾಧಿ ಕಾರಿಗಳುಕೂಡ ಇಂಥ ಶಾಸನಕರ್ತರ ಪ್ರಭಾವಕ್ಕೆ ಬಲಿಯಾಗುವ ಭಯ ದಿಂದ ಕರ್ತವ್ಯ ನಿರ್ವಹಿಸಲು ಅಶಕ್ತರಾಗಿದ್ದಾರೆ. ಪ್ರಾಮಾಣಿಕನಾದ ಕರ್ತವ್ಯ ನಿಷ್ಠ ಅಧಿಕಾರಿಯ ವಿರುದ್ಧ ಇಂಥ ಧ್ಯೇಯರಹಿತ ಸ್ವಾರ್ಥಸಾಧಕರ

ದೂರು ಮಂತ್ರಿಗಳ ಕಿವಿಯನ್ನು ಸುಲಭವಾಗಿ ಮುಚ್ಚುತ್ತದೆ. ಅವರೂ ಆದನ್ನು ನಂಬುತ್ತಾರೆ.

"ಸ್ವರಾಜ್ಯಾಕಾಂಕ್ಷೆಯ ಜ್ವಾಲೆ ಆವರಿಸಿದ್ದಾಗ ನಿಮ್ಮನ್ನೆಲ್ಲರೂ ಹಿಂಬಾಲಿಸಿದರು. ಅದು ಸಿದ್ಧಿಸಿದ ಮೇಲೆ ಅನೇಕ ಸ್ವಾತಂತ್ರ್ಯಯೋಧರಲ್ಲೇ ನೈತಿಕ ನಿಯಮಗಳ ಪ್ರಭಾವ ಉಳಿದಿಲ್ಲ. ಹಿಂದೆ ಪ್ರತಿಗಾಮಿಗಳಾಗಿ ರಾಷ್ಟ್ರೀಯ ಚಳುವಳಿಯನ್ನೇ ಎದುರಿಸಿದ್ದವರೊಡನೆ ಒಂದಾಗಿದ್ದಾರೆ. ಅವರೂ ಸ್ವಾರ್ಥಸಾಧನೆಗಾಗಿ ಕಾಂಗ್ರೆಸ್ ಸದಸ್ಯರಾಗುತ್ತಿದ್ದಾರೆ. ಪರಿಸ್ಥಿತಿ ಅಸಹನೀಯವಾಗುತ್ತಿದೆ. ಕಾಂಗ್ರೆಸ್ಸೂ ಅದರ ಸರಕಾರವೂ ಅಪಖ್ಯಾತಿಗೊಳಗಾಗಿದೆ. ಕಾಂಗ್ರೆಸ್ಸು ಎಷ್ಟು ಬೇಗ ಎಷ್ಟು ಅಗಾಧವಾಗಿ ಪ್ರಭಾವ ಹೀನವಾಗುತ್ತಿದೆ ಎನ್ನುವುದಕ್ಕೆ ಮೊನ್ನೆ ನಡೆದ ಆಂಧ್ರದ ಪುರಸಭಾ ಚುನಾವಣೆಗಳೇ ಸಾಕ್ಷಿ. ಗುಂಟೂರಿನ ಪುರಸಭಾ ಚುನಾವಣೆಗಳನ್ನು ಮದರಾಸಿನ ಸ್ಥಳೀಯ ಸಚಿವರು ಹಠಾತ್ತನೆ ನಿಲ್ಲಿಸಲು ಆಜ್ಞೆಮಾಡಿಬಿಟ್ಟರು. ಎಲ್ಲ ಸಿದ್ಧತೆಗಳೂ ಆಗಿದ್ದುವು. ಕಳೆದ ಹತ್ತು ವರ್ಷಗಳಿಂದ ಅಲ್ಲಿ ನಾಮಕರಣ ಸದಸ್ಯರ ಪುರಸಭೆಯಿದ್ದು ಆಡಳಿತವೆಲ್ಲ ಒಬ್ಬ ಕಮೀಷನರ್ ಕೈಲಿದೆ. ಈಗ ಸರ್ಕಾರವೇ ಮತ್ತೆ ಹೊಸ ಸದಸ್ಯರನ್ನು ನಾಮಕರಣ ಮಾಡುವುದೆಂದು ವದಂತಿ ಹಬ್ಬಿದೆ. ನಾನು ವೃದ್ಧಾಪ್ಯದಿಂದ ಜರ್ಝರಿತನಾಗಿದ್ದೇನೆ. ಕಾಲು ಮುರಿದುಕೊಂಡು ಮನೆಯೊಳಗೇ ಊರುಗೋಲುಗಳ ಮೇಲೆ ಹರಿದಾಡುತ್ತಿರುವ ನನಗಾವ ಸ್ವಾರ್ಥಾಕಾಂಕ್ಷೆಯೂ ಇಲ್ಲ. ಆದರೆ ಇಂದು ಐಕ್ಯಹೀನವಾಗಿರುವ ಹಲವು ಪ್ರಾಂತೀಯ ಮತ್ತು ಜಿಲ್ಲಾ ಕಾಂಗ್ರೆಸ್ ಸಮಿತಿಗಳ ಬಗ್ಗೆ ನಾನು ತೀವ್ರ ಅಭಿಪ್ರಾಯಗಳನ್ನು ಹೊಂದಿದ್ದೇನೆ. ಅವುಗಳನ್ನು ವ್ಯಕ್ತಪಡಿಸದೆ ಗುಪ್ತವಾಗಿ ಇಟ್ಟಿಲ್ಲ.

"ಕಾಂಗ್ರೆಸ್ಸಿನೊಳಗಿನ ಭಿನ್ನತೆಗಳು, ಶಾಸಕರ ಹಣದಾಸೆ, ಮಂತ್ರಿಮಂಡಲಗಳ ದೌರ್ಬಲ್ಯ ಎಲ್ಲವೂ ಜನರಲ್ಲಿ ಅಧಿಕಾರ ಪ್ರತಿಘಟನೆಯ ಕಿಚ್ಚನ್ನು ಹೊತ್ತಿಸುತ್ತಿವೆ. ಬ್ರಿಟಿಷ್ ಸರಕಾರವೇ ಒಳಿತಾಗಿತ್ತೆಂದು ಜನ ನುಡಿಯಲಾರಂಭಿಸಿದ್ದಾರೆ; ಕಾಂಗ್ರೆಸ್ಸನ್ನು ಶಪಿಸುವುದಕ್ಕೂ ಆರಂಭಿಸಿದ್ದಾರೆ." ಈ ನಿಃಸ್ವಾರ್ಥ ದೇಶಭಕ್ತನ ನುಡಿಗಳನ್ನು ಆಂಧ್ರದವರೂ, ಇತರ ಪ್ರಾಂತಗಳವರೂ ವಿಚಾರಮಾಡಿ ನೋಡಲಿ. ಅವರು ಹೇಳಿರುವಂತೆ ಈ

ನೀತಿಭ್ರಷ್ಟತೆ ಆಂಧ್ರಕ್ಕೆ ಮಾತ್ರ ವಿಶೇಷವಲ್ಲ. ಆಂಧ್ರದ ಬಗ್ಗೆ ಅವರು ಅನುಭವವೇದ್ಯ ಸಾಕ್ಷ್ಯ ನುಡಿದಿದ್ದಾರೆ. ನಾವು ಎಚ್ಚರಗೊಳ್ಳಬೇಕು.

ಭವಾಲ್ಪುರದ ಸ್ನೇಹಿತರು ತಾಳ್ಮೆಯಿಂದಿರಲಿ. ಸರದಾರರು ಈ ಮಧ್ಯಾಹ್ನ ಬಂದಿದ್ದರು. ನಾನು ಮೌನವ್ರತದಿಂದ ಅನ್ಯ ಕೆಲಸದಲ್ಲಿದ್ದೆ. ಅವರಿಗೆ ಏನನ್ನೂ ಹೇಳಲಾಗಲಿಲ್ಲ. ಶ್ರೀ ಶಂಕರ್ ಕೂಡ ಕಾರ್ಯ ಭರದಲ್ಲಿದ್ದು ಬರಲಾಗಲಿಲ್ಲ. ನಿಮ್ಮ ಮನವಿಯನ್ನವರಿಗೆ ತಿಳಿಸಲಾರದಾದೆ, ಅವರಿಂದ ಸರದಾರರ ಅಮೂಲ್ಯ ಸಮಯವೂ ಉಳಿಯಿತೆಂದು ಭಾವಿಸುತ್ತೇನೆ.

(ಗಾಂಧೀಜೀ ಜನವರಿ ಹದಿಮೂರರ ಬೆಳಗ್ಗೆ ೧೧ ಘಂಟೆಗೆ ಉಪವಾಸ ವನ್ನಾರಂಭಿಸಿದರು. ಅದಕ್ಕೆ ಮುಂಚೆ ತಮ್ಮ ದಿನಚರಿಯಲ್ಲಿ ತೊಡಗಿ ಹಲವು ಮುಖ್ಯ ಕಾಗದಗಳನ್ನು ನೋಡಿದರು. ಕೆಲವು ಮಿತ್ರರನ್ನು ಭೇಟಿ ಯಾದರು. ನೆಹರೂ, ಪಟೇಲ್ ಮತ್ತು ಆಜಾದರು ದೀರ್ಘ ಮಾತುಕತೆ ನಡೆಸಿದರು. ಬಿರ್ಲಾ ಭವನದ ಆವರಣದ ಮೈದಾನದಲ್ಲಿ ಪ್ರಾರ್ಥನೆ ಯೊಡನೆ ಉಪವಾಸ ಪ್ರಾರಂಭವಾಯಿತು. ವಿವಿಧ ಮತಗಳಿಗೆ ಸೇರಿದ ಮಿತ್ರರೂ ಅನುಯಾಯಿಗಳೂ ಅವರ ಮಂಚದ ಸುತ್ತಲೂ ನೆರೆದಿದ್ದರು. "ನನ್ನೊಳಗೆ ನಾ ಸ್ಮರಿಸೆ ಅದ್ಭುತದ ಶಿಲುಬೆಯನು..." (When I survey the wondrous cross) ಎಂಬ ಇಂಗ್ಲಿಷ್ ಗೀತೆ, ನಂತರ ಕೊರಾನ್, ಗ್ರಂಥ್ ಸಾಹಿಬ್ ಮತ್ತು ಹಿಂದೂ ಭಕ್ತಿಗೀತಗಳು ಹಾಡಲ್ಪಟ್ಟವು.)

ದೇವದಾಸ್ ಗಾಂಧೀ ತಂದೆಗೆ ಹೀಗೆ ಬರೆದರು: "ನೀವು ಇಂದು ಕೈಗೊಳ್ಳುವ ಉಪವಾಸದ ವಿರುದ್ಧವಾಗಿ ನಾನು ಬಹಳ ಹೇಳುವುದಿದೆ. ನೀವು ಕೈಕೊಂಡಿರುವ ಧ್ಯೇಯ ಅನಂತ ತಾಳ್ಮೆಯದಾದರೂ ಕೊನೆಗೊಮ್ಮೆ ಅಸಹನೆಗೆ ವಶರಾದಿರಲ್ಲಾ, ಎಂಬುದೇ ನಿಮ್ಮ ಉಪವಾಸದ ವಿರುದ್ಧ ನನ್ನ ಪ್ರಧಾನವಾದ ಮತ್ತು ಮನಸ್ಸಿನ ಆತಂಕ. ನಿಮ್ಮ ಅಪರಿಮಿತ ತಾಳ್ಮೆ ಮತ್ತು ಅಗಾಧ ಶ್ರಮದಿಂದ ನೀವು ಎಂತಹ ಪ್ರಚಂಡ ವಿಜಯವನ್ನು ಸಾಧಿಸಿದ್ದೀರೆಂಬ ಅರಿವೇ ನಿಮಗಿಲ್ಲವೆಂಬಂತೆ ಕಾಣುತ್ತದೆ. ಅದು ಲಕ್ಷೋಪ ಲಕ್ಷ ಜನರ ಪ್ರಾಣವನ್ನುಳಿಸಿದೆ; ಮುಂದೆಯೂ ಕೋಟ್ಯಂತರ ಜೀವಗಳು

ಉಳಿದುಕೊಂಡಾವು. ಆದರೆ ನಿಮ್ಮ ಸೈರಣೆ ಹಠಾತ್ತನೆ ಸಿಡಿದುಹೋದಂತೆ ಭಾಸವಾಗುತ್ತದೆ. ಬದುಕಿ ನೀವು ಸಾಧಿಸಬಹುದಾದ ಮಹಾಸಾಧನೆಯ ಅರಿವು ನಿಮ್ಮ ಸಾವಿನಿಂದ ನಿಮಗಾಗಲಾರದು. ಉಪವಾಸವನ್ನು ನಿಲ್ಲಿಸಿ ಎಂದು ಕೈಜೋಡಿಸಿ ಪ್ರಾರ್ಥಿಸುತ್ತೇನೆ. ಕೃಪೆಮಾಡಿ ನನ್ನ ಪ್ರಾರ್ಥನೆಯನ್ನು ಮನ್ನಿಸಿ."

ಗಾಂಧೀಜೀ ಹೀಗೆ ಉತ್ತರ ಬರೆದರು :

ಇಂದು ನಾ ಕೈಕೊಂಡಿರುವ ಉಪವಾಸದ ನಿರ್ಧಾರ ಆತುರದಿಂದ ಕೂಡಿತ್ತೆಂಬ ನಿನ್ನ ವಾದವನ್ನು ಒಪ್ಪಲಾರೆ. ಕ್ಷಿಪ್ರ ನಿರ್ಧಾರ ಮಾಡಿದೆನೆಂಬುದರಲ್ಲಿ ಅನುಮಾನವಿಲ್ಲ. ನನ್ನ ಹೇಳಿಕೆ ಹೃದಯಮಂಥನದ, ಪ್ರಾರ್ಥನೆಯ ಫಲ. ಆದ್ದರಿಂದ ಯಾವ ಅರ್ಥದಲ್ಲೂ ಇದನ್ನು 'ಆತುರ' ಎನ್ನಲಾಗುವುದಿಲ್ಲ.

ಉಪವಾಸದ ಔಚಿತ್ಯವನ್ನು ಕುರಿತ ತರ್ಕಕ್ಕೆ ನಾವು ಕಿವಿಗೊಡಬೇಕಾದುದಿರಲಿಲ್ಲ. ವಾದವಿವಾದಗಳನ್ನು ಆಲಿಸಿದುದೇ ನನ್ನ ವಿನಯಪೂರ್ಣ ತಾಳ್ಮೆಯ ಕುರುಹು.

ನಿನ್ನ ಮನಃಕ್ಲೇಶ, ನಿನ್ನ ತರ್ಕ ನಿರರ್ಥಕವಾದುವು. ಸ್ನೇಹಿತನಂತೆ, ಅದರಲ್ಲೂ ಉದಾತ್ತ ಗೆಳೆಯನಂತೆ ನಿನ್ನನ್ನು ನಾನು ಕಾಣುತ್ತೇನೆ. ಸಹಜವಾಗಿ ನೀನು ವ್ಯಾಕುಲಗೊಂಡಿದ್ದೀಯ; ನಾನದನ್ನು ಗೌರವಿಸುತ್ತೇನೆ. ಆದರೆ ನಿನ್ನ ವಾದ ಅಸಹನೆಯನ್ನೂ, ವಿಚಾರದ ಸೋಗನ್ನೂ ಬಯಲಿಗೆಳೆದಿವೆ. ನನ್ನ ಈ ಹೆಜ್ಜೆ ಸೈರಣೆಯ ಬಗೆಗೆ ಕೊನೆಯ ಮಾತೆಂದೇ ನನ್ನ ಭಾವನೆ. ಧ್ಯೇಯವನ್ನೇ ವಿನಾಶ ಮಾಡುವಂಥ ತಾಳ್ಮೆ, ತಾಳ್ಮೆಯೋ ಅವಿವೇಕವೋ? ಹೇಗೆ ಭಾವಿಸುವೆ?

ದೆಹಲಿಗೆ ಬಂದಾಗಿನಿಂದಾಗಿರುವ ಸತ್ಪರಿಣಾಮಗಳಿಗೆ ನಾನು ಹೊಣೆ ಎಂದು ಹೇಳಲಾರೆ. ಅದು ಆತ್ಮವಂಚನೆಯಾದೀತು. ನನ್ನಿಂದ ಹೇಗೆ ಅನೇಕ ಪ್ರಾಣಗಳುಳಿದವು ಎನ್ನುವುದನ್ನು ಮನುಷ್ಯಮಾತ್ರದವನು ನಿರ್ಣಯಿಸಲಾರ. ಅದು ಸರ್ವಶಕ್ತ ಈಶ್ವರನಿಗೆ ಮಾತ್ರ ಅರಿವಾದೀತು. ಕಳೆದ ಸೆಪ್ಟಂಬರಿನಿಂದ ತಾಳ್ಮೆಯೇ ಮೂರ್ತಿವೆತ್ತಂತಿದ್ದವನಿಗೆ ಹಠಾತ್ತನೆ ಸೈರಣೆ ತಪ್ಪಿತು ಎಂದು ಹೇಳುವುದು ಕೇವಲ ಮೂರ್ಖತನವಾಗುವುದಿಲ್ಲವೇ?

ಮನುಷ್ಯ ಪ್ರಯತ್ನದ ಸರ್ವಶಕ್ತಿಯೂ ಬರಿದಾಗಿ ಅತ್ಯಂತ ನಿಸ್ಸಹಾಯಕತೆ ನನ್ನೆದುರಿಗೆ ನಿಂತಾಗ ಮಾತ್ರವೇ ನಾನು ಪರಮಾತ್ಮಶಕ್ತಿಯ ಮಡಿಲನ್ನಾಶ್ರಯಿಸಿದ್ದೇನೆ. ನನ್ನ ಉಪವಾಸದ ಆಂತರಿಕ ಸ್ವರೂಪ, ಅದರ ತಾತ್ವಿಕ ಹಿನ್ನೆಲೆ ಇದು. ಗಜೇಂದ್ರಮೋಕ್ಷದ ಪೌರಾಣಿಕ ಕಥೆಯನ್ನು ನೀನು ಓದಿ ಗಂಭೀರವಾಗಿ ಮನನ ಮಾಡಿದರೆ, ನನ್ನ ಹೆಜ್ಜೆಯ ಸರಿಯಾದ ಅರ್ಥವನ್ನರಿಯಲು ನಿನಗೆ ಸಾಧ್ಯವಾದೀತು.

ನಿನ್ನ ಪತ್ರದ ಕಡೆಯ ವಾಕ್ಯ ನಿನ್ನ ವಾತ್ಸಲ್ಯಭಾವದ ರಮಣೀಯ ಪ್ರತೀಕ. ಆದರೆ ನಿನ್ನ ಈ ವಾತ್ಸಲ್ಯ ಅಜ್ಞಾನಜನ್ಯ ಅಥವಾ ಮೋಹಜನ್ಯ. ಎಷ್ಟು ಜನ ಉಚ್ಚರಿಸಿದರೂ ಅಜ್ಞಾನ ಅಜ್ಞಾನವೆನಿಸದಿರಲಾರದು.

ಬದುಕು–ಸಾವುಗಳಿಗೆ ನಾವು ಬದ್ಧರಾಗಿರುವವರೆಗೂ, ಯಾವುದೋ ಧ್ಯೇಯ ಸಾಧನೆಗಾಗಿ ಜೀವ ಪೋಷಣೆ ಮಾಡುತ್ತೇನೆನ್ನುವುದು ವ್ಯರ್ಥ ಮಾತು. 'ದುಡಿಯುತ್ತಲೇ ಬದುಕು' ಎಂಬುದು ಸುಂದರ ನಾಣ್ನುಡಿ. ಆದರೆ ಅದೂ ದೋಷಪೂರ್ಣವೇ. ದುಡಿಮೆ ಅನಾಸಕ್ತಿಭಾವದಿಂದ ಪೂರಿತವಾಗಬೇಕು.

ನಿನ್ನ ಸಲಹೆಯನ್ನೇಕೆ ನಾನು ಅಂಗೀಕರಿಸಲಾರೆ ಎನ್ನುವುದು ಇದರಿಂದ ನಿನಗೆ ವೇದ್ಯವಾಗಿರಬೇಕು. ಉಪವಾಸ ನನಗೆ ದೈವಪ್ರೇರಿತ. ಅವನ ಇಚ್ಛೆಯನ್ನನುಸರಿಸಿ ಅವನಿಂದಲೇ ಅದರ ಮುಕ್ತಾಯ. ನನ್ನ ಜೀವವನ್ನು ಉಳಿಸಲಿ ಅಳಿಸಲಿ ಈಶ್ವರೇಚ್ಛೆ ಕಲ್ಯಾಣಕಾರಿಯೇ ಎಂದು ನಾವು ಕರ್ತವ್ಯನಿಷ್ಠೆಯಿಂದ ನಂಬಿ, ಹಾಗೆಯೇ ಆಚರಿಸುವುದು ನಮ್ಮ ಪಾಲಿನ ಕೆಲಸ. ಬದುಕುವ ಪ್ರಲೋಭನೆಗೆ ಗುರಿಯಾಗಿ, ದುಡುಕಿನಿಂದಾಗಲೀ ಅಪಕ್ವ ವಿಚಾರದಿಂದಾಗಲೀ ಉಪವಾಸವನ್ನು ನಿಲ್ಲಿಸದಂತೆ ಅಂತಃಶಕ್ತಿಯನ್ನು ದಯಪಾಲಿಸೆಂದು ದೇವದೇವನಲ್ಲಿ ನಾವೆಲ್ಲ ಮೊರೆಯಿಡೋಣ.

ಉಪವಾಸ ಪ್ರಾರಂಭವಾದೊಡನೆ ಭೇಟಿಯಾದ ಸಿಕ್ ಸ್ನೇಹಿತರೊಬ್ಬರಿಗೆ ಗಾಂಧೀಜೀ ಕೊಟ್ಟ ಉತ್ತರವೂ ಇಷ್ಟೇ ವಿಲಕ್ಷಣವಾದುದು : "ನನ್ನ ಉಪವಾಸ ಯಾರೊಬ್ಬರ ಅಥವಾ ಗುಂಪಿನ ಅಥವಾ ಪಕ್ಷದ ವಿರೋಧವಾಗಿಯೂ ಅಲ್ಲ ; ಆದರೂ ಅದು ಎಲ್ಲರನ್ನೂ ಒಳಗೊಂಡುದೇ. ಸರ್ವರ ಅಂತಃಸಾಕ್ಷಿಗೂ ಇದು ನನ್ನ ಬಿನ್ನಹ, ನೆರೆ ರಾಷ್ಟ್ರದ ಬಹು ಸಂಖ್ಯಾ

ತರಿಗೂ ಸೇರಿ. ಎಲ್ಲರೂ ಆಗಲೀ ಒಂದು ಪಂಗಡವಾಗಲೀ ಸಂಪೂರ್ಣವಾಗಿ ಒಪ್ಪಿ ನಡೆದಲ್ಲಿ ಪವಾಡವೇ ಸಂಭವಿಸೀತು. ಉದಾಹರಣೆಗೆ, ಸಿಕ್ಕರೆಲ್ಲರೂ ಐಕಮತ್ಯದಿಂದ ನನ್ನ ಮನವಿಯನ್ನು ಆಲಿಸಿದರೆ ನಾನು ತೃಪ್ತನಾಗುತ್ತೇನೆ. ಪಂಜಾಬಿಗೆ ಹೋಗಿ ಅವರ ಮಧ್ಯೆಯೇ ಜೀವಿಸಿಯೇನು. ಪರಾಕ್ರಮ ಶಾಲಿಗಳಾದ ಆ ಜನ ಶೂರರ ಅಹಿಂಸೆಯನ್ನು ಪ್ರಕಟಿಸಿ ಲೋಕಕ್ಕೆ ಮಾರ್ಗ ದರ್ಶಕರಾಗುವರೆಂದು ನಾನು ಬಲ್ಲೆ."೫೨

## ೫೩. ಆಕ್ಷೇಪಕರ ಕರ್ತವ್ಯ

[ಹಿಂದೂ ಮುಸ್ಲಿಂ ಸಖ್ಯಭಾವನೆಯನ್ನು ಸಾಧಿಸುವ ಏಕೈಕ ಗುರಿಯಿಂದ 'ಮಾಡು ಇಲ್ಲವೆ ಮಡಿ' ಎಂಬ ತಮ್ಮ ಸ್ಥಿರ ಪ್ರತಿಜ್ಞೆಗನುಗುಣವಾಗಿ ದೆಹಲಿ ಯಲ್ಲಿ ನೆಲೆಸಿದ ಗಾಂಧೀಜೀ ದಿನವೂ ಸಂಜೆ ಪ್ರಾರ್ಥನಾ ಪ್ರವಚನಗಳನ್ನು ನಡೆಸುತ್ತಿದ್ದರು. ಅವು 'ಡಿಲ್ಲಿ ದಿನಚರಿ' ಎಂಬ ಹೆಸರಿನಿಂದ ಸಂಕಲಿತ ವಾಗಿವೆ. ಇದರಡಿ ಇರುವ ಮತ್ತು ಮುಂದೆ ಬರುವ ಎಲ್ಲ ಭಾಗಗಳನ್ನೂ ಆ ಸಂಕಲನದಿಂದ ಆರಿಸಿ ಕೊಡಲಾಗಿದೆ.]

ಒಬ್ಬನೇ ಒಬ್ಬ ವ್ಯಕ್ತಿಯ ಆಕ್ಷೇಪಣೆಗೆ* ಕಿವಿಗೊಟ್ಟು ನಾನು ಸಾರ್ವ ಜನಿಕ ಪ್ರಾರ್ಥನಾ ಸಭೆಯನ್ನು ನಿಲ್ಲಿಸಿದುದು ಸರಿಯೆನಿಸಿದರೂ ಈ ವಿಷಯವನ್ನು ಕೂಲಂಕುಷವಾಗಿ ವಿಮರ್ಶಿಸುವುದು ಅನುಚಿತವಲ್ಲ. ಯಾರ ಪ್ರವೇಶಕ್ಕೂ ನಿಷೇಧವಿರಲಿಲ್ಲ. ಅಷ್ಟರಿಂದ ಮಾತ್ರ ಪ್ರಾರ್ಥನೆ ಸಾರ್ವಜನಿಕವಾಗಿತ್ತು. ಅದು ನಡೆದದ್ದು ಖಾಸಗಿಯವರ ಆವರಣದಲ್ಲಿ. ಅಂಥ ಸ್ಥಳದಲ್ಲಿ ನಡೆದ ಸಭೆಗೆ ಹೋಗುವವರು ಅಲ್ಲಿ ನಡೆಯುವ ಪ್ರಾರ್ಥನೆಯಲ್ಲಿ, ಕೊರಾನ್ ಪಠಣವೂ ಸೇರಿ, ಶ್ರದ್ಧೆ ಇದ್ದವರೇ ಆಗಿರಬೇ ಕಾದುದು ಸಭ್ಯತೆಯ ನಿಯಮ. ಸಾರ್ವಜನಿಕ ಸ್ಥಳಗಳಲ್ಲಾಗುವ ಪ್ರಾರ್ಥನೆಗೂ ಇದೇ ನಿಯಮ ಅಗತ್ಯ. ಪ್ರಾರ್ಥನಾ ಸಭೆ ಚರ್ಚಾ ಕೂಟ ವಲ್ಲ. ವಿವಿಧ ಮತಾನುಯಾಯಿಗಳ ಪ್ರಾರ್ಥನೆ ಒಂದೇ ವೇದಿಕೆಯ

---

* ಕೊರಾನ್ ಪಠನೆಗೆ ಆಕ್ಷೇಪಣೆಯನ್ನು ಒಬ್ಬಾತ ಎತ್ತಿದ್ದ.

ಮೇಲೆ ನಡೆಯುವುದು ತಪ್ಪೇನಲ್ಲ. ತಮಗೆ ಅಸಮ್ಮತವಾಗುವ ಪ್ರಾರ್ಥನೆಯಲ್ಲಿ ಭಾಗವಹಿಸಲು ಹೋಗದೇ ಇರುವುದು ಸದ್ವರ್ತನೆ. ತದ್ವಿರುದ್ಧವಾಗಿ ವರ್ತಿಸುವುದರಿಂದ ಯಾವ ಸಭೆಯೂ ಶಾಂತವಾಗಿ ನಡೆಯುವುದು ದುಸ್ತರವಾಗುತ್ತದೆ. ಸಭಾ ಸ್ವಾತಂತ್ರ್ಯವಾಗಲೀ ವಾಕ್ ಸ್ವಾತಂತ್ರ್ಯವೇ ಆಗಲೀ ಇಂಥ ಅಸಭ್ಯತೆಯಿಂದ ಕೇವಲ ಹಾಸ್ಯಾಸ್ಪದವಾದೀತು. ಯಾವ ಸಭ್ಯ ಸಮಾಜದಲ್ಲೂ ಇಂಥ ಪ್ರಾಥಮಿಕ ಹಕ್ಕುಗಳ ಅನುಷ್ಠಾನಕ್ಕೆ ಶಸ್ತ್ರ ರಕ್ಷಣೆಯ ಆವಶ್ಯಕತೆ ಇರಬಾರದು. ಸಾರ್ವತ್ರಿಕ ಸಮ್ಮತಿ ಸಹಜವಾಗ ಬೇಕು.

## ಹಿತಕರ ಸಹಿಷ್ಣುತೆ

ಕಾಂಗ್ರೆಸ್ಸಿನ ವಾರ್ಷಿಕಾಧಿವೇಶನದ ವಸ್ತುಪ್ರದರ್ಶನಗಳ ಆವರಣದಲ್ಲಿ ವಿವಿಧ ಮತ ಪಂಗಡಗಳು, ಭಿನ್ನ ಭಿನ್ನ ರಾಜಕೀಯ ಪಕ್ಷಗಳ ಸಭೆಗಳು ಎಷ್ಟೇ ವಿರೋಧಾಭಿಪ್ರಾಯಗಳನ್ನು ವ್ಯಕ್ತಪಡಿಸಿದರೂ ಯಾವ ಅಸಭ್ಯ ಗದ್ದಲಕ್ಕೂ ಎಡೆಗೊಡದೆ ಯಾವ ಪೋಲೀಸರ ಸಹಾಯವೂ ಇಲ್ಲದೆ ನಡೆಯುತ್ತಿದ್ದುದನ್ನು ನೋಡಿ ನಾನು ವಿಶೇಷ ಹರ್ಷಿತನಾಗುತ್ತಿದ್ದೆ. ಈ ಮೂಲ ನಿಯಮಕ್ಕೆ ಅಪವಾದಗಳಾದುದೂ ಉಂಟು. ಅಂಥ ಸಮಯಗಳಲ್ಲಿ ಉಗ್ರವಾದ ಸಾರ್ವಜನಿಕ ಪ್ರತಿಭಟನೆ ವ್ಯಕ್ತವಾಗುತ್ತಿತ್ತು. ಅಂಥ ಹಿತಕರ ಸಹಿಷ್ಣುತೆ ಈಗೆಲ್ಲಿ ಮಾಯವಾಯಿತು? ಸ್ವಾತಂತ್ರ್ಯ ಸಿದ್ಧಿಯನ್ನು ಅದರ ದುರುಪಯೋಗದಿಂದಲೇ ನಾವು ಪರೀಕ್ಷೆ ಮಾಡುವಂತಿದೆ. ಈ ದೌರ್ಭಾಗ್ಯ ಪ್ರಕರಣ ದೇಶದ ಬಾಳಿನಲ್ಲಿ ಕ್ಷಣಿಕ ಪ್ರಸಂಗವಾದೀತೆಂದು ಹಾರೈಸೋಣ.

ನೀವು ಆಗಾಗ ನನಗೆ ಪ್ರತ್ಯುತ್ತರ ಕೊಟ್ಟಿರುವಂತೆ, ಇದೆಲ್ಲಾ ಮುಸ್ಲಿಂ ಲೀಗಿನ ದುರ್ವರ್ತನೆ ಎಂದು ನುಡಿಯುದಿರಿ, ಹಾಗಾದರೂ ನಮ್ಮ ಮತೀಯ ಸಹಿಷ್ಣುತೆ ಯಾವುದೋ ಅಸಹಜ ದಬ್ಬಾಳಿಕೆಯಿಂದ ಒಡೆದು ಹೋಗುವಷ್ಟು ದುರ್ಬಲವೇ? ಸಭ್ಯತೆ, ಸಹಿಷ್ಣುತೆ ಯಾವ ಕಟುತರ ಒತ್ತಡಕ್ಕೂ ಬಗ್ಗದಷ್ಟು ಅಪ್ರತಿಹತವಾದಾಗ ಮಾತ್ರ ಅದಕ್ಕೆ ಬೆಲೆಯುಂಟು. ಹಾಗಿಲ್ಲದೆ ಹೋದರೆ ಭಾರತಕ್ಕಂದು ದುರ್ದಿನ. ನಾವು

ಸ್ವಾತಂತ್ರ್ಯಕ್ಕೆ ಅನರ್ಹರು ಎನ್ನುವ ವಿರೋಧಿಗಳ ಮೂದಲಿಕೆಗೆ ಪಕ್ಕಾಗದಿರೋಣ. ಇಂಥವರು ಬಹಳ ಮಂದಿ ಇದ್ದಾರೆ. ಇಂಥ ಕುತರ್ಕ ವನ್ನು ಎದುರಿಸಲು ಸಾಕಷ್ಟು ವಾದ ಮಾಡಬಹುದು; ಆದರೆ ಅದರಿಂದೇನು ಸಮಾಧಾನ? ನಮ್ಮ ಸಹಿಷ್ಣುತಾಪೂರ್ಣ ಐಕ್ಯ ಸಂಸ್ಕೃತಿ ಸ್ವತಃಸಿದ್ಧ ವಲ್ಲವೆಂದರೆ ಭಾರತದ ಅಸಂಖ್ಯ ಕೋಟಿ ಜನತೆಯ ಪ್ರೇಮಿಯಾದ ನನ್ನ ಸ್ವಾಭಿಮಾನಕ್ಕೆ ಆಘಾತವಾದೀತು.

ಭಾರತ ವಿಫಲವಾದರೆ ಏಷ್ಯಾ ನಾಶವಾಗುತ್ತದೆ. ಹಲವು ಸಮ್ಮಿಳಿತ ಸಂಸ್ಕೃತಿಗಳ ತೊಟ್ಟಿಲು ಎಂಬ ಹೆಸರು ಈ ದೇಶಕ್ಕೆ ಅನ್ವರ್ಥವಾದುದು. ಏಷ್ಯಾ, ಆಫ್ರಿಕ ಹಾಗೂ ನಿಖಿಲ ವಿಶ್ವದಲ್ಲಿನ ಶೋಷಿತ ಜನಾಂಗಗಳಿಗೆಲ್ಲ ಭಾರತ ಆಶಾಕಿರಣವಾಗಿ ಬಾಳಲಿ.

## ರಹದಾರಿ ಪಡೆಯದ ಶಸ್ತ್ರಗಳು

ರಹದಾರಿ ಪಡೆಯದ, ಬಚ್ಚಿಟ್ಟ ಅಸ್ತ್ರಸಂಗ್ರಹಣೆಯ ಭಯಾನಕ ಭೂತ ಕುರಿತು ಇಲ್ಲಿ ಪ್ರಸ್ತಾಪಿಸಬೇಕು. ಕೆಲವು ಶಂಕೆಗೆಡೆಯಿಲ್ಲದಂತೆ ಪತ್ತೆಯಾಗಿವೆ. ಕೆಲವರು ಸ್ವಯಂಪ್ರೇರಿತರಾಗಿ ಜಿನುಗು ಹನಿಯಂತೆ ಒಂದೊಂದನ್ನೇ ನನ್ನಲ್ಲಿ ತಂದುಕೊಡುತ್ತಲೂ ಇದ್ದಾರೆ. ಸರ್ವ ಪ್ರಯತ್ನ ದಿಂದ ಇದು ಆಮೂಲಾಗ್ರವಾಗಿ ಪತ್ತೆ ಹಚ್ಚಲ್ಪಡಲಿ. ನನಗೆ ತಿಳಿದಂತೆ ಈವರೆವಿಗೆ ಒಟ್ಟುಗೂಡಿಸಿರುವ ರಾಶಿ ದೆಹಲಿಯಂತಹ ನಗರಕ್ಕೆ ಅತ್ಯಲ್ಪ. ಬ್ರಿಟಿಷರ ಆಳ್ವಿಕೆಯಲ್ಲೂ ಅಕ್ರಮವಾಗಿ ಅಸ್ತ್ರಗಳನ್ನು ಹೊಂದಿರುತ್ತಿದ್ದರು. ಆಗ ಯಾರಿಗೂ ಭಯವಿರಲಿಲ್ಲ. ಯಾವ ಸ್ಥಳದಲ್ಲಿ ಅವುಗಳನ್ನು ಸಂಗ್ರಹಿ ಸಿಟ್ಟಿದ್ದಾರೆಂಬುದು ನಿಮಗೆ ಖಚಿತವಾಗಿ, ಅನುಮಾನಕ್ಕಾಸ್ಪದವಿಲ್ಲದಂತೆ ತಿಳಿದಲ್ಲಿ, ಮದ್ದು ಗುಂಡುಗಳ ಅಕ್ರಮ ಉಗ್ರಾಣಿಗಳಿಗೆಲ್ಲ ಬೆಂಕಿ ಹಚ್ಚಿ ನಾಶಮಾಡಿಬಿಡಿ. ಅಗಾಧ ಆರ್ಭಟಮಾಡಿ ಅತಿಸ್ವಲ್ಪ ಸಂಗ್ರಹಿಸುವ ಕಾರ್ಯವನ್ನು ಮತ್ತೆ ಮಾಡಬೇಡಿ. ಬ್ರಿಟಿಷರಿಗೆ ಬೋಧಿಸಿದ ನೀತಿಯೇ ಒಂದು, ನಾವು ರಾಜಕೀಯ ಸ್ವಾತಂತ್ರ್ಯಗಳಿಸಿದ ಮೇಲೆ ನಮಗೇ ಮತ್ತೊಂದು, ಹೀಗಾಗದಿರಲಿ. ಹಿಡಿದು ಬಡಿಯುವುದಕ್ಕಾಗಿ ನಾಯಿ ಗೊಂದು ಕೆಟ್ಟ ಹೆಸರಿಟ್ಟಂತೆ ಮಾಡಲಾಗದು. ಅರವತ್ತು ವರ್ಷಗಳ ಸತತ ಸಂಗ್ರಾಮದಿಂದ ಗಳಿಸಿದ ಸ್ವಾತಂತ್ರ್ಯಕ್ಕೆ ಅರ್ಹರೆನಿಸಿಕೊಳ್ಳಲು ನಮ್ಮ

ಕಷ್ಟ ಪರಂಪರೆಗಳನ್ನೆಲ್ಲ ಅವೆಷ್ಟೇ ಕಠಿಣತಮವಾಗಿರಲಿ, ನಿರ್ಭೀತರಾಗಿ ಎದುರಿಸುವುದು ಅತ್ಯಗತ್ಯ. ಪ್ರತ್ಯಕ್ಷ ಸಾಹಸದಿಂದ ಎದುರಿಸುವುದರಿಂದ ನಾವು ಹೆಚ್ಚು ಸುದೃಢರಾದೇವು, ಹೆಚ್ಚು ಶೀಲವಂತರಾದೇವು.[೫೪]

## ಬಹುಸಂಖ್ಯಾತರ ಕರ್ತವ್ಯ

ಅಲ್ಪಸಂಖ್ಯಾತ ಜನಾಂಗದ ಪ್ರತಿಯೊಬ್ಬರೂ ರಾಷ್ಟ್ರ ದ್ರೋಹಿಗಳಾದಾರೆಂಬ ಹೆದರಿಕೆಯಿಂದ ಅವರೆಲ್ಲರನ್ನೂ ಕೊಲ್ಲುವುದಾಗಲೀ ದೇಶಭ್ರಷ್ಟರನ್ನಾಗಿಮಾಡಿ ಓಡಿಸುವುದಾಗಲೀ ಬಹುಸಂಖ್ಯಾತರ ಹೇಡಿ ವರ್ತನೆ ಎನ್ನುವುದು ಖಚಿತ. ಅಲ್ಪಸಂಖ್ಯಾತರ ಹಕ್ಕುಗಳನ್ನು ಅತ್ಯಂತ ಎಚ್ಚರಿಕೆಯಿಂದ ಗೌರವಿಸುವುದೇ ಬಹುಸಂಖ್ಯಾತ ಪಕ್ಷಕ್ಕೆ ಭೂಷಣ. ಇದನ್ನು ಉಪೇಕ್ಷಿಸುವುದು ಬಹುಸಂಖ್ಯಾತರನ್ನು ಅಪಹಾಸ್ಯಕ್ಕೆ ಗುರಿಮಾಡೀತು. ದೃಢ ಆತ್ಮನಿಷ್ಠೆ ನಿಜವಾದ ಅಥವಾ ಭ್ರಮಿಸಿದ ಎದುರಾಳಿಯಲ್ಲಿ ನಿರ್ಭೀತ ನಂಬುಗೆ ಇವು ಉತ್ಕೃಷ್ಟ ರಕ್ಷೆ. ಆದ್ದರಿಂದ ಅತ್ಯಂತ ಶ್ರದ್ಧಾಪೂರ್ವಕವಾಗಿ "ಹಿಂದೂ ಮುಸಲ್ಮಾನ ಸಿಕ್ಕರೆಲ್ಲರೂ ಒಟ್ಟುಗೂಡಿ, ಸ್ನೇಹಾಲಿಂಗನದಿಂದ ಭಾರತಕ್ಕೆಲ್ಲ, ಅಷ್ಟೇ ಅಲ್ಲ ಇಡೀ ಪ್ರಪಂಚಕ್ಕೆ ಮಾರ್ಗದರ್ಶಕ ಆದರ್ಶವಾಗಿ" ಎಂದು ನಾನು ಬಿನ್ನವಿಸಿಕೊಳ್ಳುತ್ತಿದ್ದೇನೆ. ಭಾರತದ ಮಿಕ್ಕ ಕಡೆಗಳಲ್ಲಾಗಿದ್ದನ್ನೂ ಆಗುತ್ತಿರುವುದನ್ನೂ ದೆಹಲಿ ನಗರ ಮರೆಯಬೇಕು. ವೈಯುಕ್ತಿಕ ಸೇಡು ತೀರಿಸುವ ಹಾಗೂ ಪ್ರತೀಕಾರದ ವಿಷವೃಕ್ಷವನ್ನು ನಾಶಮಾಡಿದ ಹೆಮ್ಮೆಯ ಗೌರವಕ್ಕೆ ಆಗಲೇ ಅದು ಪಾತ್ರವಾದೀತು. ಇಂಥ ಪ್ರತೀಕಾರ ಮಾಡಬಲ್ಲ ಶಕ್ತಿ ಯಾವುದಾದರೂ ಇದ್ದರೆ ಅದು ರಾಷ್ಟ್ರದ ಅಧಿಕಾರ ವ್ಯಾಪ್ತಿಯೊಳಗಿದ್ದೀತೇ ಹೊರತು ಅದು ಎಂದಿಗೂ ಜನತೆಯ ವೈಯುಕ್ತಿಕ ಸ್ವತ್ತಾಗಬಾರದು.

# ೫೪. ಭ್ರಾತೃಘಾತಕತೆಯ ಫಲ

ಸೋದರ ರಾಷ್ಟ್ರಗಳ* ನಡುವೆ ಯುದ್ಧ ಸಂಭವದ ಮಾತನ್ನು ನಾನು ಆಡಿದುದು ಪಶ್ಚಿಮ ರಾಷ್ಟ್ರಗಳಲ್ಲಿ ಭಯ ಹುಟ್ಟಿಸಿದೆ ಎಂದು ತಿಳಿದು ಬಂದಿದೆ. ಪತ್ರಿಕಾ ಪ್ರತಿನಿಧಿಗಳು ವಿದೇಶಗಳಿಗೆ ಯಾವ ವರದಿಗಳನ್ನು ಕಳುಹಿಸಿರುವರೋ ನಾನರಿಯೆ. ಸಂಗ್ರಹಿಸಿ ಅಡಕ ಮಾಡುವ ಸಾಹಸ ಮಾತನಾಡುವವರ ಮನಸ್ಸಿನ ನಿಜ ಪ್ರತಿಬಿಂಬವಾಗದಿದ್ದಲ್ಲಿ ಯಾವಾಗಲೂ ಅಪಾಯಕಾರಿ. ೧೮೯೬ರಲ್ಲಿ ನಾನು ದಕ್ಷಿಣ ಆಫ್ರಿಕಾದಲ್ಲಿದ್ದಾಗ ನನ್ನ ಕಿರು ಹೊತ್ತಗೆಯೊಂದರ ಅನಧಿಕೃತ ಸಾರಾಂಶವನ್ನು ಯಾರೋ ಪ್ರಕಟಿಸಿದ ಕಾರಣಕ್ಕಾಗಿ ನನ್ನ ಪ್ರಾಣಕ್ಕೇ ಅಪಾಯವೊದಗಿತ್ತು. ಸ್ವೇಚ್ಛಾ ತೀರ್ಪಿನ ಶಿಕ್ಷೆಗೆ ಗುರಿಯಾಗಿ ಇಪ್ಪತ್ತುನಾಲ್ಕು ಗಂಟೆಗಳು ಕಳೆಯುವದರೊಳಗಾಗಿ ದಕ್ಷಿಣ ಆಫ್ರಿಕದ ಯೂರೋಪಿಯನ್ನರ ಕೋಪವಳಿದು ಪಶ್ಚಾತ್ತಾಪ ದಿಂದ ಪರಿತಪಿಸುವಷ್ಟು ಮಟ್ಟಿಗೆ ಆ ಸಂಕ್ಷಿಪ್ತ ವರದಿ ನಿರಾಧಾರವಾಗಿ ಬಿಟ್ಟಿತ್ತು. ಇದರ ನೀತಿಪಾಠವಿಷ್ಟೆ; ನುಡಿಯದ ಮಾತಿಗಾಗಿ ಅಥವಾ ಮಾಡದ ಕ್ರಿಯೆಯಾಗಿ ಯಾರನ್ನೂ ಜವಾಬುದಾರರನ್ನಾಗಿ ಪರಿಗಣಿಸ ಲಾಗದು.

ನಾನು ಯುದ್ಧದ ಮಾತನ್ನು ಬಳಸಿದ್ದರೆ ಅದನ್ನು ಭಾರತ ಮತ್ತು ಪಾಕಿಸ್ತಾನದ ಮಧ್ಯೆ ಯುದ್ಧ ಪ್ರಚೋದಿಸುವುದಕ್ಕಾಗಲೀ ಅಥವಾ ಅಂಥ ಯುದ್ಧದ ಸಮರ್ಥನೆಗಾಗಲೀ ಅರ್ಥ ಬರುವಂತೆ ಎಂದಿಗೂ ಖಂಡಿತವಾಗಿ ಉಪಯೋಗಿಸಿಲ್ಲವೆಂದು ಹೇಳಬಲ್ಲೆ. ಹಾಗಾದರೆ ಯುದ್ಧದ ಹೆಸರನ್ನು ಹೇಳುವುದೇ ಬಹಿಷ್ಕೃತವಾದೀತು. ಹಸುಗೂಸೊಂದರ ಬಾಯಿ ಯಲ್ಲಿ ಬಂದುದಾದರೂ ಹಾವಿನ ಮಾತನ್ನು ಮನೆಯೊಳಗಾಡಿದರೆ ಹಾವೇ ಪ್ರತ್ಯಕ್ಷವಾಗಿ ಬಂದುಬಿಡುವುದೆಂಬ ಮೂಢ ನಂಬಿಕೆಯೊಂದು ನಮ್ಮಲ್ಲಿದೆ. ಯುದ್ಧದ ಬಗ್ಗೆ ಅಂಥ ಕುರುಡು ನಂಬಿಕೆಯನ್ನಾರೂ ಭಾರತದಲ್ಲಿ ಹೊಂದಿರಲಾರರೆಂದು ನಾನು ನಂಬಿದ್ದೇನೆ.

* ಭಾರತ ಮತ್ತು ಪಾಕಿಸ್ತಾನಗಳು.

ನಮ್ಮೆರಡು ಸೋದರ ರಾಷ್ಟ್ರಗಳ ಮಧ್ಯೆ ಉದ್ಭವಿಸಿರುವ ಪ್ರಕೃತ ಪರಿಸ್ಥಿತಿಯನ್ನು ವಿಮರ್ಶೆ ಮಾಡುತ್ತಾ, ಅವೆರಡರ ಮಧ್ಯೆ ಯುದ್ಧ ಪ್ರಚೋದಕ ಘಟನೆಗಳು ಹೇಗೆ ಬಂದೊದಗಬಹುದೆಂಬುದನ್ನು ಖಚಿತ ವಾಗಿ ತಿಳಿಸಿ, ನಾನು ಎರಡು ರಾಷ್ಟ್ರಗಳಿಗೂ ಉಪಕಾರ ಮಾಡಿದ್ದೇನೆಂದು ಹೇಳಬಯಸುತ್ತೇನೆ. ಇದು ಯುದ್ಧ ಪ್ರಚೋದನೆಯ ಕಾರ್ಯವಲ್ಲ ಕೊನೆಯವರೆಗೂ ಯುದ್ಧ-ನಿರೋಧಕ್ಕಾಗಿಯೇ ಕೈಗೊಂಡ ಕಾರ್ಯ. ಈ ಅಮಾನುಷ ಖೂನಿಗಳೂ, ದರೋಡೆಗಳೂ, ದಂಗೆ, ದಹನಗಳೂ ಮುಂದು ವರಿದರೆ ಸರಕಾರಗಳಿಗೆ ಬೇರಾವ ಉಪಾಯವೂ ಉಳಿಯದಂತಾಗುವು ದೆಂದೂ ನಾನು ವಾದಿಸಿ ತೋರಿಸಲು ಪ್ರಯತ್ನಪಟ್ಟೆ. ಒಂದರಿಂದೊಂದು ಸಂಭವಿಸುವ ನಿಯಮಬದ್ಧ ಘಟನಾ ಪರಂಪರೆಯ ಅನಿವಾರ್ಯತೆಯ ಕಡೆಗೆ ಸಾರ್ವಜನಿಕ ದೃಷ್ಟಿಯನ್ನೆಳೆದುದು ತಪ್ಪಾದೀತೇ?

ಈ ಭ್ರಾತೃಘಾತಕ ವಿಧ್ವಂಸಕ ವೃತ್ತಿ ಕೊನೆಗೆ ಯುದ್ಧದಲ್ಲಿ ಪರ್ಯವಸಾನವಾಗದಂತೆ ಖಚಿತವಾಗಿ ತಡೆಗಟ್ಟಲು ನನ್ನ ಸರ್ವ ಶಕ್ತಿ ಯನ್ನೂ ವಿನಿಯೋಗಿಸಿದ್ದೇನೆ, ವಿನಿಯೋಗಿಸುತ್ತಿದ್ದೇನೆ ಎಂದು ಭಾರತ ಬಲ್ಲುದು; ವಿಶ್ವವೂ ಇದನ್ನು ಅರಿಯಬೇಕು. ಮಾನವ ಕುಲದ ಪರಮ ಧರ್ಮವೇ ಅಹಿಂಸೆ ಎಂಬ ದೃಢವ್ರತ ತೊಟ್ಟ ಮನುಷ್ಯನೊಬ್ಬ ಯುದ್ಧದ ಬಗ್ಗೆ ಮಾತನಾಡುವ ಸಾಹಸಮಾಡಿದರೆ, ಅದನ್ನು ತಡೆಗಟ್ಟುವ ಭಗೀರಥ ಪ್ರಯತ್ನದಲ್ಲಿ ತನ್ನ ಕಟ್ಟಕಡೆಯ ಶಕ್ತಿ ಬಿಂದುವನ್ನೂ ವಿನಿಯೋಗಿಸುವ ಸಂಕಲ್ಪಕ್ಕಾಗಿಯೇ ಮಾಡಿಯಾನು. ನಾನು ಅಂಗೀಕರಿಸಿ ನನ್ನ ಕಡೆ ಯುಸಿರಿನ ಘಳಿಗೆಯವರೆವಿಗೂ ಅಚಲವಾಗಿ ನಡೆಯುವೆನೆಂದು ನಂಬಿರುವ ತಾತ್ವಿಕ ಆಧಾರಸ್ತಂಭವೇ ಇಂಥದು.೫೪

## ೫೫. ಅನ್ನದ ಸಮಸ್ಯೆ

ನಮ್ಮ ಆಹಾರದ ಉತ್ಕಟ ಪರಿಸ್ಥಿತಿಯ ಬಗ್ಗೆ ತಮ್ಮ ಸಲಹೆಗಳನ್ನು ಕೊಡಲು ಡಾ. ರಾಜೇಂದ್ರ ಪ್ರಸಾದರಿಂದ ಆಹ್ವಾನಿಸಲ್ಪಟ್ಟವರಾಗಿ ಅನ್ನ ಸಮಸ್ಯೆಯ ವಿವಿಧ ಮುಖಗಳನ್ನೆಲ್ಲ ಚೆನ್ನಾಗಿ ಅರಿತಿರಬೇಕಾದವರು ಸಭೆ

ಸೇರಿದ್ದಾರೆ. ಈ ಅತಿ ಮುಖ್ಯ ವಿಷಯದಲ್ಲಿ ಯಾವುದಾದರೂ ಪ್ರಮಾದ ಉಂಟಾದಲ್ಲಿ ತಪ್ಪಿಸಬಹುದಾಗಿದ್ದರೂ ಕೋಟ್ಯಂತರ ಜನ ಹಸಿವಿನಿಂದ ಸಾಯಬೇಕಾದ ಘಟನೆ ಒದಗಬಹುದು. ಹತ್ತಾರು ಸಾವಿರ ಜನ ಹಸಿವಿನಿಂದ ಸಾಯುವುದು ಭಾರತದಲ್ಲಿ ಅಪರೂಪವಲ್ಲ; ಪ್ರಕೃತಿ ಜನ್ಯ ಅಥವಾ ಮಾನವೀಕೃತ ಕ್ಷಾಮಗಳಿಂದ ಇದು ಸಂಭವಿಸುತ್ತದೆ. ಒಂದು ಸುವ್ಯವಸ್ಥಿತ ಸಮಾಜದಲ್ಲಿ ನೀರಿನ ಅಥವಾ ಆಹಾರದ ಅಭಾವವನ್ನು ಯಶಸ್ವಿಯಾಗಿ ನಿವಾರಿಸಿಕೊಳ್ಳಲು ಪೂರ್ವಯೋಜಿತ ವಿಧಾನಗಳು ಯಾವಾಗಲೂ ಇರಬೇಕು. ಆದರೆ ಅಂಥ ಸಮಾಜವನ್ನು ವರ್ಣಿಸುವುದಕ್ಕಾಗಲೀ ಅದು ಹೇಗೆ ಪರಿಸ್ಥಿತಿಯನ್ನೆದುರಿಸೀತೆಂದು ಹೇಳಲಾಗಲೀ ಇದು ಸಮಯವಲ್ಲ. ಇಂದಿನ ಪ್ರಸಕ್ತ ಸನ್ನಿವೇಶದಲ್ಲಿ ಆಹಾರದ ಉತ್ಕಟ ಪರಿಸ್ಥಿತಿಯನ್ನು ಜಯಿಸುವ ಆಕಾಂಕ್ಷೆಯನ್ನುಳಿಸುವಂತೆ ಎದುರಿಸಲು ಸಾಧ್ಯ ಎನ್ನುವುದೇ ನಮ್ಮ ಚಿಂತೆ.

## ಸ್ವಾವಲಂಬನೆ

ಇದು ಸಾಧ್ಯ ಎಂದು ನನ್ನ ಭಾವನೆ, ನಾವು ಕಲಿಯಬೇಕಾದ ಪ್ರಥಮ ಪಾಠ ಆತ್ಮ ಸಹಾಯ ಮತ್ತು ಸ್ವಾವಲಂಬನೆ. ಈ ಪಾಠವನ್ನು ನಾವು ಅರಗಿಸಿಕೊಂಡಲ್ಲಿ ವಿದೇಶಿಗಳ ಮೇಲಿನ ವಿಪತ್ಕಾರಕ ಅವಲಂಬನೆಯಿಂದ ಮತ್ತು ಕಟ್ಟಕಡೆಗೊದಗುವ ದಿವಾಳಿಯಿಂದ ನಾವು ಪಾರಾಗಬಲ್ಲೆವು. ಹೀಗೆ ಹೇಳುವುದು ಅಹಂಕಾರವಲ್ಲ ವಾಸ್ತವಿಕ ಸತ್ಯ. ಆಹಾರ ಸರಬರಾಜಿಗೆ ಪರಾವಲಂಬಿಗಳಾಗಲು ನಾವೇನು ಅಂಥ ಚಿಕ್ಕ ರಾಷ್ಟ್ರವಲ್ಲ, ನಾಲ್ಕು ಕೋಟಿ ಜನರ ಉಪಖಂಡ ನಮ್ಮ ದೇಶ, ಮಹಾ ನದಿಗಳ ಸಂಪತ್ಸಮೃದ್ಧ ವೈವಿಧ್ಯಪೂರ್ಣ ಕೃಷಿಕ್ಷೇತ್ರಗಳ ಮತ್ತು ಅಪರಿಮಿತ ಗೋಸಂಪತ್ತಿನ ಭವ್ಯ ದೇಶ. ನಮಗೆ ಬೇಕಾಗುವಷ್ಟು ಹಾಲನ್ನು ನಮ್ಮ ಹಸುಗಳು ಕರೆಯುತ್ತಿಲ್ಲ ಎನ್ನುವುದು ಸಂಪೂರ್ಣವಾಗಿ ಸ್ವಯಂಕೃತಾಪರಾಧ. ನಮ್ಮ ಗೋಸಂಪತ್ತು ನಮಗೆ ಬೇಕಾಗುವ ಹಾಲನ್ನು ಪೂರ್ಣವಾಗಿ ಒದಗಿಸಬಲ್ಲದು. ಕಳೆದ ಕೆಲವು ಶತಮಾನಗಳ ಉದಾಸೀನತೆಗೆ ಗುರಿಯಾಗದಿದ್ದ ಪಕ್ಷಕ್ಕೆ, ಭಾರತ ಈ ದಿನ ಆಹಾರದ ವಿಷಯದಲ್ಲಿ ಸ್ವಯಂ ಪೂರ್ಣವಾಗಿರಬಹುದಾಗಿತ್ತಲ್ಲದೆ ಕಳೆದ ಯುದ್ಧದ ಕಾರಣವಾಗಿ ವಿಶ್ವದ ಬಹು ಭಾಗದಲ್ಲಿ ತಲೆ

ದೋರಿರುವ ಅನ್ನಾಭಾವದ ದುರದೃಷ್ಟಕರ ಸಮಸ್ಯೆಯನ್ನೆದುರಿಸಲು ತಾನು ಆಹಾರ ಸರಬರಾಜುಮಾಡಿ ನೆರವಾಗಲೂ ಸಮರ್ಥವಾಗಿರುತ್ತಿತ್ತು. ಈ ಸಮಸ್ಯೆ ಭಾರತವನ್ನೂ ಆವರಿಸಿದೆ. ಕಡಮೆಯಾಗುವ ಬದಲು ಇನ್ನೂ ತೀವ್ರವಾಗುತ್ತಿದೆ ಈ ದಾರುಣಸಂಕಟ. ಪರದೇಶದವರು ಅನುಕಂಪದಿಂದ ಉಚಿತವಾಗೊದಗಿಸುವ ಆಹಾರವನ್ನು ನಿರಾಕರಿಸುವ ಕೃತಘ್ನತೆ ನನ್ನ ಸಲಹೆಯಲ್ಲ. ನಾವೇ ಭಿಕ್ಷೆ ಬೇಡಲು ಹೋಗಬಾರದೆಂಬುದೇ ನನ್ನ ಮತ. ಆಗ ನಾವು ನೀತಿಭ್ರಷ್ಟರಾಗುತ್ತೇವೆ. ಜೊತೆಗೆ ಆಹಾರ ಸಾಮಗ್ರಿಗಳ ಸಾಗಾಣಿಕೆಯ ಕಠಿಣ ಸಮಸ್ಯೆಯೂ ಇದೆ. ಧಾನ್ಯಗಳು ಹಾಗೂ ಇತರ ಆಹಾರ ವಸ್ತುಗಳನ್ನು ತ್ವರಿತವಾಗಿ ಸ್ಥಳದಿಂದ ಸ್ಥಳಕ್ಕೆ ಸಾಗಿಸಲು ಬೇಕಾದ ಅನುಕೂಲಗಳು ನಮ್ಮಲ್ಲಿಲ್ಲ. ತಿನ್ನಲು ಅಯೋಗ್ಯವಾದ ಆಹಾರ ವಸ್ತುಗಳ ಸರಬರಾಜು ಮಾಡುವುದೂ ಅಸಂಭವವೇನಲ್ಲ. ಮಾನವ ಸ್ವಭಾವಗಳೊಡನೆ ನಾವು ವ್ಯವಹರಿಸುತ್ತಿರುವೆವೆಂಬ ಸತ್ಯವನ್ನು ಮರೆಯಲಾಗುವುದಿಲ್ಲ. ಪ್ರಪಂಚದ ಯಾವ ಭಾಗದಲ್ಲೂ ಅದು ಪರಿಪೂರ್ಣವಲ್ಲ; ಪರಿಪೂರ್ಣತೆಯ ಅಂಚಿಗೂ ಮುಟ್ಟಿಲ್ಲ.

## ಪರದೇಶಗಳ ಸಹಾಯದ ಅರ್ಥ

ಎಷ್ಟರ ಮಟ್ಟಿನ ಸಹಾಯವನ್ನು ನಾವು ಪಡೆಯಬಲ್ಲೆವೆಂದು ನೋಡೋಣ. ಇಂದಿನ ಅವಶ್ಯಕತೆಯಲ್ಲಿ ಶೇಕಡ ೩ ಭಾಗಕ್ಕಿಂತ ಹೆಚ್ಚು ಪಡೆಯಲಾರೆವೆಂದು ನನಗೆ ತಿಳಿದುಬಂದಿದೆ. ಹಲವು ತಜ್ಞರಿಂದ ಈ ಅರಿವಿಗೆ ಅನುಮೋದನೆ ನನಗೆ ದೊರಕಿದೆ. ಇದು ನಿಜವಾದಲ್ಲಿ ಪರದೇಶದ ಸಹಾಯದ ಮೇಲೆ ನಾವು ಅವಲಂಬಿಸುವ ಮಾತು ನಿಷ್ಪ್ರಯೋಜಕ. ನಮ್ಮ ದೇಶದೊಳಗಿನ ವ್ಯವಸಾಯ ಯೋಗ್ಯಕ್ಷೇತ್ರದ ಪ್ರತಿ ಅಂಗುಲದಲ್ಲೂ ವ್ಯಾಪಾರೀ ಬೆಳೆಗಳನ್ನು ಬಿಟ್ಟು ದಿನನಿತ್ಯದ ಆಹಾರಧಾನ್ಯಗಳನ್ನೇ ಬೆಳೆಯುವ ಅಗಾಧ ಪ್ರಯೋಗ ಸಾಧ್ಯತೆಗೆ ಅತಿ ಕನಿಷ್ಠ ಪರಾವಲಂಬನೆಯ ಪ್ರಯತ್ನವೂ ನಮ್ಮನ್ನು ವಿಮುಖರನ್ನಾಗಿ ಮಾಡಿಬಿಡುತ್ತದೆ. ತತ್‌ಕ್ಷಣ ವ್ಯವಸಾಯಕ್ಕೆ ಬರುವ ಪಾಳು ಭೂಮಿಗಳನ್ನೆಲ್ಲ ನಾವು ಪಡೆದುಕೊಳ್ಳಬೇಕು.

## ಕೇಂದ್ರೀಕರಣವೋ ವಿಕೇಂದ್ರೀಕರಣವೋ ?

ಆಹಾರ ಸಾಮಗ್ರಿಗಳ ಕೇಂದ್ರೀಕರಣವು ವಿನಾಶಕಾರಕ ವೃತ್ತಿಯೆಂದು ನನ್ನ ಭಯ. ವಿಕೇಂದ್ರೀಕರಣದಿಂದ ಕಳ್ಳಸಂತೆಯನ್ನು ಸುಲಭವಾಗಿ ದಮನ ಮಾಡಬಹುದು. ಸ್ಥಳದಿಂದ ಸ್ಥಳಕ್ಕೆ ಸಾಗಾಣಿಕೆಯ ವೆಚ್ಚ, ಕಾಲ ಎರಡೂ ಉಳಿಯುತ್ತವೆ. ಬೆಳೆಯುವ ರೈತನಿಗೆ ಬೆಳೆದ ಧಾನ್ಯಗಳನ್ನು ಇಲಿ, ಹೆಗ್ಗಣಗಳಿಂದ ರಕ್ಷಿಸುವುದು ಹೇಗೆ ಎನ್ನುವುದೂ ಗೊತ್ತು. ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವಾಗ ಧಾನ್ಯಗಳು ದಂಶಕ ಪ್ರಾಣಿಗಳ ತುತ್ತಾಗಬಹುದು. ಇದರಿಂದ ದೇಶಕ್ಕೆ ಲಕ್ಷಾಂತರ ಹಣ ನಷ್ಟವಲ್ಲದೆ ಹಿಡಿ ಕಾಳೂ ಅತ್ಯವಶ್ಯಕವಾಗಿರುವಾಗ ಧಾನ್ಯ ಅಗಾಧವಾಗಿ ನಾಶವಾಗುತ್ತದೆ. ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ ಆಹಾರ ಧಾನ್ಯ ಬೆಳೆಯಬೇಕಾದ ಅವಶ್ಯಕತೆಯನ್ನು ಪ್ರತಿಯೊಬ್ಬ ಭಾರತೀಯನೂ ಅರಿಯುವುದಾದರೆ ಈ ದೇಶದಲ್ಲಿ ಆಹಾರಾಭಾವ ಇತ್ತೆಂಬುದೇ ಮರೆತು ಹೋಗುತ್ತದೆ. ಹೆಚ್ಚು ಬೆಳೆಯುವ ವ್ಯವಸಾಯದಂತಹ ಆತ್ಯಾಕರ್ಷಕವಾದ, ಕಾರ್ಯಮಗ್ನಗೊಳಿಸುವ ವಿಷಯವನ್ನು ಕುರಿತು ನಾನು ಕೂಲಂಕಷವಾಗಿ ಇಲ್ಲಿ ವಿಚಾರಮಾಡಿಲ್ಲ. ಆದರೂ ಈ ಸ್ವಾವಲಂಬನೆಯ ಕಾರ್ಯದಲ್ಲಿ ಪ್ರತಿ ವ್ಯಕ್ತಿಯೂ ಹೇಗೆ ಸಹಾಯಕನಾಗಬಲ್ಲನೆಂಬ ವಿಚಾರದ ಕಡೆಗೆ ವಿವೇಕಿಗಳ ಆಸಕ್ತಿಯನ್ನು ಕೆರಳಿಸಲು ಸಾಕಷ್ಟು ನುಡಿದಿದ್ದೇನೆಂದು ನಂಬಿದ್ದೇನೆ.

## ಅಭಾವವನ್ನೆದುರಿಸುವುದು ಹೇಗೆ ?

ಹೊರಗಿನಿಂದ ಬರಬಹುದಾದ ಶೇಕಡ ೩ರಷ್ಟು ಧಾನ್ಯವನ್ನು ನಾವು ಪೂರೈಸಿಕೊಳ್ಳುವುದು ಹೇಗೆಂಬುದನ್ನು ನೋಡೋಣ. ಪ್ರತಿ ಏಕಾದಶಿಯ ದಿನ ಹಿಂದೂಗಳು ಪೂರ್ತಿಯಾಗಿಯೋ ಅರ್ಧ ದಿವಸವೋ ಉಪವಾಸ ಮಾಡುವ ಪದ್ಧತಿಯಿದೆ. ಮುಸಲ್ಮಾನರಲ್ಲೂ ಇತರರಲ್ಲೂ ಊಟ ಬಿಡುವುದು ಅದರಲ್ಲೂ ಹಸಿದ ಜನಕೋಟಿಯ ಹೊಟ್ಟೆಗಾಗಿ ಎಂದಾಗ, ನಿಷೇಧವಲ್ಲ. ಇಡೀ ಭಾರತ ದೇಶ ಇಂಥ ಆಂಶಿಕ ಸ್ವಾರ್ಥತ್ಯಾಗದ ರಮಣೀಯತೆಯನ್ನು ಗ್ರಹಿಸುವುದಾದರೆ, ಪರದೇಶದ ಸಹಾಯವನ್ನು ಇಚ್ಛಾಪೂರ್ವಕ

ವಾಗಿ ನಿರಾಕರಿಸುವುದರಿಂದಾಗಬಹುದಾದ ಕೊರತೆಯನ್ನು ಸಮೃದ್ಧವಾಗಿ ನಿವಾರಿಸಿಕೊಳ್ಳಬಹುದು.

ಪಡಿತರ ಪದ್ಧತಿಯ ಉಪಯುಕ್ತತೆ ಬಹಳ ಸ್ವಲ್ಪವೆಂದೇ ನನ್ನ ಸ್ವಂತ ಅಭಿಪ್ರಾಯ. ಉತ್ಪಾದಕರು ತಮ್ಮ ಬೆಳೆಯನ್ನು ನೇರವಾಗಿ ಮಾರುಕಟ್ಟೆಗೆ ತಂದು ಮಾರಲು ಸ್ವತಂತ್ರರಾಗುವುದಾದರೆ ಈಗ ಅಭಾವ ವೆನಿಸಿರುವ, ತಿನ್ನಲು ಯೋಗ್ಯವಾದ, ಒಳ್ಳೆಯ ಧಾನ್ಯ ಎಲ್ಲರಿಗೂ ಲಭ್ಯ ವಾಗುವುದು.

## ಅಧ್ಯಕ್ಷ ಟ್ರೂಮನ್ನರ ಉಪದೇಶ

ಅಮೆರಿಕದ ಜನರು ತಮ್ಮ ಆಹಾರದಲ್ಲಿ ಕಡಮೆ ಮಾಡಿಕೊಂಡು ಯೂರೋಪಿನ ಹಸಿದ ಜನಕ್ಕೆ ಧಾನ್ಯ ಉಳಿಸಬೇಕೆಂದು ಅಧ್ಯಕ್ಷ ಟ್ರೂಮನ್ನರು ಅವರ ದೇಶಕ್ಕೆ ಉಪದೇಶ ಮಾಡಿರುವರೆಂದು ವರದಿ ಯಾಗಿದೆ. ಈ ಸುದ್ದಿಯ ಕಡೆಗೆ ಗಮನ ಸೆಳೆದು ಆಹಾರ ಸಮಸ್ಯೆಯನ್ನು ಕುರಿತು ಅವಸರದಲ್ಲಿ ಮಾಡಿರುವ ಈ ವಿಮರ್ಶೆಯನ್ನು ಮುಗಿಸುತ್ತೇನೆ. ಈ ಸ್ವಾರ್ಥ ತ್ಯಾಗದಿಂದ ಅಮೆರಿಕನ್ನರ ಆರೋಗ್ಯಕ್ಕೆ ಏನೂ ಕುಂದಾಗ ಲಾರದೆಂದು ಅವರು ನುಡಿದಿದ್ದಾರೆ. ಈ ಮಾನವ ಪ್ರೇಮದ ಸೂಚನೆಗಾಗಿ ನಾನು ಅಧ್ಯಕ್ಷ ಟ್ರೂಮನ್ನರನ್ನು ಅಭಿನಂದಿಸುತ್ತೇನೆ. ಇದರ ಹಿಂಬದಿ ಯಲ್ಲಿ ಅಮೆರಿಕ ದೇಶಕ್ಕೆ ಹಣ ಗಳಿಸಿಕೊಡುವ ದುರಾಸೆಯ ಉದ್ದೇಶವಿದೆ ಯೆನ್ನುವ ಸೂಚನೆಯನ್ನು ನಾನು ಸಮರ್ಥಿಸಲು ನಿರಾಕರಿಸುತ್ತೇನೆ. ಮಾಡುವ ಕಾರ್ಯದಿಂದಲೇ ಮನುಷ್ಯನನ್ನು ಅಳೆಯಬೇಕು; ಅವನ ಕಾರ್ಯದ ಹಿಂದಿನ ಉದ್ದೇಶದಿಂದಲ್ಲ. ಮಾನವ ಹೃದಯವನ್ನು ಈಶ್ವರ ನೊಬ್ಬನೇ ಬಲ್ಲ. ಯೂರೋಪಿನ ಹಸಿದ ಸೋದರರಿಗಾಗಿ ಅಮೆರಿಕದ ಜನ ಸ್ವಾರ್ಥ ತ್ಯಾಗವನ್ನು ಮಾಡುವುದಾದರೆ, ನಮಗೋಸ್ಕರ ನಾವು ಈ ಚಿಕ್ಕ ತ್ಯಾಗವನ್ನು ಮಾಡಲು ಹಿಂದೆಗೆಯಬಹುದೇ? ಇಷ್ಟಾದರೂ ಹಸಿವಿನಿಂದ ಲಕ್ಷಾಂತರ ಜನ ಸಾಯಲೇ ಬೇಕಾದಲ್ಲಿ ನಾವು ನಮ್ಮ ಶಕ್ತಿ ಮೀರಿ ಸ್ವಾವಲಂಬನೆಗಾಗಿ ಶ್ರಮಿಸಿದ್ದೇವೆಂಬ ಗೌರವವನ್ನಾದರೂ ಗಳಿಸೋಣ; ರಾಷ್ಟ್ರಕ್ಕೆ ಅದು ಅತ್ಯುತ್ತಮ ಶೀಲವರ್ಧಕವಾದೀತು.

ಡಾ. ರಾಜೇಂದ್ರ ಪ್ರಸಾದರು ಸಭೆ ಸೇರಿಸಿರುವ ಸಮಿತಿಯು ದೇಶ ವನ್ನೆದುರಿಸಿರುವ ಈ ಆಹಾರ ಸಮಸ್ಯೆಗೆ ವ್ಯಾವಹಾರಿಕವಾದ ಪರಿಹಾರ ವನ್ನು ಸಿದ್ಧಗೊಳಿಸದೆ ಮುಕ್ತಾಯವಾಗುವುದಿಲ್ಲವೆಂದು ಆಶಿಸೋಣ.೫೫

## ೫೬. ನಿರಾಶ್ರಿತರಿಗೆ

ನಿನ್ನೆ ನಿರಾಶ್ರಿತ ಶಿಬಿರಗಳ ಬಗ್ಗೆ ನಾನಾಡಿದ ಕೆಲವು ಮಾತುಗಳು ಇಂಗ್ಲಿಷ್ ಭಾಷಾಂತರದ ಸಂಗ್ರಹಣೆಯಲ್ಲಿ ಬಿಟ್ಟುಹೋದವು. ಈ ದಿನ ಅದನ್ನೇ ವಿಶದೀಕರಿಸುತ್ತೇನೆ. ನಾನದಕ್ಕೆ ಬಹಳ ಮಹತ್ವವನ್ನೂ ಕೊಡುತ್ತೇನೆ. ನಮ್ಮಲ್ಲಿ ಮತ ಸಂಬಂಧವಾದ ಜಾತ್ರೆಗಳೂ ಇತರ ರೀತಿಯ ಮೇಳಗಳೂ ಇದ್ದರೂ, ಕಾಂಗ್ರೆಸ್ ಅಧಿವೇಶನಗಳೂ, ಸಮ್ಮೇಳನ ಗಳೂ ಆದರೂ, ಶಿಬಿರ ಜೀವನಕ್ಕೆ, ಅದರ ಉಚಿತ ಅರ್ಥದಲ್ಲಿ, ಹೊಂದಿ ಕೊಳ್ಳಲಾರದ ಜನಾಂಗ ನಾವು. ೧೯೧೫ರಲ್ಲಿ ಹರಿದ್ವಾರದ ಕುಂಭ ಮೇಳಕ್ಕೆ ಹೋಗಿದ್ದೆ. ದಕ್ಷಿಣ ಆಫ್ರಿಕದಿಂದ ಹಿಂದಿರುಗಿದ್ದ ನನ್ನ ಸಹೋ ದ್ಯೋಗಿಗಳೊಡನೆ ಸರ್ವೆಂಟ್ಸ್ ಆಫ್ ಇಂಡಿಯಾ ಶಿಬಿರದಲ್ಲಿ ಸೇವೆ ಮಾಡುವ ಸೌಭಾಗ್ಯ ನನ್ನದಾಗಿತ್ತು. ನನ್ನನ್ನೂ ಜೊತೆಯವರನ್ನೂ ಬಹಳ ಆತ್ಮೀಯ ವಿಶ್ವಾಸದಿಂದ ಸತ್ಕರಿಸಿದರಾದರೂ ನಮ್ಮ ಜನ ಅಲ್ಲಿ ನಡೆಸಿದ ಶಿಬಿರ ಜೀವನದ ಬಗ್ಗೆ ನನಗೆ ಜುಗುಪ್ಸೆಯೇ ಆಯಿತು. ಸಾಮಾಜಿಕ ಸ್ವಚ್ಛತೆಯ ಕಲ್ಪನೆಯೇ ನಮಗಿಲ್ಲ. ಇದರಿಂದ ಅಪಾಯಕರ ಅನೈರ್ಮಲ್ಯ ಮತ್ತು ಕೊಳಕುಂಟಾಗಿ ಅಂಟುರೋಗಗಳೂ ಸಾಂಕ್ರಾಮಿಕ ಜಾಡ್ಯಗಳೂ ತಲೆದೋರುವ ಸಂಭವವೂ ಹೆಚ್ಚು, ಕಕ್ಕಸುಗಳ ಸ್ಥಿತಿಯಂತೂ ಊಹಾ ತೀತ. ಇಂಥ ವ್ಯವಸ್ಥೆ ಇರಲೇಇಲ್ಲವೆಂಬುದೇ ಸಮಂಜಸ ವರ್ಣನೆ ಯಾದೀತು. ಮಲಮೂತ್ರ ವಿಸರ್ಜನೆಯ ಕಾರ್ಯವನ್ನು ಎಲ್ಲಿ ಬೇಕಾ ದರೂ ಮಾಡುತ್ತಾರೆ ನಮ್ಮ ಜನ. ಪವಿತ್ರ ನದಿಗಳ ತೀರಗಳನ್ನೂ ಬಿಡದೆ ಅದನ್ನೇ ಹೆಚ್ಚಾಗಿ ಬಳಸಿ ಬಿಡುತ್ತಾರೆ. ಪಕ್ಕದವರನ್ನೂ ಗಮನಿಸದೆ ಸಿಕ್ಕಿದ ಕಡೆ ಉಗುಳುವುದನ್ನಂತೂ ತಮ್ಮ ಹಕ್ಕೆಂದೇ ಭಾವಿಸಿದ್ದಾರೆ. ಅಡಿಗೆಯ ವ್ಯವಸ್ಥೆಯೂ ಕೂಡ ಇದಕ್ಕಿಂತ ಉತ್ತಮವೇನಲ್ಲ. ಎಲ್ಲೆಲ್ಲೂ

ನೊಣಗಳ ಸಹವಾಸವೇ. ಎಂಥ ಹೇಸಿಗೆಯ ಮೇಲಾದರೂ ಅವು ಕುಳಿತು ಬಂದಿರಬಹುದೆಂಬುದೂ ಅದರಿಂದ ಸಾಂಕ್ರಾಮಿಕ ರೋಗವಾಹಕವಾಗಿರಬಹುದೆಂಬುದೂ ನಮಗೆ ಅರಿವಾಗುವುದೇ ಇಲ್ಲ. ವಸತಿ ಸೌಲಭ್ಯಗಳೂ ಪೂರ್ವಯೋಜಿತವಾಗಿರುವುದಿಲ್ಲ. ಈ ವರ್ಣನೆ ಉತ್ಪ್ರೇಕ್ಷೆಯಲ್ಲ. ಇದರ ಜೊತೆಗೆ ಇಂಥ ಶಿಬಿರಗಳಲ್ಲಿ ಸಹಿಸಬೇಕಾಗುವ ಗದ್ದಲವನ್ನು ಹೇಳದೇ ವಿಧಿಯಿಲ್ಲ.

ಸುವ್ಯವಸ್ಥೆ, ಯೋಜನೆ, ಬಹಳ ಮಟ್ಟಿಗೆ ಪೂರ್ಣ ಸ್ವಚ್ಛತೆ ಇವುಗಳಿಗೆ ಸೈನಿಕರ ಶಿಬಿರಗಳು ನಿದರ್ಶನ. ಸೈನ್ಯದ ಅವಶ್ಯಕತೆಯನ್ನು ನಾನೆಂದೂ ಒಪ್ಪುವುದಿಲ್ಲ. ಆದರೆ ಅದರಿಂದ ಯಾವ ಪ್ರಯೋಜನವನ್ನೂ ಪಡೆಯಲಾರೆವೆಂದು ಅರ್ಥವಲ್ಲ. ಶಿಸ್ತು, ಸಾಂಘಿಕ ಜೀವನ, ನೈರ್ಮಲ್ಯ, ಮತ್ತು ಪ್ರತಿಯೊಂದು ಉಪಯುಕ್ತ ಕಾರ್ಯಕ್ಕೂ ಅಳವಡಿಸಿಕೊಟ್ಟ ಖಚಿತ ದಿನಚರಿ ಇವುಗಳ ಅಮೂಲ್ಯ ಶಿಕ್ಷಣ ಸೈನ್ಯದಿಂದ ದೊರೆಯುತ್ತದೆ. ಇಂಥ ಶಿಬಿರಗಳಲ್ಲಿ ಸಂಪೂರ್ಣ ನಿಶ್ಶಬ್ದತೆ ಪಸರಿಸಿರುತ್ತದೆ. ಅತಿ ಕ್ಷಿಪ್ರ ಕಾಲದಲ್ಲಿ ನಿರ್ಮ್ಮಾಣವಾಗುವ ಗುಡಾರಗಳ ನಗರ ಅದು. ನಮ್ಮ ನಿರಾಶ್ರಿತರ ಶಿಬಿರಗಳಲ್ಲಿ ಆದರ್ಶವನ್ನು ಅನುಷ್ಠಾನ ಮಾಡಬೇಕು. ಆಗ ಮಳೆ ಬರಲಿ ಬರದಿರಲಿ, ಯಾವ ತೊಂದರೆಯೂ ಆಗಲಾರದು.

ಇಂಥ ಗುಡಾರಗಳ ನಗರದ ನಿರ್ಮಾಣ ಕಾರ್ಯವನ್ನು ಕೂಡ ನಿರಾಶ್ರಿತರೇ ವಹಿಸಿಕೊಂಡರೆ ಅತಿ ಸ್ವಲ್ಪ ವೆಚ್ಚದಲ್ಲಿ ಆದೀತು. ಅವರೇ ಅಲ್ಲಿ ಗುಡಿಸುವವರು, ರಸ್ತೆ ಮಾಡುವವರು, ಕಾಲುವೆ ತೋಡುವವರು, ಅಡಿಗೆಯವರು ಮತ್ತು ಅಗಸರು. ಯಾವ ಕೆಲಸವೂ ಕೀಳೆನ್ನಲಾಗದು. ಶಿಬಿರಕ್ಕೆ ಸಂಬಂಧಪಟ್ಟ ಎಲ್ಲ ಕಾರ್ಯಕ್ಕೂ ಸಮಾನ ಗೌರವ ವಿಚಕ್ಷಣೆಯಿಂದ ಕೂಡಿದ ಪ್ರಬುದ್ಧ ಮೇಲ್ವಿಚಾರಣೆ ಸಾಮಾಜಿಕ ಜೀವನದಲ್ಲಿ ಅಗತ್ಯವಾದ ಅಪೇಕ್ಷಿತವಾದ ಕ್ರಾಂತಿಯನ್ನು ತರಬಲ್ಲುದು. ಆಗ ಇಂದಿನ ವಿಪತ್ತೂ ಒಂದು ಅಪ್ರತ್ಯಕ್ಷ ವರಪ್ರಸಾದವೇ ಆಗಬಹುದು. ನಿರಾಶ್ರಿತನು ಎಲ್ಲಿ ಹೋದರೂ ಯಾರಿಗೂ ಭಾರವೆನಿಸಲಾರನು. ಯಾವ ನಿರಾಶ್ರಿತನೂ ಕೇವಲ ಸ್ವಾರ್ಥಚಿಂತನೆ ಮಾಡದೆ ತನ್ನ ಸೌಭಾಗ್ಯ ಹೀನ ಸಹೋದರರೆಲ್ಲರ ಚಿಂತನೆ ಮಾಡಿಯಾನು. ಇತರರಿಗೆ ಸಿಗಲಾರದುದನ್ನು ತಾನೂ ಬಯಸನು.

ವಿವೇಕಬದ್ಧ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನದಲ್ಲಿ ಒಡನೆಯೇ ಕೆಲಸದಲ್ಲಿ ಮಗ್ನನಾಗುವನು.

ಹಾಸಿಗೆ ಹೊದಿಕೆಗಳು* ಬಂದು ಸೇರುತ್ತಿವೆ. ಹತ್ತಿರವಾಗುತ್ತಿರುವ ಚಳಿಗಾಲದಲ್ಲಿ ರಕ್ಷಣೆಗೆ ಅಭಾವವಿಲ್ಲದಂತಾಗಲು ಹೆಚ್ಚು ಸಮಯ ಬೇಕಾಗ ಲಾರದೆಂದು ನಾನು ನಂಬಿದ್ದೇನೆ.೫೬

## ೫೭. ರಚನಾತ್ಮಕ ಕಾರ್ಯದ ಆವಶ್ಯಕತೆ

ಪ್ರಾರ್ಥನಾ ಸಭಾಂಗಣವನ್ನು ಪ್ರವೇಶಿಸಿದಾಗ ನಾನೂ ನನ್ನ ಕುವರಿ ಯರೂ ನಿಮ್ಮ ಮಧ್ಯೆ ಹಾದು ಹೋಗಲು ಸಹಾಯಕವಾಗುವಂತೆ ದಾರಿ ಬಿಟ್ಟು ಕುಳಿತುಕೊಳ್ಳುವ ಸೌಜನ್ಯ ತೋರಿದ್ದೀರಿ. ಸಭೆ ಮುಗಿದ ಮೇಲೆ ನಾನು ಹಿಂದಿರುಗುವಾಗಲೂ ಇದೇ ಸುವ್ಯವಸ್ಥೆ ಇರಲೆಂದು ಕೇಳುತ್ತೇನೆ. ನಾನು ಹಿಂದಿರುಗುವಾಗ ನನ್ನನ್ನು ಸ್ಪರ್ಶಮಾಡಲು ಅಸಭ್ಯ ರೀತಿಯ ನೂಕು ನುಗ್ಗಲಾಗುತ್ತದೆ. ಜನ ಜಂಗುಳಿಯೇ ಮೇಲೆ ಬೀಳುತ್ತದೆ. ನಿಮ್ಮ ವಾತ್ಸಲ್ಯ ವನ್ನು ಅರಿತಿದ್ದೇನೆ; ಅಮೂಲ್ಯವೆಂದೂ ತಿಳಿದಿದ್ದೇನೆ. ಆ ಪ್ರೇಮ ಕೇವಲ ಭಾವಪ್ರವಾಹದಂತಾಗದೆ ನಾನು ಅನೇಕವೇಳೆ ಸೂಚಿಸುತ್ತಿರುವ, ಬರೆದು ತಿಳಿಸುತ್ತಿರುವ, ರಚನಾತ್ಮಕ ದೇಶಕಾರ್ಯವೊಂದನ್ನು ಮಾಡುವಂತೆ ಪ್ರೇರೇ ಪಿಸಲಿ. ಪ್ರಪ್ರಥಮವಾಗಿ ಇಂದು ಬೇಕಾಗಿರುವುದು ಜಾತೀಯ ಸಾಮ ರಸ್ಯ. ಅತ್ಯಂತ ಉಗ್ರ ರೀತಿಯ ವೈಮನಸ್ಯ ಈಗ ತಲೆದೋರಿದೆ. ಒಂದು ಕಡೆ ಮುಸಲ್ಮಾನರು, ಮತ್ತೊಂದು ಕಡೆ ಹಿಂದೂಗಳು ಮತ್ತು ಸಿಕ್ಕರು ಪರಸ್ಪರ ಶತ್ರುಗಳಾಗಿ ನಾವು ಕಾಣುತ್ತಿರುವ ನಾಚಿಕೆಗೇಡಿನ ಪ್ರಸಂಗಗಳಿಗೆ ಕಾರಣವಾಗಿದೆ.

ಈ ಪ್ರಾರ್ಥನಾ ಸಭೆಯಲ್ಲಿ ಭಾಗವಹಿಸುವವರು ಪರಸ್ಪರ ದ್ವೇಷ ರಹಿತರಾಗುವುದಷ್ಟೇ ಅಲ್ಲ, ಹಿಂದೆ ಖಿಲಾಫತ್ ಚಳುವಳಿಯ ಕಾಲಕ್ಕೆ ಇದ್ದ ನಮ್ಮ ಅಂತರ್ಜಾತೀಯ ಸೌಹಾರ್ದವನ್ನು ಪುನಃ ಪ್ರತಿಷ್ಠೆ ಮಾಡಲು

---

* ನಿರಾಶ್ರಿತ ಜನಕ್ಕೆ ನೆರವಿನ ರೂಪವಾಗಿ.

ಕ್ರಿಯಾತ್ಮಕವಾಗಿ ಬಲ ಕೊಡಬೇಕು. ಅಂದಿನ ಸ್ನೇಹಪೂರ್ಣ ಗೋಷ್ಠಿಗಳಲ್ಲಿ ನಾನು ಭಾಗವಹಿಸಿದ್ದೇನೆ. ಆ ನೋಟದಿಂದ ಅತ್ಯಂತ ಆನಂದ ಭರಿತನಾಗುತ್ತಿದ್ದೆ. ಆ ದಿನಗಳು ಮತ್ತೆ ಬರಲಾರವೇ?

## ಇತ್ತೀಚಿನ ದುರಂತ

ನಿನ್ನೆ ತಾನೆ ರಾಜಧಾನಿಯ ಮಧ್ಯಭಾಗದಲ್ಲಿ ಸಂಭವಿಸಿದ ದುರಂತವನ್ನು ನೋಡಿ, ಖಾಲಿಯಾಗಿದ್ದ ಮುಸಲ್ಮಾನ ಗೃಹವೊಂದಕ್ಕೆ ಹಲವು ಹಿಂದೂಗಳು ಮತ್ತು ಸಿಕ್ಕರು ನುಗ್ಗಿ ಬಲತ್ಕಾರವಾಗಿ ಆಕ್ರಮಿಸಿಕೊಳ್ಳಲು ಪ್ರಯತ್ನಪಟ್ಟರೆಂದು ವರದಿಯಾಗಿದೆ. ಅದ್ದರಿಂದ ಹೊಡೆದಾಟವಾಗಿ ಹಲವರಿಗೆ ಗಾಯಗಳಾಯಿತು. ಯಾರಿಗೂ ಪ್ರಾಣಾಪಾಯವೇನೋ ಆಗಲಿಲ್ಲ. ಈ ದುರದೃಷ್ಟಕರ ಘಟನೆ ಮಿತಿಮೀರಿ ಉತ್ಪ್ರೇಕ್ಷಿತವಾಗಿ ಹರಡಿತು. ಮೊದಲು ಬಂದ ಸುದ್ದಿ ನಾಲ್ಕು ಸಿಕ್ಕರನ್ನು ಖೂನಿಮಾಡಿದರು ಎಂದು. ಅವರ ಪ್ರತಿಕ್ರಿಯೆ ನಿರೀಕ್ಷಿಸಿದಂತೆಯೇ ಆಯಿತು. ಪ್ರತೀಕಾರದ ಕಿಚ್ಚು ಹರಡಿ ಅನೇಕ ಕಡೆ ಇರಿತಗಳಾದುವು. ಒಂದು ಹೊಸ ಧಾಳಿಯ ಪ್ರಕ್ರಿಯೆಯೇ ಪ್ರಾರಂಭವಾದಂತಿದೆ. ಸಣ್ಣ ಕೃಪಾಣಗಳನ್ನು ತೊರೆದು, ಹಿರಿದ ಕತ್ತಿಗಳನ್ನು ಹಿಡಿದ ಸಿಕ್ಕರು, ಹಿಂದೂಗಳೊಡಗೂಡಿಯೋ ಇಲ್ಲದೆಯೋ ಮುಸಲ್ಮಾನರ ಮನೆಗಳಿಗೆ ನುಗ್ಗಿ ಖಾಲಿಮಾಡಲು ನಿರ್ಬಂಧಿಸುತ್ತಿದ್ದಾರೆ. ಈ ಸುದ್ದಿ ನಿಜವಾದಲ್ಲಿ ರಾಜಧಾನಿಯಾದ ಈ ನಗರದಲ್ಲಿ ಅದು ಅತ್ಯಂತ ಭೀಕರ ಪರಿಸ್ಥಿತಿ. ಸುಳ್ಳಾಗಿದ್ದಲ್ಲಿ ಅದನ್ನು ತಿರಸ್ಕರಿಸಿ ಬಿಡಿ. ನಿಜವೆಂದು ತಿಳಿದರೆ ಅಧಿಕಾರಿಗಳು ತೀವ್ರವಾಗಿ ಆ ಕಡೆ ಗಮನಕೊಡಬೇಕಲ್ಲದೆ ಸಾರ್ವಜನಿಕರೂ ಪ್ರತಿಭಟಿಸಬೇಕು. ಸಾರ್ವಜನಿಕ ಬೆಂಬಲವಿಲ್ಲದೆ ಅಧಿಕಾರ ಯಂತ್ರ ನಿಷ್ಫಲವಾದೀತು.

ಹೀಗಿರುವಾಗ ನನ್ನ ಕರ್ತವ್ಯವೇನೆಂದು ನನಗಿನ್ನೂ ಖಚಿತವಾಗಿಲ್ಲ. ಪರಿಸ್ಥಿತಿ ಹದಗೆಡುತ್ತಿರುವುದು ಸರ್ವ ವೇದ್ಯ. ಕಾರ್ತೀಕ ಹುಣ್ಣಿಮೆ ಸಮೀಪಿಸುತ್ತಿದೆ. ಅನೇಕ ರೀತಿಯ ವದಂತಿಗಳು ಮಳೆ ಸುರಿದಂತೆ ಬರುತ್ತಿವೆ. ಹಿಂದೆ ಬಕ್ರೀದ್ ಮತ್ತು ದಸರಾ ಹಬ್ಬಗಳ ಕಾಲದಲ್ಲಾದಂತೆ ಈ ಸುದ್ದಿಗಳೂ ನಿರಾಧಾರವಾದುವೆಂದು ಆಶಿಸಿದ್ದೇನೆ.

ಈ ಗಾಳಿ ಮಾತುಗಳಿಂದ ಒಂದಂಶ ಸ್ಪಷ್ಟವಾಗುತ್ತದೆ. ನಾವು ಅಹನ್ಯಹನಿ ಕಾಲಕ್ಷೇಪದ ಬಾಳನ್ನು ಬಾಳುತ್ತಿದ್ದೇವೆ. ಇದು ಯಾವ ರಾಷ್ಟ್ರಕ್ಕೂ ದೇಶಕ್ಕೂ ಒಳ್ಳೆಯದಲ್ಲ. ಈ ಅಧಃಪತನದ ಅನಿಷ್ಟವನ್ನು ನೀಗಿಸಲು ಪ್ರತಿಯೊಬ್ಬ ದೇಶ ಸೇವಕನೂ ತಾನು ವಹಿಸಬೇಕಾದ ಪಾತ್ರವನ್ನು ಗಂಭೀರವಾಗಿ ವಿಚಾರ ಮಾಡಬೇಕು.

## 'ಕೃಪಾಣ'ದ ಅಧ್ಯಾಹೃತ ಅರ್ಥ

ಲಯಲಾಪುರದ ಮಾಜಿ ಶಾಸನಸಭಾ ಸದಸ್ಯ (ಕೇಂದ್ರೀಯ) ಸರ್ದಾರ್ ಶಾಂತಸಿಂಗ್ ಅವರು ಬರೆದಿರುವ ದೀರ್ಘ ಪತ್ರವನ್ನು ಇಲ್ಲಿ ಪ್ರಸ್ತಾಪಿಸುವುದು ಉಚಿತ. ಕಳೆದ ಬುಧವಾರ ಮಾಡಿದ ನನ್ನ ಭಾಷಣಕ್ಕೆ ಇಲ್ಲದಿರುವ ವಿಪರೀತಾರ್ಥವನ್ನಾರೋಪಿಸಿ ನಾನೆಂದಿಗೂ ಉದ್ದೇಶಪಡಲಾರದಿದ್ದುದನ್ನು ನುಡಿದಿದ್ದಾರೆ. ೧೯೧೫ರಲ್ಲಿ ದಕ್ಷಿಣ ಆಫ್ರಿಕಾದಿಂದ ಹಿಂದಿರುಗಿದಾಗಿನಿಂದಲೂ ಸಿಕ್ಕರೊಡನೆ ನನಗಿರುವ ಗಾಢ ಸಂಬಂಧವನ್ನು ಬಹುಶಃ ಅವರರಿಯರು. ನನ್ನ ಮಾತು ಅವರಿಗೆ ವೇದವಾಕ್ಯವಾಗಿದ್ದ ಕಾಲವೊಂದಿತ್ತು; ಹಿಂದೂಗಳಿಗೂ ಮುಸಲ್ಮಾನರಿಗೂ ಇದ್ದಂತೆ. ಕಾಲ ಪ್ರವಾಹ ಭಾವನೆಗಳನ್ನು ಬದಲಿಸಿದೆ. ನಾನು ಮಾತ್ರ ಅಚಲನಾಗಿಯೇ ಇದ್ದೇನೆಂದು ಬಲ್ಲೆ. ಕಂಠೋಕ್ತ ಪ್ರಮಾಣವಾಗಿ ಪಕ್ಷಪಾತರಹಿತ ಸ್ನೇಹಿತನೆನಿಸಿ ಸಾಧಿಸಿಕೊಳ್ಳಬೇಕಾದ ಸ್ವಾರ್ಥವೇನೂ ಇಲ್ಲದಿರುವ ನಾನು ಕಾಣಬಹುದಾದ, ಕಾಣುತ್ತಿರುವ ಸಿಕ್ಕರ ಇಂದಿನ ಮನೋಧರ್ಮವನ್ನು ಅದೇ ದೃಷ್ಟಿಯಿಂದ ಬಹುಶಃ ಆ ಸರದಾರರು ನೋಡಿರಲಾರರು. ಸಿಕ್ಕರ ಪ್ರಾಮಾಣಿಕ ಸ್ನೇಹಿತನಾದ್ದರಿಂದ ನಿರ್ಭಯವಾಗಿ ನಿರಾತಂಕವಾಗಿ ನಾನು ಹೇಳುತ್ತೇನೆ. ಕಠಿಣ ಪರಿಸ್ಥಿತಿಗಳಲ್ಲಿ ಅನೇಕ ಸಾರಿ ನನ್ನ ಹಿತ ನುಡಿಗಳನ್ನು ಸರ್ವ ಸಾಮಾನ್ಯವಾಗಿ ಎಲ್ಲ ಸಿಕ್ಕರೂ ಪರಿಪಾಲಿಸಿ ಪಾರಾಗಿದ್ದಾರೆಂದು ಧೈರ್ಯವಾಗಿ ಹೇಳಬಲ್ಲೆ. ಸಿಕ್ಕರಿಗಾಗಲೀ ಇತರ ಮತಸ್ಥರಿಗಾಗಲೀ ಹೇಳುವಾಗ ಎಚ್ಚರಿಕೆಯಿಂದಿರಬೇಕೆಂದು ನನಗಾವ ಸೂಚನೆಯೂ ಬೇಕಿಲ್ಲ. ಈ ಸರದಾರರೂ, ಪ್ರಸ್ತುತ ಆವೇಶದಲ್ಲಿ ಕೊಚ್ಚಿಹೋಗದೆ ತಮ್ಮವರಿಗೆ ಒಳಿತನ್ನು ಬಯಸುವ ಪ್ರತಿಯೊಬ್ಬ ಸಿಕ್ಕನೂ ಇಂದಿನ ಪ್ರಜ್ಞಾಶೂನ್ಯತೆ

ಯಿಂದ (ಮದ್ಯಪಾನದ) ಅಮಲಿನಿಂದ, ಅವುಗಳಿಂದ ಹರಿದುಬರುವ ಮಿಕ್ಕೆಲ್ಲ ಪಾಪಕೃತ್ಯಗಳಿಂದ ಪಾರಾಗುವಂತೆ ಈ ಧೀರೋದಾತ್ತ ಜನಾಂಗಕ್ಕೆ ನೆರವಾಗಲಿ. ಅಟ್ಟಹಾಸದಿಂದ ಝಳಪಿಸಿ ಅಕೃತ್ಯಗಳಿಗೆ ಉಪಯೋಗಿಸುತ್ತಿರುವ ಕತ್ತಿಗಳನ್ನವರು ಮತ್ತೆ ಒರೆಗೆ ಸೇರಿಸಲಿ. ಕೃಪಾಣವು ಎಷ್ಟು ಉದ್ದದ ಕತ್ತಿಯಾದರೂ ಆಗಬಹುದೆಂಬ ಪ್ರಿವಿ ಕೌನ್ಸಿಲಿನ ತೀರ್ಪಿನಿಂದ ಅವರು ಮೋಸ ಹೋಗಬಾರದು. ಸ್ವೇಚ್ಛಾವೃತ್ತಿಯ ಕುಡಕನ ಕೈಗೆ ಬಂದಾಗ, ಸ್ವೇಚ್ಛೆಯಿಂದ ಉಪಯೋಗಿಸಿದಾಗ ಕೃಪಾಣದ ಪೂಜ್ಯತೆ ನಿರ್ನಾಮವಾಗುತ್ತದೆ. ಪವಿತ್ರವಾದ ವಸ್ತು ಪವಿತ್ರವಾದ ನ್ಯಾಯಬದ್ಧ ಸನ್ನಿವೇಶಗಳಲ್ಲಿ ಮಾತ್ರ ಉಪಯೋಗವಾಗಬೇಕು. ವೀರವೃತ್ತಿಯ ನಿರ್ವಿವಾದ ಪ್ರತೀಕವಾದ ಕೃಪಾಣ ಅದ್ಭುತ ಸಂಯಮಿಯಾದವನಿಗೆ ತನ್ನಮೇಲೆ ಆಕ್ರಮಿಸಿ ಬಂದ ಅತ್ಯಗಾಧ ಪ್ರತಿರೋಧವನ್ನೆದುರಿಸಲು ಉಪಯೋಗಿಸುವವನಿಗೆ ಮಾತ್ರ ಭೂಷಣವಾದೀತು.

ಸಿಕ್ಕರ ಇತಿಹಾಸವನ್ನು ಸಾಕಷ್ಟು ವ್ಯಾಸಂಗ ಮಾಡಿ ಪವಿತ್ರ ಗ್ರಂಥ ಗ್ರಂಥ ಸಾಹೇಬದ ಸಾರಸರ್ವಸ್ವವನ್ನು ತಲ್ಲೀನನಾಗಿ ಮನನ ಮಾಡಿದ್ದೇನೆಂದರೆ ಸರದಾರರು ಸಿಟ್ಟಾಗಬಾರದು. ಆ ಪವಿತ್ರ ಶ್ರುತಿವಾಕ್ಯದ ಸಿದ್ಧಾಂತಗಳಿಗೆ ಒರೆ ಹಚ್ಚಿದರೆ, ಸಿಕ್ಕರಿಗೆ ಇಂದು ಆರೋಪಿತವಾಗಿರುವ ಕೃತ್ಯಗಳು ಅಸಮರ್ಥನೀಯವೂ ಆತ್ಮಾಪಹಾರಕವೂ ಆಗುತ್ತವೆ. ಆ ಜನಾಂಗದ ಮಹಾ ಶೌರ್ಯ ಹಾಗೂ ಶೀಲಗಳು ಯಾವ ಕಾರಣಕ್ಕೂ ಕ್ಷಯಿಸಿ ಹೋಗಬಾರದು. ಸಮಗ್ರ ಭಾರತಕ್ಕೇ ಅವು ಅಮೂಲ್ಯ ಆಸ್ತಿ. ನನ್ನ ದೃಷ್ಟಿಯಲ್ಲಿ ಅವು ಇಂದು ವಿಪತ್ಕಾರಕ ವಿನಾಶ ಶಕ್ತಿಯಾಗಿಬಿಟ್ಟಿವೆ; ಹಾಗೆಂದಿಗೂ ಆಗಬಾರದು.

ಮುಸಲ್ಮಾನರ ಪ್ರಥಮ ವೈರಿಗಳೆಂದು ಸಿಕ್ಕರನ್ನು ವರ್ಣಿಸುವುದು ಶುದ್ಧ ತಿಳಿಗೇಡಿತನ. ನನ್ನನ್ನೂ ಹಾಗೆಯೇ ವರ್ಣಿಸಲಿಲ್ಲವೇ? ಈ 'ಮರ್ಯಾದೆ'ಯನ್ನು ನಾವಿಬ್ಬರೂ ಹಂಚಿಕೊಳ್ಳೋಣವೇ? ನಾನೆಂದೂ ಈ ಖ್ಯಾತಿಗಾಗಿ ಹಂಬಲಿಸಿಲ್ಲ. ನನ್ನ ಇಡೀ ಬಾಳು ಇಂಥ ಅಪವಾದದ ಪ್ರತಿಭಟನೆಗೆ ನಿತ್ಯಸಾಕ್ಷಿಯಾಗಿದೆ. ಸಿಕ್ಕರ ಬಗ್ಗೆಯೂ ಹೀಗಾಗಬಲ್ಲುದೇ? ಕಾಶ್ಮೀರ ಕೇಸರಿಯ (ಷೇಕ್ ಅಬ್ದುಲ್ಲಾ) ಬೆಂಬಲಕ್ಕೆ ನಿಂತ ಸಿಕ್ಕರಿಂದ

ಅವರು ಪಾಠ ಕಲಿಯಲಿ; ತಮ್ಮ ಹೆಸರಿನಲ್ಲಿ ಸಂಭವಿಸಿರುವ ಅಕೃತ್ಯಗಳಿಗಾಗಿ ಪಶ್ಚಾತ್ತಾಪಪಡಲಿ.

## ಕುತ್ಸಿತ ಸಲಹೆ

ಸಿಕ್ಕರನ್ನು ಪಾಕಿಸ್ತಾನದಲ್ಲಿ ಎಂದಿಗೂ ಸಹಿಸುವುದಿಲ್ಲವೆಂಬ ಕಾರಣದಿಂದ ಅವರನ್ನು ಬಲಿಗೊಟ್ಟು ಹಿಂದೂಗಳು ಕ್ಷೇಮ ಸಾಧಿಸಬಹುದೆಂಬ ಅತ್ಯಂತ ಕುತ್ಸಿತ ಸಲಹೆಯನ್ನು ನಾನು ಬಲ್ಲೆ. ಇಂಥ ಭ್ರಾತೃದ್ರೋಹಕ ವ್ಯಾಪಾರಕ್ಕೆ ನಾನೆಂದಿಗೂ ಸಮ್ಮತಿಸಲಾರೆ. ಹೊರದೂಡಲ್ಪಟ್ಟ ಪ್ರತಿಯೊಬ್ಬ ಹಿಂದೂವೂ ಸಿಕ್ಕನೂ ಪಶ್ಚಿಮ ಪಂಜಾಬಿಗೂ, ಪ್ರತಿ ಮುಸಲ್ಮಾನ ನಿರಾಶ್ರಿತನೂ ಭಾರತಕ್ಕೂ, ಗೌರವದಿಂದ ಸುರಕ್ಷಿತವಾಗಿ ಹಿಂತಿರುಗುವವರೆಗೆ ಈ ನಿರ್ಭಾಗ್ಯ ನಾಡಿಗೆ ನೆಮ್ಮದಿಯಿಲ್ಲ. ತಾವೇ ಇಚ್ಛೆಪಟ್ಟು ಉಳಿದುಕೊಳ್ಳುವವರ ಮಾತು ಬೇರೆ. ಅಗಾಧ ಜನಸಮೂಹಗಳ ವಿನಿಮಯದ ಘೋರ ಪಾಪವನ್ನು ತೊಳೆದು ಬಿಡಬೇಕು. ಆಗ ಮಾತ್ರ ನಾವು ಶಾಂತಿಯುತ ಸ್ನೇಹಪೂರ್ಣ ನೆರೆರಾಷ್ಟ್ರಗಳಾಗಿ ಬಾಳಿಯೇವು.

## ಅವರ ಪಾಪಕೃತ್ಯಗಳು

ಪಾಕಿಸ್ತಾನದ ಪಾಪಕೃತ್ಯಗಳನ್ನು ಎಣಿಕೆಹಾಕಿರೆಂದು ನನಗೆ ಹೇಳಲಾಗದು. ಇಂಥ ಲೆಕ್ಕದಿಂದ ಹಿಂದೂ ಅಥವಾ ಸಿಕ್ ಜನಾಂಗದ ದುಃಖಿಗಳಿಗೇನೂ ಪ್ರಯೋಜನವಾಗಲಾರದು. ತನ್ನ ಪಾಪಕೃತ್ಯಗಳ ಭಾರಕ್ಕೆ ಪಾಕಿಸ್ತಾನವೇ ಹೊಣೆಯಾಗಬೇಕು. ಅದೆಷ್ಟು ಭೀಕರ ಪ್ರಮಾಣದ್ದೆಂದು ನಾನು ಬಲ್ಲೆ. ನನ್ನ ದೃಷ್ಟಿಯಲ್ಲಿ ಆಗಸ್ಟ್ ಹದಿನೈದಕ್ಕೆ ಬಹಳ ಮುಂಚೆಯೇ ಮುಸ್ಲಿಂ ಲೀಗ್ ಇದನ್ನು ಪ್ರಾರಂಭಿಸಿತು. ನನ್ನ ಮಾತಿಗೆ ಬೆಲೆಯಿರುವುದಾದರೆ ಇಷ್ಟೇ ನನ್ನ ಅಭಿಪ್ರಾಯ. ಆಗಸ್ಟ್ ಹದಿನೈದರ ನಂತರ ಅವರಲ್ಲಿ ಹೊಸ ಅಧ್ಯಾಯ ಆರಂಭವಾಯಿತೆಂದು ನಾನು ಹೇಳಲಾರೆ. ಈ ಮಾತಿನಿಂದೇನು ಲಾಭ. ಇಂದು ಭಾರತವೂ ಅದನ್ನನುಕರಿಸಿ ನಾವೂ ಪತಿತರಾದುದೇ ಮುಖ್ಯ ಘಟನೆ. ಅಸಮಾನತೆ ಕೊಚ್ಚಿಹೋಗಿ ಒಂದೇ ರೀತಿಯಾಯಿತು. ಈ ಉನ್ಮತ್ತತೆಯಿಂದ ಎಚ್ಚೆತ್ತು ಪಶ್ಚಾತ್ತಾಪಪಟ್ಟು ಪರಿವರ್ತಿತರಾಗೋಣವೇ ? ಅಥವಾ ನಮ್ಮ ಪರಾಭವದ ಆಳಕ್ಕೆ ಉರುಳಿ ಬೀಳೋಣವೇ ? ೫೭

## ೫೮. ಈ ಸಂಶಯಾತ್ಮಕ ವಿಶೇಷಣ ಏಕೆ?

ಅನೇಕ ಹೇಳಿಕೆಗಳಲ್ಲಿ ನಾನು ಹಲವು ಸಾರಿ 'ರೆ' ಪದವನ್ನು ಪ್ರಯೋಗಿಸುತ್ತೇನೆಂದು ಸ್ನೇಹಿತರನೇಕರು ದೂಷಿಸಿದ್ದಾರೆ. ಈಗ ನಾನು ವಹಿಸಿರುವ ಕಾರ್ಯಸಮರ್ಥನೆಗೆ ಅತ್ಯಂತ ಉಪಯುಕ್ತವಾಗುವಂತೆ ಈ ಸಂಬಂಧಾವ್ಯಯವನ್ನು ಬಳಸಿಕೊಂಡಿದ್ದೇನೆ. ಕಾಥೇವಾಡದ ಪ್ರಕರಣದ ಬಗ್ಗೆ ಈಗ ವಿವಾದಜ್ವಾಲೆ ಉರಿಯುತ್ತಿದೆ. ಆಧಾರರಹಿತವೆಂದು ಅವರು ತಿಳಿದಿರುವ ಘೋರಕೃತ್ಯಗಳ ವದಂತಿಗಳಿಗೆ ಅತಿಯಾದ ಪ್ರಚಾರ ಸಿಗುವುದರಿಂದ ನನ್ನ ಸ್ನೇಹಿತರಿಗೆ ನೋವಾಗಿದೆ. ನಿಜವಾಗಿ ನಡೆದಿರುವಷ್ಟು ಅಕೃತ್ಯಗಳನ್ನು ಪ್ರತಿಭಟಿಸಿ ಅಧಿಕಾರಿಗಳೂ ಕಾಂಗ್ರೆಸ್ಸಿಗರೂ ದಿಟ್ಟತನದಿಂದ ಯಶಸ್ವಿಯಾಗಿ ಹೋರಾಡಿದ್ದಾರೆ. ಉಭಯ ಪಕ್ಷಗಳೂ ನನಗೆ ಒದಗಿಸಿರುವ ಸಮಾಚಾರಗಳ ನಿಯಮಿತ ಬಳಕೆಯಿಂದ ಸತ್ಯಕ್ಕೆ ಅದು ಖಂಡಿತವಾಗಿ ಪೋಷಕವಾಗಿಯೇ ಇದೆ. ಕಾಥೇವಾಡದ ಅಧಿಕಾರಿಗಳೂ, ಕಾಂಗ್ರೆಸ್ಸಿನವರೂ ಎಷ್ಟರ ಮಟ್ಟಿಗೆ ಸತ್ಯನಿಷ್ಠರೋ ಅದೇ ಪ್ರಮಾಣದಲ್ಲಿ ಅವರ ಯಶಸ್ಸೂ ನಿಯಮಿತ. ಆದರೆ ಸ್ನೇಹಿತರಿಗಿದು ಸಮಾಧಾನವಾಗದು. ಸುಳ್ಳು ಸುದ್ದಿಯನ್ನು ಬೆನ್ನಟ್ಟಿ ಧಾವಿಸಿ ಸತ್ಯಾಂಶ ಪ್ರಕಟವಾಗುವುದರೊಳಗೆ ನೀತಿಭ್ರಷ್ಟರು ನನ್ನ ಹೇಳಿಕೆಯಲ್ಲಿನ 'ರೆ' ಪ್ರತ್ಯಯವನ್ನು ಅಳಿಸಿ ಯಾವುದೋ ಅನೃತ ಸುದ್ದಿಗೆ ನನ್ನ ಬೆಂಬಲವಿದೆಯೆನ್ನುವಂತೆ ಪ್ರಚಾರಮಾಡಿ ಅನಾಹುತಗಳನ್ನೆಸಗಿಬಿಡುತ್ತಾರೆ—ಎಂದು ನನ್ನ ಸ್ನೇಹಿತರ ವಾದ. ಈ ಅಪಾಯ ಸಂಭವ ನನಗೆ ಗೊತ್ತಿಲ್ಲದೆ ಇಲ್ಲ. ಹೀಗೆ ದುರಾಚಾರಿಗಳು ಮಾಡಿದಾಗಲೆಲ್ಲ ಅದು ಭಗ್ನವಾಗಿ ಅವರು ದುರವಸ್ಥೆಗೆ ಈಡಾಗಿದ್ದಾರೆ; ಅವರ ಪಕ್ಷ ಅವಮಾನಿತವಾಗಿದೆ. ನಿರಪರಾಧಿಗಳಾಗಿದ್ದರೆ ಮಾತ್ರ ಇಂಥ ಅಪಪ್ರಚಾರಕ್ಕೆ ಯಾರೂ ಹೆದರಬೇಕಾಗಿಲ್ಲ. ಇಂಥ ಸಂಶಯಾತ್ಮಕವಾಗುವ ಹೇಳಿಕೆಗಳನ್ನು ನಾನು ನಿಯಮಿತ ರೀತಿಯಲ್ಲಿ ಬಳಸಿಕೊಂಡಲ್ಲಿ ನನ್ನ ಸ್ನೇಹಿತರು ವ್ಯಾಕುಲಗೊಳ್ಳಬಾರದು.

ಇದರ ವ್ಯತಿರೇಕ ವಾದವನ್ನೂ ಗಮನಿಸೋಣ. ಇಲ್ಲಿ ಉದಹರಿಸುವ ಘಟನೆಯಲ್ಲಿ ಪಾಕಿಸ್ತಾನದ ಪ್ರಭಾವಯುತ ಪತ್ರಿಕೆಗಳು ಮಾಡಿದ ದೋಷಾರೋಪಣೆಗಳನ್ನು, ಅದರಲ್ಲೂ ಪಾಕಿಸ್ತಾನದ ಮುಖ್ಯ ಮಂತ್ರಿಯೇ

ಅವನ್ನು ಸಮರ್ಥಿಸಿರುವಾಗ, ನಾನು ಪೂರ್ಣವಾಗಿ ಅಲಕ್ಷಿಸಿದ್ದೆನೆಂದು ಭಾವಿಸೋಣ. ಮುಸ್ಲಿಂ ಜನಾಂಗಗಳಿಗೆಲ್ಲ ಅದೇ ವರದಿಗಳನ್ನು ವೇದ ವಾಕ್ಯಗಳಂತೆ ಪ್ರಚಾರ ಮಾಡುವುದಕ್ಕೆ ನನ್ನ ಅಸಡ್ಡೆಯೇ ಕಾರಣವಾಗು ತ್ತಿತ್ತು. ಈಗ ಅತ್ಯಂತ ಸುಸಂಸ್ಕೃತ ಮುಸಲ್ಮಾನರ ಮನಸ್ಸು ಇಂಥ ವರದಿಗಳ ಬಗ್ಗೆ ಆಗಲೇ ಸಂಶಯಗ್ರಸ್ತವಾಗಿದೆ.

## ಸತ್ಯಸಂಧರಾಗಿ

ಕಾಫೇವಾಡದ ಬಂಧುಗಳೂ, ಇತರರೂ, ಈಗಿನ ಪ್ರಕರಣದಂಥವು ಗಳಿಂದ ಕಲಿಯಬೇಕಾದ ಪಾಠಗಳಿವು ಎಂದು ನನ್ನ ಎಣಿಕೆ; ನಮ್ಮ ಪ್ರದೇಶವನ್ನು ಅತ್ಯಂತ ಸುಭದ್ರವಾಗಿಟ್ಟುಕೊಳ್ಳುವುದು; ಕಹಿ ಟೀಕೆ ಗಳನ್ನು ಯಾವಾಗಲೂ ಸ್ವಾಗತಿಸುವುದು; ಅವುಗಳಿಂದ ಲಾಭಪಡೆದು ಸಾಧ್ಯವಾದರೆ ಹೆಚ್ಚು ನೇರ–ಸ್ಥಿತಿಗೇರುವುದು ಹಾಗೂ ತೋರಿಸಿಕೊಟ್ಟಾಗ ಲೆಲ್ಲ ನಮ್ಮ ತಪ್ಪುಗಳನ್ನು ತಿದ್ದಿಕೊಳ್ಳುವುದು—ನಾವೆಂದೂ ತಪ್ಪು ಮಾಡು ವುದೇ ಇಲ್ಲವೆಂಬ ಭಾವನೆಯೇ ತಪ್ಪು. ನಮ್ಮ ವಿರುದ್ಧ ಯಾವುದೋ ಆರೋಪಿತ ಅಥವಾ ನಿಜವಾದ ಫಲಸಾಧನೆಯ ಮನೋಧರ್ಮದಿಂದಲೇ ಅತ್ಯಂತ ಕಟುವೈರಿಯ ಕಹಿನುಡಿಗಳು ಹುಟ್ಟಿಬರುತ್ತವೆ. ತಾಳ್ಮೆಯಿಂದ ಅವನನ್ನು ಕಂಡು ಸಮಯ ಬಂದಾಗ ಅವನ ತಪ್ಪಿಗೆ ಕನ್ನಡಿ ಹಿಡಿದು ಅವನನ್ನು ತಿದ್ದೋಣ; ಅಥವಾ ನಾವೇ ತಪ್ಪಿತಸ್ಥರೆಂದು ಕಂಡಾಗ ತಿದ್ದಿ ಕೊಳ್ಳೋಣ. ಹೀಗಾದರೆ ಎಂದೂ ಮುಗ್ಗರಿಸಲಾರೆವು. ಇದರಲ್ಲೂ ಸಮತೋಲನವಿವೇಕಾದುದು ಅಗತ್ಯ. ಯುಕ್ತಾಯುಕ್ತ ವಿವೇಚನೆ ಯಾವಾಗಲೂ ಇರಬೇಕು. ಉದ್ದೇಶಪೂರ್ವಕವಾಗಿ ಮಾಡಿದ ಕುಚೋದ್ಯ ಹೇಳಿಕೆಗಳ ಬಗ್ಗೆ ಉದಾಸೀನರಾಗಬೇಕು. ಸತತ ಸಾಧನೆಯಿಂದ ನಾನು ಈ ಸೂಕ್ಷ್ಮ ವಿವೇಚನೆಯ ಕಲೆಯನ್ನು ಸ್ವಲ್ಪ ಮಟ್ಟಿಗೆ ಕೈಗೂಡಿಸಿ ಕೊಂಡಿದ್ದೇನೆಂದು ನನ್ನ ವಿಶ್ವಾಸ.

ಪರಸ್ಪರ ದೋಷಾರೋಪಣೆಗಳ ಈ ವಿಷಮಯ ವಾತಾವರಣ ಹಬ್ಬಿರುವಾಗ, ನಾವೆಂದೂ ತಪ್ಪು ಮಾಡಲಾರೆವೆಂದು ನಂಬಿ ಭ್ರಾಂತಿ ಸ್ವರ್ಗದಲ್ಲಿ ಮೈಮರೆಯುವುದು ತಿಳಿಗೇಡಿತನ. ಅಂಥ ಆನಂದಮಯ

ಸ್ಥಿತಿ ನಮ್ಮದೆಂದು ಇನ್ನು ಮೇಲೆ ಹೇಳಿಕೊಳ್ಳಲಾರೆವು. ಅತಿಪ್ರಯಾಸದಿಂದ ಆಕೃತ್ಯಗಳ ಸೀಮಾಗಡಿಗಳನ್ನು ಖಚಿತವಾಗಿ ಪ್ರತ್ಯೇಕಿಸಿ ಆಮೇಲೆ ಅವುಗಳನ್ನು ನಿರ್ಮೂಲ ಮಾಡುವ ಪ್ರಯತ್ನದಲ್ಲಿ ಯಶಸ್ವಿಗಳಾದರೆ ಶ್ಲಾಘನೀಯ ಸಾಧನೆಯಾದೀತು. ಆತ್ಮ ದೋಷಗಳನ್ನು ಕಂಡು ಕೊಳ್ಳುವ ಮುಕ್ತಮನಸ್ಸಿದ್ದರೆ ಮಾತ್ರ ಇದು ಸಾಧ್ಯ. ನಮ್ಮ ಬೆನ್ನು ನಮಗೆ ಕಾಣದಿರುವುದು ಪ್ರಕೃತಿ ನಿಯಮ. ಇತರರಿಗೇ ಅದು ಗೋಚರ. ಅವರು ಕಂಡಿದ್ದರಿಂದ ಲಾಭ ಪಡೆಯುವುದು ವಿವೇಕ.

## ಸತ್ಯಾನ್ವೇಷಣೆ

ಪ್ರಾರ್ಥನಾ ಸಭೆಗೆಬರುವ ಅವಸರದಲ್ಲಿ ನಿನ್ನೆ ನಾನು ಜುನಗಡದಿಂದು ಬಂದಿದ್ದ ತಂತಿಯನ್ನು ಪೂರ್ಣವಾಗಿ ನೋಡಿರಲಿಲ್ಲ. ಒಂದುಸಾರಿ ಕೇವಲ ಕಣ್ಣು ಹಾಯಿಸಿದ್ದೆ. ಆಮೇಲೆ ಅದನ್ನು ಎಚ್ಚರಿಕೆಯಿಂದ ಪರಿಶೀಲಿಸಿದ್ದೇನೆ. ನಾನು ಉದಾಹರಿಸಿದ ಎಲ್ಲ ಆಪಾದನೆಗಳನ್ನೂ ಅಲ್ಲಿ ಸಹಿಮಾಡಿರುವ ಮಹನೀಯರು ಪುನರುಚ್ಚರಿಸಿದ್ದಾರೆ. ಈ ಆಪಾದನೆಗಳು ನಿಜವಾದಲ್ಲಿ ಅವು ಕಾಥೇವಾಡದ ಹಿಂದೂಗಳಿಗೆ ಅಪಮಾನಕರ; ನಾನು ಪ್ರಕಟಿಸಿರುವಂತೆ ಅಂಗೀಕರಿಸಿರುವ ಘಟನೆಗಳಿಗೂ ಅವು ಮೀರಿಹೋದಲ್ಲಿ ಪಾಕಿಸ್ತಾನದ ಧ್ಯೇಯಕ್ಕೆ ಚ್ಯುತಿ ತರುತ್ತದೆ. ಕಾಥೇವಾಡಕ್ಕೆ ಬಂದು ಸ್ವತಃ ಪರಿಶೀಲಿಸುವಂತೆ ನನ್ನನ್ನು ಆಹ್ವಾನಿಸಿದ್ದಾರೆ. ತಂತಿ ಕಳುಹಿಸಿರುವವರಿಗೆ ನಾನೀಗ ಬರಲು ಸಾಧ್ಯವಿಲ್ಲವೆಂಬುದು ತಿಳಿದಿರಬಹುದು. ಒಂದು ನಿಯೋಗವನ್ನು ನಿಯೋಜಿಸಬೇಕೆಂದು ಅವರು ಕೇಳಿದ್ದಾರೆ. ಇದಕ್ಕೆ ಮೊದಲು ಒಂದು ನ್ಯಾಯ ಸಮ್ಮತ ವಾದವನ್ನು ಅದರು ಮುಂದಿಡಬೇಕಾದುದು ಅಗತ್ಯ. ಕಾಥೇವಾಡದ ಅಥವಾ ಜುನಘಡದ ಹಿಂದೂಗಳನ್ನು ಅಪಮಾನಗೊಳಿಸುವುದೇ ಅವರ ಉದ್ದೇಶವಿರಲಾರದೆಂದು ನಂಬಿದ್ದೇನೆ. ಸತ್ಯವನ್ನು ಹುಡುಕಿ ತೆಗೆದು ಮುಸಲ್ಮಾನರ ಪ್ರಾಣ, ಮಾನ ಆಸ್ತಿಗಳನ್ನು ರಕ್ಷಿಸುವುದೇ ಆಗಿರಬೇಕು. ಪತ್ರಿಕಾ ಪ್ರಚಾರ, ಅದರಲ್ಲೂ ನೀತಿ ಭ್ರಷ್ಟವಾದಾಗ, ಪ್ರಾಣವನ್ನಾಗಲೀ ಮಾನವನ್ನಾಗಲೀ ಸ್ವತ್ತನ್ನಾಗಲೀ ಕಾಪಾಡಲಾರದೆಂದು ಎಲ್ಲರಂತೆ ಅವರೂ ಬಲ್ಲರು. ಅತ್ಯಂತ ಋಜುಮಾರ್ಗದಲ್ಲಿ ಸತ್ಯಕ್ಕೆ ಬದ್ಧರಾಗಿ ನಡೆದು

ತಮ್ಮ ಹಿತಚಿಂತಕ ಹಿಂದೂ ಸ್ನೇಹಿತರ ಬಳಿಗೆ ಹೋಗುವುದರಿಂದಮಾತ್ರ ಈ ದೂರೂ ಉಳಿದೀತು. ಸಹಿ ಮಾಡಿದವರಿಗೆ ಇಂಥ ಸ್ನೇಹಿತರನೇಕ ರಿದ್ದಾರೆಂದೂ ಗೊತ್ತು. ನಾನು ಕಾಥೇವಾಡದಿಂದ ಅತಿ ದೂರದಲ್ಲಿದ್ದರೂ ಸುಮ್ಮನೆ ಕುಳಿತಿಲ್ಲವೆಂದು ಅವರರಿಯಬೇಕು. ಈ ಪ್ರಕರಣವನ್ನು ಉದ್ದೇಶ ಪೂರ್ವಕವಾಗಿ ಮೇಲೆತ್ತಿ ನನಗೆ ಸಾಧ್ಯವಾದ ವಿವರಗಳನ್ನೆಲ್ಲ ಶೇಖರಿ ಸುತ್ತಿದ್ದೇನೆ. ಸರ್ದಾರರನ್ನೂ ಭೇಟಿಯಾಗಿದ್ದೇನೆ. ತಮ್ಮ ಅಧಿಕಾರದಿಂದ ಸಾಧ್ಯವಾದಷ್ಟು ಈ ಜಾತೀಯ ಗಲಭೆಗಳನ್ನು ದಮನಮಾಡಿ, ಅಪರಾಧಿ ಗಳನ್ನು ಉಗ್ರವಾಗಿ ಶಿಕ್ಷಿಸುವ ಆಶ್ವಾಸನವನ್ನವರಿತ್ತಿದ್ದಾರೆ. ಕಾಥೇವಾಡದ ಜಾತೀಯ ಪಕ್ಷಪಾತವಿಲ್ಲದ ಕಾರ್ಯಕರ್ತರು ನಿಜ ಸಂಗತಿಯನ್ನು ಶೋಧಿ ಸಲು ಶ್ರಮಿಸುತ್ತಿದ್ದಾರೆ. ತಮ್ಮ ಪ್ರಾಣದಷ್ಟೇ ಪ್ರಿಯರಾದ ಪ್ರತಿಯೊಬ್ಬ ಮುಸಲ್ಮಾನನಿಗೂ ಆಗಿರುವ ಅನ್ಯಾಯವನ್ನು ಪರಿಹರಿಸಲು ಪ್ರಯತ್ನಿಸು ತ್ತಿದ್ದಾರೆ. ತಂತಿಗೆ ಸಹಿ ಮಾಡಿದವರು ಈ ಕಾರ್ಯದಲ್ಲಿ ಸಹಕರಿಸುವರೆ? ೨೮

# ೫೯. ಉಪವಾಸ ಮುಕ್ತಾಯಮಾಡಿದ ದಿನ ಕೊಟ್ಟ ಸಂದೇಶ

[ ಆ ದಿನ ಸಂಜೆ (೧೮—೧—೧೯೪೮) ಪ್ರಾರ್ಥನಾ ಸಭೆಯಲ್ಲಿ ಓದಲು ಒಂದು ಸಂದೇಶವನ್ನು ಗಾಂಧೀಜೀ ಹೇಳಿ ಬರೆಯಿಸಿದ್ದರು. ಆಮೇಲೆ ತಾವೇ ಹೋಗಿ ಸಭೆಯಲ್ಲಿ ಮಾತನಾಡಲು ನಿರ್ಧರಿಸಿದರು, ವೈದ್ಯರ ಸಲಹೆಯನ್ನು ಮೀರಿ ತಾವಲ್ಲಿಗೆ ಬಂದುದಾಗಿ ತಿಳಿಸಿದರು. ಮೂರನೇ ದಿನದಿಂದ ಬಹುಶಃ ಪ್ರಾರ್ಥನಾ ಸಭೆಯವರೆಗೆ ನಡೆದು ಬರಲಾರೆನೆಂದೂ ನುಡಿದರು. ಉಪವಾಸದ ಮೂರನೇ ದಿನವಾಗಿತ್ತು. ಆ ದಿನ ನಿಶಕ್ತರಾಗಿದ್ದುದರಿಂದ ವೈದ್ಯರು ಶಕ್ತಿ ಸಂಚಿ ಯನಮಾಡಲು ಹೊರಗೆ ಹೋಗಕೂಡದೆಂದು ಸಲಹೆಮಾಡಿದ್ದರೂ ಇದ್ದ ಶಕ್ತಿಯನ್ನು ಬಳಸಿದ್ದರು. ಅವರು ಸಂಪೂರ್ಣವಾಗಿ ಈಶ್ವರಾಧೀನರಾಗಿದ್ದರು, ಬದುಕುವುದು ಅವನ ಇಚ್ಛೆಯಾದರೆ ಎಂದಿಗೂ ಸಾಯಲಾರನೆಂದವರು ನಂಬಿದ್ದರು. ಭಗವಂತನಲ್ಲಿ ನಂಬಿಕೆ ತಮಗೆ ಎಳ್ಳಷ್ಟೂ ಕುಂದಬಾರದೆಂದು ದೃಢವ್ರತರಾಗಿದ್ದರು. ]

## ಸಂದೇಶಗಳ ಸುರಿಮಳೆ

ಮೊದಲು ಬರೆಸಿದ್ದ ವಿವರಣೆಯನ್ನು ಗಮನಿಸದೆ ಮಾತನಾಡುತ್ತಾ ಗಾಂಧೀಜೀ ಹೀಗೆ ನುಡಿದರು; ಬಹಳ ದೂರದವರಿಂದ ಹತ್ತಿರದವರಿಂದ ತಂತಿಗಳು ಬರುತ್ತಿವೆ. ನನ್ನ ದೃಷ್ಟಿಯಲ್ಲಿ ಮಹತ್ವವಾದವೆನ್ನುವ ಕೆಲವು ಸಂದೇಶಗಳಲ್ಲಿ ಕೆಲವರು ನನ್ನ ನಿರ್ಧಾರಕ್ಕಾಗಿ ಅಭಿನಂದಿಸಿ ನನ್ನ ಯೋಗ ಕ್ಷೇಮವನ್ನು ಪರಮಾತ್ಮನಿಗೆ ವಹಿಸಿದ್ದಾರೆ. ಇನ್ನು ಕೆಲವರು ಅತ್ಯಂತ ಸ್ನೇಹಪೂರ್ಣವಾಗಿ ಮೊರೆಯಿಟ್ಟು ನಾನು ನಿರಶನ ವ್ರತವನ್ನು ನಿಲ್ಲಿಸ ಬೇಕೆಂದೂ, ಈ ಉಪವಾಸದೊಂದಿಗೆ ನಾನು ಪ್ರಕಟಿಸಿದ ಹೇಳಿಕೆಯ ಇಂಗಿತದಂತೆ ತಾವು ನಡೆದುಕೊಳ್ಳಲು ಪ್ರಯತ್ನಿಸಿ ಜಾತಿ ಮತಗಳನ್ನು ಮರೆತು ತಮ್ಮ ನೆರೆಹೊರೆಯವರನ್ನು ಪ್ರೇಮದಿಂದ ಕಾಣಲು ಕಂಕಣ ಬದ್ಧರಾಗುವೆವೆಂದೂ ತಿಳಿಸಿದ್ದಾರೆ. ಪ್ರತಿ ಗಂಟೆಗೂ ಬೆಳೆಯುತ್ತಿರುವ ಈ ಸಂದೇಶಗಳ ಸುರಿಮಳೆಯಿಂದ ಹಲವನ್ನು ಆರಿಸಿ ಪತ್ರಿಕೆಗಳಿಗೆ ಕೊಡು ವಂತೆ ಶ್ರೀ ಪ್ಯಾರೇಲಾಲರನ್ನು ಕೋರುತ್ತೇನೆ. ಹಿಂದೂಗಳಿಂದ, ಮುಸಲ್ಮಾನ ರಿಂದ, ಸಿಕ್ಕರಿಂದ ಅವು ಬಂದಿವೆ. ಹೀಗೆ ಭರವಸೆ ನೀಡಿದವರು— ಅವರಲ್ಲನೇಕರು ಸಂಘಸಂಸ್ಥೆಗಳ ಪ್ರತಿನಿಧಿಗಳು — ಆತ್ಮಸಾಕ್ಷಿಯಾಗಿ ಅನುಷ್ಠಾನ ಮಾಡುವುದಾದರೆ ಉಪವಾಸ ಮುಕ್ತಾಯ ಹತ್ತಿರವಾಗಲು ಅವರು ಗಣನೀಯವಾಗಿ ನೆರವಾಗುತ್ತಾರೆ. ಲಾಹೋರಿನಲ್ಲಿರುವ ಶ್ರೀಮತಿ ಮೃದುಲಾ ಬೇನ್ ಅಲ್ಲಿ ಪಾಕಿಸ್ತಾನದ ಅಧಿಕಾರಿಗಳೊಡನೆಯೂ ಸಾಮಾನ್ಯ ಮುಸ್ಲಿಮರೊಡನೆಯೂ ಸಂಪರ್ಕವಿಟ್ಟುಕೊಂಡಿದ್ದಾಳೆ. ಆಕೆ ಈರೀತಿ ತಿಳಿಸಿದ್ದಾಳೆ:

"ಇಲ್ಲಿ ಗಾಂಧೀಜೀಯ ಸ್ನೇಹಿತರನೇಕರು ಗಾಂಧೀಜೀಯ ಆರೋಗ್ಯದ ಬಗ್ಗೆ ಕಳವಳಗೊಂಡಿದ್ದಾರೆ. ಪಾಕಿಸ್ತಾನದ ಮುಸಲ್ಮಾನರು, ಸರಕಾರೀ ಅಧಿಕಾರಿಗಳಾಗಿರಲಿ, ರಾಜಕೀಯ ಪಕ್ಷಗಳ ಸದಸ್ಯರೇ ಆಗಿರಲಿ, ತಮ್ಮ ದೇಶದಲ್ಲೇ ಇದ್ದುಕೊಂಡು ತಾವೇನು ಮಾಡಬೇಕೆಂದು ಗಾಂಧೀಜೀಯ ಇಚ್ಛೆಯಿದೆಯೋ, ತಮ್ಮಿಂದ ಅವರೇನು ನಿರೀಕ್ಷಿಸುವರೋ ತಿಳಿಯಬೇಕೆಂದು ಕಾತುರರಾಗಿರುವರು." ನನ್ನ ಆರೋಗ್ಯದ ವಿಷಯಕ್ಕೆ ಕಾತರರಾದ ಮುಸ ಲ್ಮಾನ ಸ್ನೇಹಿತರು ಪಾಕಿಸ್ತಾನದಲ್ಲಿರುವುದೂ ಅದರಲ್ಲೂ ಹೀಗೆ ನನ್ನನ್ನು

ಕೇಳಲು ಇಚ್ಛೈಸಿರುವುದೂ ಒಂದು ಸುಖಾನುಭವವೇ. ಉಪವಾಸ ವ್ರತ ಆತ್ಮಶುದ್ಧಿಯ ಸಾಧನೆ; ನನ್ನ ಮಹೋದ್ದೇಶಗಳಲ್ಲಿ ಸಹಾನುಭೂತಿಯುಳ್ಳ ಪ್ರತಿಯೊಬ್ಬರೂ ತಮ್ಮ ಅಂತಃಕರಣಗಳನ್ನು ನಿರ್ಮಲಗೊಳಿಸಿಕೊಳ್ಳಲು ಆಹ್ವಾನಿಸುವುದೇ ವ್ರತದ ಗುರಿ. ಪಾಕಿಸ್ತಾನದ ಸರಕಾರೀ ಉದ್ಯೋಗ ದಲ್ಲಿರಲಿ, ರಾಜಕೀಯ ಪಕ್ಷಗಳ ಸದಸ್ಯರಾಗಿರಲಿ ಅಥವಾ ಬೇರೆ ಯಾರಾ ದರೂ ಆಗಲಿ, ನನಗೆ ಸಂದೇಶ ಕಳುಹಿಸಿದ ಮಿತ್ರರಿಗೆಲ್ಲರಿಗೂ, ಲಾಹೋರಿನ ಅನ್ವೇಷಕರಿಗೂ ಕೂಡ ಇದೇ ನನ್ನ ಮರು ಉತ್ತರ.

## ಪಾಕಿಸ್ತಾನಕ್ಕೊಂದು ಮಾತು

ಕರಾಚಿಯಲ್ಲಿ ಸಿಕ್ಕರ ಮೇಲೆ ನಡೆದ ಹೇಡಿತನದ ದುರಾಚಾರವನ್ನು ಕೇಳಿದ್ದೀರಿ. ನಿರಪರಾಧಿಗಳಾದ ಜನ, ಹೆಂಗಸರು—ಮಕ್ಕಳು ನಿರ್ದಯ ವಾಗಿ ಕೊಲ್ಲಲ್ಪಟ್ಟರು; ಅನೇಕರನ್ನು ಲೂಟಿ ಮಾಡಿದರು, ಇತರರು ಓಡಿಹೋಗಬೇಕಾಯಿತು. ಗುಜರಾತಿನಲ್ಲಿ ನಿರಾಶ್ರಿತರ ರೈಲೊಂದರ ಮೇಲೆ ದಾಳಿಮಾಡಿದ ಸುದ್ದಿಯೊಂದು ಈಗ ಬಂದಿದೆ. ವಾಯುವ್ಯ ಗಡಿನಾಡಿನಿಂದ ಬರುತ್ತಿದ್ದ ಮುಸ್ಲಿಮೇತರ ನಿರಾಶ್ರಿತರಿಂದ ತುಂಬಿತ್ತು ಆ ರೈಲುಗಾಡಿ. ಅವರಲ್ಲನೇಕರನ್ನು ಕೊಂದರು; ಮಹಿಳೆಯರ ಮೇಲೆ ಅತ್ಯಾಚಾರ ನಡೆಸಿ ದರು. ನನಗೆ ಸಂಕಟವಾಗುತ್ತದೆ, ಭಾರತ ಎಷ್ಟು ದಿನ ಇದನ್ನು ಸಹಿಸೀತು? ನಾನು ಉಪವಾಸಮಾಡಿದಾಗ್ಯೂ ಅದೆಷ್ಟು ಕಾಲ ಹಿಂದೂಗಳ ಮತ್ತು ಸಿಕ್ಕರ ತಾಳ್ಮೆಯನ್ನು ತಡೆದು ಹಿಡಿದೇನು? ಈ ಪರಿಸ್ಥಿತಿಯನ್ನು ಪಾಕಿಸ್ತಾನ ಕೂಡಲೇ ಪ್ರತಿಬಂಧಿಸಬೇಕು. ತಮ್ಮ ಹೃದಯಗಳನ್ನು ಶುದ್ಧಿಗೊಳಿಸು ಬೇಕು; ಹಿಂದೂಗಳೂ ಸಿಕ್ಕರೂ ಹಿಂತಿರುಗಿ ಸುರಕ್ಷಿತವಾಗಿ ಪಾಕಿಸ್ತಾನದಲ್ಲಿ ಬಾಳುವವರೆಗೂ ವಿಶ್ರಾಂತರಾಗುವುದಿಲ್ಲವೆಂದು ಪ್ರತಿಜ್ಞೆ ಮಾಡಬೇಕು.

ಇಂಥ ಆತ್ಮಶುದ್ಧಿಯ ಮಹಾಪೂರವೊಂದು (ಪಾಕಿಸ್ತಾನದಲ್ಲಿ) ಪ್ರವಹಿಸುವುದಾದರೆ, ಪಾಕಿಸ್ತಾನ ನಿಜವಾಗಿ 'ಪಾಕ್' (ಪವಿತ್ರ ಸ್ಥಾನ) ಆದೀತು. ಹಳೆಯ ಅಪರಾಧಗಳನ್ನು ಮರೆತ, ಗತಕಾಲದ ಭೇದ ಭಾವ ಗಳನ್ನು ಭೂಗತ ಮಾಡಿದ ರಾಜ್ಯವಾದೀತು. ಇಂದು ಕಾಯಿದೆ ಅಜಮ್ ಜಿನ್ನಾರವರ ಜೀವನಕ್ಕೂ ಸ್ಮೃತಿಗೂ ಇರುವ ರಕ್ಷಣೆಯಷ್ಟೇ ರಕ್ಷಣೆಯನ್ನೂ,

ಬಾಳಿಗೆ ಅದೇ ಮನ್ನಣೆಯನ್ನೂ ಅಲ್ಲಿ ಅತ್ಯಂತ ಕನಿಷ್ಠ ಜೀವಿಯೂ ಅನುಭವಿಸಿಯಾ. ಇಂಥ ಪಾಕಿಸ್ತಾನ ಅಮರವಾಗಬಲ್ಲುದು. ಅಲ್ಲಿಯ ವರೆಗೆ ಆ ರಾಜ್ಯ ಪಾಪಜನ್ಯವೆಂದ ನನ್ನ ಅಂದಿನ ಮಾತಿಗಾಗಿ ಪಶ್ಚಾತ್ತಾಪ ಪಡಲಾರೆ. ಇಂದಿಗೂ ಅದೇ ಭಾವನೆ ನನ್ನಲ್ಲಿದೆಯೆಂದೇ ಭಾಸವಾಗುತ್ತಿದೆ. ಕೇವಲ ಕಾಗದದ ಮೇಲಿನ ಅಥವಾ ಪಾಕಿಸ್ತಾನದ ವಾಕ್ಚತುರರ ಭಾಷಣಗಳಲ್ಲಿ ಮೂಡಿಬರುವ ಪಾಕಿಸ್ತಾನವನ್ನಲ್ಲ, ಪಾಕಿಸ್ತಾನದ ಪ್ರತಿಯೊಬ್ಬ ಮುಸಲ್ಮಾನನಲ್ಲಿಯೂ ಮೂಡಿಬರುವಂತಹ ಆ ಪವಿತ್ರ ಪಾಕಿಸ್ತಾನವನ್ನು ನನ್ನ ಜೀವಿತದಲ್ಲಿ ನೋಡಲು ಹಂಬಲಿಸುತ್ತಿದ್ದೇನೆ. ಆಗ ಭಾರತದ ಜನರೂ ತಮ್ಮ ಮಧ್ಯೆ ಇಂಥ ವೈರಭಾವವಿದ್ದುದನ್ನೇ ಮರೆತು, ನನ್ನ ಊಹೆ ತಪ್ಪಾಗದಿದ್ದರೆ, ಭಾರತವೇ ಹೆಮ್ಮೆಯಿಂದ ಪಾಕಿಸ್ತಾನದ ಮೇಲ್ಪಂಕ್ತಿಯನ್ನನುಸರಿಸುತ್ತದೆ. ಆ ವೇಳೆಗೆ ನಾನು ಜೀವಿಸಿದ್ದರೆ ಶ್ರೇಯೋಮಾರ್ಗದಲ್ಲಿ ಪಾಕಿಸ್ತಾನವನ್ನೂ ಮೀರಿಸುವಂತೆ ಭಾರತಕ್ಕೆ ಹೇಳುತ್ತೇನೆ. ನನ್ನ ಉಪವಾಸ ಈ ಮಹಾ ಸಾಧನೆಯ ಗುರಿಗೆ ಎಳ್ಳಷ್ಟೂ ಕಡಮೆಯಲ್ಲ. ನಾವು ಭಾರತದಲ್ಲಿ ಪಾಕಿಸ್ತಾನದ ಅವಿವೇಕಗಳನ್ನೇ ತ್ವರಿತವಾಗಿ ಅನುಕರಿಸಿ ಅವಮಾನಕ್ಕೆ ಗುರಿಯಾಗಿದ್ದೇವೆ.

## ನನ್ನ ಕನಸು

ಬಾಲ್ಯದಲ್ಲಿ ನನಗಿನ್ನೂ ರಾಜಕೀಯದ ಅರಿವೇ ಇಲ್ಲದಿದ್ದಾಗ ಭಿನ್ನ ಮತೀಯರ ಹೃದಯ ಮಿಲನದ ಕನಸನ್ನು ಕಂಡಿದ್ದೆ—ನನ್ನ ಜೀವನ ಸಂಧ್ಯೆಯಲ್ಲಿ ಆ ಸ್ವರ್ಣ ಸ್ವಪ್ನ ಸಿದ್ಧಿಸುವುದಾದರೆ ಮಗುವಿನಂತೆ ಕುಣಿದೇನು. ಪ್ರಾಚೀನ ದ್ರಷ್ಟಾರರು ಬಣ್ಣಿಸಿ ೧೨೫ ವರ್ಷ ಜೀವಿಸುವ ಆಕಾಂಕ್ಷೆಗೆ ಅನುಮತಿಯಿತ್ತಿರುವಂತೆ, ತುಂಬು ಜೀವನದ ಮಹದಾಸೆ ಆಗ ನನ್ನಲ್ಲಿ ಮತ್ತೆ ಚಿಗುರಬಹುದು. ಆ ಕನಸು ನನಸಾಗಲು ತನ್ನ ಜೀವನವನ್ನೇ ಬಲಿದಾನ ಮಾಡಲು ಯಾರು ತಾನೇ ಸಾಹಸಮಾಡದಿದ್ದಾರು? ಆಗಲೇ ನಮಗೆ ನಿಜವಾದ ಸ್ವರಾಜ್ಯ ಸಿದ್ಧಿ. ಆಗ ನಮ್ಮೆರಡು ರಾಜ್ಯಗಳೂ ಕಾನೂನುಬದ್ಧವಾಗಿ, ಭೌಗೋಳಿಕವಾಗಿ ಪ್ರತ್ಯೇಕಿಸಲ್ಪಟ್ಟಿದ್ದರೂ, ನಿತ್ಯ ಜೀವನದಲ್ಲಿ ನಮ್ಮ ಪ್ರತ್ಯೇಕತೆ ಅಳಿಸಿಹೋದೀತು.

ನನ್ನ ಕಣ್ಣಿಗೆ ಕಟ್ಟಿದ ಈ ಹೆಬ್ಬಯಕೆಯು ಹೊಸ ನೋಟ ಸಂಭವಿಸಲ ಸಾಧ್ಯವಾದ ಅದ್ಭುತದಂತೆ ಕಾಣುತ್ತದೆ. ನಿಮಗೂ ಹಾಗೆನ್ನಿಸಿರಬೇಕು. ಆದರೂ ಆ ಪ್ರಸಿದ್ಧ ಚಿತ್ರಕಾರನ ಕೀರ್ತಿವೆತ್ತ ಚಿತ್ರದಲ್ಲಿನ ಪ್ರಸಿದ್ಧ ಹಸುಳೆಯಂತೆ ಅದು ಕೈಗೂಡುವವರೆಗೂ ನಾನು ಅಸುಖಿಯಾಗಿಯೇ ಉಳಿದೇನು. ನಾನು ಜೀವಿಸಿರುವುದೇ, ಜೀವಿಸಲಿಚ್ಛಿಸುವುದೇ ಅಂತಹ ಮಹೋದ್ದೇಶಕ್ಕಾಗಿ; ಪಾಕಿಸ್ತಾನದ ಆ ಸತ್ಯಾನ್ವೇಷಕರು ನನ್ನ ಈ ಪರಮಧ್ಯೇಯಾಭಿಮುಖವಾಗಿ ಮನುಷ್ಯ ಪ್ರಯತ್ನಕ್ಕೆ ನಿಲುಕುವಷ್ಟು ಬಳಿಸಾರಲು ನನಗೆ ನೆರವಾಗಲಿ. ಗುರಿ ಮುಟ್ಟಿಬಿಟ್ಟರೆ ಅದು ಗುರಿಯಾಗಿ ಉಳಿಯುವುದಿಲ್ಲ. ಆದರ ಅತ್ಯಂತ ಸಾಮೀಪ್ಯ ಯಾವಾಗಲೂ ಸಾಧ್ಯ. ಇತರರು ಮಾಡಲಿ ಮಾಡದಿರಲಿ ನಾನು ಹೇಳಿದುದು ಎಲ್ಲ ಕಾಲಕ್ಕೂ ನಿಲ್ಲುವಂತಹ ಮಾತು. ಆ ಕಾಂಕ್ಷಿತ ಸ್ಥಿತಿಗೆ ಅರ್ಹರಾಗುವಂತೆ ಅಣಿಮಾಡಿ ಕೊಳ್ಳಲು ಪ್ರತಿ ವ್ಯಕ್ತಿಯೂ, ಪುರುಷನಾಗಲೀ ಸ್ತ್ರೀಯಾಗಲಿ, ಆತ್ಮಶುದ್ಧಿ ಸಾಧಿಸಲು ಸಾಧ್ಯ. ದೆಹಲಿಯಲ್ಲೋ ಆಗ್ರಾದಲ್ಲೋ ನಾನೀಗ ಮರೆತಿ ದ್ದೇನೆ, ಒಂದುಕೋಟೆಯ ಹೆಬ್ಬಾಗಿಲಿನ ಮೇಲೆ ಬರೆದ ಕವನವೊಂದನ್ನು ನಾನು 1896ರಲ್ಲಿ ಹೋಗಿದ್ದಾಗ ಓದಿದ ಜ್ಞಾಪಕವಿದೆ. ಅದರ ಭಾಷಾಂತರ "ಪೃಥ್ವಿಯ ಮೇಲೊಂದು ಸ್ವರ್ಗವಿದ್ದರೆ ಅದು ಇಲ್ಲಿದೆ, ಇಲ್ಲಿದೆ" ಎಂದಾಗುತ್ತದೆ. ತನ್ನ ಮಹಾ ವೈಭವದ ಅತ್ಯುತ್ಕೃಷ್ಟ ಸ್ಥಿತಿಯಲ್ಲೂ ಆ ಕೋಟೆ ನನ್ನ ದೃಷ್ಟಿಯಲ್ಲಿ ಸ್ವರ್ಗವೆಂದೆನಿಸಲಾರದು. ಆದರೆ ಅದೇ ಕವನದ ಪಂಕ್ತಿಗಳನ್ನು ಪಾಕಿಸ್ತಾನದ ಎಲ್ಲ ಮಹಾದ್ವಾರಗಳ ಮೇಲೂ ಅರ್ಥಪೂರ್ಣವಾಗಿ ಕೆತ್ತುವಂತಾಗಲೆಂದು ನಾನು ಮನಸಾ ಹಾರೈಸುತ್ತೇನೆ. ಪಾಕಿಸ್ತಾನದಲ್ಲಾಗಲಿ, ಭಾರತದಲ್ಲಾಗಲಿ ಅಂಥ ಭೂಸ್ವರ್ಗ ನಿರ್ಮಿತವಾದರೆ ನಿರ್ಗತಿಕನಾಗಲೀ ಅಥವಾ ಭಿಕ್ಷುಕನಾಗಲಿ, ಮೇಲು ಕೀಳು ಭಾವನೆಗಳಾಗಲಿ ಕೆಲಸ ಕೊಡುವ ಕೋಟ್ಯಧೀಶರಾಗಲೀ ಅಥವಾ ಅರೆ ಹೊಟ್ಟೆಯ ಕೂಲಿಗಾರರಾಗಲೀ, ಮಾದಕ ಪದಾರ್ಥ ಗಳಾಗಲೀ ದ್ರವ್ಯಗಳಾಗಲೀ ಇರಲಾರವು. ಸ್ತ್ರೀಪುರುಷರಿಗೆ ಅಲ್ಲಿ ಸಮಾನ ಗೌರವ. ಅವರ ಶೀಲ ಮತ್ತು ಶುದ್ಧ ಚಾರಿತ್ರ್ಯಗಳು ಜಾಗರೂಕತೆ ಯಿಂದ ರಕ್ಷಿಸಲ್ಪಟ್ಟಾವು. ಸ್ವಪತ್ನಿಯನ್ನುಳಿದು ಮಿಕ್ಕೆಲ್ಲ ಸ್ತ್ರೀಯರನ್ನೂ

ಅವರ ವಯೋಮಿತಿಗನುಗುಣವಾಗಿ ತಾಯಿ ಅಕ್ಕ ತಂಗಿ ಮಗಳೆಂದು ಎಲ್ಲ ಜಾತಿಯುವರೂ ಪರಿಗಣಿಸುವರು. ಅಲ್ಲಿ ಅಸ್ಪೃಶ್ಯತೆ ಅಳಿದು ಎಲ್ಲ ಮತಗಳಿಗೂ ಸಮಾನ ಗೌರವ. ಅಲ್ಲಿ ಎಲ್ಲರೂ ಸ್ವಾಭಿಮಾನಿಗಳಾದ, ಆನಂದಭರಿತರಾದ, ಸ್ವಯಂಪ್ರೇರಿತರಾದ ಉಣ್ಣಲು ದುಡಿವ ದುಡಿಮೆಗಾರರು. ನಾನು ಹಾಸಿಗೆಯ ಮೇಲೆ ಕಾಲು ಚಾಚಿ, ಬಿಸಿಲು ಕಾಯಿಸುತ್ತಾ ಚೈತನ್ಯ ಕೊಡುವ ಸೂರ್ಯ ರಶ್ಮಿಯನ್ನನುಭವಿಸುತ್ತಾ ಇಂಥ ಹರ್ಷೋನ್ಮಾದ ಭಾವಾವೇಶದಲ್ಲಿ ತಲ್ಲೀನನಾಗಿಬಿಟ್ಟೆನೆಂದು ತಿಳಿದಲ್ಲಿ, ನನ್ನ ಓದುಗರೂ, ಶ್ರೋತೃಗಳೂ ಕ್ಷಮಿಸಬೇಕು. ನನ್ನ ಉಪವಾಸವನ್ನು ಆದಷ್ಟು ಬೇಗ ಮುಗಿಸಬೇಕೆಂಬ ಆಕಾಂಕ್ಷೆ ನನಗೆ ಎಳ್ಳಷ್ಟೂ ಇಲ್ಲ ಎಂಬ ಭರವಸೆಯನ್ನು ಸಂದೇಹಿಗಳಿಗೂ, ತಿರಸ್ಕಾರ ಬುದ್ಧಿಯುವರಿಗೂ ಇದು ತಂದುಕೊಡಲಿ. ನನ್ನಂಥ ಮೂರ್ಖನ ಈ ಸ್ವರ್ಣ ಸ್ವಪ್ನ ಎಂದಿಗೂ ಕೈಗೂಡದೆ ಈ ಉಪವಾಸ ಕೊನೆಗಾಣದೇ ಹೋದರೂ ಏನೂ ಚಿಂತೆಯಿಲ್ಲ. ಎಷ್ಟು ಕಾಲ ಅಗತ್ಯವೋ ಅಲ್ಲಿಯವರೆಗೂ ಕಾದಿರುವುದರಲ್ಲಿ ನನಗೆ ಆತ್ಮ ತೃಪ್ತಿಯಿದೆ; ಆದರೆ ಕೇವಲ ನನ್ನನ್ನುಳಿಸುವುದಕ್ಕಾಗಿ ಮಾತ್ರ ಜನರು ಕಾರ್ಯನಿಷ್ಠರಾಗುವುದಾದರೆ ನನಗೆ ನೋವಾಗುತ್ತದೆ. ನನ್ನ ಉಪವಾಸ ವ್ರತ ಭಗವಂತನಿಂದಲೇ ಸ್ಫೂರ್ತಿಗೊಂಡುದೆಂದು ನಾನು ಸಾಧಿಸುತ್ತೇನೆ. ಅವನಿಚ್ಛೆಯನ್ನನುಸರಿಸಿ ಯಾವ ಕಾಲಕ್ಕೆ ಕೊನೆಯಾಗಬೇಕೋ ಆಗಲೇ ಅದರ ಮುಕ್ತಾಯ. ಭಗವಂತನ ಮಹಾ ಸಂಕಲ್ಪವನ್ನು ಹಿಂದೆಂದೂ ಮನುಷ್ಯ ಶಕ್ತಿ ಭಗ್ನಗೊಳಿಸಲು ಸಮರ್ಥವಾಗಿಲ್ಲ; ಮುಂದೆಯೂ ಆಗಲಾರದು.[೫೯]

## ೬೦. ಹೇಳಿಕೆ—ಸಂದೇಶ

### ಮೋಕ್ಷದಾಯಕ ಮೃತ್ಯು

ಪ್ರಾರ್ಥನಾ ಸಭೆಗೆ ನಡೆದು ಬರಲು ಗಾಂಧೀಜೀ ಬಹಳ ನಿಶ್ಶಕ್ತರಾಗಿದ್ದರು. ಮಲಗಿರುವೆಡೆಯಿಂದಲೇ ಸಭಿಕರಿಗೆ ನಾಲ್ಕು ಮಾತು ಹೇಳಲು ಇಚ್ಛಿಸಿದರು. ರೇಡಿಯೋ ಶಬ್ದಪ್ರಸಾರ ಯಂತ್ರವನ್ನು ಅವರ ಬಳಿ ಇಡಲಾಯಿತು. ಧ್ವನಿವರ್ಧಕವಿಲ್ಲದಿದ್ದುದರಿಂದ ಆ ಮಾತು ಪ್ರಾರ್ಥನಾ

ಸಭೆಗೆ ಕೇಳುವಂತಿರಲಿಲ್ಲ. ಪ್ರಾರ್ಥನೆಯ ನಂತರ ಗಾಂಧೀಜೀ ಬರೆಸಿದ್ದ ಸಂದೇಶದ ಹಿಂದೀ ಭಾಷಾಂತರವನ್ನು ಓದಲಾಯಿತು. ಪ್ರಸಾರ ಯಂತ್ರದ ಮೂಲಕ ಮಾತನಾಡಿದಾಗ ಗಾಂಧೀಜೀ ತಮ್ಮ ಧ್ವನಿ ಪ್ರಾರ್ಥನಾ ಸಭೆಗೆ ಕೇಳದಿದ್ದುದಕ್ಕಾಗಿ ವಿಷಾದ ವ್ಯಕ್ತಮಾಡಿದರು. ಆದರೂ ಮನೆಯಲ್ಲಿ ಕುಳಿತು ಕೇಳುವ ಅದೃಶ್ಯ ಸಭಿಕರನ್ನು ಕುರಿತು ನಾಲ್ಕು ಮಾತನಾಡಲು ಇಚ್ಛೈಸಿದರು. ಪ್ರಾರ್ಥನಾ ಸಭೆಗೆ ಕೇಳದಿದ್ದುದರಿಂದ ತಮಗೆ ಇಷ್ಟವಿಲ್ಲ ದಿದ್ದರೂ, ತಮ್ಮ ಧ್ವನಿಯನ್ನು ಕೇಳಿ ಸಮಾಧಾನಪಡುವ ಶ್ರೋತೃಗಳಿಗಾಗಿ ಮಾತನಾಡಿದರು. ಪ್ರಾರ್ಥನಾ ಸಭೆಗೆ ಒಂದು ಸಂದೇಶವನ್ನು ಬರೆಸಿದ್ದರು. ಮಾರನೇ ದಿನಕ್ಕೆ ಅಷ್ಟು ಶಕ್ತಿಯೂ ಇರಲಾರದೆಂದು ಶಂಕಿಸಿದ್ದರು.

ಇತರರೇನು ಮಾಡುತ್ತಿದ್ದಾರೆಂದು ತವಕಪಡಬಾರದೆಂದು ಗಾಂಧೀಜೀ ಮನವಿ ಮಾಡಿದರು. ಪ್ರತಿಯೊಬ್ಬರೂ ಆತ್ಮನಿರೀಕ್ಷಣೆಯ ಪ್ರಖರ ಜ್ಯೋತಿಯಿಂದ ಸಾಧ್ಯವಾದಷ್ಟು ಶುದ್ಧ ಹೃದಯರಾಗಬೇಕು. ಜನ ಸಾಕಷ್ಟು ಅಂತಃಶುದ್ಧಿಯನ್ನು ಸಾಧಿಸುವುದಾದರೆ ತಮಗೂ ಭಾರತಕ್ಕೂ ಅವರು ನೆರವಾಗುವುದಲ್ಲದೆ ಅವರ ಉಪವಾಸದ ಕಾಲವನ್ನೂ ಕಡಮೆ ಮಾಡಬಹುದೆಂದು ನಂಬಿದ್ದರು. ಅವರ ಬಗ್ಗೆ ಯಾರಿಗೂ ಕಳವಳ ಬೇಕೊಡದೆಂದರು. ಉತ್ಕೃಷ್ಟರೀತಿಯಲ್ಲಿ ತಮ್ಮನ್ನು ತಾವೇ ಉತ್ತಮ ಪಡಿಸಿಕೊಳ್ಳುವ ದೇಶ ಹಿತಕ್ಕಾಗಿ ದುಡಿಯುವ ವಿಚಾರಮಾಡಬೇಕು. ಸರ್ವರೂ ಮೃತ್ಯುವಶರಾಗುವವರೇ, ಮರಣವನ್ನಾರೂ ತಪ್ಪಿಸಿಕೊಳ್ಳ ಲಾರರು. ಅದ್ದರಿಂದ ಅದಕ್ಕೆ ಭಯವೇಕೆ? ನಿಜವಾಗಿ ನೋಡಿದರೆ ಸಾವು ಸಂಕಟಗಳಿಂದ ಪಾರುಮಾಡುವ ಪರಮ ಮಿತ್ರನಂತೆ.

## ಕಣಕಣವಾಗಿ ಕೊಲ್ಲುವುದು

[ಹೇಳಿ ಬರೆಯಿಸಿದ ಸಂದೇಶದಲ್ಲಿ ಗಾಂಧೀಜೀ ಹೀಗೆ ನುಡಿದಿದ್ದರು.]

ಪತ್ರಿಕಾ ಪ್ರತಿನಿಧಿಗಳು ತಮ್ಮ ಕೆಲವು ಸಂದೇಹಗಳನ್ನು ನಿವಾರಿಸಿ ಕೊಳ್ಳಲು ನನ್ನೊಡನೆ ಭೇಟಿಯಾಗಬೇಕೆಂದು ನಿನ್ನೆ ಕೇಳಿದ್ದರು. ದಿನದ ಕಾರ್ಯಭಾರದಿಂದ ದಣಿದಿದ್ದುದರಿಂದ ಅವರನ್ನು ಭೇಟಿಮಾಡಿ ಚರ್ಚಿಸಲು ನಿಶ್ಶಕ್ತನಾಗಿದ್ದೆ. ಮನ್ನಿಸಬೇಕೆಂದು ಅವರನ್ನು ಕೇಳಿ ತಮ್ಮ ಪ್ರಶ್ನೆಗಳನ್ನು

ಮಾರನೆಯ ದಿನ ನನಗೆ ಬರೆದು ತಿಳಿಸುವಂತೆ ಪ್ರಾರ್ಥಿಸಬೇಕೆಂದು ಶ್ರೀ ಪ್ಯಾರೇಲಾಲರಿಗೆ ಹೇಳಿದ್ದೆ. ಅವರು ಕೇಳಿದ ಪ್ರಶ್ನೆಗಳಿವು.

ಮೊದಲನೆಯ ಪ್ರಶ್ನೆ : ಭಾರತದೊಳಗೆ ಎಲ್ಲೂ ಯಾವ ಗಲಭೆಯೂ ಇಲ್ಲದಿರುವಾಗ ನೀವೇಕೆ ಉಪವಾಸ ಪ್ರಾರಂಭಿಸಿದಿರಿ ?

ಒಂದು ವ್ಯವಸ್ಥಿತ ಗುಂಪು ಮುಸಲ್ಮಾನರ ಮನೆಗಳನ್ನು ಬಲತ್ಕಾರವಾಗಿ ಆಕ್ರಮಿಸಿಕೊಳ್ಳುವ ದೃಢ ನಿರ್ಧಾರದಿಂದ ದಾಳಿಮಾಡಿದರೆ ಅದೇನು ವ್ಯಾಕುಲಕರ ಗಲಭೆಯಾಗಲಿಲ್ಲವೆ? ಪೋಲೀಸಿನವರು ದಾರಿಗಾಣದೆ ಅಶ್ರುವಾಯುವನ್ನು ಪ್ರಯೋಗಿಸಿ ಕೊನೆಗೆ ಆಕಾಶಕ್ಕೆ ಗುಂಡನ್ನುಕೂಡ ಹಾರಿಸಿ ಜನರ ಗುಂಪನ್ನು ಚದುರಿಸಬೇಕಾಗಿ ಬಂತು ಎಂದರೆ ಗಲಭೆ ಎಷ್ಟಾಗಿರಬೇಕು ? ಹೊರಗೆ ಉಲ್ಬಣಿಸದ ಕುತಂತ್ರಗಳಿಂದ ಕಟ್ಟಕಡೆಯ ಮುಸಲ್ಮಾನನನ್ನು ದೆಹಲಿಯಿಂದ ಹೊರದೂಡುವವರೆಗೆ ನಾನು ಕಾದು ಕುಳಿತಿದ್ದರೆ ಪೆದ್ದತನವಾಗುತ್ತಿತ್ತು. ಇದು ಕಣಕಣವಾಗಿ ಕೊಲ್ಲುವ ವಿಧಾನವೆಂದೇ ಹೇಳುತ್ತೇನೆ,

## ಸರದಾರರು

ಎರಡನೆಯ ಪ್ರಶ್ನೆ : ಅಭದ್ರತೆಯಿಂದ ಪೀಡಿತರಾದ ಭಯಗ್ರಸ್ತ ಮುಸಲ್ಮಾನರು ತಮ್ಮ ಕರುಣ ಕಥೆಯನ್ನು ನಿಮ್ಮಲ್ಲಿ ತೋಡಿಕೊಂಡಾಗ, ಗೃಹಶಾಖಾ ಮಂತ್ರಿ ಸರದಾರ ಪಟೇಲರು ಮುಸಲ್ಮಾನ ವಿರೋಧಿಯೆಂದು ಅವರು ದೂರಿಟ್ಟಾಗ ನೀವು ನಿರುತ್ತರರಾಗಬೇಕಾಯಿತೆಂದು ಹೇಳಿದ್ದೀರಿ. ಸರದಾರ್ ಪಟೇಲರು ಹಿಂದಿನಂತೆ ಈಗ ನಿಮ್ಮ ಅವಿಚ್ಛಿನ್ನ ಹಿಂಬಾಲಕರಾಗಿಲ್ಲವೆಂದೂ ಹೇಳಿದ್ದೀರಿ, ಈ ಅಂಶಗಳಿಂದ ನಿಮ್ಮ ಉಪವಾಸ ಸರದಾರರ ಪರಿವರ್ತನೆಗಾಗಿಯೇ ಕೈಗೊಂಡುದೆಂಬಂತೆ ಭಾಸವಾಗಿ ಗೃಹ ಶಾಖೆಯ ನೀತಿಯನ್ನು ಖಂಡಿಸಿದಂತಾಗುತ್ತದೆ. ಈ ವಿಷಯದ ಬಗ್ಗೆ ನಿಮ್ಮ ವಿವರಣೆಯಿಂದ ಸಂದೇಹ ನಿವಾರಣೆಯಾದೀತು.

ಈ ಬಗ್ಗೆ ನನ್ನ ಉತ್ತರ ಖಚಿತವಾಗಿತ್ತು. ನೇರವಾದ ಅರ್ಥಕ್ಕಲ್ಲದೆ ಅನ್ಯಥಾ ವ್ಯಾಖ್ಯಾನಕ್ಕೆ ಎಡೆಗೊಡಲಾರದು. ನೀವು ಊಹಿಸಿರುವ ವಿವರಣೆ ನನ್ನ ಮನಸ್ಸಿನಲ್ಲೆಂದೂ ಸ್ಫುರಿಸಿರಲಿಲ್ಲ. ಇಂಥ ಅಪಾರ್ಥವನ್ನು ನನ್ನ

ಹೇಳಿಕೆಯಲ್ಲಿ ಕಾಣಬಹುದೆಂದು ನನಗೆ ಗೋಚರವಾಗಿದ್ದರೆ ಮುನ್ನಿರೀಕ್ಷಣೆ ಯಿಂದ ಅಂಥ ಸಂದೇಹವನ್ನು ನಾನು ನಿವಾರಿಸ ಬೇಕಾಗಿತ್ತು. ಹಲವು ಮುಸಲ್ಮಾನ ಸ್ನೇಹಿತರು ಸರದಾರರಿಗೆ ಆರೋಪಿಸಲ್ಪಟ್ಟ ಈ ಮುಸಲ್ಮಾನ ವಿರೋಧ ಮನೋಭಾವನೆಯ ಬಗ್ಗೆ ದೂರಿದ್ದರು. ಇದರಿಂದಾದ ನನ್ನ ಮನೋವೇದನೆಯನ್ನು ಅದುಮಿಟ್ಟು ಮೂಕನಾಗಿಯೇ ಆಲಿಸಿದ್ದೆ. ಈ ಸ್ವಯಂಪ್ರೇರಿತ ಸಂಯಮದಿಂದ ಹೊರಬರಲು ಉಪವಾಸ ಕಾರಣವಾ ಯಿತು. ಆದರಿಂದ ನಿಷ್ಕಾರಣವಾಗಿ ನನ್ನನ್ನೂ ಜವಹರಲಾಲರನ್ನೂ ಹೊಗಳಿ ಗಗನಕ್ಕೇರಿಸುವವರು ನಮ್ಮಿಬ್ಬರಿಂದ ಸರ್ದಾರರನ್ನು ಪ್ರತ್ಯೇಕಿ ಸುವುದು ತಪ್ಪೆಂದು ಆ ಶೋಧಕರ ಮನಸ್ಸಿಗೆ ದೃಢಪಡಿಸುವುದು ಸಾಧ್ಯವಾಯಿತು. ಹೀಗೆ ಪ್ರತ್ಯೇಕಿಸುವುದರಿಂದ ಏನೂ ಪ್ರಯೋಜನ ವಿರಲಿಲ್ಲ. ಉದ್ದೇಶವಿಲ್ಲದಿದ್ದರೂ, ಕೆಲವು ಸಾರಿ ನೋಯಿಸುವ ನಿಷ್ಠುರತೆ ಸರದಾರರ ನುಡಿಯಲ್ಲುಂಟು; ಆದರೆ ಅವರ ಹೃದಯ ವೈಶಾಲ್ಯ ಸರ್ವ ಭೂತಹಿತನಿಷ್ಠವಾದುದು. ಆಜೀವ ಪರ್ಯಂತ ನಿಷ್ಠಾವಂತ ಗೆಳೆಯರಾದವ ರೊಬ್ಬರನ್ನು ಅನುಚಿತ ಅಪವಾದಗಳಿಂದ ಪಾರುಮಾಡುವ ಉದ್ದೇಶ ಕ್ಕಾಗಿಯೇ ನಾನು ಹೇಳಿಕೆ ಕೊಟ್ಟೆ. ನಾನು ಆತ್ಮೀಯತೆಯಿಂದ ಶ್ಲಾಘಿಸಿರುವ ಕಾರಣಕ್ಕಾಗಿ ಸರದಾರರನ್ನು ನಿಸ್ಸತ್ವ ಹಿಂಬಾಲಕರಂತೆ ನಾನು ಕಾಣಬಹು ದೆಂಬ ಅಪಾರ್ಥಕ್ಕೆ ಎಡೆಗೊಡಬಾರದೆಂದು ಯಾರ ಬಾಲಬಡಕರೂ ಆಗ ಲಾರದ ಸತ್ವಪೂರ್ಣ ನಾಯಕ ಸರದಾರರು ' ಎಂಬ ವಿಶೇಷ ವಾಕ್ಯವನ್ನು ಸೇರಿಸಿದೆ. ನನ್ನ ಹಿಂಬಾಲಕರೆಂದೆನಿಸಿಕೊಳ್ಳಲು ಅವರು ಸಮ್ಮತಿಸಿದಾಗ ನನ್ನ ಮಾತುಗಳು ಅವರಿಗೆ ಸ್ವಾಭಾವಿಕವಾಗಿ ಒಪ್ಪಿಗೆಯಾಯಿತೆಂಬ ಕಾರಣ ದಿಂದಲೇ ಹಾಗೆ ಮಾಡಿದರು. ತಮ್ಮ ಕ್ಷೇತ್ರದಲ್ಲಿ ಅನುಪಮ ನಿಸ್ಸೀಮತೆ ಪಡೆದು, ಸಮರ್ಥ ಆಡಳಿತಗಾರರಾಗಿದ್ದರೂ ನನ್ನ ಬಳಿ ತಮ್ಮ ರಾಜನೈತಿಕ ಶಿಕ್ಷಣ ಪ್ರಾರಂಭಿಸುವ ನಮ್ರತೆ ಅವರಲ್ಲಿತ್ತು. ಏಕೆಂದರೆ ಭಾರತದಲ್ಲಿ ನಾನು ಸಾರ್ವಜನಿಕ ಕಾರ್ಯಕ್ಕೆ ತೊಡಗಿದಾಗ ಪ್ರಚಲಿತವಾಗಿದ್ದ ರಾಜ ಕೀಯಕ್ಕೆ ಅವರು ಹೊಂದಿಕೊಳ್ಳಲಾಗಿರಲಿಲ್ಲವೆಂದು ಅವರೇ ವಿವರಿಸಿದರು. ಅಧಿಕಾರ ಅವರ ಕೈವಶವಾದಾಗ ಯಾವ ಅಹಿಂಸೆಯನ್ನು ಹಿಂದೆ ಅವರೇ ಯಶಸ್ವಿಯಾಗಿ ಪ್ರಯೋಗಮಾಡಿದ್ದರೋ ಅದೇ ಪ್ರಕ್ರಿಯೆಯನ್ನು ಈಗ

ಯಶಸ್ವಿಯಾಗಿ ಅನ್ವಯ ಮಾಡುವುದು ಅಸಾಧ್ಯವೆಂದು ತಿಳಿದರು. ನಾನೂ ನನ್ನ ಸಹೋದ್ಯೋಗಿಗಳೂ ಯಾವುದನ್ನು ಆಗ 'ಅಹಿಂಸೆ'ಯೆಂದು ಕರೆದೆವೋ ಅದು ನಿಜವಾಗಿ ಶುದ್ಧ ವಸ್ತುವಾಗಿರಲಿಲ್ಲ; ಕೇವಲ ನಿಷ್ಕ್ರಿಯ ನಿರೋಧವಾಗಿತ್ತೆಂದು ಈಗ ನಾನು ಕಂಡುಕೊಂಡಿದ್ದೇನೆ. ರಾಜ್ಯಸೂತ್ರ ಹಿಡಿದ ರಾಜನಿಗೆ ನಿಷ್ಕ್ರಿಯ ನಿರೋಧ ಸಹಜವಾಗಿಯೇ ಅನುಪಯುಕ್ತ ವಾದುದು. ಬಲಹೀನ ದೊರೆಯೊಬ್ಬ ತನ್ನ ಪ್ರಜೆಗಳನ್ನು ಪ್ರತಿನಿಧಿಸಿದ್ದೇ ಆದರೆ ತಾತ್ಕಾಲಿಕವಾಗಿ ಅವನಲ್ಲಿ ಪೂರ್ಣ ನೆಚ್ಚಿಗೆಯನ್ನಿಟ್ಟು ಅಧಿಕಾರ ಕ್ಕೊಳಗಾದ ಅವನ ಧಣಿಗಳನ್ನೇ ಅವನು ಅಧೋಗತಿಗೆ ನೂಕಿಬಿಡುತ್ತಾನೆ. ತಮ್ಮಲ್ಲಿಟ್ಟ ನೆಚ್ಚಿಕೆಗೆ ದ್ರೋಹವೆಸಗುವುದನ್ನಾಗಲೀ, ಅಧೋಗತಿಗೆ ನೂಕುವುದನ್ನಾಗಲೀ ಸರದಾರರೆಂದೆಂದಿಗೂ ಮಾಡಲಾರರೆಂದು ನನಗೆ ಗೊತ್ತು.

## ಉಪವಾಸದ ಉದ್ದೇಶ

ನನ್ನ ಹೇಳಿಕೆಯ ಈ ಹಿನ್ನೆಲೆಯನ್ನು ತಿಳಿದಮೇಲೂ ಗೃಹ ಶಾಖೆಯ ನೀತಿ ಖಂಡನೆಗಾಗಿಯೇ ಈ ಉಪವಾಸವೆಂದು ಯಾರೂ ಹೇಳುವ ಧೈರ್ಯ ಮಾಡಲಾರರು. ಅಂಥವರಿದ್ದರೆ ಅವರು ತಾವೇ ಅಧೋಗತಿಗಿಳಿದು ಆತ್ಮ ಘಾತಕರಾದಾರೇ ಹೊರತು ನನ್ನನ್ನಾಗಲೀ ಸರದಾರರನ್ನಾಗಲೀ ಸೆಳೆಯ ಲಾರರೆಂದು ಹೇಳಬಯಸುತ್ತೇನೆ. ಈ ಹಿಂದೆ ಖಚಿತವಾಗಿ ನಾನಂದಂತೆ ಯಾವ ಬಾಹ್ಯ ಶಕ್ತಿಯೂ ಮನುಷ್ಯನನ್ನು ಅಧೋಗತಿಗೆಳೆಯಲಾರದು. ಅವನು ತನಗೆ ತಾನೇ ಅಧೋಗತಿಗಿಳಿಯಬಲ್ಲ. ಇಲ್ಲಿ ಈ ವಾಕ್ಯ ಅಸಂಬದ್ಧ ವೆನಿಸಿದರೂ, ಎಲ್ಲ ಸಂದರ್ಭಗಳಲ್ಲೂ ಪುನರುಚ್ಚರಿಸುವಂಥ ಮಹಾ ಸತ್ಯ ಈ ಮಾತು. ಸರಳ ನುಡಿಯಲ್ಲಿ ಹೇಳುವುದಾದರೆ ಈ ನನ್ನ ಉಪವಾಸ ಭಾರತದ ಮುಸಲ್ಮಾನ ಅಲ್ಪಸಂಖ್ಯಾತರ ಪರವಾಗಿಯೇ ಕೈಗೊಂಡುದು. ಆದ್ದರಿಂದ ಹಿಂದೂಗಳ ಸಿಕ್ಕರ ಹಾಗೂ ಪಾಕಿಸ್ತಾನದ ಮುಸಲ್ಮಾನರ ವಿರೋಧವಾದುದು. ಭಾರತದ ಮುಸಲ್ಮಾನ ಅಲ್ಪಸಂಖ್ಯಾತರ ಪರವಾ ಗಿದ್ದಂತೆಯೇ, ಪಾಕಿಸ್ತಾನದ ಅಲ್ಪಸಂಖ್ಯಾತರ ಪರವಾಗಿಯೂ. ನಾನಾಗಲೇ ವಿವರಿಸಿದ ಭಾವನೆಗಳ ಅಸಮರ್ಪಕ ಸಂಗ್ರಹಣೆ ಇದು. ನಾನು ನಿಜವಾಗಿ

ಒಪ್ಪಿಕೊಳ್ಳುವಂತೆ ಒಬ್ಬ ಅಪೂರ್ಣನಾದ ಬಲಹೀನ ಮಾನವನು ಕೈಗೊಂಡ ಈ ಉಪವಾಸ, ತನ್ನಾಶ್ರಯದಲ್ಲಿರುವವರಿಗೆ ಎಲ್ಲ ಅಪಾಯಗಳಿಂದಲೂ ರಕ್ಷಿಸುವಂಥ ಅಂತಃಶಕ್ತಿಯುಳ್ಳದ್ದೆಂದು ನಾನು ನಿರೀಕ್ಷಿಸುವುದಿಲ್ಲ. ಸರ್ವರಿಗೂ ಆತ್ಮಶುದ್ಧಿಯಾಗುವ ಕಾರ್ಯವಿಧಾನ ಉಪವಾಸವ್ರತ. ಈ ಹೆಜ್ಜೆಯ ಪಾವಿತ್ರ್ಯವನ್ನು ಕುರಿತು ಕುತ್ಸಿತ ಟೀಕೆ ಸಲ್ಲದು.

## ಅಪಾರ್ಥಕ್ಕೆ ಎಡೆಯಿಲ್ಲ

ಮೂರನೆಯ ಪ್ರಶ್ನೆ; ವಿಶ್ವ ಸಂಸ್ಥೆಯ ಭದ್ರತಾ ಸಮಿತಿ ಸಭೆ ಸೇರುವ ವೇಳೆಗೆ ಸರಿಯಾಗಿ, ಕರಾಚಿಯ ಗಲಭೆಗಳು ಮತ್ತು ಗುಜರಾತಿನ ಕಗ್ಗೊಲೆಗಳಾದ ತರುಣದಲ್ಲೇ ನಿಮ್ಮ ಉಪವಾಸ ಪ್ರಾರಂಭವಾಗಿದೆ. ವಿದೇಶೀ ಪತ್ರಿಕೆಗಳಲ್ಲಿ ಈ ಘಟನೆಗಳು ಎಷ್ಟು ಪ್ರಚಾರಮಾಡಲ್ಪಟ್ಟವೋ ತಿಳಿಯದು. ಆದರೆ ನಿಮ್ಮ ಉಪವಾಸ ಈ ಘಟನೆಗಳನ್ನೆಲ್ಲ ಬದಿಗೊತ್ತಿ ಬಿಟ್ಟಿದೆ. ಭಾರತದ ಮುಸ್ಲಿಮರಿಗೆ ಜೀವಿಸಲಸಾಧ್ಯವಾದ ಪರಿಸ್ಥಿತಿಯನ್ನುಂಟುಮಾಡುತ್ತಿರುವ ತಮ್ಮ ಹಿಂದೂ ಅನುಯಾಯಿಗಳಿಗೆ ಬುದ್ಧಿ ಕಲಿಸಲು ಮಹಾತ್ಮರು ಉಪವಾಸ ಮಾಡುತ್ತಿದ್ದಾರೆಂದು ಸಾರಲು ಪಾಕಿಸ್ತಾನದ ಪ್ರತಿನಿಧಿಗಳು ಸಮಯ ಸಾಧಿಸದಿದ್ದರೆ ಅವರ ಸ್ವಭಾವಕ್ಕೇ ವಿರೋಧವಾದೀತು. ಪ್ರಪಂಚದ ಮೂಲೆಗಳಿಗೆ ಸತ್ಯಾಂಶ ತಲಪಲು ಒಂದು ಯುಗವೇ ಹಿಡಿದೀತು. ಈ ಮಧ್ಯೆ ನಿಮ್ಮ ಉಪವಾಸ ವಿಶ್ವ ಸಂಸ್ಥೆಯ ದೃಷ್ಟಿಯಿಂದ ನಮ್ಮ ವಾದಕ್ಕೆ ವಿರೋಧ ಭಾವನೆಯನ್ನು ಸೃಷ್ಟಿಸುವ ಪರಿಣಾಮ ಮಾಡುತ್ತದೆ.

ಈ ಪ್ರಶ್ನೆಗೆ ಯಾವ ವಿವರವಾದ ಉತ್ತರವೂ ಬೇಕಿಲ್ಲ. ಭಾರತದ ಹೊರಗಿನ ರಾಷ್ಟ್ರಗಳ ಮೇಲೂ, ಜನರ ಮೇಲೂ ನನ್ನ ಉಪವಾಸ ಒಳ್ಳೆಯ ಪ್ರಭಾವವನ್ನೇ ಮಾಡಿದೆ ಎಂದು ಧೈರ್ಯವಾಗಿ ಹೇಳಬಲ್ಲೆ. ನಿಷ್ಪಕ್ಷಪಾತವಾದ ವಕ್ರರಹಿತ ಮನೋಧರ್ಮದ ಪರಕೀಯರು, ಭಾರತದಲ್ಲಾಗುತ್ತಿರುವುದನ್ನು ಗಮನಿಸುವುದಾದರೆ ಭಾರತ ಪಾಕಿಸ್ತಾನಗಳೆರಡರ ಜನತೆಯಲ್ಲಿಯೂ ಸನ್ಮತಿಯುಂಟಾಗಲೆಂದು ಕೈಗೊಂಡ ಈ ಉಪವಾಸವನ್ನು ಅಪಾರ್ಥ ಮಾಡಲಾರರು. ಪಾಕಿಸ್ತಾನದ ಮುಸಲ್ಮಾನ ಬಹುಸಂಖ್ಯಾತರು

ಸಜ್ಜನರಂತೆ ವರ್ತಿಸದಿದ್ದಲ್ಲಿ ಭಾರತದ ಮುಸಲ್ಮಾನರನ್ನು ರಕ್ಷಿಸುವುದು ಅಸಾಧ್ಯವಾಗುತ್ತದೆ. ಅದೃಷ್ಟವಶಾತ್ ಪಾಕಿಸ್ತಾನದ ಮುಸಲ್ಮಾನರು ಕರ್ತವ್ಯನಿಷ್ಠೆಯ ಬಗ್ಗೆ ಎಚ್ಚರವಾಗಿರುವುದು ಶ್ರೀಮತಿ ಮೃದುಲಾ ಜೆನ್ ರವರ ಪತ್ರದಿಂದ ವೇದ್ಯವಾಗುತ್ತದೆ. ಹೊಸದಾಗಿ ನಿರ್ಮಿತವಾಗಿರುವ ನಮ್ಮೆರಡು ರಾಷ್ಟ್ರಗಳಿಗೆ ಸರಿಯಾಗಿ ಮಾರ್ಗದರ್ಶನ ಮಾಡುವಂಥ ಸರಿಯಾದ ನಿರ್ಧಾರಕ್ಕೆ ಬರಲು ನನ್ನ ಉಪವಾಸ ಸಹಾಯಕವೆಂಬುದನ್ನು ವಿಶ್ವಸಂಸ್ಥೆ ಬಲ್ಲುದು.[೬೦]

## ೬೧. ಮತ್ತೊಂದು ಸಂದೇಶ

[ತಮ್ಮ ಸಂದೇಶವನ್ನು ಪ್ರಾರ್ಥನಾ ಸಭೆಗೆ ಓದಿ ಹೇಳುವ ಮುನ್ನ ಗಾಂಧೀಜೀ ಮಲಗಿದ್ದ ಕಡೆಯಿಂದಲೇ ಧ್ವನಿವರ್ಧಕದ ಮೂಲಕ ಮಾತನಾಡಿದರು. ಆ ದಿನ ಮಾತನಾಡಲು ತಾವು ಶಕ್ತರಾಗಿರಲಾರರೆಂದು ನಿರೀಕ್ಷೆಯಿದ್ದರೂ ತಮ್ಮ ಧ್ವನಿ ಎಂದಿಗಿಂತ ದೃಢವಾಗಿರುವುದನ್ನು ಕೇಳಿ ಶ್ರೋತೃಗಳು ಹರ್ಷಿತರಾಗಬಹುದೆಂದರು. ಪರಮಾತ್ಮನ ಕೃಪೆ ಇಲ್ಲದೆ ಬೇರೇನೊಂದೂ ಕಾರಣವೆಂದು ಹೇಳಲಾಗುವುದಿಲ್ಲ; ಹಿಂದಿನ ಉಪವಾಸಗಳಲ್ಲಿ ನಾಲ್ಕನೆಯ ದಿನ ತಾವು ಎಂದೂ ಇಷ್ಟು ಸಶಕ್ತರಾಗಿರಲಿಲ್ಲವೆಂದರು. ಈ ಆತ್ಮಶುದ್ಧಿಯ ಮಹಾಯಜ್ಞದಲ್ಲಿ ಅವರೆಲ್ಲರೂ ಎಂದಿನಂತೆ ಸಹಭಾಗಿಗಳಾಗುವುದಾದರೆ ತಮಗೆ ಕೊನೆಯುಸಿರಿರುವವರೆಗೂ ಮಾತನಾಡುವ ಶಕ್ತಿ ಬಂದೀತೆಂದರು. ಉಪವಾಸವನ್ನು ಮುಗಿಸಲು ಅವರು ಆತುರರಾಗಿರಲಿಲ್ಲ. ಆತುರದಿಂದ ಹಾನಿಯಾಗುವುದೆಂದೂ, ಈ ಪ್ರಯೋಗ ಇನ್ನೂ ಅಪೂರ್ಣವಾಗಿರುವಾಗಲೇ ಪರಿಸ್ಥಿತಿಯೆಲ್ಲವೂ ಸುಧಾರಿಸಿಬಿಟ್ಟಿತೆಂದೂ ಯಾರೂ ತಮಗೆ ಬಂದು ಹೇಳಬಾರದೆಂದರು. ದೆಹಲಿ ನಗರ ನಿಜವಾಗಿ ಪ್ರಶಾಂತವಾದುದಾದರೆ ಇಡೀ ದೇಶದಲ್ಲಿ ಅದರ ಪ್ರಭಾವ ಪಸರಿಸುತ್ತದೆ; ಇಂಥ ಶಾಂತಿ ಎರಡು ರಾಷ್ಟ್ರಗಳಲ್ಲೂ ಪ್ರತಿಷ್ಠಿತವಾಗದಿದ್ದಲ್ಲಿ ತಾವು ಬದುಕಲಿಚ್ಛಿಸುವುದಿಲ್ಲ ಎಂದು ನುಡಿದರು.]

## ಕಶ್ಮಲರಹಿತ ಸೌಜನ್ಯ

ಗಾಂಧೀಜೀ ಬರೆದು ಕಳುಹಿಸಿದ ಸಂದೇಶ ಹೀಗಿತ್ತು :

ಜವಾಬದಾರಿಯುತವಾದ ಯಾವ ಸರಕಾರಕ್ಕೂ ಖಚಿತವಾಗಿ ಆಲೋಚಿಸಿ ನಿರ್ಧರಿಸಿರುವ ತನ್ನ ನೀತಿಯನ್ನು ಬದಲಿಸುವುದು ಅಷ್ಟೇನೂ ಸುಲಭವಾದ ಕೆಲಸವಲ್ಲ. ನಮ್ಮ ಸಚಿವ ಸಂಪುಟ ಅತ್ಯಂತ ಜವಾಬದಾರಿ ಯುತವಾದುದಾದರೂ, ಅಷ್ಟೇ ಗಂಭೀರವಾಗಿ ಆಲೋಚಿಸಿ ತನ್ನ ನಿರ್ಧಾರ ಯುತ ನಿರ್ಣಯವನ್ನೂ ಅತಿ ಕ್ಷಿಪ್ರವಾಗಿ ಬದಲಿಸಿತು.* ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಕರಾಚಿಯಿಂದ ಅಸ್ಸಾಂ ಗಡಿಯವರೆಗೆ ಇಡೀ ರಾಷ್ಟ್ರದ ಹೃತ್ಪೂರ್ವಕ ಅಭಿನಂದನೆಗೆ ಅವರು ಪಾತ್ರರಾಗಿದ್ದಾರೆ. ನಮ್ಮ ಸಂಪುಟದಂಥ ಉದಾತ್ತ ಮನೋಧರ್ಮದ ಸರಕಾರ ಮಾತ್ರ ಕೈಗೊಳ್ಳ ಬಹುದಾದ ಔದಾರ್ಯವೆಂದು ಜಗತ್ತಿನ ಎಲ್ಲ ದೇಶಗಳೂ ಸ್ತುತಿಸುವು ವೆಂದು ನಾನು ಬಲ್ಲೆ. ಮುಸಲ್ಮಾನರ ದಾಹಶಮನಕ್ಕಾಗಿ ಕೈಗೊಂಡ ಹೆಜ್ಜೆಯಲ್ಲ ಇದು. ಹಾಗೆನ್ನುವುದಾದರೆ ಇದು ಆತ್ಮತೃಪ್ತಿಯ ನೀತಿ ಯೆಂದೇ ಕರೆಯಿರಿ. ಕೇವಲ ಅವಿಚಾರೀ ಜನರ ಆತುರದ ಹೊಗಳಿಕೆಗಾಗಿ ಮಹಾಜನತೆಯೊಂದರ ಪ್ರತಿನಿಧಿಯೆನಿಸಿಕೊಳ್ಳುವ ಯಾವ ಸಚಿವ ಸಂಪುಟವೂ ಇಂಥ ಮಹತ್ತರವಾದ ಕಾರ್ಯವನ್ನು ಕೈಗೊಳ್ಳಲಾಗುವುದಿಲ್ಲ. ಬುದ್ಧಿಭ್ರಮಣೆ ಸುತ್ತಲೂ ಆವರಿಸಿದಾಗ ನಮ್ಮ ಅತ್ಯುತ್ಕೃಷ್ಟ ಪ್ರತಿನಿಧಿ ಗಳಾದವರು ತಮ್ಮ ವಿವೇಕವನ್ನು ಕಾಯ್ದುಕೊಂಡು ತಮ್ಮ ಆಡಳಿತ

---

* ಭಾರತ ವಿಭಜನೆಯಾಗುವುದಕ್ಕೆ ಮುನ್ನ ಇದ್ದ ನಗದು ಹಣ ೩೭೫ ಕೋಟಿಗಳಲ್ಲಿ ೫೫ ಕೋಟಿ ರೂ. ಪಾಕಿಸ್ತಾನಕ್ಕೆ ಕೊಡತಕ್ಕದೆಂದು ಎರಡೂ ರಾಜ್ಯಗಳ ಒಪ್ಪಿಗೆಯಾಗಿತ್ತು. ಅಧಿಕಾರ ವರ್ಗಾವಣೆಯ ಕಾಲದಲ್ಲಿ ೨೦ ಕೋಟಿ ಪಾಕಿಸ್ತಾನಕ್ಕೆ ಕೊಡಲ್ಪಟ್ಟು ಉಳಿದಿದು ಬಾಕಿ ಯಿತ್ತು. ಕಾಶ್ಮೀರದ ಪ್ರಶ್ನೆ ವಿಷಯವಾಗಿ ಎರಡು ರಾಜ್ಯಗಳೂ ಯುದ್ಧದಲ್ಲಿ ತೊಡಗಿದವು. ಭಾರತ ಸರಕಾರ ಕೊಡಬೇಕಾಗಿದ್ದ ಹಣವನ್ನು ನಿಲ್ಲಿಸಿತು. ಆ ಸಂದರ್ಭದಲ್ಲಿಯೇ ಗಾಂಧೀಜೀ ಉಪವಾಸ ಮಾಡಿದರು. ಇದರ ಪರಿಣಾಮವಾಗಿ ಭಾರತ ಸರಕಾರದ ನಿರ್ಧಾರ ಬದಲಾದುದು.

ದಲ್ಲಿರುವ ರಾಷ್ಟ್ರನೌಕೆಯನ್ನು ಆತ್ಮವಿನಾಶ ಮಾರ್ಗದಿಂದ ಕಾಪಾಡಲು ಸ್ಥೈರ್ಯವನ್ನು ಳಿಸಿಕೊಳ್ಳಬೇಡವೇ? ಇದನ್ನು ಪ್ರಚೋದಿಸಿದ ಪ್ರೇರಕ ಶಕ್ತಿ ಯಾವುದು? ನನ್ನ ಉಪವಾಸವ್ರತವೇ. ಮನೋಘೋರಣೆಯನ್ನೇ ಅದು ಸಂಪೂರ್ಣವಾಗಿ ಬದಲಿಸಿ ಬಿಟ್ಟಿತು. ಕಾನೂನುಬದ್ಧವಾಗಿ ಎಷ್ಟು ದೂರ ಹೋಗಬಹುದೋ ಅಷ್ಟು ಮಾತ್ರ ಅವರಿಗೆ ಸಾಧ್ಯವಾಗುತ್ತಿತ್ತು ಈ ಉಪವಾಸವಿಲ್ಲದೇ ಹೋಗಿದ್ದರೆ. ಆದರೆ ಈಗ ಭಾರತ ಸರಕಾರ ಕೈಗೊಂಡ ಕ್ರಮ ಸಂಪೂರ್ಣವಾಗಿ ಪ್ರೇಮಾಧಾರಿತ ಸೌಜನ್ಯ. ಪಾಕಿಸ್ತಾನ ಸರಕಾರವನ್ನದು ಸತ್ವಪರೀಕ್ಷೆಗೀಡುಮಾಡಿದೆ. ಕಾಶ್ಮೀರ ಸಮಸ್ಯೆಯೊಂದೇ ಅಲ್ಲದೆ ಎರಡು ರಾಷ್ಟ್ರಗಳ ನಡುವಿನ ಎಲ್ಲ ಸಮಸ್ಯೆಗಳ ಗೌರವಯುತ ಪರಿಹಾರಕ್ಕೆ ಅದು ದಾರಿಮಾಡಕೊಡಬೇಕು. ಈಗಿನ ವೈರ ಸ್ನೇಹಕ್ಕೆಡೆ ಗೊಡಬೇಕು. ನೀತಿಧರ್ಮ ಕಾನೂನು ನಿಯಮಗಳನ್ನು ಮೀರಿ ನಿಲ್ಲು ವುದು. ಇಂಗ್ಲೆಂಡಿನಲ್ಲಿ ಶತಮಾನಗಳಿಂದ ಅನುಷ್ಠಾನದಲ್ಲಿರುವ ಸರಳ ವಾದ ನ್ಯಾಯಸೂತ್ರವೊಂದಿದೆ: "ಕಾನೂನು ನಿಷ್ಫಲವಾದಾಗ ನೀತಿ ಧರ್ಮ ಕಾಪಾಡುತ್ತದೆ" ಎಂದು. ಇತ್ತೀಚಿನವರೆವಿಗೂ ಕಾನೂನಿಗೂ ನೀತಿಧರ್ಮಕ್ಕೂ ಬೇರೆ ಬೇರೆ ನ್ಯಾಯಾಲಯಗಳೇ ಇದ್ದುವು. ಈ ಹಿನ್ನೆಲೆಯಲ್ಲಿ ನೋಡಿದಾಗ ಭಾರತ ಸರಕಾರದ ಈ ಕ್ರಮದ ನಿಸ್ಸಂಶಯ ನ್ಯಾಯಬದ್ಧತೆಯನ್ನು ಪ್ರಶ್ನಿಸಲಾಗುವುದೇ ಇಲ್ಲ. ಇದಕ್ಕೊಂದು ಹಿಂದಿನ ನಿದರ್ಶನ ಬೇಕಾದಲ್ಲಿ ಮ್ಯಾಕ್ಡೊನಾಲ್ಡ್ ತೀರ್ಪು ಎಂದು ಪ್ರಸಿದ್ಧ ವಾಗಿರುವ ಪ್ರಖರ ನಿದರ್ಶನವಿದೆ. ಆ ತೀರ್ಪು ಬ್ರಿಟಿಷ್ ಮಂತ್ರಿ ಮಂಡಲದ ಸರ್ವಾನುಮತವನ್ನಲ್ಲದೆ ಎರಡನೇ ದುಂಡು ಮೇಜು ಪರಿ ಷತ್ತಿನ ಬಹುಸಂಖ್ಯಾತ ಸದಸ್ಯರ ಒಪ್ಪಿಗೆಯನ್ನೂ ಪಡೆದಿತ್ತು. ಯರಾವಡಾ ಜೈಲಿನಲ್ಲಿ ನಾನು ಕೈಗೊಂಡ ಉಪವಾಸದ ಪರಿಣಾಮವಾಗಿ ಈ ತೀರ್ಪು ಅತಿ ಕ್ಷಿಪ್ರದಲ್ಲಿ ತಲೆಕೆಳಕಾಯಿತು.

## ಉಪವಾಸಕ್ಕೆ ಸರಿಯಾದ ಪ್ರತ್ಯುತ್ತರಗಳು

ಭಾರತ ಸರಕಾರದ ಈ ಮಹಾ ನಿರ್ಣಯದ ಸಲುವಾಗಿ ನನ್ನ ಉಪ ವಾಸವನ್ನು ಮುಗಿಸಬೇಕೆಂದು ಕೇಳಿದ್ದಾರೆ. ನನಗೆ ನಾನೇ ಒಪ್ಪಿಕೊಳ್ಳುವ

ಹಾಗಾಗಲೆಂದು ನನ್ನ ಇಚ್ಛೆ. ಉಪವಾಸ ಮುಂದುವರಿದಂತೆ ಸ್ವಯಂ ಪ್ರೇರಿತವೂ ವಿಶೇಷ ತ್ಯಾಗದಿಂದ ಸತತವಾಗಿ ನನ್ನನ್ನು ದಿನದಿನವೂ ಸೂಕ್ಷ್ಮವಾಗಿ ಪರೀಕ್ಷಿಸುತ್ತಿರುವ ವೈದ್ಯರೂ ಹೆಚ್ಚು ಹೆಚ್ಚು ಕಾತರರಾಗುತ್ತಿದ್ದಾರೆ. ಮೂತ್ರಕೋಶದ ಕೆಲವು ತೊಂದರೆಗಳಿಂದಾಗಿ ಈ ಕೂಡಲೇ ಪ್ರಾಣಾಪಾಯದ ಸಂಭವವಿಲ್ಲದಿದ್ದರೂ ಉಪವಾಸವನ್ನು ಮುಂದುವರಿಸುವುದರಿಂದ ಜೀವಾವಧಿ ರೋಗವೊಂದು ನಿಂತು ಬಿಡಬಹುದೆಂದು ಅವರು ಹೆದರಿದ್ದಾರೆ.

ವೈದ್ಯರು ಎಷ್ಟೇ ಸಮರ್ಥರಾಗಿದ್ದರೂ ನಾನು ನನ್ನ ಉಪವಾಸವನ್ನು ಪ್ರಾರಂಭಿಸಿದಾಗ, ವೈದ್ಯಕೀಯ ಸಲಹೆಯನ್ನೇನೂ ಪಡೆಯಲಿಲ್ಲ. ಸರ್ವಶಕ್ತನೂ, ಸರ್ವಾಧಾರನೂ ಆದ ಪರಮಾತ್ಮನೇ ನನ್ನ ಏಕೈಕ ಮಾರ್ಗದರ್ಶಕ, ಏಕೈಕ ಸರ್ವಾಧಿಕಾರಿಯೇ ಎನ್ನಬೇಕು. ವೈದ್ಯಶಾಸ್ತ್ರಜ್ಞರಾದ ಸ್ತ್ರೀಪುರುಷರೆಲ್ಲರ ಮುನ್ಸೂಚನೆಗಳೇನೇ ಇದ್ದರೂ ಈ ಶಿಥಿಲ ದುರ್ಬಲ ಶರೀರದಿಂದ ಅವನ ಮಹೋದ್ದೇಶ ಸಾಧನೆಯಾಗಬೇಕೆಂದಿದ್ದರೆ ಅವನು ಕಾಪಾಡುತ್ತಾನೆ. ನಾನವನ ಕೃಪಾಹಸ್ತದಲ್ಲಿದ್ದೇನೆ. ಆದ್ದರಿಂದ ಮರಣಕ್ಕಾಗಲೀ ಬದುಕಿಗಾಗಲಿ ಜೀವಾವಧಿ ನಿಲ್ಲುವಂಥ ಆಘಾತಕ್ಕಾಗಲೀ ನಾನು ಎಂದೂ ಭಯಪಡೆನೆಂದರೆ ನೀವು ನಂಬಬೇಕು. ನಾಡಿಗೆ ನನ್ನಿಂದೇನಾದರೂ ಪ್ರಯೋಜನವಿದ್ದಲ್ಲಿ ಈ ವೈದ್ಯ ಬಂಧುಗಳ ಎಚ್ಚರಿಕೆಯಿಂದ, ಜನರು ಐಕ್ಯ ಮನೋಭಾವ ಹೊಂದುವುದನ್ನು ತ್ವರಿತಗೊಳಿಸಬೇಕೆಂದು ನಾನು ಇಚ್ಛಿಸುತ್ತೇನೆ. ಅತಿ ಪ್ರಯಾಸದಿಂದ ಗಳಿಸಿದ ಸ್ವಾತಂತ್ರ್ಯದಡಿಯಲ್ಲಿ ನಿರ್ಭೀತ ಸ್ತ್ರೀಪುರುಷರಂತೆ ನಮ್ಮ ಶತ್ರುಗಳೆಂದು ಸಂದೇಹಪಡುವವರನ್ನು ನಂಬಿ ನಡೆಯಬೇಕಾಗುವುದು. ಸಂದೇಹ ಪ್ರವೃತ್ತಿಯನ್ನು ಧೀರರು ಧಿಕ್ಕರಿಸುತ್ತಾರೆ. ದೆಹಲಿಯ ಹಿಂದೂ, ಮುಸಲ್ಮಾನ ಮತ್ತು ಸಿಕ್ಕರು ಐಕ್ಯವಾಗಿ ತಮ್ಮ ಸುತ್ತಲೂ ಭಾರತದಲ್ಲೆಲ್ಲಾಗಲೀ ಪಾಕಿಸ್ತಾನದಲ್ಲೆಲ್ಲಾಗಲೀ ದಳ್ಳುರಿಯ ದಂಗೆಗಳಾದರೂ ಶಿಥಿಲವಾಗದಂತಹ ಒಕ್ಕೂಟವನ್ನು ಸಾಧಿಸಿದರೆ ನನ್ನ ಪ್ರತಿಜ್ಞೆಯ ಸ್ಥೂಲ ನಿಯಮ ಪರಿಪೂರ್ಣವಾಗುತ್ತದೆ. ಪರಸ್ಪರವಾಗಿ ಎರಡೂ ರಾಷ್ಟ್ರಗಳಲ್ಲಿ ನಿರ್ಮಿತವಾದ ಸಮಿತಿಗಳ ಸದಸ್ಯರೆಲ್ಲರೂ ಮತ್ತೊಂದು ರಾಷ್ಟ್ರದೊಳಗೆ ನಿರ್ಭೀತರಾಗಿ ನಿಷ್ಕಂಟಕವಾಗಿ

ತಿರುಗಾಡಲು ಸಾಧ್ಯವಾಗುವಂತಹ ಸಂಪೂರ್ಣ ಸ್ನೇಹವನ್ನು ಸಾಧಿಸುವುದೇ ಈ ಉಪವಾಸಕ್ಕೆ ಯೋಗ್ಯ ಪ್ರತ್ಯುತ್ತರವೆಂದು ಎರಡು ರಾಷ್ಟ್ರಗಳ ಪ್ರಜೆಗಳೂ ಸಹಜ ಪ್ರವೃತ್ತಿಯಿಂದಲೇ ಅರಿತಿದ್ದಾರೆಂಬುದು ಸಂತೋಷದ ಸಂಗತಿ.

ದೆಹಲಿಯ ಮೇಲೆ ಅಗಾಧ ಜವಾಬದಾರಿಯನ್ನು ಹೇರುವುದು ಎರಡು ರಾಷ್ಟ್ರಗಳ ಮಿಕ್ಕೆಲ್ಲ ಪ್ರದೇಶಗಳಿಗೂ ತಪ್ಪಾಗುವುದು. ಭಾರತದ ಪ್ರಜೆಗಳೇನು ಮಾನವಾತೀತ ಸ್ವಭಾವದವರಲ್ಲ. ತನ್ನ ಪ್ರಜೆಗಳ ಹೆಸರಿನಲ್ಲಿ ಯಾವ ನಷ್ಟಕ್ಕೂ ಹಿಂಜರಿಯದೆ ಭಾರತ ಸರಕಾರ ಒಂದು ಉದಾತ್ತ ನಿರ್ಣಯವನ್ನು ಕೈಗೊಂಡಿದೆ. ಇದಕ್ಕೆ ಪಾಕಿಸ್ತಾನದ ಪ್ರತಿಕ್ರಿಯೆ ಯೇನು? ಮನಸ್ಸಿದ್ದರೆ ಮಾರ್ಗವುಂಟು. ಅಂಥ ಮನಸ್ಸು ಆ ರಾಷ್ಟ್ರಕ್ಕೆ ಉಂಟೇ? ೬೧

## ೬೨. ಭಾಷಣ

## ಹೃದಯ ಶುದ್ಧಿ

ಮತ್ತೊಮ್ಮೆ ಹೇಳುತ್ತೇನೆ. ಉಪವಾಸದ ಬಲಾತ್ಕಾರದಿಂದ ಯಾವುದನ್ನೂ ಮಾಡಲಾಗದು. ಹೀಗೆ ಉಪವಾಸದ ಒತ್ತಾಯದಿಂದ ಉಂಟಾದ ಪರಿಣಾಮ ಉಪವಾಸ ಮುಕ್ತಾಯವಾದೊಡನೆ ಭಗ್ನವಾದುದನ್ನು ನಾನು ಹಿಂದೆ ಕಂಡಿದ್ದೇನೆ. ಹಾಗೇನಾದರೂ ಆದಲ್ಲಿ ಅದು ಅತಿ ದಾರುಣ ದುರಂತವಾಗುತ್ತದೆ. ಯಾವ ಕಾಲಕ್ಕೂ ಅದರ ಆವಶ್ಯಕತೆಯಿರಲಾರದು. ಆಧ್ಯಾತ್ಮ ಪ್ರಧಾನ ಉಪವಾಸದಿಂದ ಹೃದಯ ಶುದ್ಧಿಯನ್ನು ಮಾತ್ರ ನಿರೀಕ್ಷಿಸಬೇಕು. ಪ್ರಾಮಾಣಿಕ ಪ್ರಯತ್ನವಾದಲ್ಲಿ ಈ ಶುದ್ಧೀಕರಣದ ಕಾರಣ ಮಾಯವಾದ ಕೂಡಲೇ ಅದೂ ನಿಲ್ಲಲಾರದು. ಬಂಧುಮಿತ್ರರ ನಿರ್ಗಮನದೊಡನೆಯೇ ಸುಣ್ಣ ಹಚ್ಚಿ ಶುದ್ಧ ಮಾಡಿದ ಗೋಡೆ ಮತ್ತೆ ಕೊಳೆಯಾಗಿಬಿಡುವುದಿಲ್ಲ. ಈ ಭೌತ ಪದಾರ್ಥಕ್ಕೆ ಶುಭ್ರಗೊಳಿಸಿದ ಕೆಲವು ಕಾಲಾನಂತರ ಮತ್ತೊಮ್ಮೆ ಬಣ್ಣ ಬಳಿಯಬೇಕಾಗ

ಬಹುದು. ಆದರೆ ಹೃದಯ ಶುದ್ಧಿಯನ್ನೊಮ್ಮೆ ಸಾಧಿಸಿದೆವೆಂದರೆ ನಮ್ಮ ಸಾವಿನೊಂದಿಗೇ ಅದರ ನಾಶ. ಇಂಥ ನ್ಯಾಯನಿಷ್ಠ ಸ್ತುತ್ಯರ್ಹ ಒತ್ತಾಯ ವಲ್ಲದೆ ಮತ್ತಾವ ಉದ್ದೇಶವೂ ಉಚಿತವೆಂದೆನ್ನಲಾಗುವುದಿಲ್ಲ.

## ಪಾಕಿಸ್ತಾನಕ್ಕೊಂದು ಮಾತು

ರಾಜಮಹಾರಾಜರುಗಳಿಂದ ಸಾಮಾನ್ಯ ಜನರಿಂದ ಬರುತ್ತಿರುವ ತಂತಿಗಳು ಹೆಚ್ಚುತ್ತಿವೆ. ಪಾಕಿಸ್ತಾನದಿಂದಲೂ ಬಂದಿವೆ. ಅಷ್ಟರ ಮಟ್ಟಿಗೆ ಅದು ಒಳ್ಳೆಯದೇ. ಆದರೆ ಪಾಕಿಸ್ತಾನದಲ್ಲಿ ವಾಸಿಸುತ್ತಾ ಅದರ ಭವಿಷ್ಯವನ್ನು ರೂಪಿಸುತ್ತಿರುವವರೆಲ್ಲರಿಗೂ ಸ್ನೇಹಿತನಂತೆ ಬಂಧುವಿನಂತೆ ಈ ಮಾತನ್ನು ಹೇಳಬೇಕಾಗುತ್ತದೆ; ಅವರ ಮನಃಸ್ಸಾಕ್ಷಿ ಜಾಗ್ರತವಾಗದೆ, ಪಾಕಿಸ್ತಾನವು ಜವಾಬದಾರವಾಗಿರುವ ತಪ್ಪುಗಳನ್ನು ಒಪ್ಪಿಕೊಳ್ಳದಿದ್ದಲ್ಲಿ ಪಾಕಿಸ್ತಾನದ ಸುಭದ್ರತೆ ಅವರಿಂದ ಶಾಶ್ವತವಾಗಲಾರದು.

ಸ್ವಯಂಪ್ರೇರಿತ ಪುನರ್ಮಿಲನವನ್ನು ನಾನು ಇಚ್ಛಿಸುವುದಿಲ್ಲವೆಂದು ಇದರ ಅರ್ಥವಲ್ಲ. ಶಸ್ತ್ರಬಲದ ಬಲಾತ್ಕಾರದಿಂದ ಪಾಕಿಸ್ತಾನವನ್ನು ಭಾರತಕ್ಕೆ ಒಂದುಗೂಡಿಸುವ ಭಾವನೆಯನ್ನು ನಾನು ಪ್ರತಿಭಟಿಸಿ ನಿರ್ಮೂಲ ಮಾಡಲಿಚ್ಛಿಸುತ್ತೇನೆ. ಮರಣ ಶಯ್ಯೆಯಲ್ಲೇ ಮಲಗಿ ನಾನು ವೈಷಮ್ಯದ ಕರ್ಕಶ ಧ್ವನಿಯನ್ನೆತ್ತುತ್ತಿದ್ದೇನೆಂದು ಇದಕ್ಕೆ ಅಪಾರ್ಥ ಮಾಡಲಾರರೆಂದು ನಂಬಿದ್ದೇನೆ. ನನ್ನ ದೌರ್ಬಲ್ಯದಿಂದ ಅವರ ಮನಸ್ಸನ್ನು ನೋಯಿಸಬಹುದೆಂಬ ಭಯದಿಂದಲೂ ನನಗೆ ಸತ್ಯವಾಗಿ ತೋರಿದ್ದನ್ನು ತಿಳಿಸಲು ಹಿಂಜರಿದುದಾದರೆ ನನಗೂ, ಅವರಿಗೂ ನಾನು ದ್ರೋಹವೆಸಗಿದಂತಾಗುತ್ತದೆ; ಎಲ್ಲ ಪಾಕಿಸ್ತಾನಿಗಳಿಗೂ ಇದು ಅರಿವಾಗುವುದೆಂದು ನನ್ನ ನಂಬಿಕೆ. ನನ್ನ ಅಭಿಪ್ರಾಯಗಳು ತಪ್ಪಾಗಿದ್ದಲ್ಲಿ ನನಗೆ ನೇರವಾಗಿ ತಿಳಿಸಬೇಕು. ನನಗೊಪ್ಪಿಗೆಯಾದರೆ ಖಂಡಿತವಾಗಿ ನನ್ನ ಮಾತನ್ನು ಹಿಂತೆಗೆದುಕೊಳ್ಳುವೆನೆಂದು ವಾಗ್ದಾನ ಮಾಡುತ್ತೇನೆ. ನನಗೆ ತಿಳಿದ ಮಟ್ಟಿಗೆ ಈ ಮಾತು ವಿವಾದಕ್ಕೆಡೆಗೊಡುವಂತಹುದಲ್ಲ.

## ಉಪವಾಸದಲ್ಲಿ ಆನಂದವಿದೆ

ಯಾವ ದೃಷ್ಟಿಯಿಂದಲೂ ನನ್ನ ಉಪವಾಸವನ್ನು* ರಾಜಕೀಯ ಹೆಜ್ಜೆ ಎಂದು ಯಾರೂ ಪರಿಗಣಿಸಬಾರದು. ಆತ್ಮಸಾಕ್ಷಿಯ ಹಾಗೂ ಕರ್ತವ್ಯ ನಿಷ್ಠೆಯ ನಿರ್ಣಾಯಕ ಧ್ವನಿಗೆ ತಲೆಬಾಗಿ ಕೈಗೊಂಡುದೇ ಈ ಕ್ರಮ. ನಾನು ಅನುಭವಿಸಿದ ಅತ್ಯಂತ ತೀವ್ರ ಯಾತನೆಯಿಂದ ಉದ್ಭವಿಸಿ ಬಂದುದು. ದೆಹಲಿಯಲ್ಲಿರುವ ನನ್ನ ಮುಸಲ್ಮಾನ ಸ್ನೇಹಿತರೆಲ್ಲ ಇದಕ್ಕೆ ಸಾಕ್ಷಿ. ಅವರ ಪ್ರತಿನಿಧಿಗಳು ದಿನವೂ ನನ್ನನ್ನು ಭೇಟಿ ಮಾಡಿ ಘಟನೆಗಳ ವರದಿ ಮಾಡುತ್ತಾರೆ. ರಾಜ ಮಹಾರಾಜರುಗಳಾಗಲೀ, ಹಿಂದೂಗಳಾಗಲೀ ಸಿಕ್ಕರಾಗಲೀ ಬೇರೆ ಯಾರೇ ಆಗಲಿ ಈ ಪವಿತ್ರ ಸಮಯದಲ್ಲಿ ನನ್ನ ಉಪವಾಸವನ್ನು ನಿಲ್ಲಿಸುವ ಸಲುವಾಗಿ ನನ್ನನ್ನು ತಪ್ಪು ದಾರಿಗೆಳೆದರೆ ಅವರು ತಮಗಾಗಲೀ ಭಾರತಕ್ಕಾಗಲೀ ಹಿತ ಬಯಸುವವರಾಗಲಾರರು. ಆತ್ಮೋನ್ನತಿಗಾಗಿ ಉಪವಾಸ ಮಾಡುತ್ತಿರುವಾಗ ನಾನು ಅತ್ಯಂತ ಹರ್ಷಿತನಾಗಿರುವೆನೆಂದು ಅವರು ತಿಳಿಯಲಿ. ಇಂದಿನ ನಿರಶನ ವ್ರತ ಹಿಂದಿನದಿಗಿಂತಲೂ ನನಗೆ ಹೆಚ್ಚು ಆನಂದದಾಯಕವಾಗಿದೆ. ನಿಸ್ಸಂದೇಹವಾಗಿ ಪಾಪ ಮಾರ್ಗ ಬಿಟ್ಟು ಪರಮಾತ್ಮನಭಿಮುಖವಾಗಿ ಪಥ ಹಿಡಿದು ನಡೆದಲ್ಲದೆ ಅನ್ಯಥಾ ನನ್ನ ಈ ಆನಂದ ಸ್ಥಿತಿಯನ್ನು ನಿಷ್ಕಾರಣವಾಗಿ ಕಲಕದಿರಲಿ.೬೨

## ೬೩. ಉಪವಾಸ ಮುಕ್ತಾಯ

ಬರೆದು ಕಳುಹಿಸಿದ ಸಂದೇಶದಲ್ಲಿ ಗಾಂಧೀಜೀ ಹೀಗೆ ನುಡಿದರು: ಸತ್ಯ ಅಥವಾ ಪರಮಾತ್ಮನ ಹೆಸರಿನಲ್ಲಿ ಈ ಉಪವಾಸವನ್ನು ಕೈಗೊಂಡೆ. ಸತ್ಯಾನುಷ್ಠಾನವಿಲ್ಲದೆಡೆಯಲ್ಲಿ ದೇವರಿಲ್ಲ. ದೇವರ ಹೆಸರಿನಲ್ಲಿ ನಾವು ಸುಳ್ಳಾಡಿದ್ದೇವೆ; ಹೆಂಗಸರು ಗಂಡಸರೆನ್ನದೆ ಮಕ್ಕಳು ಮರಿಗಳೆನ್ನದೆ, ಅಪರಾಧಿ ನಿರಪರಾಧಿಗಳೆನ್ನದೆ ಕಗ್ಗೊಲೆಗಳನ್ನು ಮಾಡಿದ್ದೇವೆ; ಮಾನ

* ಪಾಕಿಸ್ತಾನಕ್ಕೆ ಕೊಡಬೇಕಾಗಿದ್ದ ಹಣ ಕೊಡಿಸುವ ಸಲುವಾಗಿ ನಡೆಸಿದ್ದು.

ಭಂಗ, ಅತ್ಯಾಚಾರ, ಬಲಾತ್ಕಾರ ಮತಾಂತರಗಳೆಲ್ಲದರಲ್ಲಿ ಲಜ್ಜಾರಹಿತರಾಗಿ ಮಗ್ನರಾಗಿದ್ದೇವೆ. ಇಂಥ ದುಷ್ಕೃತ್ಯಗಳನ್ನು ಯಾರೂ ಸತ್ಯದ ಹೆಸರಿನಲ್ಲಿ ಮಾಡಿದುದನ್ನು ನಾನರಿಯೆ. ಅದೇ ಸತ್ಯ ನಾಮಸ್ಮರಣೆಯಿಂದ ನನ್ನ ಜನತೆಯ ತೀವ್ರ ವೇದನೆ ಭರಿಸಲಸಾಧ್ಯವಾಗಿತ್ತು. ರಾಷ್ಟ್ರಪತಿ ಡಾ. ರಾಜೇಂದ್ರಬಾಬುಗಳು ನೂರಾರು ಜನರನ್ನು ಕರೆತಂದರು; ಹಿಂದೂ, ಮುಸಲ್ಮಾನ, ಸಿಕ್ ಎಲ್ಲರ ಪ್ರತಿನಿಧಿಗಳೂ ಇದ್ದರು. ಹಿಂದೂ ಮಹಾ ಸಭೆಯ ಪರವಾಗಿ, ರಾಷ್ಟ್ರೀಯ ಸ್ವಯಂಸೇವಕ ಸಂಘದ ವತಿಯಿಂದ ಪಂಜಾಬ್, ಗಡಿನಾಡು ಪ್ರಾಂತ ಮತ್ತು ಸಿಂಧ್‌ನ ನಿರಾಶ್ರಿತರ ಪ್ರತಿನಿಧಿಗಳೆಲ್ಲ ಬಂದರು. ಇಂತಹ ಪ್ರಾತಿನಿಧ್ಯಪೂರ್ಣ ಸಭೆಗೆ ಪಾಕಿಸ್ತಾನದ ಹೈಕಮೀಷನರ್ ಜಾಹಿದ್ ಹುಸೇನ್ ಸಾಹೇಬರು ದೆಹಲಿಯ ಚೀಫ್ ಕಮೀಷನರು, ಜಿಲ್ಲಾಧಿಕಾರಿಗಳು ಮತ್ತು ಆಝಾದ್ ಹಿಂದ್ ಫೌಜಿನ (ಐ.ಎನ್.ಎ.) ಪ್ರತಿನಿಧಿಯಾಗಿ ಜನರಲ್ ಷಾ ನವಾಜ್‌ಖಾನ್ ಇವರೆಲ್ಲ ಆಗಮಿಸಿದ್ದರು. ಅಲ್ಲಿಯೇ ನಿಶ್ಚಲ ಪ್ರತಿಮೆಯಂತೆ ಕುಳಿತ ಪಂಡಿತ ನೆಹರೂ ಮತ್ತು ಮೌಲಾನಾ ಆಝಾದರೂ ಇದ್ದರು. ರಾಜೇಂದ್ರಬಾಬುಗಳು ಹಿಂದೂಸ್ತಾನಿಯಲ್ಲಿದ್ದ ಒಂದು ಪ್ರಮಾಣ ಪತ್ರವನ್ನೋದಿದರು. ಅದರಲ್ಲಿ ಎಲ್ಲರೂ ಸಹಿಮಾಡಿದ್ದರು. ತಮ್ಮ ಮೇಲೆ ಇನ್ನು ಹೆಚ್ಚು ಹೊರೆಯನ್ನು ಹೇರದೆ, ಈ ತೀವ್ರ ಯಾತನೆಯನ್ನು ನಿವಾರಿಸಲು ಉಪವಾಸವನ್ನು ಮುಕ್ತಾಯ ಮಾಡಿ ಎಂದು ಬೇಡಿದ್ದರು. ಇದೇ ಮನವಿಯ ತಂತಿಗಳ ಮೇಲೆ ತಂತಿಗಳು ಪಾಕಿಸ್ತಾನದಿಂದ ಭಾರತದೊಳಗಿನಿಂದ ನನಗೆ ತಲುಪಿದುವು. ಈ ಗೆಳೆಯರ ಸಲಹೆಯನ್ನು ನಿರಾಕರಿಸಲಾರದೆ ಹೋದೆ. ಎಂಥ ಪರಿಸ್ಥಿತಿ ಬಂದೊದಗಿದರೂ ಹಿಂದೂ, ಮುಸಲ್ಮಾನ, ಸಿಕ್, ಈಸಾಯಿ, ಪಾರಸೀ ಮತ್ತು ಯಹೂದ್ಯರೆಲ್ಲರ ನಡುವೆ ಅಭೇದ್ಯ ಮೈತ್ರಿಯನ್ನು ಕಾಯ್ದುಕೊಳ್ಳುವೆನೆಂಬ ಅವರ ಪ್ರತಿಜ್ಞಾನುಡಿಯನ್ನು ನಾನು ಅನುಮಾನಿಸಲು ಕಾರಣವಿರಲಿಲ್ಲ. ಅಂಥ ಮೈತ್ರಿಯನ್ನು ಮುರಿದಲ್ಲಿ ರಾಷ್ಟ್ರವನ್ನೇ ಭಗ್ನಗೊಳಿಸಿದಂತೆ.

## ಪ್ರತಿಜ್ಞೆಯ ಸತ್ಯ

ಇದನ್ನು ಬರೆಯುತ್ತಿರುವಾಗ ಸಂದೇಶವಾಹಕ ತಂತಿಗಳು, ಸಹಾನುಭೂತಿಯ ಪ್ರವಾಹದಲ್ಲಿ ನನ್ನನ್ನು ಮುಳುಗಿಸಿಬಿಡುತ್ತಿವೆ. ನನ್ನ ಮುಂದಿರುವ ಮಾನವಸೇವಾ ಕಾರ್ಯವನ್ನು ನೆರವೇರಿಸಲು ನನಗೆ ದೇಹದಾರ್ಢ್ಯವನ್ನೂ ಬುದ್ಧಿಸ್ವಾಸ್ಥ್ಯವನ್ನೂ ದೇವರು ದಯಪಾಲಿಸಲೆಂದು ಆಶಿಸುತ್ತೇನೆ. ಇಂದು ಮಾಡಿದ ಪವಿತ್ರ ಪ್ರತಿಜ್ಞೆ ಸಫಲವಾದರೆ, ಕೊನೆಯ ಘಳಿಗೆಯವರಿಗೂ ಮಾನವಸೇವೆ ಮಾಡುತ್ತ ಪೂರ್ಣಾಯುಸ್ಸಿನ ಜೀವನವನ್ನು ನಡೆಸಬೇಕೆಂಬ ನನ್ನ ತೀವ್ರಾಕಾಂಕ್ಷೆ. ನನ್ನ ಹೃತ್ಪೂರ್ಣ ಪ್ರಾರ್ಥನೆ, ಇಮ್ಮಡಿಯಾಗಿ ಪುನಶ್ಚೇತನಗೊಳ್ಳುವುದೆಂದು ಆಶ್ವಾಸನ ನೀಡುತ್ತೇನೆ. ಬಲ್ಲವರ ಅಭಿಪ್ರಾಯದಲ್ಲಿ ಈ ಪೂರ್ಣಾಯುಸ್ಸು ನೂರಿಪ್ಪತ್ತೈದು ವರ್ಷ; ಕೆಲವರು ನೂರಮೂವತ್ತುಮೂರು ಎನ್ನುತ್ತಾರೆ. ನಾನು ಕೈಗೊಂಡ ಪ್ರತಿಜ್ಞೆಯ ಬಾಹ್ಯ ನಿಯಮಗಳೆಲ್ಲ ನನ್ನ ನಿರೀಕ್ಷೆಗೂ ಮೀರಿ ಅತಿ ಶೀಘ್ರವಾಗಿ ಕೈಗೂಡಿವೆ. ಹಿಂದೂ ಮಹಾಸಭೆ ಮತ್ತು ರಾಷ್ಟ್ರೀಯ ಸ್ವಯಂಸೇವಕ ಸಂಘಗಳೂ ಸೇರಿ ದೆಹಲಿಯ ನಾಗರಿಕರ ಸೌಹಾರ್ದವೇ ಕಾರಣ. ನಿನ್ನೆಯಿಂದ ಸಾವಿರಾರು ನಿರಾಶ್ರಿತರೂ ಇತರರೂ ಉಪವಾಸ ಕೈಗೊಂಡಿರುವರೆಂದು ಕೇಳಿದ ಮೇಲೆ ಬೇರಾವ ಪರಿಣಾಮವೂ ಸಾಧ್ಯವಿಲ್ಲ.

ಹಾರ್ದಿಕ ಸ್ನೇಹದ ಒತ್ತುಂದಗಳು ಸಾವಿರಾರು ಸಹಿಯಾಗಿ ನನ್ನ ಕಡೆಗೆ ಹರಿದುಬರುತ್ತಿವೆ. ಪ್ರಪಂಚದ ಎಲ್ಲ ಕಡೆಗಳಿಂದಲೂ ತಂತಿ ಮೂಲಕ ಹರಕೆಗಳು ಬಂದಿವೆ. ಪರಮಾತ್ಮನ ಪ್ರೇಮಹಸ್ತ ನನ್ನ ಕಾರ್ಯದ ಮೇಲುಂಟೆಂದು ಇದಕ್ಕಿಂತ ಬೇರೆ ಸಾಕ್ಷಿ ಬೇಕೆ? ಆದರೆ ಬಾಹ್ಯ ನಿಯಮಗಳ ಪಾಲನೆಯಿಂದಾಚೆಗೆ ನನ್ನ ಪ್ರತಿಜ್ಞೆಯ ಸತ್ವವೊಂದು ಉಂಟು. ಅದಿಲ್ಲದೆ ಕೇವಲ ಬಾಹ್ಯ ವಸ್ತು ಮಾರಕವಾದೀತು. ಭಾರತದಲ್ಲಿನ ಹಿಂದೂ–ಮುಸಲ್ಮಾನ–ಸಿಕ್ಕರಲ್ಲಿ ಅತ್ಯಂತ ನಿಷ್ಕಪಟ ಸ್ನೇಹ, ಪಾಕಿಸ್ತಾನದಲ್ಲೂ ಅಂತಹುದೇ ಸ್ನೇಹ, ಇದು ಪ್ರತಿಜ್ಞೆಯ ಹಿಂದಿನ ಸತ್ವ. ಮೊದಲನೆಯದು ನಿಶ್ಚಿತವಾದರೆ ಎರಡನೆಯದು ಹಿಂಬಾಲಿಸಲೇ ಬೇಕು; ಬೆಳಗು ರಾತ್ರಿಯನ್ನು ಹಿಂಬಾಲಿಸಿದಂತೆ. ಭಾರತದಲ್ಲಿ ಕಗ್ಗತ್ತಲು

ಕವಿದಿದ್ದರೆ ಪಾಕಿಸ್ತಾನದಲ್ಲಿ ಬೆಳಕನ್ನು ನಿರೀಕ್ಷಿಸುವುದು ಮೂರ್ಖತನ. ಆದರೆ ಭಾರತದಲ್ಲಿನ ಕಗ್ಗತ್ತಲು ಸಂದೇಹಕ್ಕೆಡೆಯಿಲ್ಲದಂತೆ ಅಳಿಸಿಹೋದರೆ ಪಾಕಿಸ್ತಾನದಲ್ಲಿ ಬೇರೆಯಾಗುವ ಸಂಭವವೇ ಇಲ್ಲ. ಈ ದಿಸೆಯಲ್ಲಿ ಮುನ್ಸೂಚನೆಗಳೂ ಇಲ್ಲದೇ ಇಲ್ಲ. ಪಾಕಿಸ್ತಾನದಿಂದ ಅಸಂಖ್ಯಾತ ಸಂದೇಶಗಳು ಬಂದಿವೆ; ಒಂದು ಪ್ರತಿಭಟನೆಯೂ ಇಲ್ಲ. ಸತ್ಯರೂಪಿ ಈಶ್ವರ ಈ ಆರು ದಿನಗಳೂ ನಮ್ಮನ್ನೆಲ್ಲ ಪ್ರತ್ಯಕ್ಷವಾಗಿ ಕೈಹಿಡಿದು ನಡೆಸಿದಂತೆ ಮುಂದೆಯೂ ಮಾರ್ಗದರ್ಶಿಯಾಗಲಿ.[೬೩]

## ೬೪. ಅಭಿನಂದನೆಗಳು ಮತ್ತು ಆತಂಕಗಳು

ಪ್ರಪಂಚದ ಮೂಲೆ ಮೂಲೆಗಳಿಂದ ಭಾರತೀಯರೂ ಇತರರೂ ಸೌಹಾರ್ದವನ್ನೂ ಕಳಕಳವನ್ನೂ ವ್ಯಕ್ತಪಡಿಸಿ ಕಳುಹಿಸಿರುವ ತಂತಿಗಳಿಗಾಗಿ ಅವರನ್ನು ವಂದಿಸುತ್ತೇನೆ. ನನ್ನ ಹೆಜ್ಜೆ ಸರಿ ಎಂಬುವುದು ಇದರಿಂದ ಸ್ಪಷ್ಟ. ನನಗೆ ಇದರಲ್ಲಿ ಕಿಂಚಿತ್ ಸಂಶಯವಿತ್ತೆಂದಲ್ಲ, 'ದೇವರಿದ್ದಾನೆ' ಎಂಬ ನಿತ್ಯಭಾವನೆಯಲ್ಲಿ, ಅವನ ಸುಸ್ಪಷ್ಟನಾಮ 'ಸತ್ಯ' ಎನ್ನುವುದರಲ್ಲಿ ನನಗೆಷ್ಟು ನಿಸ್ಸಂದೇಹವೋ ಇದರಲ್ಲೂ ಅಷ್ಟೇ ನಿಸ್ಸಂದೇಹ. ವ್ಯಾಕುಲಮುಕ್ತರಾಗಿ ಅಭಿನಂದನೆಯ ತಂತಿಗಳ ಸುರಿಮಳೆಯನ್ನೇ ಈಗ ಸುರಿಸುತ್ತಿದ್ದಾರೆ. ವೈಯ್ಯಕ್ತಿಕ ಕೃತಜ್ಞತಾ ಸೂಚನೆಮಾಡಲು ದೈಹಿಕವಾಗಿ ಅಸಾಧ್ಯವಾಗಿರುವುದರಿಂದ ಈ ಸ್ನೇಹಿತರು ನನ್ನನ್ನು ಕ್ಷಮಿಸಬೇಕು. ಇಂತಹ ಅಂಗೀಕಾರವನ್ನು ಅವರು ನಿರೀಕ್ಷಿಸುವುದಿಲ್ಲವೆಂದು ಭಾವಿಸುತ್ತೇನೆ. ಪಶ್ಚಿಮ ಪಂಜಾಬಿನ ಮುಖ್ಯ ಮಂತ್ರಿಗಳ ಹಾಗೂ ಭೂಪಾಲದ ನವಾಬರ ತಂತಿಗಳನ್ನು ಪ್ರತ್ಯೇಕವಾಗಿ ಉಲ್ಲೇಖಿಸುವುದು ಅಗತ್ಯವೆನಿಸುತ್ತದೆ. ಗುರುತರ ಅಪನಂಬಿಕೆಗೆ ಗುರಿಯಾಗಿ ಅವರು ತೊಳಲುತ್ತಿದ್ದಾರೆ. ಇಲ್ಲಿ ಉಲ್ಲೇಖಿಸಿ ಕೊಟ್ಟಿರುವ ಅವರ ಪತ್ರಗಳೇ ಸಾಕ್ಷಿಯಾಗಲಿ. ಕಳುಹಿಸಿದವರು ಪ್ರಾಮಾಣಿಕರಾಗಿಲ್ಲದಿದ್ದಲ್ಲಿ ಇಂಥ ಉಪವಾಸದ ಪವಿತ್ರ ಸಮಯದಲ್ಲಿ ಅವರು ಮೌನವಾಗಿದ್ದು ನನಗೂ ತಮಗೂ ಉಪಕಾರಮಾಡುತ್ತಿದ್ದರು.

ಭೂಪಾಲದ ನವಾಬರ ಪತ್ರ ಹೀಗಿದೆ:—

ಎಲ್ಲ ಮತಾನುಯಾಯಿಗಳ ಹಾರ್ದಿಕ ಪುನರ್ಮಿಲನಕ್ಕೆ ನೀವು ಮಾಡಿರುವ ಮನವಿಯನ್ನು ಎರಡೂ ರಾಷ್ಟ್ರಗಳಲ್ಲಿನ ಎಲ್ಲ ಸಹೃದಯರೂ ಸ್ವಾಗತಿಸುವುದರಲ್ಲಿ ಸಂದೇಹವಿಲ್ಲ; ಹಾಗೆಯೇ ಭಾರತ ಪಾಕಿಸ್ತಾನಗಳ ಸೌಹಾರ್ದಯುತ ಬಾಂಧವ್ಯಕ್ಕಾಗಿ ಮಾಡುವ ಇತರ ಯಾವುದೇ ಮನವಿಯಾಗಲೀ ಸ್ವಾಗತಾರ್ಹ. ಭೂಪಾಲದಲ್ಲಿ ಕಳೆದ ವರ್ಷದಲ್ಲಿ ಸಮಗೊದಗಿದ ಎಲ್ಲ ವಿಪತ್ತುಗಳನ್ನೂ ಭಿನ್ನಮತೀಯರ ಪರಸ್ಪರ ಸೌಹಾರ್ದ, ಪ್ರೀತಿ ವಿಶ್ವಾಸಗಳಿಂದ ಎದುರಿಸಿದ್ದೇವೆ. ಇದರಿಂದ ಈ ರಾಜ್ಯದ ಶಾಂತಿಯನ್ನು ಕಲುಕುವಂತಹ ಒಂದು ದುರದೃಷ್ಟ ಘಟನೆಯೂ ಸಂಭವಿಸಿಲ್ಲ. ಈ ಸ್ನೇಹಪೂರ್ಣ ಮನೋಧರ್ಮವನ್ನು ವರ್ಧಿಸಲು ನಮ್ಮ ಶಕ್ತಿಮೀರಿ ಶ್ರಮಿಸುವೆವೆಂದು ನಿಮಗೆ ಭರವಸೆಕೊಡುತ್ತೇವೆ.

ಪಶ್ಚಿಮ ಪಂಜಾಬಿನ ಮುಖ್ಯ ಮಂತ್ರಿಯ ತಂತಿಯ ಪೂರ್ಣಪಾಠ ಹೀಗಿದೆ:—

ಒಂದು ಉದಾತ್ತ ಧ್ಯೇಯ ಸಾಧನೆಯಲ್ಲಿ ನೀವು ತೋರಿದ ಔದಾರ್ಯ ದೃಷ್ಟಿಗಾಗಿ ಪಶ್ಚಿಮ ಪಂಜಾಬಿನ ಮಂತ್ರಿ ಸಂಪುಟವು ತನ್ನ ಅಪಾರ ಮೆಚ್ಚುಗೆಯನ್ನೂ ನಿರ್ವ್ಯಾಜ ಶ್ಲಾಘನೆಯನ್ನೂ ವ್ಯಕ್ತಪಡಿಸುತ್ತದೆ. ಅಲ್ಪಸಂಖ್ಯಾತರ ಆಸ್ತಿ, ಗೌರವ ಮತ್ತು ಪ್ರಾಣಗಳನ್ನು ರಕ್ಷಿಸಲು ಸರ್ವ ಪ್ರಯತ್ನಗಳನ್ನೂ ಕೈಗೊಂಡು ಅವರಿಗೆ ಸಮಾನ ನಾಗರಿಕ ಹಕ್ಕುಗಳನ್ನು ಕೊಡುವ ತತ್ವವನ್ನೇ ಈ ಮಂತ್ರಿಮಂಡಲ ಯಾವಾಗಲೂ ಎತ್ತಿ ಹಿಡಿದಿದೆ. ಇದೇ ನೀತಿಯನ್ನು ಇಮ್ಮಡಿಯಾದ ಉತ್ಸಾಹದಿಂದ ಮುಂದೆಯೂ ಅನುಷ್ಠಾನಮಾಡಲು ಈ ಮಂತ್ರಿಮಂಡಲ ನಿಮಗೆ ಭರವಸೆ ನೀಡುತ್ತದೆ. ಭಾರತಾದ್ಯಂತ ಕ್ಷಿಪ್ರ ಸುಧಾರಣೆಯಾಗಿ ನಿಮ್ಮ ಉಪವಾಸವನ್ನು ಮುಕ್ತಾಯಗೊಳಿಸುವಂತಾಗಬೇಕೆಂದು ನಮ್ಮ ಹಾರೈಕೆ. ಈ ಪ್ರಾಂತದಲ್ಲಿ ಮಾಡಬೇಕಾದ ಸರ್ವ ಪ್ರಯತ್ನವನ್ನೂ, ನಿಮ್ಮ ಅಮೂಲ್ಯ ಜೀವವನ್ನುಳಿಸಲು ಸಹಾಯಕವಾಗಲೂ, ಕೈಗೊಳ್ಳುತ್ತೇವೆ.

## ಒಂದು ಎಚ್ಚರಿಕೆ

ವಿವೇಕಶೂನ್ಯ ಅನುಕರಣೆಯ ಈ ಯುಗದಲ್ಲಿ ಯಾರಾದರೂ ಇಷ್ಟೇ ಕ್ಷಿಪ್ರ ಸಮಯದಲ್ಲಿ ಇದೇ ಪರಿಣಾಮವನ್ನು ನಿರೀಕ್ಷಿಸಿ ಉಪವಾಸ ಕೈಗೊಂಡರೆ ಅದು ಮೂರ್ಖತನವಾದೀತೆಂದು ಎಚ್ಚರಿಸುತ್ತೇನೆ. ಹಾಗೆ ಪ್ರಯತ್ನಿಸಿದವರು ಅತಿ ದಾರುಣ ನಿರಾಶೆಗೆ ತುತ್ತಾಗಿ ಇಂತಹ ಪ್ರಾಚೀನವಾದ ಆಜೀಯುವ್ರತಕ್ಕೇ ಅಗೌರವಮಾಡುತ್ತಾರೆ. ಎರಡು ಅಗ್ನಿಪರೀಕ್ಷೆಗಳು ಅತ್ಯಾವಶ್ಯಕ ಭಗವಂತನಲ್ಲಿ ಜೀವಂತಶ್ರದ್ಧೆ, ಅವನ ನಿರ್ಣಾಯಕ ಆಜ್ಞೆಯ ಸ್ಪಷ್ಟ ಅನುಭವ. ಮೂರನೆಯದೊಂದನ್ನು ಸೇರಿಸಬೇಕೆನ್ನಿಸುತ್ತದೆ. ಆದರೆ ಅದು ಅನಾವಶ್ಯಕ. ಅಂತರ್ಯಾಮಿ ಪರಮಾತ್ಮನ ನಿಶ್ಚಲ ಸಂಕಲ್ಪದ ಅಜ್ಞಾವಾಣಿಯಲ್ಲೇ ಉಪವಾಸದ ಉದ್ದೇಶಿತ ಗುರಿ ನ್ಯಾಯಬದ್ಧ, ಕಾಲೋಚಿತ ಮತ್ತು ನೀತಿಯುಕ್ತವಾದುದೆಂಬುದು ಅಂತರ್ಗತವಾಗಿರುತ್ತದೆ, ಇದಕ್ಕೆ ಬಹುಕಾಲದ ಪೂರ್ವಸಿದ್ಧತೆಯೂ ಅಗತ್ಯವೆಂಬುದು ಸ್ಪಷ್ಟ. ಆದ್ದರಿಂದ ಹುಡುಗಾಟಿಕೆಯ ಮನೋಧರ್ಮದಿಂದ ಯಾರೂ ಇಂತಹ ಉಪವಾಸವನ್ನು ಪ್ರಾರಂಭಿಸದಿರಲಿ.

## ಮುಂದಿನ ಕರ್ತವ್ಯ

ದೆಹಲಿಯ ಪೌರರಿಗೂ ನಿರಾಶ್ರಿತರಿಗೂ ಮುಂದೆ ಗುರುತರವಾದ ಕರ್ತವ್ಯವಿದೆ. ಪರಸ್ಪರ ಸಂಪೂರ್ಣ ನಂಬುಗೆಯಿಂದ ಅದಷ್ಟು ಹೆಚ್ಚು ಸಾರಿ ಒಟ್ಟಿಗೆ ಸೇರುವ ಸಂದರ್ಭಗಳನ್ನು ತಾವೇ ನಿರ್ಮಿಸಿಕೊಳ್ಳಬೇಕು. ಅಧಿಕ ಸಂಖ್ಯೆಯಲ್ಲಿದ್ದ ಮುಸಲ್ಮಾನ ಸೋದರಿಯರನ್ನು ನಿನ್ನೆ ನಾನು ಸಂಧಿಸಿದಾಗ ಅದೊಂದು ಹೃದಯ ಸ್ಪರ್ಶಿ ಅನುಭವವೇ ಆಯಿತು. ನನ್ನಲ್ಲಿಗೆ ಬರಲು ಸಂದೇಹಿಸುತ್ತಾ ಆ ಸೋದರಿಯರು ಬಿರ್ಲಾ ಭವನದಲ್ಲಿ ಕಾದು ಕುಳಿತಿದ್ದರೆಂದು ನನ್ನೊಡನಿದ್ದ ಬಾಲಕಿಯರು ತಿಳಿಸಿದರು. ಅವರಲ್ಲಿ ಬಹುಭಾಗ ಪರದಾ ಧರಿಸಿದ್ದರು. ಅವರನ್ನು ಕರೆತರುವಂತೆ ಹೇಳಿದೆ; ಅವರು ಬಂದರು; ತಮ್ಮ ತಂದೆ ಅಣ್ಣಂದಿರ ಮುಂದೆ ಅವರು ಪರದೆ ಹಾಕಿಕೊಳ್ಳುವುದಿಲ್ಲವೆನ್ನುವುದನ್ನು ಸೂಚಿಸಿ ನನ್ನನ್ನೇಕೆ ಅನ್ಯಥಾ ಭಾವಿಸುವಿರಿ ಎಂದೆ. ತತ್‌ಕ್ಷಣವೇ ಪ್ರತಿಯೊಬ್ಬರೂ ಪರದೆಯನ್ನು ತೆಗೆದು

ಬಿಟ್ಟರು. ಪರದೆ ಹೀಗೆ ನನ್ನ ಮುಂದೆ ಮಾಯವಾದುದು ಮೊದಲನೆಯ ಸಲವೇನಲ್ಲ. ನಿರ್ವ್ಯಾಜ ಪ್ರೇಮ ಏನು ಸಾಧಿಸಬಲ್ಲುದೆಂಬುದನ್ನು ಹೇಳಲು ಈ ಘಟನೆಯನ್ನು ಉದಹರಿಸಿದೆ. ನನ್ನದು ಅಂಥ ಪ್ರೇಮವೆಂಬ ಅಭಿಮಾನ ನನಗಿದೆ. ಹಿಂದೂ ಮತ್ತು ಸಿಕ್ ಮಹಿಳೆಯರು ಮುಸಲ್ಮಾನ ಸೋದರಿಯರಲ್ಲಿಗೆ ಹೋಗಿ ಅವರೊಡನೆ ಸೌಹಾರ್ದ ಬೆಳೆಸಬೇಕು. ಉತ್ಸವಗಳಲ್ಲಿ ಅವರನ್ನು ಆಹ್ವಾನಿಸಿ ತಾವೂ ಆಹ್ವಾನಿತರಾಗಬೇಕು. ಮುಸಲ್ಮಾನ ಬಾಲಕ ಬಾಲಕಿಯರನ್ನು ಪ್ರತ್ಯೇಕ ಶಾಲೆಗಳಿಗೆ ಹಾಕದೆ ಸಾರ್ವಜನಿಕ ಶಾಲೆಗಳಿಗೆ ಆಕರ್ಷಿಸಬೇಕು. ಆಟದಲ್ಲಿ ಜೊತೆಯಾಗಿ ಕಲಿಯಬೇಕು. ಅವರ ಕಸುಬುಗಳಿಗೆ ಹಾಕಿರುವ ಬಹಿಷ್ಕಾರವನ್ನು ನಿಲ್ಲಿಸುವುದಲ್ಲದೆ ಮುಸಲ್ಮಾನರು ತಮ್ಮ ಹಿಂದಿನ ವೃತ್ತಿಗಳಿಗೆ ಹಿಂದಿರುಗುವಂತೆ ಪ್ರೇರೇಪಿಸಬೇಕು. ಮುಸಲ್ಮಾನರ ಕಲಾಪೂರ್ಣ ಕೌಶಲತೆ ಮಾಯವಾದರೆ ದೆಹಲಿ ನಗರಕ್ಕೆ ಅಪಾರ ನಷ್ಟ. ಅವರ ಜೀವನೋಪಾಯದ ಕಸುಬುಗಳನ್ನು ಅಪಹರಿಸಲಿಚ್ಛಿಸುವುದು ಹಿಂದೂಗಳಿಗೂ ಸಿಕ್ಕರಿಗೂ ಅತಿ ನೀಚ ಲೋಭತನ. ಒಂದು ಕಡೆ ಸರ್ವಮಾನ್ಯ ಹಕ್ಕುದಾರಿಕೆಯೂ ಕೂಡದು ಮತ್ತೊಂದು ಕಡೆ ಅಪಹರಣ ಪ್ರಯತ್ನವೂ ಸಲ್ಲದು. ನಮ್ಮ ದೇಶದಲ್ಲಿ ಎಲ್ಲರಿಗೂ ಸಾಕಷ್ಟು ಸ್ಥಳವಿದೆ. ಎಲ್ಲ ದೇಶಗಳಲ್ಲೂ ಅನೇಕ ಸಮಿತಿಗಳು ಮಾಡುವಂತೆ ಈಗ ನಿರ್ಮಿಸಲಾಗಿರುವ ಶಾಂತಿ ಸಮಿತಿಗಳೂ ನಿದ್ರಾ ಪರವಶರಾಗಬಾರದು. ನಿಮ್ಮ ಮಧ್ಯೆ ಜೀವಂತವಾಗಿ ನನ್ನನ್ನಿರಿಸಿಕೊಳ್ಳಲು ಭಾರತದ ಸರ್ವಮತಾನುಯಾಯಿಗಳೂ ಪರಸ್ಪರ ಶಾಂತಿಯಿಂದ ಬಾಳುವುದೇ ನನ್ನ ಷರತ್ತು. ಅದು ಶಸ್ತ್ರಬಲದಿಂದಲ್ಲ; ಪ್ರೇಮದಿಂದ. ಅದಕ್ಕಿಂತ ಪ್ರಬಲ ಬಾಂಧವ್ಯ ಶಕ್ತಿ ಜಗತ್ತಿನಲ್ಲೇ ಬೇರಾವುದೂ ಇಲ್ಲ.[೬೪]

---

# ನಿವೇದನ

## ವಿಷಯಮೂಲಸೂಚೀ

| ಸೂಚೀ ಸಂಖ್ಯೆ | ಪುಟ ಸಂಖ್ಯೆ | ವಿಷಯ ಮೂಲ |
|---|---|---|
| ೧ | viii | ಯಂಗ್ ಇಂಡಿಯಾ, ೧೭–೧೧–೧೯೨೧ |
| ೨ | viii | ಯಂಗ್ ಇಂಡಿಯಾ, ೧೭–೧೧–೧೯೨೧ |
| ೩ | ix | ಯಂಗ್ ಇಂಡಿಯಾ, ೧೬–೬–೧೯೨೬ |
| ೪ | ix | ಯಂಗ್ ಇಂಡಿಯಾ, ೧೧–೧೧–೧೯೨೮ |
| ೫ | ix | ಹರಿಜನ, ೯–೮–೧೯೪೨ |
| ೬ | ix | ಆತ್ಮಕಥೆ |
| ೭ | ix | ಯಂಗ್ ಇಂಡಿಯಾ, ೪–೬–೧೯೨೫ |
| ೮ | x | ಆತ್ಮಕಥೆ |
| ೯ | x | ಆತ್ಮಕಥೆ |
| ೧೦ | xi | ಯಂಗ್ ಇಂಡಿಯಾ, ೨–೩–೧೯೨೨ |
| ೧೧ | xi | ಯಂಗ್ ಇಂಡಿಯಾ, ೨–೩–೧೯೨೨ |
| ೧೨ | xi | ಹರಿಜನ, ೨೯–೮–೧೯೩೬ |
| ೧೩ | xii | ಮಂಗಳ ಪ್ರಭಾತ |
| ೧೪ | xii | ಯಂಗ್ ಇಂಡಿಯಾ, ೪–೧೨–೧೯೨೪ |
| ೧೫ | xii | ಹರಿಜನ, ೪–೪–೧೯೨೯ |
| ೧೬ | xii | ಯಂಗ್ ಇಂಡಿಯಾ, ೪–೧೨–೧೯೨೪ |
| ೧೭ | xiii | ಯಂಗ್ ಇಂಡಿಯಾ, ೩–೪–೧೯೨೪ |
| ೧೮ | xiii | ಯಂಗ್ ಇಂಡಿಯಾ, ೩–೪–೧೯೨೪ |
| ೧೯ | xiii | ಯಂಗ್ ಇಂಡಿಯಾ, ೩–೧೨–೧೯೨೬ |
| ೨೦ | xiii | ಹರಿಜನ, ೨೮–೩–೧೯೩೬ |
| ೨೧ | xiv | ಹರಿಜನ, ೧–೫–೧೯೩೭ |
| ೨೨ | xiv | ಹರಿಜನ, ೧–೫–೧೯೩೭ |

| ಸೂಚೀ ಸಂಖ್ಯೆ | ಪುಟ ಸಂಖ್ಯೆ | ವಿಷಯ್ಯಮೂಲ |
|---|---|---|
| ೨೩ | xiv | ಹರಿಜನ, ೨–೩–೧೯೪೦ |
| ೨೪ | xv | ಹರಿಜನ, ೧–೫–೧೯೩೭ |
| ೨೫ | xv | ಹರಿಜನ, ೧–೫–೧೯೩೭ |
| ೨೬ | xvi | ಹರಿಜನ, ೧೩–೫–೧೯೩೯ |
| ೨೭ | xvi | ಹರಿಜನ, ೧೫–೭–೧೯೩೫ |
| ೨೮ | xvi | ಯಂಗ್ ಇಂಡಿಯಾ, ೧೨–೬–೧೯೨೪ |
| ೨೯ | xvii | ಯಂಗ್ ಇಂಡಿಯಾ, ೧೦–೧೦–೧೯೩೯ |
| ೩೦ | xvii | ಬಾಂಬೆ ಕ್ರಾನಿಕಲ್, ೯–೮–೧೯೪೨ |

## ಭಾಷಣಗಳು ಮತ್ತು ಹೇಳಿಕೆಗಳು – ೨

### ವಿಷಯಮೂಲಸೂಚೀ

| ಸೂಚೀ ಸಂಖ್ಯೆ | ಪುಟ ಸಂಖ್ಯೆ | ವಿಷಯ ಮೂಲ | | |
|---|---|---|---|---|
| ೧ | ೬ | 'The Gandhi Reader' Homer A. Jack | | : ೨೬೨–೬೬ |
| ೨ | ೯ | ತೆಂಡುಲ್ಕರ್, | ಸಂ. ೩ | : ೧೫೫–೫೭ |
| ೩ | ೧೨ | ,, | ,, | : ೧೭೦–೭೧ |
| ೪ | ೧೫ | ,, | ,, | : ೧೭೨–೭೩ |
| ೫ | ೧೮ | ,, | ,, | : ೧೭೬–೭೭ |
| ೬ | ೨೦ | ,, | ,, | : ೨೪೯–೫೦ |
| ೭ | ೨೩ | ,, | ,, | : ೨೫೦–೫೨ |
| ೮ | ೨೭ | ,, | ,, | : ೨೫೮–೬೦ |
| ೯ | ೨೯ | ,, | ,, | : ೨೬೦–೬೧ |
| ೧೦ | ೩೫ | ,, | ,, | : ೨೬೯–೭೩ |
| ೧೧ | ೪೧ | ,, | ,, | : ೩೧೭–೨೦ |
| ೧೨ | ೫೭ | ,, | ,, | : ೩೬೧–೬೯ |
| ೧೩ | ೬೩ | ,, | ೪ | : ೫–೮ |
| ೧೪ | ೬೮ | ,, | ,, | : ೨೯–೩೧ |
| ೧೫ | ೭೦ | ,, | ,, | : ೯೦–೯೧ |
| ೧೬ | ೭೪ | ,, | ,, | |
| ೧೭ | ೮೨ | ,, | ,, | : ೧೩೯–೪೩ |
| ೧೮ | ೮೬ | ,, | ,, | : ೧೮೬–೯೩ |
| ೧೯ | ೯೨ | ,, | ,, | : ೩೦೬–೯ |
| ೨೦ | ೯೮ | ,, | ,, | : ೩೫೮–೬೧ |
| ೨೧ | ೧೦೧ | ,, | ,, | : ೩೬೨–೬೩ |

| ಸೂಚೀ ಸಂಖ್ಯೆ | ಪುಟ ಸಂಖ್ಯೆ | ವಿಷಯ ಮೂಲ | | |
|---|---|---|---|---|
| ೨೨ | ೧೦೬ | ತೆಂಡುಲ್ಕರ್, | ಸಂ. ೫ | : ೬೫–೬೭ |
| ೨೩ | ೧೧೪ | ,, | ೫ | : ೧೦೮–೧೨ |
| ೨೪ | ೧೧೯ | ,, | ,, | : ೧೨೮–೩೦ |
| ೨೫ | ೧೨೩ | ,, | ,, | : ೧೯೬–೯೭ |
| ೨೬ | ೧೨೫ | ,, | ೫ | : ೨೩೩–೩೪ |
| ೨೭ | ೧೨೮ | ,, | ,, | : ೨೩೬–೩೭ |
| ೨೮ | ೧೩೧ | ,, | ,, | : ೨೪೮–೫೦ |
| ೨೯ | ೧೩೬ | ,, | ,, | : ೨೯೬–೯೮ |
| ೩೦ | ೧೩೭ | ,, | ,, | : ೩೦೫–೬ |
| ೩೧ | ೧೪೫ | ,, | ,, | : ೩೨೦–೨೫ |
| ೩೨ | ೧೬೧ | ,, | ,, | : ೩೯೮–೦೮ |
| ೩೩ | ೧೬೬ | ,, | ,, | : ೪೨೩–೨೬ |
| ೩೪ | ೧೭೪ | ,, | ,, | : ೪೨೬–೩೧ |
| ೩೫ | ೧೭೭ | ,, | ೬ | : ೧–೨ |
| ೩೬ | ೧೮೦ | ,, | ,, | : ೫–೭ |
| ೩೭ | ೧೮೫ | ,, | ೬ | : ೧೦–೧೨ |
| ೩೮ | ೧೯೨ | ,, | ,, | : ೫೩–೬೩ |
| ೩೯ | ೨೦೦ | ,, | ,, | : ೪೮–೫೨ |
| ೪೦ | ೨೦೪ | ,, | ,, | : ೧೮೮–೧೯೦ |
| ೪೧ | ೨೩೦ | ,, | ,, | ; ೧೯೧–೨೦೮ |
| ೪೨ | ೨೩೨ | ,, | ೭ | : ೨–೩ |
| ೪೩ | ೨೩೪ | ,, | ,, | : ೪–೫ |
| ೪೪ | ೨೩೭ | ,, | ,, | : ೨೯೬–೯೭ |
| ೪೫ | ೨೪೦ | ,, | ,, | : ೩೧೦–೧೨ |
| ೪೬ | ೨೪೪ | ಹರಿಜನ, ೨೦–೪–೪೭, ಪು. ೧೧೩–೧೧೪ ಮತ್ತು ೧೧೬–೧೧೭ | | |

| ಸೂಚೀ ಸಂಖ್ಯೆ | ಪುಟ ಸಂಖ್ಯೆ | ವಿಷಯ ಮೂಲ |
|---|---|---|
| ೪೭ | ೨೪೮ | ಹರಿಜನ, ೧೪–೯–೪೭, ಪು. ೩೨೨ |
| ೪೮ | ೨೫೩ | ,, ೫–೯–೪೭, ಪು. ೩೨೨ |
| ೪೯ | ೨೫೪ | ,, ೨೧–೯–೪೭, ಪು. ೩೩೦ |
| ೫೦ | ೨೫೬ | ನವದೆಹಲಿ, ೧೧–೯–೪೭ |
| ೫೧ | ೨೫೯ | ತೆಂಡುಲ್ಕರ್, ಸಂ. ೮, ಪು. ೨೫೦–೫೨ |
| ೫೨ | ೨೬೮ | ತೆಂಡುಲ್ಕರ್, ಸಂ. ೮, ಪು. ೨೯೯–೩೦೫ |
| ೫೩ | ೨೭೧ | ಡಿಲ್ಲಿ ದಿನಚರಿ ೨೯–೩೩ |
| ೫೪ | ೨೭೩ | ,, ೪೯–೫೦ |
| ೫೫ | ೨೭೭ | ,, ೬೫–೬೮ |
| ೫೬ | ೨೮೦ | ,, ೮೩–೮೫ |
| ೫೭ | ೨೮೪ | ,, ೨೦೧–೨೦೫ |
| ೫೮ | ೨೮೫ | ,, ೨೨೨–೨೨೫ |
| ೫೯ | ೨೯೩ | ,, ೩೩೯–೩೪೮ |
| ೬೦ | ೨೯೮ | ,, ,, |
| ೬೧ | ೩೦೩ | ಡಿಲ್ಲಿ ದಿನಚರಿ ೩೪೮–೫೧ |
| ೬೨ | ೩೦೫ | ಡಿಲ್ಲಿ ದಿನಚರಿ ೩೫೧–೩೫೩ |
| ೬೩ | ೩೦೭ | ಡಿಲ್ಲಿ ದಿನಚರಿ ೩೫೬–೫೮ |
| ೬೪ | ೩೧೦ | ಡಿಲ್ಲಿ ದಿನಚರಿ ೩೫೮–೬೫ |

---

# ಸಮಗ್ರ ಗಾಂಧೀ ಗ್ರಂಥಮಾಲೆ

| | | ಸಾದಾಪ್ರತಿ ಬೆಲೆ | ಉತ್ತಮ ಪ್ರತಿ ಬೆಲೆ |
|---|---|---|---|
| ೧. | ಆತ್ಮಕಥೆ—ಹಿಂದ್ ಸ್ವರಾಜ್ಯ | ರೂ. ೨-೨೫ | ರೂ. ೩ |
| ೨. | ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹ | " | " |
| ೩. | ಗೀತಾಮಾತೆ | " | " |
| ೪. | ಸತ್ಯ–ಅಹಿಂಸೆ | ರೂ. ೩ | ರೂ. ೪ |
| ೫. | ಧರ್ಮನೀತಿ | ರೂ. ೨-೨೫ | ರೂ. ೩ |
| ೬. | ಸಮಾಜಧರ್ಮ | " | " |
| ೭. | ಜೀವನ ಶಿಕ್ಷಣ | " | " |
| ೮. | ಅರ್ಥವಿಚಾರ | " | " |
| ೯. | ಸತ್ಯಾಗ್ರಹ | " | " |
| ೧೦. | ಮಹಿಳೆಯರು | " | " |
| ೧೧. | ಪತ್ರಗುಚ್ಛ – ೧ | " | " |
| ೧೨. | ಪತ್ರಗುಚ್ಛ – ೨ | " | " |
| ೧೩. | ನನ್ನ ಸಮಕಾಲೀನರು | " | " |
| ೧೪. | ರಾಜನೀತಿ | " | " |
| ೧೫. | ಪತ್ರಗುಚ್ಛ – ೩ | " | " |
| ೧೬. | ಸಂಭಾಷಣೆ | " | " |
| ೧೭. | ಭಾಷಣಗಳು—ಹೇಳಿಕೆಗಳು – ೧ | " | " |
| ೧೮. | ಭಾಷಣಗಳು—ಹೇಳಿಕೆಗಳು – ೨ | " | " |
| ೧೯. | ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ – ೧ | " | " |
| ೨೦. | ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ – ೨ | " | " |

ಪುಸ್ತಕಗಳು ದೊರೆಯುವ ಸ್ಥಳ:

೧. ಸಂಚಾಲಕರು: ಗಾಂಧೀ ಸ್ಮಾರಕ ನಿಧಿ, ಕರ್ನಾಟಕ ಶಾಖೆ
೧೩೮, ನೆಹರೂ ಸರ್ಕಲ್, ಬೆಂಗಳೂರು

೨. ಪ್ರಧಾನ ಸಂಪಾದಕರು: ಗಾಂಧೀ ಗ್ರಂಥಮಾಲೆ
೧೬೨, ರಮಾವಿಲಾಸ ರಸ್ತೆ, ಮೈಸೂರು – ೧

## A Few Navajivan Publications in English

| | | |
|---|---|---|
| 1. | Letters to Sardar Vallabhai Patel<br>—V. G. Desai | Rs. 3-50 |
| 2. | Letters to Rajkumari Amrit Kaur | ,, 3-50 |
| 3. | A Philosophy of Indian Economic Development | ,, 3-50 |
| 4. | Sardar Vallabhai Patel Vol. 1 | ,, 7-31 |
| 5. | ,, Vol. 2 | ,, 6-44 |
| 6. | Language Study in Indian Education<br>—M. P. Desai | 0-69 |
| 7. | The Pageant of Life<br>—B. G. Kher | 5-20 |



NAVAJIVAN PUBLISHING HOUSE
AHMEDABAD – 14



ಸಾರ್ವಜನಿಕ ಸಭೆ—ಮಾರ್ದನ್ (ಗಡಿನಾಡು ಪ್ರಾಂತ)

ಅಕ್ಟೋಬರ್ ೧೫, ೧೯೩೮

ತೆಂಡುಲ್‌ಕರರ 'ಮಹಾತ್ಮಾ' ಗ್ರಂಥದಿಂದ